ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

ಭಾಗ—೯

## ಉಮಾಸಂಹಿತಾ



ಆಸ್ಥಾನ ವಿದ್ವಾನ್

ಹಾಸನದ ಪಂಡಿತ ವೆಂಕಟರಾವ್

ಅನುವಾದಕ:

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

೧೯೪೫



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರುದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಎಸ್.ಐ. ರವರು**




# ಶ್ರೀ ಪ್ರಸನ್ನ ಶಂಕರ

ವಾಮಾಂಕನ್ಯಸ್ಯವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ವಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೈಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲಲಿತವಪುಃ ಸಂಪದೇ ಪಾರ್ವತೀಶಃ ॥

ಬೆಂಗಳೂರು ಪ್ರೆಸ್ ಬ್ರಾಂಚ್,
ಮೈಸೂರು.



உ

சிவமயம்.



ஸ்ரீலஸ்ரீ நடேச ஞான தேசிக ஸ்வாமி

# ಮುನ್ನುಡಿ

ಇದು ಶಿವಪುರಾಣದಲ್ಲಿ ಐದನೆಯ ಸಂಹಿತೆಯು. ಮೊದಲಿನ ನಾಲ್ಕು ಸಂಹಿತೆಗಳಲ್ಲಿ ಪಾರ್ವತೀಪರಮೇಶ್ವರರ ಲೀಲಾವಿಭೂತಿಗಳೂ, ಈಶ್ವರಾರಾಧನಕ್ರಮವೂ, ದೇವೀಚರಿತ್ರೆಗಳೂ, ಆಖ್ಯಾನ ಉಪಾಖ್ಯಾನಗಳೊಡನೆ ವರ್ಣಿತವಾಗಿವೆ. ಆರು, ಏಳನೆಯ ಸಂಹಿತೆಗಳಲ್ಲಿ ಪುರಾಣದ ಮುಖ್ಯ ಪಾದವಾದ ವೇದಾಂತ ವಿಷಯಗಳನ್ನು ನಿರೂಪಿಸುವುದಕ್ಕೆ ಪೂರ್ವಭಾವಿಯಾಗಿ ಸ್ವರ್ಗನರಕಗಳ ವಿವರಣೆಯೂ, ಅವುಗಳ ಪ್ರಾಪ್ತಿಗೆ ಕಾರಣವಾದ ಕರ್ಮವಿಚಾರವೂ ಹೇಳಲ್ಪಟ್ಟಿವೆ.

ಸ್ವರ್ಗನರಕಗಳ ವಿಚಾರದಲ್ಲಿ ಒಂದೆರಡು ಮಾತುಗಳನ್ನು ಇಲ್ಲಿ ಹೇಳುವುದು ಅವಶ್ಯಕವಾಗಿದೆ. ಸತ್ಕರ್ಮಾಚರಣೆ, ಈಶ್ವರಾರಾಧನೆ, ತತ್ತ್ವವಿವೇಚನೆ, ಪರೋಪಕಾರ ಮೊದಲಾದವುಗಳಿಂದ ಸ್ವರ್ಗಪ್ರಾಪ್ತಿಯಾಗಿ ಅಲ್ಲಿ ಸುಖಾನುಭವವೂ ಇದಕ್ಕೆ ವ್ಯತಿರಿಕ್ತವಾದ ದುಷ್ಕರ್ಮಾಚರಣೆಯಿಂದ ನರಕಗಳಲ್ಲಿ ದುಃಖಾನುಭವವೂ ಪ್ರಾಣಿಗಳಿಗೆ ಉಂಟಾಗುವವು. ಕೆಲವರಿಗೆ ಸ್ವರ್ಗನರಕಾದಿಗಳಲ್ಲಿ ನಂಬಿಕೆಯಿಲ್ಲ. ಪ್ರತ್ಯುಪಕಾರ ನಿರೀಕ್ಷಣೆಯಿಂದಲೋ, ಕೀರ್ತಿಯನ್ನೂ ಗೌರವವನ್ನೂ ಸಂಪಾದಿಸಬೇಕೆಂಬ ಇಚ್ಛೆಯಿಂದಲೋ, ಇತರರ ನಿರ್ಬಂಧದಿಂದಲೋ ದಾನಾದಿ ಧರ್ಮಕಾರ್ಯಗಳನ್ನು ಕೆಲವರು ಮಾಡುವರು: ಇಂತಹ ಕಾರ್ಯಗಳಿಗೆ ಫಲವಿಲ್ಲವೆಂದಲ್ಲ. ನಿಷ್ಕಾಮಬುದ್ಧಿಯಿಂದಲೂ, ಈಶ್ವರಪ್ರೀತಿಯಾಗಲೆಂದೂ ಮಾಡುವ ಧರ್ಮಕಾರ್ಯಗಳಿಗಾಗುವಷ್ಟು ಫಲವು ದೊರೆಯುವುದಿಲ್ಲ. ಆದುದರಿಂದ ಸತ್ಕಾರ್ಯಗಳ ಫಲವೆಲ್ಲವೂ ಕರ್ತೃವಿನ ಮನಸ್ಸಿನ ಭಾವವನ್ನವಲಂಬಿಸಿರುವುದು. ದುಷ್ಕರ್ಮವೂ ಇದರಂತೆಯೇ. ಕಾಣದೆ ಮಾಡಿದ ಪಾಪಕ್ಕೆ ಹೆಚ್ಚು ಶಿಕ್ಷೆಯಿಲ್ಲ. ಮನಃಪೂರ್ವಕವಾಗಿ ಮಾಡಿದ ಕೆಟ್ಟಕೆಲಸಗಳಿಗೆ ಸಂಪೂರ್ಣವಾದ ಪಾಪಫಲವನ್ನು ಅನುಭವಿಸಬೇಕಾಗುವುದು. ಸತ್ಕರ್ಮವಾಗಲೀ, ದುಷ್ಕರ್ಮವಾಗಲೀ ಅದರ ಫಲವನ್ನು ಪ್ರಾಣಿಯು ಅನುಭವಿಸಿಯೇ ತೀರಬೇಕು. ಯಾವ ಉಪಾಯದಿಂದಲೂ ಅದನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಇದು ಬರೀ ಶುಷ್ಕವಾದವಲ್ಲ. ಕಾರಣಸಹಿತವಾಗಿರುವುದು. ಇದನ್ನು ಆಧುನಿಕ ವಿಜ್ಞಾನಕ್ಕೆ ಅನುಸಾರವಾಗಿ ಪ್ರತಿಪಾದಿಸಬಹುದು. The Law of *Karma* is nothing more than the law of conservation of energy. It simply means that nothing is lost, ನೇಹಾಭಿಕ್ರಮನಾಶೋಽಸ್ತಿ—ಭಗವದ್ಗೀತಾ ೨-೪೦, but every particle, however minute, is so intimately linked with all the

rest in the universe, that there cannot be disturbance in it, however slight, but will be communicated to its immediate neighbour, and will thus travel from particle to particle, till it pervades the whole universe. Not a thought, not a feeling, not a sentiment can arise in the hidden recesses of the soul, not a sigh can escape the troubled heart, not a word can be uttered, not a deed can be done but will be felt and recorded throughout the length and breadth and depth of the Universe, in characters which can not be effaced without annihilating the universe itself. The belief that no act, whether good or bad, can be lost, is only the same belief in the moral world which our belief in the preservation of force is in the physical world. Nothing can be lost. If a man feels that what without any fault of his own he suffers in this life, can only be the result of some of his own former acts, he will bear his sufferings with more resignation like a debtor who is paying off an old debt. And if he knows besides that in this life he may by suffering not only pay off his old debts, but actually lay by a moral capital for the future, he has a motive for goodness which is not more selfish than he ought to be. There must be a cause, to account for the effect which we see but too clearly, and that cause can not possibly be found in the mere caprice or injustice of the Creator. There can be no doubt that this doctrine of *Karma* has met with the widest acceptance and has helped to soften the sufferings of millions and to encourage them not only in their endurance of present evils but likewise in their efforts to improve their

future condition. ಇದನ್ನೆಲ್ಲಾ ತಿಳಿದು ವಿವೇಕಿಯಾದ ಪುರುಷನು ಯುಕ್ತಾಯುಕ್ತಗಳನ್ನು ವಿಮರ್ಶಿಸಿ ಕಾರ್ಯವನ್ನು ಮಾಡಬೇಕು. ಬರೀ ಪುರಾಣಶ್ರವಣಕ್ಕಿಂತಲೂ, ಅದರ ಮನನ ಎಂದರೆ ಅದರಲ್ಲಿ ಹೇಳಿದ ವಿಷಯಗಳನ್ನು ಕಾರ್ಯಕಾರಣ ಸಹಿತವಾಗಿ ಮನಸ್ಸಿನಲ್ಲಿ ಚೆನ್ನಾಗಿ ವಿಮರ್ಶೆ ಮಾಡಿ ಬಳಿಕ ಅದನ್ನು ನಂಬಬೇಕು. ಮೂಢನಂಬಿಕೆಗಿಂತಲೂ ವಿಚಾರಪೂರ್ವಕವಾದ ಜ್ಞಾನವೇ ಶ್ರೇಷ್ಠವಾದುದು. ಆದುದರಿಂದಲೇ ಜಪ, ಪಾರಾಯಣಾದಿಗಳನ್ನು ಮಾಡುವಾಗ ಆ ಮಂತ್ರಗಳ ಅರ್ಥವನ್ನು ಚೆನ್ನಾಗಿ ತಿಳಿದು ಮಾಡಿದರೆ ಸಂಪೂರ್ಣ ಫಲವುಂಟೆಂದು ಹೇಳುವರು.

ಈ ಮಹಾಪುರಾಣಪಠನವು ಜನರಲ್ಲಿ ವಿವೇಚನಶಕ್ತಿಯನ್ನು ಅಭಿವೃದ್ಧಿಪಡಿಸಲು ಅತ್ಯಂತ ಸಹಕಾರಿಯಾಗಿರುವುದು. ಸಕಲರೂ ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ನಮ್ಮನ್ನಾಳುವ ಮಹಾಪ್ರಭುಗಳಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ.,** ಯವರು ಕನ್ನಡ ಭಾಷೆಯಲ್ಲಿ ಇದುವರೆಗೂ ಇಲ್ಲದಿದ್ದ ಇಂತಹ ಸದ್ಗ್ರಂಥಗಳನ್ನು ಪ್ರಕಟಿಸಲು ಅವಕಾಶವನ್ನಿತ್ತಿರುವರು. ಇಂತಹ ನಮ್ಮ ಪ್ರಭುಗಳಿಗೂ ಅವರ ಪ್ರಜೆಗಳಿಗೂ ಸರ್ವೇಶ್ವರನು ಆಯುರಾರೋಗ್ಯೈಶ್ವರ್ಯಾದಿಗಳನ್ನು ಅನುಗ್ರಹಿಸಲೆಂದು ಅನನ್ಯಭಾವದಿಂದ ಬೇಡುತ್ತೇನೆ.

ಮೈಸೂರು
ಪಾರ್ಥಿವ ಸಂ॥ ಮಾರ್ಗಶಿರ ಬ. ದ್ವಿತೀಯಾ
ತಾ॥ 20-12-45.

ಅನುವಾದಕ,
**ಹಾಸನದ ಪಂಡಿತ ವೆಂಕಟರಾವ್.**



## ಶಿವಮಹಾಪುರಾಣದಲ್ಲಿ ಉಮಾಸಂಹಿತೆಯ

# ವಿಷಯಾನುಕ್ರಮಣಿಕೆ.



ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

॥ ಅಥ ಪಂಚಮ್ಯುಮಾಸಂಹಿತಾ ಪ್ರಾರಭ್ಯತೇ

---

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

# ಪ್ರಥಮೋಽಧ್ಯಾಯಃ

ಯೋ ಧತ್ತೇ ಭುವನಾನಿ ಸಪ್ತ ಗುಣವಾನ್ಸ್ರಷ್ಟಾ ರಜಸ್ಸಂಶ್ರಯ-
ಸ್ಸಂಹರ್ತಾ ತಮಸಾನ್ವಿತೋ ಗುಣವತೀಂ ಮಾಯಾಮತೀತ್ಯ ಸ್ಥಿತಃ
ಸತ್ಯಾನಂದಮನಂತಬೋಧಮಮಲಂ ಬ್ರಹ್ಮಾದಿಸಂಜ್ಞಾಸ್ಪದಂ-
ನಿತ್ಯಂ ಸತ್ತ್ವಸಮನ್ವಯಾದಧಿಗತಂ ಪೂರ್ಣಂ ಶಿವಂ ಧೀಮಹಿ ॥ ೧ ॥

## ಮೊದಲನೆಯ ಅಧ್ಯಾಯವು

೧. ಈಶ್ವರನು ಸತ್ವಗುಣಪ್ರಧಾನ್ಯವಾದ ಶರೀರವನ್ನು ಹೊಂದಿ ಸಪ್ತಲೋಕಗಳನ್ನೂ ಕಾಪಾಡುವನು. ರಜೋಗುಣಪ್ರಧಾನವಾದ ದೇಹವನ್ನು ಹೊಂದಿ ಸಪ್ತಲೋಕಗಳನ್ನೂ ಸೃಷ್ಟಿಸುವನು. ತಮೋಗುಣಭೂಯಿಷ್ಠವಾದ ಶರೀರವನ್ನು ತಾಳಿ ಸಪ್ತಲೋಕಗಳನ್ನೂ ಸಂಹರಿಸುವನು. ಹೀಗಿದ್ದಾಗ್ಯೂ ಸತ್ವರಜಸ್ತಮೋಗುಣಗಳಿಗೆ ಅಧೀನನಾಗದೆ ಈ ಮೂರು ಗುಣಗಳುಳ್ಳ ಪ್ರಕೃತಿಯನ್ನು ದಾಟಿರುವನು. ಇವನ ಸ್ವರೂಪವು ನಿರ್ವಿಕಾರವಾದುದು ; ಅಲ್ಲದೆ ದೇಶಪರಿಚ್ಛೇದ, ಕಾಲಪರಿಚ್ಛೇದ, ವಸ್ತುಪರಿಚ್ಛೇದಗಳೆಂಬ ಮೂರು ಪರಿಚ್ಛೇದಗಳು ಇವನಿಗೆ ಇರುವುದಿಲ್ಲ. ಜ್ಞಾನಸ್ವರೂಪವಾಗಿಯೂ ನಿರ್ಮಲವಾಗಿಯೂ ಇರುವನು. ಆದುದರಿಂದಲೇ ಇವನು ಸತ್ವಾದಿಗುಣಗಳಿಗೆ ಅಧೀನನಾಗುವುದಿಲ್ಲ. ಇವನು ಸತ್ವಾಧಿಕಶರೀರವನ್ನು ತಾಳಿದಾಗ

॥ ಋಷಯ ಊಚುಃ ॥

ಸೂತಸೂತ ಮಹಾಪ್ರಾಜ್ಞ ವ್ಯಾಸಶಿಷ್ಯ ನಮೋಽಸ್ತು ತೇ ।
ಚತುರ್ಥೀ ಕೋಟಿರುದ್ರಾಖ್ಯಾ ಶ್ರಾವಿತಾ ಸಂಹಿತಾ ತ್ವಯಾ ॥ ೨ ॥

ಅಥೋಮಾಸಂಹಿತಾಂತಃಸ್ಥ ನಾನಾಖ್ಯಾನಸಮನ್ವಿತಂ ।
ಬ್ರೂಹಿ ಶಂಭೋಶ್ಚರಿತ್ರಂ ವೈ ಸಾಂಬಸ್ಯ ಪರಮಾತ್ಮನಃ ॥ ೩ ॥

॥ ಸೂತ ಉವಾಚ ॥

ಮಹರ್ಷಯಶ್ಶೌನಕಾದ್ಯಾಃ ಶೃಣುತ ಪ್ರೇಮತಃ ಶುಭಂ ।
ಶಾಂಕರಂ ಚರಿತಂ ದಿವ್ಯಂ ಭುಕ್ತಿಮುಕ್ತಿಪ್ರದಂ ಪರಂ ॥ ೪ ॥

ವಿಷ್ಣುವೆಂತಲೂ, ರಜೋಗುಣಪ್ರಧಾನವಾದ ದೇಹವನ್ನು ಹೊಂದಿದಾಗ ಬ್ರ ನೆಂತಲೂ, ತಮೋಗುಣಪ್ರಧಾನವಾದ ವಿಗ್ರಹವನ್ನು ಪರಿಗ್ರಹಿಸಿದಾಗ ರುದ್ರನೆಂತಲೂ ಕರೆಯಲ್ಪಡುತ್ತಾನೆ. ಯಾವಾಗಲೂ ಸಾತ್ವಿಕಮಾರ್ಗವನ್ನು ಅವಲಂಬಿಸಿದರೆ ಇವನನ್ನು ಹೊಂದಬಹುದು. ಇಲ್ಲದಿದ್ದರೆ ಸಾಧ್ಯವಿಲ್ಲ. ಇವನು ಸಮಸ್ತಗುಣಗಳಿಂದಲೂ ಪರಿಪೂರ್ಣನು. ಇಂತಹ ಈಶ್ವರನನ್ನು ಧ್ಯಾನಮಾಡುತ್ತೇವೆ. ಇದು ಮಂಗಳ ಶ್ಲೋಕವು.

೨-೩. ಶೌನಕಾದಿ ಮಹರ್ಷಿಗಳು ಸೂತನನ್ನು ಪ್ರಶ್ನೆಮಾಡುತ್ತಾರೆ:— ಓ ಸೂತನೆ, ನೀನು ವ್ಯಾಸಮಹರ್ಷಿಗಳ ಶಿಷ್ಯನು ಆದುದರಿಂದ ಮಹಾಪ್ರಾಜ್ಞನು. ನಿನ್ನಂತಹ ಜ್ಞಾನಿಗಳಿಗೆ ನಮಸ್ಕಾರಕ್ಕಿಂತಲೂ ಬೇರೆ ಪ್ರತ್ಯುಪಕಾರವನ್ನು ಯಾರು ತಾನೇ ಮಾಡಬಲ್ಲರು? ಆದುದರಿಂದ ನಿನ್ನನ್ನು ನಮಸ್ಕರಿಸುವೆವು. ನಿನ್ನ ಕೃಪಾಕಟಾಕ್ಷದಿಂದ ನಾಲ್ಕನೆಯದಾದ ಕೋಟಿ ರುದ್ರಸಂಹಿತೆಯನ್ನು ಕೇಳಿದೆವು. ಇನ್ನುಮುಂದೆ ಪಾರ್ವತೀಸಮೇತನಾದ ಈಶ್ವರನ ಚರಿತ್ರೆಯು ಬಹಳ ಪ್ರಸಿದ್ಧವಾಗಿರುವುದು. ಇದು ಉಮಾಸಂಹಿತೆಯಲ್ಲಿರುವ ಅನೇಕ ಆಖ್ಯಾನಗಳಿಂದ ಕೂಡಿರುವುದು. ಇಂತಹ ಪರಮಾತ್ಮನ ಚರಿತ್ರೆಯನ್ನು ಕೇಳಲಿಚ್ಛಿಸುವೆವು. ಅದನ್ನು ದಯವಿಟ್ಟು ಹೇಳು ಎಂದರು.

೪-೫. ಸೂತನಿಂತೆಂದನು:—ಎಲೈ ಶೌನಕಾದಿ ಮಹರ್ಷಿಗಳೇ, ಈಶ್ವರನ ಚರಿತ್ರೆಯು ಬಹು ಶ್ರೇಷ್ಠವಾದುದು. ಇಹಲೋಕದಲ್ಲಿ ಭುಕ್ತಿಯನ್ನೂ, ಆಮುಷ್ಮಿಕದಲ್ಲಿ ಮುಕ್ತಿಯನ್ನೂ ಕೊಡತಕ್ಕದ್ದು. ಇದನ್ನು ನಾನು ಹೊಸದಾಗಿ ಹೇಳುವುದಿಲ್ಲ. ಇಂತಹ ಶ್ರೇಷ್ಠವಾದ ಪ್ರಶ್ನೆಯನ್ನು ಒಂದಾನೊಂದು ಕಾಲದಲ್ಲಿ ವ್ಯಾಸಮಹರ್ಷಿಯು

ಇತೀದೃಶಂ ಪುಣ್ಯಪ್ರಶ್ನಂ ಪೃಷ್ಟವಾನ್ಮುನಿಸತ್ತಮಃ ।
ವ್ಯಾಸಸ್ಸನತ್ಕುಮಾರಂ ವೈ ಶೈವಂ ಸಚ್ಚರಿತಂ ಜಗೌ　　॥ ೫ ॥

॥ ಸನತ್ಕುಮಾರ ಉವಾಚ ॥

ವಾಸುದೇವಾಯ ಯತ್ಪ್ರೋಕ್ತಮುಪಮನ್ಯುಮಹರ್ಷಿಣಾ ।
ತದುಚ್ಯತೇ ಮಯಾ ವ್ಯಾಸ ಚರಿತಂ ಹಿ ಮಹೇಶಿತುಃ　　॥ ೬ ॥

ಪುರಾ ಪುತ್ರಾರ್ಥಮಗಮತ್ಕೈಲಾಸಂ ಶಂಕರಾಲಯಂ ।
ವಸುದೇವಸುತಃ ಕೃಷ್ಣಸ್ತಪಸ್ತಪ್ತುಂ ಶಿವಸ್ಯ ಹಿ　　॥ ೭ ॥

ಅತ್ರೋಪಮನ್ಯುಂ ಸಂದೃಷ್ಟ್ವಾ ತಪಂತಂ ಶೃಂಗ ಉತ್ತಮೇ ।
ಪ್ರಣಮ್ಯ ಭಕ್ತ್ಯಾ ಸ ಮುನಿಃ ಪರ್ಯಪೃಚ್ಛತ್ಕೃತಾಂಜಲಿಃ　　॥ ೮ ॥

ಸನತ್ಕುಮಾರರನ್ನು ಕೇಳಿದನು. ಆಗ ಸನತ್ಕುಮಾರನು ವ್ಯಾಸಮಹರ್ಷಿಗೆ ಶ್ರೇಷ್ಠವಾದ ಈ ಈಶ್ವರನ ಚರಿತ್ರೆಯನ್ನು ಉಪದೇಶಿಸಿದ್ದನು. ಆ ವ್ಯಾಸಸನತ್ಕುಮಾರ ಸಂವಾದವನ್ನೇ ಈಗ ಹೇಳುವೆನು. ಭಕ್ತಿಯಿಂದ ಕೇಳಿ ಎಂದು ಹೇಳತೊಡಗಿದನು.

೬-೮. ಸನತ್ಕುಮಾರನಿಂತೆಂದನು:— ಓ ವ್ಯಾಸಮುನಿಯೇ, ನಾನು ಹೇಳುವ ಚರಿತ್ರೆಯು ನನ್ನಿಂದ ಕಲ್ಪಿತವಾದುದಲ್ಲ. ಹಿಂದಿನಕಾಲದಲ್ಲಿ ವಸುದೇವನ ಮಗನಾದ ಶ್ರೀ ಕೃಷ್ಣನು ಮಕ್ಕಳನ್ನು ಪಡೆಯುವುದಕ್ಕಾಗಿ ಈಶ್ವರನನ್ನು ಕುರಿತು ತಪಸ್ಸನ್ನು ಮಾಡಬೇಕೆಂದು ತೀರ್ಮಾನಿಸಿಕೊಂಡನು. ಆಮೇಲೆ ಈಶ್ವರನಿಗೆ ವಾಸಸ್ಥಾನವಾದ ಕೈಲಾಸಪರ್ವತಕ್ಕೆ ಹೋದನು. ಅಲ್ಲಿ ಉಪಮನ್ಯುಮಹರ್ಷಿಯು ಶ್ರೇಷ್ಠವಾದ ಬೆಟ್ಟದ ತುದಿಯಲ್ಲಿ ಕುಳಿತು ತಪಸ್ಸನ್ನು ಮಾಡುತ್ತಿದ್ದನು. ಅವನನ್ನು ನೋಡಿದ ಕೂಡಲೇ ಮಂತ್ರದ ಅರ್ಥವನ್ನು ಮನನಮಾಡುತ್ತಿರುವ ಕೃಷ್ಣನಿಗೆ ಭಕ್ತಿಯು ಹೆಚ್ಚಾಯಿತು. ಕೂಡಲೇ ಆ ಮಹರ್ಷಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಕೈಮುಗಿದುಕೊಂಡು ನಿಂತು ಕೇಳಲು, ಉಪಮನ್ಯುಮಹರ್ಷಿಯು ಶ್ರೀ ಕೃಷ್ಣನಿಗೆ ಈಶ್ವರನ ಚರಿತ್ರೆಯನ್ನು ಹೇಳಿದನು. ಅದೇ ಚರಿತ್ರೆಯನ್ನು ನಿನಗೆ ನಾನು ಹೇಳುತ್ತೇನೆ ಎಂದನು. ಹಾಗಾದರೆ ಶ್ರೀ ಕೃಷ್ಣನು ಉಪಮನ್ಯುಮಹರ್ಷಿಯನ್ನು ಕೇಳಿದ ಪ್ರಶ್ನೆಯಾವುದು ಎಂದು ವ್ಯಾಸನು ಕೇಳಲು ಸನತ್ಕುಮಾರನು ಶ್ರೀ ಕೃಷ್ಣನು ಮಾಡಿದ ಪ್ರಶ್ನೆಯನ್ನು ಹೇಳುತ್ತಾನೆ.

॥ ಶ್ರೀಕೃಷ್ಣ ಉವಾಚ ॥

ಉಪಮನ್ಯೋ ಮಹಾಪ್ರಾಜ್ಞ ಶೈವಪ್ರವರ ಸನ್ಮತೇ ।
ಪುತ್ರಾರ್ಥಮಾಗಮಂ ತಪ್ತುಂ ತಪೋಽತ್ರ ಗಿರಿಶಸ್ಯ ಹಿ ॥ ೯ ॥

ಬ್ರೂಹಿ ಶಂಕರಮಾಹಾತ್ಮ್ಯಂ ಸದಾನಂದಕರಂ ಮುನೇ ।
ಯಚ್ಛ್ರುತ್ವಾ ಭಕ್ತಿತಃ ಕುರ್ಯಾಂ ತಪ ಐಶ್ವರ್ಯಮುತ್ತಮಂ ॥ ೧೦ ॥

॥ ಸನತ್ಕುಮಾರ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ವಾಸುದೇವಸ್ಯ ಧೀಮತಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ಹ್ಯುಪಮನ್ಯುಸ್ಸ್ಮರಂಛಿವಂ ॥ ೧೧ ॥

॥ ಉಪಮನ್ಯುರುವಾಚ ॥

ಶೃಣು ಕೃಷ್ಣ ಮಹಾಶೈವ ಮಹಿಮಾನಂ ಮಹೇಶಿತುಃ ।
ಯಮದ್ರಾಕ್ಷಮಹಂ ಶಂಭೋರ್ಭಕ್ತಿವರ್ಧನಮುತ್ತಮಂ ॥ ೧೨ ॥

೯-೧೦. ಕೃಷ್ಣನಿಂತೆಂದನು :—ಎಲೈ ಉಪಮನ್ಯುಮಹರ್ಷಿಯೇ, ನೀನು ಪ್ರಾಜ್ಞನು. ಮಹಾಬುದ್ಧಿವಂತನು. ಈಶ್ವರಭಕ್ತರಲ್ಲಿ ಶ್ರೇಷ್ಠನಾದವನು. ನಾನು ಪುತ್ರಾರ್ಥವಾಗಿ ಈಶ್ವರನನ್ನು ಕುರಿತು ತಪಸ್ಸುಮಾಡಲು ಬಂದಿರುವೆನು. ಈಶ್ವರನ ಚರಿತ್ರೆಯನ್ನು ಕೇಳಿದರೆ ಆನಂದವುಂಟಾಗಿ ಭಕ್ತಿಯು ಹೆಚ್ಚಿ ಶ್ರೇಷ್ಠವಾದ ಈಶ್ವರನ ತಪಸ್ಸನ್ನು ಮಾಡಲು ಸಮರ್ಥನಾಗುವೆನು. ಆದುದರಿಂದ ಈಶ್ವರನ ಮಾಹಾತ್ಮ್ಯೆವನ್ನು ನನಗೆ ಹೇಳಬೇಕೆಂದನು.

೧೧. ಮಹಾಮೇಧಾವಿಯಾದ ಶ್ರೀ ಕೃಷ್ಣನ ಈ ಮಾತನ್ನು ಕೇಳಿ ಉಪಮನ್ಯು ಮಹರ್ಷಿಯು ಸಂತೋಷಪಟ್ಟು ಈಶ್ವರನನ್ನು ಧ್ಯಾನಿಸುತ್ತಾ ಶ್ರೀ ಕೃಷ್ಣನಿಗೆ ಈರೀತಿ ಉತ್ತರವಿತ್ತನು.

೧೨. ಉಪಮನ್ಯುವಿಂತೆಂದನು :—ಓ ಕೃಷ್ಣನೇ, ನೀನು ಈಶ್ವರಭಕ್ತಾಗ್ರೇಸರನು, ನಾನು ತಪಸ್ಸಂತುಷ್ಟನಾದ ಈಶ್ವರನ ಅನುಗ್ರಹದಿಂದ ಅವನ ಸ್ವರೂಪವನ್ನು ನೋಡಿರುವೆನು. ಅವನ ಮಹಿಮೆಯು ಅತ್ಯುತ್ತಮವಾದುದು. ಅದರ ಶ್ರವಣದಿಂದ ಭಕ್ತಿಯು ಹೆಚ್ಚುವುದು. ನಿನಗೆ ಅದನ್ನು ಹೇಳುವೆನು ಕೇಳು.

**ತಪಸ್ಸೋಽಹಂ ಸಮುದ್ರಾಕ್ಷಂ ಶಂಕರಂ ಚ ತದಾಯುಧಾನ್ ।**
**ಪರಿವಾರಂ ಸಮಸ್ತಂ ಚ ವಿಷ್ಣ್ವಾದೀನಮರಾದಿಕಾನ್ ॥ ೧೩ ॥**

**ತ್ರಿಭಿರಂಶೈಶ್ಯೋಭಮಾನಮಜಸ್ರಸುಖಮವ್ಯಯಂ ।**
**ಏಕಪಾದಂ ಮಹಾದಂಷ್ಟ್ರಂ ಸಜ್ವಾಲಕಬಲೈರ್ಮುಖೈಃ ॥ ೧೪ ॥**

**ದ್ವಿಸಹಸ್ರಮಯೂಖಾನಾಂ ಜ್ಯೋತಿಷ್ಯಾತಿವಿರಾಜಿತಂ ।**
**ಸರ್ವಾಸ್ತ್ರಪ್ರವರಾಬಾಧಮನೇಕಾಕ್ಷಂ ಸಹಸ್ರಪಾತ್ ॥ ೧೫ ॥**

**ಯಶ್ಚ ಕಲ್ಪಾಂತಸಮಯೇ ವಿಶ್ವಂ ಸಂಹರತಿ ಧ್ರುವಂ ।**
**ನಾವಧ್ಯೋ ಯಸ್ಯ ಚ ಭವೇತ್ತ್ರೈಲೋಕ್ಯೇ ಸಚರಾಚರೇ ॥ ೧೬ ॥**

೧೩. ನಾನು ಈಶ್ವರನನ್ನು ಕಂಡಾಗ ಆ ದೇವನು ತನ್ನ ಸಮಸ್ತ ಆಯುಧಗಳನ್ನು ಧರಿಸಿ ತನ್ನ ಪ್ರಮಥಗಣಗಳೊಡನಿದ್ದನು. ವಿಷ್ಣುವೇ ಮೊದಲಾದವರೂ, ದೇವಗಂಧರ್ವರೇ ಮೊದಲಾದವರೂ ಅಲ್ಲಿ ನೆರೆದಿದ್ದರು. ಇವೆಲ್ಲವನ್ನೂ ಇವುಗಳಿಂದ ಪ್ರಕಾಶಿಸುತ್ತಿರುವ ಈಶ್ವರನನ್ನೂ ತಪಸಿದ್ಧಿಯಿಂದ ನಾನು ನೋಡಿದೆನು.

೧೪. ಈಶ್ವರನು ನಿತ್ಯಸುಖಸ್ವರೂಪನು. ನಾಶವಿಲ್ಲದವನು. ಒಂದೇಕಾಲಿನಿಂದ ನಿಂತಿದ್ದನು. ಅವನಿಗೆ ಅತಿಭಯಂಕರವಾದ ಕೋರೆಹಲ್ಲುಗಳಿದ್ದವು. ಮುಖದಲ್ಲಿ ಜ್ವಾಲೆಯಿಂದ ಕೂಡಿದ ಅಗ್ನಿಯು ಹೊರಸೂಸುತ್ತಿತ್ತು.

೧೫. ಎರಡುಸಾವಿರ ಕಿರಣಗಳ ಕಾಂತಿಯಿಂದ ಪ್ರಕಾಶಿಸುತ್ತಿದ್ದನು. ಎಂತಹ ಶ್ರೇಷ್ಠವಾದ ಅಸ್ತ್ರಗಳಿಗೂ ಲಕ್ಷ್ಯವಾಗತಕ್ಕವನಲ್ಲ. ಅನೇಕ ಕಣ್ಣುಗಳೂ ಸಾವಿರ ಕಾಲುಗಳೂ ಇದ್ದವು.

೧೬. ಪ್ರಳಯಕಾಲದಲ್ಲಿ ಈಶ್ವರನು ಪ್ರಪಂಚವನ್ನೆಲ್ಲಾ ಸಂಹರಿಸುವನು. ಮೂರುಲೋಕಗಳಲ್ಲಿರುವ ಸಮಸ್ತ ಚರಾಚರವಸ್ತುಗಳನ್ನೂ ಪ್ರಾಣಿಸಮೂಹವನ್ನೂ ಸಂಹರಿಸುವನು. ಇವನಿಂದ ಸಂಹರಿಸಲಾಗದ ವಸ್ತುವು ಒಂದೂ ಇರುವುದಿಲ್ಲ. ಇದು ಸತ್ಯವು.

ಮಹೇಶ್ವರಭುಜೋತ್ಸೃಷ್ಟಂ ತ್ರೈಲೋಕ್ಯಂ ಸಚರಾಚರಂ ।
ನಿರ್ದಹಾಹ ದ್ರುತಂ ಕೃತ್ಸ್ನಂ ನಿಮೇಷಾರ್ಧಾನ್ನ ಸಂಶಯಃ ॥ ೧೭ ॥

ತಪಃಸ್ಥೋ ರುದ್ರಪಾರ್ಶ್ವಸ್ಥಂ ದೃಷ್ಟವಾನಹಮವ್ಯಯಂ ।
ಗುಹ್ಯಮಸ್ತ್ರಂ ಪರಂ ಚಾಸ್ಯ ನ ತುಲ್ಯಮಧಿಕಂ ಕ್ವಚಿತ್ ॥ ೧೮ ॥

ಯತ್ತಚ್ಛೂಲಮಿತಿ ಖ್ಯಾತಂ ಸರ್ವಲೋಕೇಷು ಶೂಲಿನಃ ।
ವಿಜಯಾಭಿಧಮತ್ಯುಗ್ರಂ ಸರ್ವಶಸ್ತ್ರಾಸ್ತ್ರನಾಶಕಂ ॥ ೧೯ ॥

ದಾರಯೇದ್ಯನ್ಮಹೀಂ ಕೃತ್ಸ್ನಾಂ ಶೋಷಯೇದ್ಯನ್ಮಹೋದಧಿಂ ।
ಪಾತಯೇದಖಿಲಂ ಜ್ಯೋತಿಶ್ಚಕ್ರಂ ಯನ್ನಾತ್ರ ಸಂಶಯಃ ॥ ೨೦ ॥

ಯೌವನಾಶ್ವೋ ಹತೋ ಯೇನ ಮಾಂಧಾತಾ ಸಬಲಃ ಪುರಾ ।
ಚಕ್ರವರ್ತೀ ಮಹಾತೇಜಾಸ್ತ್ರೈಲೋಕ್ಯವಿಜಯೀ ನೃಪಃ ॥ ೨೧ ॥

೧೭. ಎಲೈ ಭಕ್ತಶ್ರೇಷ್ಠನೇ, ಈಶ್ವರನು ತನ್ನಿಂದ ಸೃಷ್ಟವಾದ ಚರಾಚರಾತ್ಮಕವಾದ ಮೂರುಲೋಕವನ್ನೂ ಅರ್ಧನಿಮಿಷದಲ್ಲಿ ಬಹು ಜಾಗ್ರತೆಯಾಗಿ ಭಸ್ಮಮಾಡುವನು. ಇದರಲ್ಲಿ ಸಂಶಯವಿಲ್ಲ. ಇಂತಹ ಈಶ್ವರನನ್ನು ನಾನು ನೋಡಿದೆನು.

೧೮–೨೦. ಈರೀತಿ ಈಶ್ವರನನ್ನು ನೋಡಿದ ವಿಷಯವನ್ನು ಹೇಳಿ ಮುಂದೆ ಆಯುಧಗಳನ್ನು ನೋಡಿದ ವಿಷಯವನ್ನು ಹೇಳುತ್ತಾನೆ. ಮೊದಲು ಆಯುಧಗಳಲ್ಲಿ ಅತಿಶ್ರೇಷ್ಠವಾದುದರಿಂದ ಶೂಲಾಯುಧವನ್ನು ನೋಡಿದ ರೀತಿಯನ್ನು ಒಂಭತ್ತು ಶ್ಲೋಕಗಳಿಂದ ಹೇಳುತ್ತಾನೆ. ನನ್ನ ತಪಶ್ಶಕ್ತಿಯಿಂದ ಶೂಲಾಯುಧವನ್ನು ನೋಡಿದೆನು. ಇದು ಬಹು ರಹಸ್ಯವಾದ ಅಸ್ತ್ರವು. ಮೂರುಲೋಕದಲ್ಲಿಯೂ ಪ್ರಸಿದ್ಧವಾದುದು. ಇದು ಜಯವನ್ನು ಕೊಡುವುದರಿಂದ ಇದಕ್ಕೆ "ವಿಜಯ" ಎಂದು ಪ್ರಸಿದ್ಧವಾದ ಹೆಸರಿರುವುದು. ಇದು ಅತಿಭಯಂಕರವಾದುದು. ಇತರ ಶಸ್ತ್ರಾಸ್ತ್ರಗಳೆಲ್ಲವನ್ನೂ ನಾಶಮಾಡತಕ್ಕದ್ದು. ಭೂಮಿಯನ್ನೆಲ್ಲಾ ಸೀಳುವುದಕ್ಕೂ, ಮಹೋದಧಿಯನ್ನು ಒಣಗಿಸುವುದಕ್ಕೂ ಇದಕ್ಕೆ ಸಾಮರ್ಥ್ಯವಿರುವುದು. ಜ್ಯೋತಿರ್ಮಂಡಲಗಳನ್ನೆಲ್ಲಾ ಕೆಳಗೆ ಕೆಡವಬಲ್ಲದು. ಇದಕ್ಕೆ ಸಮವಾದುದು ಅಥವಾ ಹೆಚ್ಚಾದುದೂ ಆದ ಆಯುಧವು ಮತ್ತೊಂದಿಲ್ಲ. ಇದರಲ್ಲಿ ಸಂಶಯವಿಲ್ಲ.

೨೧-೨೪. ಯವನಾಶ್ವನ ಮಗನಾದ ಮಾಂಧಾತಚಕ್ರವರ್ತಿಯು ಮಹಾತೇಜಸ್ವಿಯು. ಈ ರಾಜನು ಮೂರುಲೋಕವನ್ನೂ ಜಯಿಸಿದವನು. ಇವನು

ದರ್ಪಾವಿಷ್ಟೋ ಹೈಹಯಶ್ಚ ನಿಃಕ್ಷಿಪ್ತೋ ಲವಣಾಸುರಃ ।
ಶತ್ರುಘ್ನಂ ನೃಪತಿಂ ಯುದ್ಧೇ ಸಮಾಹೂಯ ಸಮಂತತಃ ॥ ೨೨ ॥

ತಸ್ಮಿನ್ದೈತ್ಯೇ ವಿನಷ್ಟೇ ತು ರುದ್ರಹಸ್ತೇ ಗತಂ ತು ಯತ್ ।
ತಚ್ಛೂಲಮಿತಿ ತೀಕ್ಷ್ಣಾಗ್ರಂ ಸಂತ್ರಾಸಜನನಂ ಮಹತ್ ॥ ೨೩ ॥

ತ್ರಿಶಿಖಾಂ ಭೃಕುಟೀಂ ಕೃತ್ವಾ ತರ್ಜಯಂತಮಿವ ಸ್ಥಿತಂ ।
ವಿಧೂಮಾನಲಸಂಕಾಶಂ ಬಾಲಸೂರ್ಯಮಿವೋದಿತಂ ॥ ೨೪ ॥

ಸೂರ್ಯಹಸ್ತಮನಿರ್ದೇಶ್ಯಂ ಪಾಶಹಸ್ತಮಿವಾಂತಕಂ ।
ಪರಶುಂ ತೀಕ್ಷ್ಣಧಾರಂ ಚ ಸರ್ಪಾದ್ಯೈಶ್ಚ ವಿಭೂಷಿತಂ ॥ ೨೫ ॥

ಕಲ್ಪಾಂತದಹನಾಕಾರಂ ತಥಾ ಪುರುಷವಿಗ್ರಹಂ ।
ಯತ್ತದ್ಭಾರ್ಗವರಾಮಸ್ಯ ಕ್ಷತ್ರಿಯಾಂತಕರಂ ರಣೇ ॥ ೨೬ ॥

ಹಿಂದೆ ಲವಣಾಸುರನೊಂದಿಗೆ ಯುದ್ಧಮಾಡಿ ಈ ಶೂಲಾಯುಧದಿಂದ ಹತನಾದನು. ಲವಣಾಸುರನು ಈ ಮಹಾಯುಧವು ತನ್ನಲ್ಲಿಲ್ಲದಿರುವಾಗ ಶ್ರೀರಾಮನ ತಮ್ಮನಾದ ಶತ್ರುಘ್ನನೊಂದಿಗೆ ಯುದ್ಧಮಾಡಿ ಮಡಿದನು. ನಂತರ ಈ ಮಹಾ ಆಯುಧವು ಈಶ್ವರನನ್ನು ಮರಳಿ ಬಂದು ಸೇರಿತು. ಇದು ಬಹು ಹರಿತವಾದ ಮೊನೆಯುಳ್ಳದ್ದು. ಹೆಚ್ಚು ಭಯವನ್ನುಂಟುಮಾಡತಕ್ಕದ್ದು. ಬಹು ದೊಡ್ಡದಾದುದು. ಇದನ್ನು ನೋಡಿದರೆ ಹುಬ್ಬನ್ನು ಮೂರುಕಡೆಯಲ್ಲಿ ಗಂಟುಹಾಕಿಕೊಂಡು ಹೆದರಿಸುತ್ತಿರುವಂತೆ ಕಾಣುವುದು. ಇದು ಹೊಗೆಯಿಲ್ಲದ ಬೆಂಕಿಯಂತೆಯೂ, ಆಗತಾನೇ ಉದಯಿಸಿದ ಬಾಲಸೂರ್ಯನಂತೆಯೂ ಪ್ರಕಾಶಿಸುವುದು.

೨೫-೨೬. ಬಳಿಕ ಹರಿತವಾದ ಅಲಗುಳ್ಳ ಕೊಡಲಿಯನ್ನು ನೋಡಿದೆನು. ಅದು ಸರ್ಪವೇ ಮೊದಲಾದುವುಗಳಿಂದ ಅಲಂಕೃತವಾಗಿ ಪ್ರಳಯಕಾಲದ ಬೆಂಕಿಯಂತೆ ಕಾಣುತ್ತಿತ್ತು. ಮತ್ತು ಪುರುಷಾಕಾರವನ್ನು ಹೊಂದಿತ್ತು. ಜಮದಗ್ನಿಯ ಮಗನಾದ ಪರಶುರಾಮನು ಯುದ್ಧದಲ್ಲಿ ಈ ಅಸ್ತ್ರದ ಬಲದಿಂದ ಕ್ಷತ್ರಿಯರನ್ನು ನಾಶಪಡಿಸಿದನು. ಈಶ್ವರನಿಂದ ಕೊಡಲ್ಪಟ್ಟ ಈ ಕೊಡಲಿಯ ಬಲದಿಂದಲೇ ಹಿಂದಿನ

**ರಾಮೋ ಯದ್ಬಲಮಾಶ್ರಿತ್ಯ ಶಿವದತ್ತಸ್ಯ ವೈ ಪುರಾ ।**
**ತ್ರಿಃಸಪ್ತಕೃತ್ವೋ ನ ಕ್ಷತ್ರಂ ದದಾಹ ಹೃಷಿತೋ ಮುನಿಃ ॥ ೨೭ ॥**

**ಸುದರ್ಶನಂ ತಥಾ ಚಕ್ರಂ ಸಹಸ್ರವದನಂ ವಿಭುಂ ।**
**ದ್ವಿಸಹಸ್ರಭುಜಂ ದೇವಮದ್ರಾಕ್ಷಂ ಪುರುಷಾಕೃತಿಂ ॥ ೨೮ ॥**

**ದ್ವಿಸಹಸ್ರೇಕ್ಷಣಂ ದೀಪ್ತಂ ಸಹಸ್ರಚರಣಾಕುಲಂ ।**
**ಕೋಟಿಸೂರ್ಯಪ್ರತೀಕಾಶಂ ತ್ರೈಲೋಕ್ಯದಹನಕ್ಷಮಂ ॥ ೨೯ ॥**

**ವಜ್ರಂ ಮಹೋಜ್ಜ್ವಲಂ ತೀಕ್ಷ್ಣಂ ಶತಪರ್ವಮನುತ್ತಮಂ ।**
**ಮಹಾಧನುಃ ಪಿನಾಕಂ ಚ ಸತೂಣೀರಂ ಮಹಾದ್ಯುತಿಂ ॥ ೩೦ ॥**

**ಶಕ್ತಿಂ ಖಡ್ಗಂ ಚ ಪಾಶಂ ಚ ಮಹಾದೀಪ್ತಂ ಸಮಾಂಕುಶಂ ।**
**ಗದಾಂ ಚ ಮಹತೀಂ ದಿವ್ಯಾಮನ್ಯಾನ್ಯಸ್ತ್ರಾಣಿ ದೃಷ್ಟವಾನ್ ॥ ೩೧ ॥**

ಕಾಲದಲ್ಲಿ ಪರಶುರಾಮಮುನಿಯು ಬಹಳ ಸಂತೋಷಗೊಂಡು ಇಪ್ಪತ್ತೊಂದಾವರ್ತಿ ಕ್ಷತ್ರಿಯರನ್ನು ಭಸ್ಮಮಾಡಿದನು.

೨೮-೨೯. ಇದೇರೀತಿಯಲ್ಲಿ ಸುದರ್ಶನವೆಂಬ ಚಕ್ರವನ್ನು ನೋಡಿದೆನು. ಅದು ಪುರುಷಾಕಾರವನ್ನು ತಾಳಿ ಒಂದುಸಾವಿರ ಮುಖವುಳ್ಳದ್ದಾಗಿಯೂ ಎರಡು ಸಾವಿರ ಭುಜಗಳಿಂದಲೂ, ಎರಡುಸಾವಿರ ಕಣ್ಣುಗಳಿಂದಲೂ ಕೂಡಿದ್ದಿತು. ಅತಿ ಸಾಮರ್ಥ್ಯವುಳ್ಳದ್ದಾಗಿಯೂ, ಪ್ರಕಾಶಮಾನವಾಗಿಯೂ ಇದ್ದಿತು. ಒಂದುಸಹಸ್ರ ಕಾಲುಗಳಿದ್ದವು. ಒಂದುಕೋಟಿ ಸೂರ್ಯರಿಗೆ ಸಮವಾದ ಕಾಂತಿಯನ್ನು ಹೊಂದಿದ್ದಿತು. ಮೂರು ಲೋಕವನ್ನೂ ಸುಡುವ ಸಾಮರ್ಥ್ಯವನ್ನು ಇದು ಹೊಂದಿದ್ದಿತು.

೩೦. ನೂರು ಗೆಣ್ಣುಗಳಿಂದ ಕೂಡಿ ಅತ್ಯಂತ ಶ್ರೇಷ್ಠವಾದ ವಜ್ರಾಯುಧವನ್ನು ನೋಡಿದೆನು. ಇದು ಬಹು ಪ್ರಕಾಶಮಾನವಾಗಿಯೂ, ತೀಕ್ಷ್ಣವಾಗಿಯೂ ಇದ್ದಿತು. ಅಲ್ಲದೆ ಪಿನಾಕವೆಂಬ ಮಹಾಧನುಸ್ಸನ್ನೂ ನೋಡಿದೆನು. ಅದು ಬತ್ತಳಿಕೆಯಿಂದ ಕೂಡಿದ್ದಿತು. ಅತ್ಯಧಿಕವಾದ ಕಾಂತಿಯಿಂದ ಬೆಳಗುತ್ತಿತ್ತು.

೩೧. ಹೀಗೆಯೇ ಶಕ್ತಿ, ಖಡ್ಗ, ಪಾಶ, ಅಂಕುಶ ಎಂಬ ಆಯುಧಗಳನ್ನೂ ನೋಡಿದೆನು. ಅವೆಲ್ಲವು ಅತ್ಯಂತ ಪ್ರಕಾಶದಿಂದ ಹೊಳೆಯುತ್ತಿದ್ದವು. ಇದಲ್ಲದೆ

ತಥಾ ಚ ಲೋಕಪಾಲಾನಾಮಸ್ತ್ರಾಣ್ಯೇತಾನಿ ಯಾನಿ ಚ ।
ಅದ್ರಾಕ್ಷಂ ತಾನಿ ಸರ್ವಾಣಿ ಭಗವದ್ರುದ್ರಪಾರ್ಶ್ವತಃ　　　　॥ ೩೨ ॥

ಸವ್ಯದೇಶೇ ತು ದೇವಸ್ಯ ಬ್ರಹ್ಮಾ ಲೋಕಪಿತಾಮಹಃ ।
ವಿಮಾನಂ ದಿವ್ಯಮಾಸ್ಥಾಯ ಹಂಸಯುಕ್ತಂ ಮನೋಪಮಂ　　　　॥ ೩೩ ॥

ವಾಮಪಾರ್ಶ್ವೇ ತು ತಸ್ಯೈವ ಶಂಖಚಕ್ರಗದಾಧರಃ ।
ವೈನತೇಯಂ ಸಮಾಸ್ಥಾಯ ತಥಾ ನಾರಾಯಣಃ ಸ್ಥಿತಃ　　　　॥ ೩೪ ॥

ಸ್ವಾಯಂಭುವಾದ್ಯಾ ಮನವೋ ಭೃಗ್ವಾದ್ಯಾ ಋಷಯಸ್ತಥಾ ।
ಶಕ್ರಾದ್ಯಾ ದೇವತಾಶ್ಚೈವ ಸರ್ವ ಏವ ಸಮಂ ಯಯುಃ　　　　॥ ೩೫ ॥

ಗದಾಯುಧವನ್ನು ಸಹ ನೋಡಿದೆನು. ಅದು ಬಹು ದೊಡ್ಡದಾಗಿಯೂ, ದಿವ್ಯವಾಗಿಯೂ ಇದ್ದಿತು. ಎಲೈ ಕೃಷ್ಣನೇ, ನಾನು ನೋಡಿದ ಆಯುಧಗಳನ್ನು ಒಂದೊಂದಾಗಿ ಹೇಳಲು ಸಾಧ್ಯವಿಲ್ಲ. ಅವು ಅಸಂಖ್ಯೇಯವಾದುವು. ಒಟ್ಟಿನಲ್ಲಿ ಇವಕ್ಕಿಂತಲೂ ಶ್ರೇಷ್ಠವಾದ ಇನ್ನೂ ಕೆಲವು ಆಯುಧಗಳನ್ನು ನೋಡಿದೆನು.

೩೨. ಎಲೈ ಕೃಷ್ಣನೇ, ಇಷ್ಟೇ ಅಲ್ಲ. ಐಶ್ವರ್ಯಾದಿಗುಣಗಳಿಂದ ಪ್ರಕಾಶಿಸುತ್ತಿರುವ ಈಶ್ವರನ ಸಮೀಪದಲ್ಲಿ ಇಂದ್ರಾದಿ ಸಮಸ್ತ ಲೋಕಪಾಲಕರುಗಳ ಎಲ್ಲಾ ವಿಧವಾದ ಆಯುಧಗಳೂ ತುಂಬಿದ್ದವು. ಅವೆಲ್ಲವನ್ನೂ ನಾನು ನೋಡಿದೆನು.

೩೩. ಈಶ್ವರನ ಎಡಭಾಗದಲ್ಲಿ ಪ್ರಪಂಚಕ್ಕೆಲ್ಲಾ ಪಿತಾಮಹನಾದ ಬ್ರಹ್ಮನನ್ನು ನೋಡಿದೆನು. ಅವನು ಶ್ರೇಷ್ಠವಾದ ವಿಮಾನದಲ್ಲಿ ಕುಳಿತಿದ್ದನು. ಆ ವಿಮಾನಕ್ಕೆ ಹಂಸವನ್ನು ಕಟ್ಟಿದ್ದರು. ಮನಸ್ಸು ಯಾವರೀತಿ ವೇಗವಾಗಿ ಹೋಗುವುದೋ ಅದೇ ರೀತಿ ಈ ವಿಮಾನವೂ ವೇಗವಾಗಿ ಹೋಗುವುದು.

೩೪. ಎಲೈ ಕೃಷ್ಣನೇ, ಕೇಳು. ಈಶ್ವರನ ಎಡಭಾಗದಲ್ಲಿ ಶಂಖಚಕ್ರಗದೆಗಳನ್ನು ಧರಿಸಿಕೊಂಡು ಗರುಡನ ಮೇಲೆ ಕುಳಿತಿರುವ ನಾರಾಯಣನನ್ನು ನಾನು ನೋಡಿದೆನು.

೩೫. ಸ್ವಾಯಂಭುವಸ್ವಾರೋಚಿಷಾದಿ ಮನುಗಳೂ, ಭೃಗು ಅಂಗಿರಸರೇ ಮೊದಲಾದ ಋಷಿಗಳೂ, ಇಂದ್ರನೇ ಮೊದಲಾದ ದೇವತೆಗಳೂ ಎಲ್ಲರೂ ಸಮಾನ ಭಾವವನ್ನು ಹೊಂದಿ ಈಶ್ವರನನ್ನು ಓಲೈಸುತ್ತಿದ್ದರು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ೨೦ಂ ಶೋಽಧ್ಯಾಯಃ

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ತತ್ಪ್ರಾಪ್ತಿಂ ವದ ಸತ್ತಮಂ ।
ಯದ್ಗತ್ವಾ ನ ನಿವರ್ತಂತೇ ಶಿವಭಕ್ತಿಯುತಾ ನರಾಃ ॥ ೧ ॥

॥ ಸನತ್ಕುಮಾರ ಉವಾಚ ॥

ಪರಾಶರಸುತ ವ್ಯಾಸ ಶೃಣು ಪ್ರೀತ್ಯಾ ಶುಭಾಂ ಗತಿಂ ।
ವ್ರತಂ ಹಿ ಶುದ್ಧಭಕ್ತಾನಾಂ ತಥಾ ಶುದ್ಧಂ ತಪಸ್ವಿನಾಂ ॥ ೨ ॥

### ಇಪ್ಪತ್ತನೆಯ ಅಧ್ಯಾಯವು

೧. ವ್ಯಾಸಋಷಿಯು ಸನತ್ಕುಮಾರನನ್ನು ಕುರಿತು ಎಲೈ ಪ್ರಾಜ್ಞನಾದ ಸನತ್ಕುಮಾರನೆ, ನೀನು ಸರ್ವಜ್ಞನು. ಶಿವನಲ್ಲಿ ಭಕ್ತಿಯುಳ್ಳವರು ಆ ಶಿವನ ಲೋಕವನ್ನು ಹೊಂದಿ ಪುನಃ ಹಿಂದಿರುಗುವುದಿಲ್ಲವಷ್ಟೆ? ಅಂತಹ ಆ ಶಿವಲೋಕವನ್ನು ಹೊಂದುವ ಬಗೆ ಹೇಗೆ? ಅದನ್ನು ದಯವಿಟ್ಟು ನನಗೆ ಹೇಳು ಎನ್ನಲು,

೨. ಸನತ್ಕುಮಾರನಿಂತೆಂದನು:—ಪರಾಶರ ಪುತ್ರನಾದ ಎಲೈ ವ್ಯಾಸನೇ, ಕೇಳು. ತಪಸ್ಸನ್ನು ಮಾಡುವವರಿಗೂ, ಶುದ್ಧವಾದ ಮನಸ್ಸಿನಿಂದ ಭಕ್ತಿಯುಳ್ಳವರಾಗಿ ವ್ರತವನ್ನು ಆಚರಿಸುವವರಿಗೂ, ಪರಿಶುದ್ಧಿಯನ್ನು ಉಂಟುಮಾಡಿ ಉತ್ತಮವಾದ ಗತಿಯನ್ನು ಕೊಡುವ ಮಾರ್ಗವನ್ನು ಹೇಳುವೆನು.

**ಸಂಮುಖೇ ಶಂಕರಂ ದೃಷ್ಟ್ವಾ ಬಾಷ್ಪಗದ್ಗದಯಾ ಗಿರಾ ।**
**ಅಪೂಜಯಂ ಸುವಿಧಿವದಹಂ ಶ್ರದ್ಧಾಸಮನ್ವಿತಃ　　　॥ ೪೧ ॥**

**ಭಗವಾನಥ ಸುಪ್ರೀತಶ್ಶಂಕರಃ ಪರಮೇಶ್ವರಃ ।**
**ಪಾಣ್ಯಾ ಮಧುರಯಾ ಪ್ರೀತ್ಯಾ ಮಾಮಾಹ ಪ್ರಹಸನ್ನಿವ　　　॥ ೪೨ ॥**

**ನ ವಿಚಾಲಯಿತುಂ ಶಕ್ಯೋ ಮಯಾ ವಿಪ್ರ ಪುನಃ ಪುನಃ ।**
**ಪರೀಕ್ಷಿತೋಽಸಿ ಭದ್ರಂ ತೇ ಭಗವಾನ್ಭಕ್ತ್ಯನ್ವಿತೋ ದೃಢಃ　　　॥ ೪೩ ॥**

**ತಸ್ಮಾತ್ತೇ ಪರಿತುಷ್ಟೋಽಸ್ಮಿ ವರಂ ವರಯ ಸುವ್ರತ ।**
**ದುರ್ಲಭಂ ಸರ್ವದೇವೇಷು ನಾದೇಯಂ ವಿದ್ಯತೇ ತವ　　　॥ ೪೪ ॥**

ನಿಂತಿರುವ ಈಶ್ವರನನ್ನು ನೋಡುತ್ತಲೇ ಎರಡು ಕಣ್ಣುಗಳಲ್ಲಿಯೂ ಧಾರಾಕಾರವಾಗಿ ಆನಂದಾಶ್ರುವು ಹರಿಯಿತು. ಗದ್ಗದಸ್ವರವು ಹೊರಟಿತು. ಆದರೂ ಆಸ್ತಿಕ್ಯ ಬುದ್ಧಿಯು ಅಧಿಕವಾಯಿತು. ಶಾಸ್ತ್ರೋಕ್ತಮಾರ್ಗದಿಂದ ಈಶ್ವರನನ್ನು ಪೂಜೆ ಮಾಡಿದೆನು.

೪೨. ಈಶ್ವರನು ಸರ್ವಲೋಕಗಳಿಗೂ ಮಂಗಳವನ್ನು ಮಾಡುವವನು. ಅವನಿಗಿಂತಲೂ ಉತ್ಕೃಷ್ಟರು ಮತ್ತೊಬ್ಬರಿಲ್ಲ. ಜ್ಞಾನವೈರಾಗ್ಯಾದಿಗಳಿಂದ ಪರಿಪೂರ್ಣನು. ಇಂತಹ ಈಶ್ವರನು ನನ್ನ ತಪಸ್ಸಿನಿಂದಲೂ ಆಗ ನಾನು ಮಾಡಿದ ಸ್ತೋತ್ರಗಳಿಂದಲೂ ಸಂತೋಷಪಟ್ಟನು. ನಂತರ ನನ್ನೊಡನೆ ಮಾತನಾಡಿದನು. ಆ ಮಾತುಗಳು ಪರಿಹಾಸ್ಯಮಾಡುವ ಹಾಗೆ ಕಾಣುತ್ತಿತ್ತು. ಆದರ ಸ್ವರವೋ ಬಹು ಇಂಪಾಗಿದ್ದಿತು. ನಾನು ಎಂತಹ ಭಾಗ್ಯಶಾಲಿ? ಬಳಿಕ ಈಶ್ವರನು ನನ್ನನ್ನು ಕುರಿತು

೪೩-೪೪. ಎಲೈ ಬ್ರಾಹ್ಮಣಶ್ರೇಷ್ಠನಾದ ಉಪಮನ್ಯುವೇ, ನಿನ್ನನ್ನು ನಾನಾ ವಿಧವಾಗಿ ಪರೀಕ್ಷಿಸಿದೆನು. ನೀನು ದೃಢಸಂಕಲ್ಪವುಳ್ಳವನು. ನಿನ್ನನ್ನು ಈ ತಪಸ್ಸಿನಿಂದ ಕದಲಿಸುವುದಕ್ಕೆ ನನಗೂ ಸಾಧ್ಯವಾಗಲಿಲ್ಲ. ನಿನಗೆ ಮಂಗಳವಾಗಲಿ. ನೀನು ಶ್ರೇಷ್ಠವಾದ ಭಕ್ತಿಯುಳ್ಳವನು ನಿನ್ನ ತಪಸ್ಸಿಗೆ ನಾನು ಸಂತೋಷಪಟ್ಟಿರುವೆನು. ದೇವತೆಗಳಿಗೆ ದುರ್ಲಭವಾದರೂ ನಿನಗೆ ಕೊಡಲಾಗದ ವರವು ಯಾವುದೂ ಇರುವುದಿಲ್ಲ. ನಿನಗೆ ಇಷ್ಟಬಂದ ವರವನ್ನು ಕೇಳಿಕೋ. ನಾನು ಕೊಡಲು ಸಿದ್ಧನಾಗಿರುವೆನು ಎಂದನು.

ಸ ಚಾಹಂ ತದ್ವಚಃ ಶ್ರುತ್ವಾ ಶಂಭೋಃ ಸತ್ಪ್ರೇಮಸಂಯುತಂ ।
ದೇವಂ ತಂ ಪ್ರಾಂಜಲಿರ್ಭೂತ್ವಾಬ್ರುವಂ ಭಕ್ತಾನುಕಂಪಿನಂ ॥ ೪೫ ॥

॥ ಉಪಮನ್ಯುರುವಾಚ ॥

ಭಗವನ್ಯದಿ ತುಷ್ಟೋಽಸಿ ಯದಿ ಭಕ್ತಿಃ ಸ್ಥಿರಾ ಮಯಿ ।
ತೇನ ಸತ್ಯೇನ ಮೇ ಜ್ಞಾನಂ ತ್ರಿಕಾಲವಿಷಯಂ ಭವೇತ್ ॥ ೪೬

ಪ್ರಯಚ್ಛ ಭಕ್ತಿಂ ವಿಪುಲಾಂ ತ್ವಯಿ ಚಾವ್ಯಭಿಚಾರಿಣೀಂ ।
ಸಾನ್ವಯಸ್ಯಾಪಿ ನಿತ್ಯಂ ಮೇ ಭೂರಿ ಕ್ಷೀರೌದನಂ ಭವೇತ್ ॥ ೪೭ ॥

ಮಮಾಸ್ತು ತವ ಸಾನ್ನಿಧ್ಯಂ ನಿತ್ಯಂ ಚೈವಾಶ್ರಮೇ ವಿಭೋ ।
ತವ ಭಕ್ತೇಷು ಸಖ್ಯಂ ಸ್ಯಾದನ್ಯೋಽನ್ಯೇಷು ಸದಾ ಭವೇತ್ ॥ ೪೮ ॥

ಏವಮುಕ್ತೋ ಮಯಾ ಶಂಭುರ್ವಿಹಸ್ಯ ಪರಮೇಶ್ವರಃ ।
ಕೃಪಾದೃಷ್ಟ್ಯಾ ನಿರೀಕ್ಷ್ಯಾಶು ಮಾಂ ಸ ಪ್ರಾಹ ಯದೂದ್ವಹ ॥ ೪೯ ॥

೪೫. ನಾನು ಈಶ್ವರನ ಮಧುರವಾದ ಮತ್ತು ಪ್ರೇಮಯುಕ್ತವಾದ ಮಾತನ್ನು ಕೇಳುತ್ತಲೇ ಭಕ್ತನಾದ ನನಗೆ ಈಶ್ವರನು ದಯೆಯನ್ನು ತೋರಿರುವನೆಂದು ನಂಬಿಕೆ ಯುಂಟಾಯಿತು. ಕೈಮುಗಿದುಕೊಂಡು ನಿಂತು, ಕ್ರೀಡಾಶಾಲಿಯಾದ ಈಶ್ವರನನ್ನು ಕುರಿತು ನನಗೆ ಇಷ್ಟಬಂದ ವರಗಳನ್ನು ಬೇಡಿಕೊಂಡೆನು.

೪೬–೪೯. ಎಲೈ ಭಗವಂತನೇ, ನನ್ನ ತಪಸ್ಸಿನಿಂದ ನಿನಗೆ ಸತ್ಯವಾಗಿಯೂ ಸಂತೋಷವುಂಟಾಗಿ ನನಗೆ ನಿನ್ನಲ್ಲಿ ಸ್ಥಿರವಾದ ಭಕ್ತಿ ಇರುವುದು ಸತ್ಯವೇ ಆದ ಪಕ್ಷ ದಲ್ಲಿ ಭೂತಭವಿಷ್ಯದ್ವರ್ತಮಾನಗಳಲ್ಲಿರುವುದೆಲ್ಲವೂ ನನಗೆ ತಿಳಿಯುವಂತೆ ವರವನ್ನು ಕೊಡು. ನಿನ್ನಲ್ಲಿ ಈಗ ನನಗೆ ಇರುವ ಭಕ್ತಿಯು ಇನ್ನೂ ಹೆಚ್ಚಿ ಸ್ಥಿರವಾಗಿ ನಿಲ್ಲಲಿ. ನನಗೂ ನನ್ನ ವಂಶದವರಿಗೂ ನಿತ್ಯವೂ ಕ್ಷೀರಾನ್ನವು ಹೆಚ್ಚಾಗಿ ಲಭಿಸುವಂತೆ ಅನು ಗ್ರಹಿಸು. ಎಲೈ ಸರ್ವಸಮರ್ಥನಾದ ಈಶ್ವರನೇ, ನನ್ನ ಆಶ್ರಮದಲ್ಲಿ ನೀನು ಯಾವಾ ಗಲೂ ಸನ್ನಿಹಿತನಾಗಿರಬೇಕು. ನಿನ್ನ ಭಕ್ತರಲ್ಲಿ ನನಗೆ ಸ್ನೇಹವುಂಟಾಗಲಿ, ಪರ ಸ್ಪರ ಅನುಕೂಲರಾಗಿರುವ ಭಕ್ತರಲ್ಲಿ ನನಗೆ ಸ್ನೇಹವು ಶಾಶ್ವತವಾಗಿರಲಿ ಎಂದು ವರ ಗಳನ್ನು ಕೇಳಿದೆನು. ಎಲೈ ಯದುಶ್ರೇಷ್ಠನಾದ ಶ್ರೀಕೃಷ್ಣನೇ, ಸರ್ವಸುಖಪ್ರದನೂ, ಸರ್ವಶ್ರೇಷ್ಠನೂ ಆದ ಈಶ್ವರನು ಈ ವರಗಳನ್ನು ಕೇಳಿ ಮುಗುಳುನಗೆಯನ್ನು ತಾಳಿದನು. ದಯೆಯಿಂದ ಪರಿಪೂರ್ಣವಾದ ದೃಷ್ಟಿಯಿಂದ ನನ್ನನ್ನು ನೋಡಿ ನಾನು ಕೇಳಿದ ವರಗಳನ್ನು ಕೊಡುವ ಸಲುವಾಗಿ ಇಂತೆಂದನು.

॥ ಶಿವ ಉವಾಚ ॥

ಉಪಮನ್ಯೋ ಮುನೇ ತಾತ ವರ್ಜಿತಸ್ತ್ವಂ ಭವಿಷ್ಯಸಿ ।
ಜರಾಮರಣಜೈರ್ದೋಷೈಸ್ಸರ್ವಕಾಮಾನ್ವಿತೋ ಭವ ॥ ೫೦ ॥

ಮುನೀನಾಂ ಪೂಜನೀಯಶ್ಚ ಯಶೋಧನಸಮನ್ವಿತಃ ।
ಶೀಲರೂಪಗುಣೈಶ್ವರ್ಯಂ ಮತ್ಪ್ರಸಾದಾತ್ಪದೇ ಪದೇ ॥ ೫೧ ॥

ಕ್ಷೀರೋದಸಾಗರಸ್ಯೈವ ಸಾನ್ನಿಧ್ಯಂ ಪಯಸಾಂ ನಿಧೇಃ ।
ತತ್ರ ತೇ ಭವಿತಾ ನಿತ್ಯಂ ಯತ್ರ ಯತ್ರೇಚ್ಛಸೇ ಮುನೇ ॥ ೫೨ ॥

ಅಮೃತಾತ್ಮಕಂ ತತ್ಕ್ಷೀರಂ ಯಾವತ್ಸಂಯಾಮ್ಯತೇ ತತಃ ।
ಇಮಂ ವೈವಸ್ವತಂ ಕಲ್ಪಂ ಪಶ್ಯಸೇ ಬಂಧುಭಿಸ್ಸಹ ॥ ೫೩ ॥

೫೦. ಎಲೈ ಪ್ರೀತಿಪಾತ್ರನಾದ ಉಪಮನ್ಯುಮಹರ್ಷಿಯೇ, ಇನ್ನು ಮುಂದೆ ನಿನಗೆ ಮುಪ್ಪಿನಿಂದ ಉಂಟಾಗಬಹುದಾದ ದೋಷಗಳೂ, ಮರಣದಿಂದ ಒದಗಬಹುದಾದ ದೋಷಗಳೂ ಸಂಭವಿಸುವುದಿಲ್ಲ. ನೀನು ಎಲ್ಲಾ ಇಷ್ಟಾರ್ಥಗಳನ್ನೂ ಅನುಭವಿಸು.

೫೧. ನನ್ನ ಅನುಗ್ರಹದಿಂದ ಒಳ್ಳೆಯ ಸ್ವಭಾವವನ್ನೂ, ಮನ್ಮಥನಂತೆ ಸೌಂದರ್ಯವನ್ನೂ, ಒಳ್ಳೆಯ ಗುಣಗಳನ್ನೂ, ಅಣಿಮಾದ್ಯಷ್ಟೈಶ್ವರ್ಯಗಳನ್ನೂ ಹೊಂದುತ್ತೀಯೆ. ಒಳ್ಳೆಯ ಕೀರ್ತಿಯೂ, ಧನಸಂಪತ್ತೂ ನಿನಗೆ ಉಂಟಾಗುವುದು. ಋಷಿಗಳು ನಿನ್ನನ್ನು ಆಗಾಗ ಪೂಜಿಸುವರು.

೫೨-೫೩. ಎಲೈ ಋಷಿಶ್ರೇಷ್ಠನಾದ ಉಪಮನ್ಯುವೇ, ನೀನು ನಿನ್ನ ವಂಶದವರಿಗೂ, ನಿನಗೂ ಅಧಿಕವಾದ ಕ್ಷೀರಾನ್ನವನ್ನು ಕೇಳಿದೆಯಲ್ಲವೇ? ಹಾಲಿಗೆಲ್ಲಾ ಆಕರವಾದ ಕ್ಷೀರಸಮುದ್ರವನ್ನು ಕೇಳಿರುವೆಯಷ್ಟೆ? ಆ ಕ್ಷೀರಸಮುದ್ರವು ನೀನು ಅಪೇಕ್ಷಿಸಿದ ಕಡೆಗಳಲ್ಲೆಲ್ಲಾ ಯಾವಾಗಲೂ ಸನ್ನಿಹಿತವಾಗುವುದು. ನಿನ್ನಿಷ್ಟಬಂದಂತೆ ನಿನ್ನ ವಂಶದವರೊಡನೆ ಕ್ಷೀರಾನ್ನವನ್ನನುಭವಿಸು. ಅಮೃತದಂತೆ ಇರುವ ಆ ಕ್ಷೀರಸಮುದ್ರದ ಹಾಲು ಯಾವಾಗ ಸ್ತಬ್ಧವಾಗುತ್ತದೆಯೋ ಆಗ ನೀನು ಈ ವೈವಸ್ವತಕಲ್ಪವನ್ನು ನಿನ್ನ ಬಂಧುಗಳೊಡನೆ ನೋಡುತ್ತೀಯೆ.

ತ್ವದ್ಗೋತ್ರಂ ಚಾಕ್ಷಯಂ ಚಾಸ್ತು ಮತ್ಪ್ರಸಾತ್ಸದೈವ ಹಿ ।
ಸಾನ್ನಿಧ್ಯಮಾಶ್ರಮೇ ತೇಽಹಂ ಕರಿಷ್ಯಾಮಿ ಮಹಾಮುನೇ ॥ ೫೪ ॥

ಮದ್ಭಕ್ತಿಸ್ಸುಸ್ಥಿರಾ ಚಾಸ್ತು ಸದಾ ದಾಸ್ಯಾಮಿ ದರ್ಶನಂ ।
ಸ್ಮೃತಶ್ಚ ಭವತಾ ವತ್ಸ ಪ್ರಿಯಸ್ತ್ವಂ ಸರ್ವಥಾ ಮಮ ॥ ೫೫ ॥

ಯಥಾಕಾಮಸುಖಂ ತಿಷ್ಠ ನೋತ್ಕಂಠಾಂ ಕರ್ತುಮರ್ಹಸಿ ।
ಸರ್ವಂ ಪ್ರಪೂರ್ಣತಾಂ ಯಾತು ಚಿಂತಿತಂ ನಾತ್ರ ಸಂಶಯಃ ॥ ೫೬ ॥

॥ ಉಪಮನ್ಯುರುವಾಚ ॥

ಏವಮುಕ್ತ್ವಾ ಸ ಭಗವಾನ್ಸೂರ್ಯಕೋಟಿಸಮಪ್ರಭಃ ।
ಮಮೇಶಾನೋ ವರಾನ್ದತ್ವಾ ತತ್ರೈವಾಂತರಧೀಯತ ॥ ೫೭ ॥

೫೪. ಎಲೈ ಮನನಶೀಲನೇ, ನನ್ನ ಅನುಗ್ರಹದಿಂದ ನಿನ್ನ ಗೋತ್ರವು ಶಾಶ್ವತವಾಗಿರಲಿ. ನಾನೂ ನಿನ್ನ ಕೋರಿಕೆಯಂತೆ ನಿನ್ನ ಆಶ್ರಮದಲ್ಲಿ ಯಾವಾಗಲೂ ಸನ್ನಿಹಿತನಾಗಿರುವೆನು.

೫೫. ಎಲೈ ವತ್ಸನೇ, ನನ್ನಲ್ಲಿ ನಿನಗೆ ಭಕ್ತಿಯು ಸ್ಥಿರವಾಗಿರಲಿ. ನೀನು ಸರ್ವಪ್ರಕಾರದಿಂದಲೂ ನನಗೆ ಪ್ರೀತಿಪಾತ್ರನು. ನೀನು ಸ್ಮರಿಸಿದ ಕೂಡಲೇ ಯಾವಾಗಲೂ ನಿನಗೆ ನನ್ನ ದರ್ಶನವನ್ನು ಕೊಡುವೆನು.

೫೬. ಎಲೈ ಉಪಮನ್ಯುವೇ, ನಿನ್ನಿಷ್ಟದಂತೆ ಸುಖವಾಗಿರು. ಆದರೆ ಅತ್ಯುತ್ಸಾಹವನ್ನು ಮಾತ್ರ ಮಾಡಬೇಡ. ನೀನು ಯಾವುಯಾವದನ್ನು ಆಲೋಚಿಸಿರುವೆಯೋ ಆ ಇಷ್ಟಾರ್ಥಗಳೆಲ್ಲವೂ ಸಂಪೂರ್ಣವಾಗಿ ಸಿದ್ಧಿಯಾಗುವುವು. ಇದರಲ್ಲಿ ಸಂಶಯವಿಲ್ಲ ಎಂದನು.

೫೭. ಆ ಸಮಯದಲ್ಲಿ ಈಶ್ವರನ ತೇಜಸ್ಸು ಒಂದುಕೋಟಿ ಸೂರ್ಯರ ಕಾಂತಿಗೆ ಸಮಾನವಾಗಿದ್ದಿತು. ಸಕಲಗುಣಪೂರ್ಣನಾದ ಆ ಪರಮೇಶ್ವರನು ಹೀಗೆ ನನಗೆ ವರಗಳನ್ನು ಕೊಟ್ಟು ಅಲ್ಲಿಯೇ ಅಂತರ್ಧಾನವಾದನು.

ಏವಂ ದೃಷ್ಟೋ ಮಯಾ ಕೃಷ್ಣ ಪರಿವಾರಸಮನ್ವಿತಃ ।
ಶಂಕರಃ ಪರಮೇಶಾನೋ ಭುಕ್ತಿಮುಕ್ತಿಪ್ರದಾಯಕಃ ॥ ೫೮ ॥

ಶಂಭುನಾ ಪರಮೇಶೇನ ಯದುಕ್ತಂ ತೇನ ಧೀಮತಾ ।
ತದವಾಪ್ತಂ ಚ ಮೇ ಸರ್ವಂ ದೇವದೇವಸಮಾಧಿನಾ ॥ ೫೯ ॥

ಪ್ರತ್ಯಕ್ಷಂ ಚೈವ ತೇ ಜಾತಾನ್ಗಂಧರ್ವಾಪ್ಸರಸಸ್ತಥಾ ।
ಋಷೀನ್ವಿದ್ಯಾಧರಾಂಶ್ಚೈವ ಪಶ್ಯ ಸಿದ್ಧಾನ್ವ್ಯವಸ್ಥಿತಾನ್ ॥ ೬೦ ॥

ಪಶ್ಯ ವೃಕ್ಷಾನ್ಮನೋರಮ್ಯಾನ್ಸ್ನಿಗ್ಧಪತ್ರಾನ್ಸುಗಂಧಿನಃ ।
ಸರ್ವರ್ತುಕುಸುಮೈರ್ಯುಕ್ತಾನ್ಸದಾ ಪುಷ್ಪಫಲಾನ್ವಿತಾನ್ ॥ ೬೧ ॥

೫೮. ಎಲೈ ಕೃಷ್ಣನೇ, ಭುಕ್ತಿಮುಕ್ತಿಗಳನ್ನು ಕೊಡುವವನಾಗಿಯೂ, ಸರ್ವ ಪರಿವಾರಗಳಿಂದ ಕೂಡಿದವನಾಗಿಯೂ, ಸರ್ವನಿಯಾಮಕನಾಗಿಯೂ ಇರುವ ಈಶ್ವರ ನನ್ನು ನಾನು ಈರೀತಿಯಲ್ಲಿ ನೋಡಿದೆನು.

೫೯. ನಾನು ದೇವತೆಗಳಿಗೂ ದೇವನಾದ ಈಶ್ವರನನ್ನು ಕುರಿತು ತಪಸ್ಸು ಮಾಡಲು ಈಶ್ವರನು ಸಂತುಷ್ಟನಾಗಿ ನನಗೆ ಕೊಟ್ಟ ವರಗಳೆಲ್ಲವೂ ಸಿದ್ಧಿಸಿದವು. ಅವನು ಸರ್ವನಿಯಾಮಕನು, ಸರ್ವಜ್ಞನು. ಸಕಲಸೌಖ್ಯಗಳನ್ನೂ ಕೊಡತಕ್ಕವನು.

೬೦. ನನಗೆ ಪ್ರತ್ಯಕ್ಷರಾದ, ಈಶ್ವರನ ಪರಿವಾರಕ್ಕೆ ಸೇರಿದವರು ಈಗಲೂ ಈ ನನ್ನ ಆಶ್ರಮದಲ್ಲಿಯೇ ಇರುವರು. ಇತ್ತನೋಡು. ಒಂದುಕಡೆ ಗಂಧರ್ವಾಪ್ಸರಸೆ ಯರೂ, ಇನ್ನೊಂದುಕಡೆಯಲ್ಲಿ ಋಷಿಗಳೂ, ವಿದ್ಯಾಧರರೆಂಬ ದೇವಯೋನಿವಿಶೇಷ ಗಳೂ, ಸಿದ್ಧಪುರುಷರೂ ಇರುವರು.

೬೧. ಎಲೈ ಕೃಷ್ಣನೇ, ಈ ಮರಗಳನ್ನು ನೋಡು. ಇವುಗಳ ಎಲೆಗಳು ಎಷ್ಟು ಮನೋಹರವಾಗಿರುವುವು, ಈ ಮರಗಳ ಪರಿಮಳವು ಎಷ್ಟು ಸೊಗಸಾಗಿರುವುದು. ಇವುಗಳಲ್ಲಿ ಎಲ್ಲ ಋತುಗಳಲ್ಲಿಯೂ, ಎಲ್ಲಾ ಕಾಲದಲ್ಲಿಯೂ ಹೂವು, ಹಣ್ಣುಗಳು ಹೇರಳವಾಗಿರುವುವು.

ತ್ವದ್ಗೋತ್ರಂ ಚಾಕ್ಷಯಂ ಚಾಸ್ತು ಮತ್ಪ್ರಸಾತ್ಸದೈವ ಹಿ ।
ಸಾನ್ನಿಧ್ಯಮಾಶ್ರಮೇ ತೇऽಹಂ ಕರಿಷ್ಯಾಮಿ ಮಹಾಮುನೇ ॥ ೫೪ ॥

ಮದ್ಭಕ್ತಿಸ್ಸುಸ್ಥಿರಾ ಚಾಸ್ತು ಸದಾ ದಾಸ್ಯಾಮಿ ದರ್ಶನಂ ।
ಸ್ಮೃತಶ್ಚ ಭವತಾ ವತ್ಸ ಪ್ರಿಯಸ್ತ್ವಂ ಸರ್ವಥಾ ಮಮ ॥ ೫೫ ॥

ಯಥಾಕಾಮಸುಖಂ ತಿಷ್ಠ ನೋತ್ಕಂಠಾಂ ಕರ್ತುಮರ್ಹಸಿ ।
ಸರ್ವಂ ಪ್ರಪೂರ್ಣತಾಂ ಯಾತು ಚಿಂತಿತಂ ನಾತ್ರ ಸಂಶಯಃ ॥ ೫೬ ॥

॥ ಉಪಮನ್ಯುರುವಾಚ ॥

ಏವಮುಕ್ತ್ವಾ ಸ ಭಗವಾನ್ಸೂರ್ಯಕೋಟಿಸಮಪ್ರಭಃ ।
ಮಮೇಶಾನೋ ವರಾನ್ದತ್ವಾ ತತ್ರೈವಾಂತರಧೀಯತ ॥ ೫೭ ॥

೫೪. ಎಲೈ ಮನನಶೀಲನೇ, ನನ್ನ ಅನುಗ್ರಹದಿಂದ ನಿನ್ನ ಗೋತ್ರವು ಶಾಶ್ವತವಾಗಿರಲಿ. ನಾನೂ ನಿನ್ನ ಕೋರಿಕೆಯಂತೆ ನಿನ್ನ ಆಶ್ರಮದಲ್ಲಿ ಯಾವಾಗಲೂ ಸನ್ನಿಹಿತನಾಗಿರುವೆನು.

೫೫. ಎಲೈ ವತ್ಸನೇ, ನನ್ನಲ್ಲಿ ನಿನಗೆ ಭಕ್ತಿಯು ಸ್ಥಿರವಾಗಿರಲಿ. ನೀನು ಸರ್ವಪ್ರಕಾರದಿಂದಲೂ ನನಗೆ ಪ್ರೀತಿಪಾತ್ರನು. ನೀನು ಸ್ಮರಿಸಿದ ಕೂಡಲೇ ಯಾವಾಗಲೂ ನಿನಗೆ ನನ್ನ ದರ್ಶನವನ್ನು ಕೊಡುವೆನು.

೫೬. ಎಲೈ ಉಪಮನ್ಯುವೇ, ನಿನ್ನಿಷ್ಟದಂತೆ ಸುಖವಾಗಿರು. ಆದರೆ ಅತ್ಯುತ್ಸಾಹವನ್ನು ಮಾತ್ರ ಮಾಡಬೇಡ. ನೀನು ಯಾವುಯಾವದನ್ನು ಆಲೋಚಿಸಿರುವೆಯೋ ಆ ಇಷ್ಟಾರ್ಥಗಳೆಲ್ಲವೂ ಸಂಪೂರ್ಣವಾಗಿ ಸಿದ್ಧಿಯಾಗುವುವು. ಇದರಲ್ಲಿ ಸಂಶಯವಿಲ್ಲ ಎಂದನು.

೫೭. ಆ ಸಮಯದಲ್ಲಿ ಈಶ್ವರನ ತೇಜಸ್ಸು ಒಂದುಕೋಟಿ ಸೂರ್ಯರ ಕಾಂತಿಗೆ ಸಮಾನವಾಗಿದ್ದಿತು. ಸಕಲಗುಣಪೂರ್ಣನಾದ ಆ ಪರಮೇಶ್ವರನು ಹೀಗೆ ನನಗೆ ವರಗಳನ್ನು ಕೊಟ್ಟು ಅಲ್ಲಿಯೇ ಅಂತರ್ಧಾನವಾದನು.

ಏವಂ ದೃಷ್ಟೋ ಮಯಾ ಕೃಷ್ಣ ಪರಿವಾರಸಮನ್ವಿತಃ ।
ಶಂಕರಃ ಪರಮೇಶಾನೋ ಭುಕ್ತಿಮುಕ್ತಿಪ್ರದಾಯಕಃ ॥ ೫೮ ॥

ಶಂಭುನಾ ಪರಮೇಶೇನ ಯದುಕ್ತಂ ತೇನ ಧೀಮತಾ ।
ತದವಾಪ್ತಂ ಚ ಮೇ ಸರ್ವಂ ದೇವದೇವಸಮಾಧಿನಾ ॥ ೫೯ ॥

ಪ್ರತ್ಯಕ್ಷಂ ಚೈವ ತೇ ಜಾತಾನ್ಗಂಧರ್ವಾಪ್ಸರಸಸ್ತಥಾ ।
ಋಷೀನ್ವಿದ್ಯಾಧರಾಂಶ್ಚೈವ ಪಶ್ಯ ಸಿದ್ಧಾನ್ವ್ಯವಸ್ಥಿತಾನ್ ॥ ೬೦ ॥

ಪಶ್ಯ ವೃಕ್ಷಾನ್ಮನೋರಮ್ಯಾನ್ಸ್ನಿಗ್ಧಪತ್ರಾನ್ಸುಗಂಧಿನಃ ।
ಸರ್ವರ್ತುಕಕುಸುಮೈರ್ಯುಕ್ತಾನ್ಸದಾ ಪುಷ್ಪಫಲಾನ್ವಿತಾನ್ ॥ ೬೧ ॥

೫೮. ಎಲೈ ಕೃಷ್ಣನೇ, ಭುಕ್ತಿಮುಕ್ತಿಗಳನ್ನು ಕೊಡುವವನಾಗಿಯೂ, ಸರ್ವ ಪರಿವಾರಗಳಿಂದ ಕೂಡಿದವನಾಗಿಯೂ, ಸರ್ವನಿಯಾಮಕನಾಗಿಯೂ ಇರುವ ಈಶ್ವರನನ್ನು ನಾನು ಈರೀತಿಯಲ್ಲಿ ನೋಡಿದೆನು.

೫೯. ನಾನು ದೇವತೆಗಳಿಗೂ ದೇವನಾದ ಈಶ್ವರನನ್ನು ಕುರಿತು ತಪಸ್ಸು ಮಾಡಲು ಈಶ್ವರನು ಸಂತುಷ್ಟನಾಗಿ ನನಗೆ ಕೊಟ್ಟ ವರಗಳೆಲ್ಲವೂ ಸಿದ್ಧಿಸಿದವು. ಅವನು ಸರ್ವನಿಯಾಮಕನು, ಸರ್ವಜ್ಞನು. ಸಕಲಸೌಖ್ಯಗಳನ್ನೂ ಕೊಡತಕ್ಕವನು.

೬೦. ನನಗೆ ಪ್ರತ್ಯಕ್ಷರಾದ, ಈಶ್ವರನ ಪರಿವಾರಕ್ಕೆ ಸೇರಿದವರು ಈಗಲೂ ಈ ನನ್ನ ಆಶ್ರಮದಲ್ಲಿಯೇ ಇರುವರು. ಇತ್ತನೋಡು. ಒಂದುಕಡೆ ಗಂಧರ್ವಾಪ್ಸರಸೆಯರೂ, ಇನ್ನೊಂದುಕಡೆಯಲ್ಲಿ ಋಷಿಗಳೂ, ವಿದ್ಯಾಧರರೆಂಬ ದೇವಯೋನಿವಿಶೇಷಗಳೂ, ಸಿದ್ಧಪುರುಷರೂ ಇರುವರು.

೬೧. ಎಲೈ ಕೃಷ್ಣನೇ, ಈ ಮರಗಳನ್ನು ನೋಡು. ಇವುಗಳ ಎಲೆಗಳು ಎಷ್ಟು ಮನೋಹರವಾಗಿರುವುವು, ಈ ಮರಗಳ ಪರಿಮಳವು ಎಷ್ಟು ಸೊಗಸಾಗಿರುವುದು. ಇವುಗಳಲ್ಲಿ ಎಲ್ಲ ಋತುಗಳಲ್ಲಿಯೂ, ಎಲ್ಲಾ ಕಾಲದಲ್ಲಿಯೂ ಹೂವು, ಹಣ್ಣುಗಳು ಹೇರಳವಾಗಿರುವುವು.

ಸರ್ವಮೇತನ್ಮಹಾಬಾಹೋ ಶಂಕರಸ್ಯ ಮಹಾತ್ಮನಃ ।
ಪ್ರಸಾದಾದ್ದೇವದೇವಸ್ಯ ವಿಶ್ವಂ ಭಾವಸಮನ್ವಿತಂ ॥ ೬೨ ॥

ಮಮಾಸ್ತಿ ತ್ವಖಿಲಂ ಜ್ಞಾನಂ ಪ್ರಸಾದಾಚ್ಛೂಲಪಾಣಿನಃ ।
ಭೂತಂ ಭವ್ಯಂ ಭವಿಷ್ಯಂ ಚ ಸರ್ವಂ ಜಾನಾಮಿ ತತ್ತ್ವತಃ ॥ ೬೩ ॥

ತಮಹಂ ದೃಷ್ಟವಾನ್ದೇವಮಪಿ ದೇವಾಃ ಸುರೇಶ್ವರಾಃ ।
ಯಂ ನ ಪಶ್ಯಂತ್ಯನಾರಾಧ್ಯ ಕೋಽನ್ಯೋ ಧನ್ಯತರೋ ಮಯಾ ॥ ೬೪ ॥

ಷಡ್ವಿಂಶಕಮಿತಿ ಖ್ಯಾತಂ ಪರಂ ತತ್ತ್ವಂ ಸನಾತನಂ ।
ಏವಂ ಧ್ಯಾಯಂತಿ ವಿದ್ವಾಂಸೋ ಮಹತ್ಪರಮಮಕ್ಷರಂ ॥ ೬೫ ॥

---

೬೨. ಎಲೈ ಮಹಾಪರಾಕ್ರಮಶಾಲಿಯೇ, ಇದೆಲ್ಲವೂ ಈಶ್ವರನ ಅನುಗ್ರಹದಿಂದ ಉಂಟಾದುದು. ಅವನು ಸರ್ವಜ್ಞನು. ಅವನೇ ಸರ್ವದೇವತೆಗಳಲ್ಲಿಯೂ ಶ್ರೇಷ್ಠನು. ಅವನ ಅನುಗ್ರಹದಿಂದ ಈ ಪ್ರಪಂಚವು ಬೆಳಗುತ್ತಿರುವುದು.

೬೩. ಶೂಲಪಾಣಿಯಾದ ಈಶ್ವರನ ಅನುಗ್ರಹದಿಂದ ನನಗೆ ಎಲ್ಲವೂ ತಿಳಿಯುವುದು. ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ನಡೆಯುವ ಸಕಲ ಸಂಗತಿಗಳನ್ನೂ ನಾನು ಯಥಾರ್ಥವಾಗಿ ತಿಳಿದಿರುವೆನು.

೬೪. ದೇವತೆಗಳಾಗಲೀ, ದೇವತೆಗಳಿಗೆ ಅಧಿಪತಿಗಳಾದ ಬ್ರಹ್ಮಾದಿಗಳಾಗಲೀ ಅವನನ್ನು ಆರಾಧಿಸದೆ ಕಾಣಲು ಸಾಧ್ಯವಿಲ್ಲ. ಇಂತಹ ಈಶ್ವರನನ್ನು ನಾನು ನೋಡಿದೆನು. ನಾನು ಎಷ್ಟು ಅದೃಷ್ಟಶಾಲಿಯು? ನನಗಿಂತಲೂ ಧನ್ಯರು ಯಾರುತಾನೇ ಇರುವರು?

೬೫. ಪ್ರಕೃತಿ ಮಹದಹಂಕಾರಗಳು, ಏಕಾದಶೇಂದ್ರಿಯಗಳು, ಪಂಚತನ್ಮಾತ್ರೆಗಳು, ಪಂಚಭೂತಗಳು ಹೀಗೆ ಅಚೇತನತತ್ತ್ವಗಳು ಇಪ್ಪತ್ತುನಾಲ್ಕು ಬಗೆಯಾಗಿರುವುವು. ಜೀವರಾಶಿಯು ಇಪ್ಪತ್ತೈದನೆಯದು. ಈಶ್ವರನು ಇಪ್ಪತ್ತಾರನೆಯವನು. ಇದಕ್ಕೆ ಮೇಲೆ ತತ್ತ್ವವಿರುವುದಿಲ್ಲ. ಇದೇ ಶ್ರೇಷ್ಠವಾದ ತತ್ತ್ವವು. ಇದೇ ಅನಾದಿಯಾದುದು. ಈ ತತ್ತ್ವವನ್ನು ಮಹತ್, ಪರಮಂ, ಅಕ್ಷರಂ ಎಂದು ಪಂಡಿತರು ಧ್ಯಾನಮಾಡುವರು. ಇವನ ಸ್ವರೂಪವೂ, ಜ್ಞಾನವೂ ದೊಡ್ಡದಾದುದು. ಇದಕ್ಕಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲ. ಇದು ನಾಶರಹಿತವಾದುದು.

**ಸರ್ವತತ್ತ್ವವಿಧಾನಜ್ಞಃ ಸರ್ವತತ್ತ್ವಾರ್ಥದರ್ಶನಃ ।**
**ಸ ಏವ ಭಗವಾನ್ದೇವಃ ಪ್ರಧಾನಪುರುಷೇಶ್ವರಃ ॥ ೬೬ ॥**

**ಯೋ ನಿಜಾದ್ದಕ್ಷಿಣಾತ್ಪಾರ್ಶ್ವಾದ್ಬ್ರಹ್ಮಾಣಂ ಲೋಕಕಾರಣಂ ।**
**ವಾಮಾದಪ್ಯಸೃಜದ್ವಿಷ್ಣುಂ ಲೋಕರಕ್ಷಾರ್ಥಮೀಶ್ವರಃ ॥ ೬೭ ॥**

**ತಲ್ಪಾಂತೇ ಚೈವ ಸಂಪ್ರಾಪ್ತೇಽಸೃಜದ್ರುದ್ರಂ ಹೃದಃ ಪ್ರಭುಃ ।**
**ತತಸ್ಸಮಹರತ್ಕೃತ್ಸ್ನಂ ಜಗತ್ಸ್ಥಾವರಜಂಗಮಮ್ ॥ ೬೮ ॥**

**ಯುಗಾಂತೇ ಸರ್ವಭೂತಾನಿ ಸಂವರ್ತಕ ಇವಾನಲಃ ।**
**ಕಾಲೋ ಭೂತ್ವಾ ಮಹಾದೇವೋ ಗ್ರಸಮಾನಸ್ಸ ತಿಷ್ಠತಿ ॥ ೬೯ ॥**

**ಸರ್ವಜ್ಞಃ ಸರ್ವಭೂತಾತ್ಮಾ ಸರ್ವಭೂತಭವೋದ್ಭವಃ ।**
**ಆಸ್ತೇ ಸರ್ವಗತೋ ದೇವೋ ದೃಶ್ಯಸ್ಸರ್ವೈಶ್ಚ ದೈವತೈಃ ॥ ೭೦ ॥**

---

೬೬. ಈಶ್ವರನು ಎಲ್ಲಾ ತತ್ತ್ವಗಳನ್ನೂ ಸೃಷ್ಟಿಸುವನು. ಎಲ್ಲ ತತ್ತ್ವಾರ್ಥಗಳನ್ನು ತಿಳಿದಿರುವನು. ಸಮಸ್ತ ಗುಣಪೂರ್ಣನು. ಇವನೇ ಮೂಲಪ್ರಕೃತಿಗೂ ಜೀವರಾಶಿಗೂ ಅಧಿಪತಿಯು.

೬೭. ಚತುರ್ಮುಖಬ್ರಹ್ಮನು ಸಕಲಲೋಕಗಳನ್ನೂ ಸೃಷ್ಟಿಸುವನು. ಇವನು ಈಶ್ವರನ ಬಲಭಾಗದಲ್ಲಿ ಹುಟ್ಟಿದವನು. ವಿಷ್ಣುವು ಸಕಲಲೋಕಗಳನ್ನೂ ಕಾಪಾಡತಕ್ಕವನು. ಇವನು ಈಶ್ವರನ ಎಡಗಡೆಯಲ್ಲಿ ಅವತರಿಸಿದವನು.

೬೮. ಸರ್ವಸಮರ್ಥನಾದ ಈಶ್ವರನು ಪ್ರಳಯಕಾಲದಲ್ಲಿ ತನ್ನ ಹೃದಯದಿಂದ ರುದ್ರನನ್ನು ಸೃಷ್ಟಿಸಿ ಚರಾಚರಾತ್ಮಕವಾದ ಪ್ರಪಂಚವೆಲ್ಲವನ್ನೂ ಸಂಹರಿಸುವನು.

೬೯. ಯುಗವು ಮುಗಿಯುವ ಸಮಯದಲ್ಲಿ ಮಹೇಶ್ವರನು ಕಾಲಸ್ವರೂಪವನ್ನು ತಾಳಿ ಪ್ರಳಯಕಾಲದ ಬೆಂಕಿಯಂತೆ ಎಲ್ಲವನ್ನೂ ನುಂಗುವನು.

೭೦. ಈಶ್ವರನು ಸರ್ವಜ್ಞನು. ಸಮಸ್ತ ಭೂತಗಳಿಗೂ ಅಂತರಾತ್ಮನು. ಸರ್ವಭೂತಗಳ ಉತ್ಪತ್ತಿಗೂ ಕಾರಣಭೂತನು. ಅವನು ಎಲ್ಲ ಕಡೆಯಲ್ಲಿಯೂ ಇರುವವನು. ಇದನ್ನು ಎಲ್ಲರೂ ನೋಡಲು ಸಾಧ್ಯವಿಲ್ಲ. ದೇವತೆಗಳು ಮಾತ್ರ ನೋಡಬಲ್ಲರು.

ಅತಸ್ತ್ವಂ ಪುತ್ರಲಾಭಾಯ ಸಮಾರಾಧಾಯ ಶಂಕರಂ
ಶೀಘ್ರಂ ಪ್ರಸನ್ನೋ ಭವಿತಾ ಶಿವಸ್ತೇ ಭಕ್ತವತ್ಸಲಃ ॥ ೭೧ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಕೃಷ್ಣೋಪಮನ್ಯುಸಂವಾದೇ ಸ್ವಗತಿವರ್ಣನಂ ನಾಮ
ಪ್ರಥಮೋಽಧ್ಯಾಯಃ



೭೧. ಆದುದರಿಂದ ಎಲೈ ಕೃಷ್ಣನೇ, ನಿನಗೆ ಪುತ್ರನನ್ನು ಪಡೆಯಬೇಕೆಂದು ಆಶೆ ಇದ್ದರೆ ಈಶ್ವರನನ್ನು ಆರಾಧಿಸು. ಅವನು ಭಕ್ತವತ್ಸಲನು ಎಂದರೆ ಭಕ್ತರಲ್ಲಿರುವ ತಪ್ಪುಗಳನ್ನು ಅನಾದರಿಸಿ ಪ್ರೀತಿಮಾಡುವನು. ಅವನು ಶೀಘ್ರದಲ್ಲಿಯೇ ಪ್ರಸನ್ನನಾಗಿ ನಿನ್ನ ಇಷ್ಟಾರ್ಥವನ್ನು ಪೂರ್ತಿಮಾಡುವನು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಕೃಷ್ಣಉಪಮನ್ಯುಸಂವಾದವೆಂಬ ಮೊದಲನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ದ್ವಿತೀಯೋಽಧ್ಯಾಯಃ

|| ಸನತ್ಕುಮಾರ ಉವಾಚ ||

ಇತ್ಯಾಕರ್ಣ್ಯ ಮುನೇರ್ವಾಕ್ಯಮುಪಮನ್ಯೋರ್ಮಹಾತ್ಮನಃ ।
ಜಾತಭಕ್ತಿರ್ಮಹಾದೇವೇ ಕೃಷ್ಣಃ ಪ್ರೋವಾಚ ತಂ ಮುನಿಂ || ೧ ||

|| ಶ್ರೀಕೃಷ್ಣ ಉವಾಚ ||

ಉಪಮನ್ಯೋ ಮುನೇ ತಾತ ಕೃಪಾಂ ಕುರು ಮಮೋಪರಿ ।
ಯೇ ಯೇ ಶಿವಂ ಸಮಾರಾಧ್ಯ ಕಾಮಾನಾಪುಶ್ಚ ತಾನ್ವದ || ೨ ||

## ಎರಡನೆಯ ಅಧ್ಯಾಯವು

೧. ಸನತ್ಕುಮಾರನಿಂತೆಂದನು :—ಈರೀತಿಯಾಗಿ ಮಹಾತ್ಮನಾದ ಉಪಮನ್ಯುಮಹರ್ಷಿಯು ಹೇಳಲು, ಅದನ್ನು ಕೇಳಿ ಕೃಷ್ಣನಿಗೆ ಈಶ್ವರನಲ್ಲಿ ಭಕ್ತಿಯು ವೃದ್ಧಿಹೊಂದಿ ನೆಲಸಿತು. ಕೃಷ್ಣನು ಉಪಮನ್ಯುವನ್ನು ಮತ್ತೆ ಪ್ರಶ್ನಿಸಿದನು.

೨. ಎಲೈ ಉಪಮನ್ಯುಮಹರ್ಷಿಯೇ, ನೀನು ಪೂಜ್ಯನು. ಈಶ್ವರನನ್ನು ಆರಾಧಿಸಿ ಯಾರು ಯಾರು ಇಷ್ಟಾರ್ಥಗಳನ್ನು ಪಡೆದಿರುವರು ? ಕೃಪೆಮಾಡಿ ನನಗೆ ಅನುಗ್ರಹಿಸಬೇಕು ಎಂದನು.

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯೋಪಮನ್ಯುಸ್ಸ ಮುನಿಶ್ರೈವವರೋ ಮಹಾನ್ ।
ಕೃಷ್ಣವಾಕ್ಯಂ ಸುಪ್ರಶಸ್ಯ ಪ್ರತ್ಯುವಾಚ ಕೃಪಾನಿಧಿಃ ॥ ೩ ॥

॥ ಉಪಮನ್ಯುರುವಾಚ ॥

ಯೈರ್ಯೈರ್ಭವಾರಾಧನತಃ ಪ್ರಾಪ್ತೋ ಹ್ಯತ್ಕಾಮ ಏವ ಹಿ ।
ತಾಂಸ್ತಾನ್ಭಕ್ತಾನ್ಪ್ರವಕ್ಷ್ಯಾಮಿ ಶೃಣು ತ್ವಂ ವೈ ಯದೂದ್ವಹ ॥ ೪ ॥

ಶರ್ವಾತ್ಸರ್ವಾಮರೈಶ್ವರ್ಯಂ ಹಿರಣ್ಯಕಶಿಪುಃ ಪುರಾ ।
ವರ್ಷಾಣಾಂ ದಶಲಕ್ಷಾಣಿ ಸೋಽಲಭಚ್ಚಂದ್ರಶೇಖರಾತ್ ॥ ೫ ॥

ತಸ್ಯಾಽಥ ಪುತ್ರಪ್ರವರೋ ನಂದನೋ ನಾಮ ವಿಶ್ರುತಃ ।
ಸ ಚ ಶರ್ವವರಾದಿಂದ್ರಂ ವರ್ಷಾಯುತಮಧೋನಯತ್ ॥ ೬ ॥

೩. ಉಪಮನ್ಯುಮಹರ್ಷಿಯಾದರೋ ಈಶ್ವರಭಕ್ತರಲ್ಲಿ ಅಗ್ರಗಣ್ಯನು. ಮಹಾತ್ಮನು. ಮಂತ್ರಾರ್ಥಗಳನ್ನು ಮನನಮಾಡತಕ್ಕವನು. ಸಮುದ್ರದಲ್ಲಿ ನೀರಿರುವಂತೆ ದಯೆಯು ಇವನಲ್ಲಿ ನೆಲಸಿರುವುದು. ಇಂತಹ ಈ ಉಪಮನ್ಯುವು ಕೃಷ್ಣನ ಮಾತುಗಳನ್ನು ಕೇಳಿ ಸಂತೋಷಿಸಿ, ಕೃಷ್ಣನಲ್ಲದೆ ಮತ್ತೊಬ್ಬರು ಇಂತಹ ಮಾತುಗಳನ್ನು ಹೇಳಲಾರರು ಎಷ್ಟು ಮನೋಹರವಾಗಿದೆ. ಇದರ ಗಾಂಭೀರ್ಯವೆಷ್ಟು. ಎಂತಹ ಅರ್ಥವುಳ್ಳದ್ದು ಎಂದು ಪರಿಪರಿಯಾಗಿ ಕೃಷ್ಣನ ಮಾತುಗಳನ್ನು ಹೊಗಳಿ ಕೃಷ್ಣನಿಗೆ ಪ್ರತ್ಯುತ್ತರವನ್ನಿತ್ತನು.

೪. ಎಲೈ ಯದುಶ್ರೇಷ್ಠನಾದ ಕೃಷ್ಣನೇ, ಕೇಳು. ಈಶ್ವರನನ್ನು ಆರಾಧಿಸಿ ತಮ್ಮತಮ್ಮ ಇಷ್ಟಾರ್ಥಗಳನ್ನು ಪಡೆದ ಭಕ್ತರುಗಳು ಯಾರು ಯಾರು ಎಂಬುದನ್ನು ಹೇಳುತ್ತೇನೆ ಎಂದು ಹೇಳತೊಡಗಿದನು.

೫. ಹಿರಣ್ಯಕಶಿಪುವು ಬಹಳ ಪ್ರಸಿದ್ಧನಾದವನು. ಇವನು ತಪಸ್ಸಿನಿಂದ ಈಶ್ವರನನ್ನು ಸಂತೋಷಪಡಿಸಿ ಹತ್ತುಲಕ್ಷವರ್ಷ ಆಯುಸ್ಸನ್ನೂ, ದೇವತೆಗಳ ಸಮಸ್ತವಾದ ಐಶ್ವರ್ಯವನ್ನೂ ಪಡೆದನು.

೬-೭. ಹಿರಣ್ಯಕಶಿಪುವಿಗೆ ನಂದನನೆಂಬ ಮಗನಿದ್ದನು. ಅವನು ಬಹು ಪ್ರಸಿದ್ಧನು. ಇವನು ಈಶ್ವರನನ್ನು ಆರಾಧಿಸಿ ಅವನ ಅನುಗ್ರಹದಿಂದ ಹತ್ತುಸಹಸ್ರ

ವಿಷ್ಣುಚಕ್ರಂ ಚ ತದ್ಘೋರಂ ವಜ್ರಮಾಖಂಡಲಸ್ಯ ಚ ।
ಶೀರ್ಣಂ ಪುರಾsಭವತ್ಕೃಷ್ಣ ತದಂಗೇಷು ಮಹಾಹವೇ ॥ ೭ ॥

ನ ಶಸ್ತ್ರಾಣಿ ವಹಂತ್ಯಂಗೇ ಧರ್ಮತಸ್ತಸ್ಯ ಧೀಮತಃ ।
ಗ್ರಹಸ್ಯಾತಿಬಲಸ್ಯಾಜೌ ಚಕ್ರವಜ್ರಮುಖಾನ್ಯಪಿ ॥ ೮ ॥

ಅರ್ದ್ಯಮಾನಾಶ್ಚ ವಿಬುಧಾ ಗ್ರಹೇಣ ಸುಬಲೀಯಸಾ ।
ದೇವದತ್ತವರಾ ಜಘ್ನುರಸುರೇಂದ್ರಾಸ್ಸುರಾನ್ಭೃಶಂ ॥ ೯ ॥

ತುಷ್ಟೋ ವಿದ್ಯುತ್ಪ್ರಭಸ್ಯಾಪಿ ತ್ರೈಲೋಕ್ಯೇಶ್ವರತಾಮದಾತ್ ।
ಶತವರ್ಷಸಹಸ್ರಾಣಿ ಸರ್ವಲೋಕೇಶ್ವರೋ ಭವಃ ॥ ೧೦ ॥

ತಥಾ ಪುತ್ರಸಹಸ್ರಾಣಾಮಯುತಂ ಚ ದದೌ ಶಿವಃ ।
ಮಮ ಚಾನುಚರೋ ನಿತ್ಯಂ ಭವಿಷ್ಯಸ್ಯಬ್ರವೀದಿತಿ ॥ ೧೧ ॥

ವರ್ಷಕಾಲ ಇಂದ್ರನನ್ನು ಕೆಳಗೆ ತಳ್ಳಿದನು. ವಿಷ್ಣುವಿನ ಚಕ್ರಾಯುಧವೂ, ಇಂದ್ರನ ವಜ್ರಾಯುಧವೂ ಪರಮಘೋರವಾದ ಆಯುಧಗಳು. ಇಂತಹ ಆಯುಧಗಳೂ ದೊಡ್ಡದೊಡ್ಡ ಯುದ್ಧಗಳಲ್ಲಿ ಇವನ ದೇಹಕ್ಕೆ ತಗುಲಿ ಪುಡಿಪುಡಿಯಾದವು.

೮-೯. ಗ್ರಹ ಎಂಬುವನು ಮಹಾಪರಾಕ್ರಮಶಾಲಿ ಮತ್ತು ಮಹಾಮೇಧಾವಿಯು. ಈಶ್ವರಭಕ್ತನಾದ ಅವನ ಅವಯವಗಳಲ್ಲಿ ಚಕ್ರ, ವಜ್ರ ಮೊದಲಾದ ಆಯುಧಗಳು ನಾಟಲಾರವು. ಮಹಾಪರಾಕ್ರಮಶಾಲಿಯಾದ ಈ ಗ್ರಹನು ದೇವತೆಗಳನ್ನು ಬಹುವಾಗಿ ಹಿಂಸಿಸಿದನು. ರಾಕ್ಷಸರೆಲ್ಲರೂ ಈಶ್ವರನಿಂದ ವರಗಳನ್ನು ಪಡೆದು ದೇವತೆಗಳನ್ನು ಬಹಳವಾಗಿ ಹಿಂಸಿಸಿದರು.

೧೦. ಸಕಲಲೋಕಗಳಿಗೂ ನಿಯಾಮಕನಾದ ಈಶ್ವರನನ್ನು ವಿದ್ಯುತ್ಪ್ರಭನು ಆರಾಧಿಸಿದನು. ಆದರಿಂದ ಸಂತುಷ್ಟನಾದ ಈಶ್ವರನು ಒಂದುಸಹಸ್ರ ವರ್ಷಕಾಲ ಮೂರುಲೋಕಗಳಿಗೂ ಅಧಿಪತಿಯಾಗುವಂತೆ ಅವನಿಗೆ ಅನುಗ್ರಹಿಸಿದನು.

೧೧. ಮಂಗಳಕರನಾದ ಈಶ್ವರನು ವಿದ್ಯುತ್ಪ್ರಭನಿಗೆ ತ್ರೈಲೋಕ್ಯೈಶ್ವರ್ಯವನ್ನು ಕೊಟ್ಟಂತೆಯೇ ಒಂದುಕೋಟಿ ಪುತ್ರರನ್ನು ಕೊಟ್ಟು ನೀನು ಯಾವಾಗಲೂ ನನಗೆ ಸೇವಕನಾಗಿಯೇ ಇರು ಎಂದು ಅನುಗ್ರಹಿಸಿದನು.

ಕುಶದ್ವೀಪೇ ಶುಭಂ ರಾಜ್ಯಮುದದಾದ್ಭಗವಾನ್ಭವಃ ।
ಸ ತಸ್ಮೈ ಶಂಕರಃ ಪ್ರೀತ್ಯಾ ವಾಸುದೇವಃ ಪ್ರಹೃಷ್ಟಧೀಃ ॥ ೧೨ ॥

ಧಾತ್ರಾ ಸೃಷ್ಟಶ್ಶತಮುಖೋ ದೈತ್ಯೋ ವರ್ಷಶತಂ ಪುರಾ ।
ತಪಃ ಕೃತ್ವಾ ಸಹಸ್ರಂ ತು ಪುತ್ರಾಣಾಮಲಮುದ್ಭವಾತ್ ॥ ೧೩ ॥

ಯಾಜ್ಞವಲ್ಕ್ಯ ಇತಿ ಖ್ಯಾತೋ ಗೀತೋ ವೇದೇಷು ವೈ ಮುನಿಃ ।
ಆರಾಧ್ಯ ಸ ಮಹಾದೇವಂ ಪ್ರಾಪ್ತವಾನ್ಜ್ಞಾನಮುತ್ತಮಂ ॥ ೧೪ ॥

ವೇದವ್ಯಾಸಸ್ತು ಯೋ ನಾಮ್ನಾ ಪ್ರಾಪ್ತವಾನತುಲಂ ಯಶಃ ।
ಸೋಽಪಿ ಶಂಕರಮಾರಾಧ್ಯ ತ್ರಿಕಾಲಜ್ಞಾನಮಾಪ್ತವಾನ್ ॥ ೧೫ ॥

---

೧೨. ಸರ್ವವ್ಯಾಪಕನಾದ ಈಶ್ವರನೇ ಸುಖವನ್ನು ಕೊಡತಕ್ಕವನು. ಅವನು ವಿದ್ಯುತ್ಪ್ರಭನ ತಪಸ್ಸಿನಿಂದ ಸಂತೋಷಪಟ್ಟು ಬಹಳ ಪ್ರೇಮದಿಂದ ಕುಶದ್ವೀಪದಲ್ಲಿ ಒಂದು ರಾಜ್ಯವನ್ನು ಸ್ಥಾಪಿಸಿ ವಿದ್ಯುತ್ಪ್ರಭನಿಗೆ ಕೊಟ್ಟನು. ಆ ರಾಜ್ಯವು ಬಹಳ ಮಂಗಳಕರವಾದುದು.

೧೩. ಶತಮುಖ ಎಂಬುವನು ಒಬ್ಬ ದೈತ್ಯನು. ಬ್ರಹ್ಮನಿಂದ ಸೃಷ್ಟಿಸಲ್ಪಟ್ಟವನು. ಇವನು ನೂರುವರ್ಷಕಾಲ ಪುತ್ರಾರ್ಥವಾಗಿ ಈಶ್ವರನನ್ನು ಕುರಿತು ತಪಸ್ಸನ್ನು ಮಾಡಿದನು. ಈಶ್ವರನು ಸಂತುಷ್ಟನಾಗಿ ಅವನಿಗೆ ಒಂದುಸಹಸ್ರ ಪುತ್ರರನ್ನು ಅನುಗ್ರಹಿಸಿದನು

೧೪. ಎಲೈ ಕೃಷ್ಣನೇ, ಇಲ್ಲಿಯವರಿಗೂ ರಾಜಸಪ್ರಕೃತಿಗಳಾದ ರಾಕ್ಷಸರು ಈಶ್ವರನಿಂದ ಫಲವನ್ನು ಹೊಂದಿದ್ದುದನ್ನು ಹೇಳಿದೆನು. ಸಾತ್ವಿಕಪ್ರಕೃತಿಯುಳ್ಳವರೂ ಈಶ್ವರನಿಂದ ಫಲಗಳನ್ನು ಪಡೆದಿರುವರು. ಅವುಗಳನ್ನು ಹೇಳುವೆನು ಕೇಳು. ಯಾಜ್ಞವಲ್ಕ್ಯನೆಂಬ ಋಷಿಯು ಅತಿಪ್ರಸಿದ್ಧನು. ವೇದಗಳಲ್ಲಿಯೂ ಇವನ ಹೆಸರು ಹೇಳಲ್ಪಟ್ಟಿರುವುದು. ಇವನು ಈಶ್ವರನನ್ನು ಆರಾಧಿಸಿ ಅವನಿಂದ ಶ್ರೇಷ್ಠವಾದ ಜ್ಞಾನವನ್ನು ಸಂಪಾದಿಸಿದನು. "ಶಂಕರಾತ್ ಜ್ಞಾನಮನ್ವಿಚ್ಛೇತ್" ಎಂದರೆ ಈಶ್ವರನಿಂದ ಜ್ಞಾನವನ್ನು ಅಪೇಕ್ಷಿಸಬೇಕು ಎಂದು ಅರ್ಥವು. ಈ ವಚನಕ್ಕೆ ಈ ಯಾಜ್ಞವಲ್ಕ್ಯನೇ ಮೊದಲನೆಯ ಉದಾಹರಣೆಯು.

೧೫. ವೇದವ್ಯಾಸನು ಅತಿಪ್ರಖ್ಯಾತನು ಅತ್ಯಧಿಕವಾದ ಕೀರ್ತಿಯನ್ನು ಗಳಿಸಿದವನು. ಇವನೂ, ಸಹ ಈಶ್ವರನನ್ನು ಆರಾಧಿಸಿ ತ್ರೈಕಾಲಿಕಜ್ಞಾನವನ್ನು ಸಂಪಾದಿಸಿದನು.

**ಇಂದ್ರೇಣ ವಾಲಖಿಲ್ಯಾಸ್ತೇ ಪರಿಭೂತಾಸ್ತು ಶಂಕರಾತ್ ।**
**ಲೇಭಿರೇ ಸೋಮಹರ್ತಾರಂ ಗರುಡಂ ಸರ್ವದುರ್ಜಯಂ　　　॥ ೧೬ ॥**

**ಆಪಃ ಪ್ರನಷ್ಟಾಃ ಸರ್ವಾಶ್ಚ ಪೂರ್ವರೋಷಾತ್ಕಪರ್ದಿನಃ ।**
**ಸರ್ವ ಸಮುಕಪಾಲೇನ ದೇವೈರಿಷ್ಟಾ ಪ್ರವರ್ತಿತಃ　　　॥ ೧೭ ॥**

**ಅತ್ರೇರ್ಭಾರ್ಯಾ ಚಾನಸೂಯಾ ತ್ರೀಣಿ ವರ್ಷಶತಾನಿ ಚ ।**
**ಮುಶಲೇಷು ನಿರಾಹಾರಾ ಸುಪ್ತ್ವಾ ಶರ್ವಾತ್ತತಸ್ಸುತಾನ್　　　॥ ೧೮ ॥**

**ದತ್ತಾತ್ರೇಯಂ ಮುನಿಂ ಲೇಭೇ ಚಂದ್ರಂ ದುರ್ವಾಸಸಂ ತಥಾ ।**
**ಗಂಗಾಂ ಪ್ರವರ್ತಯಾಮಾಸ ಚಿತ್ರಕೂಟೇ ಪತಿವ್ರತಾ　　　॥ ೧೯ ॥**

೧೬. ಒಂದಾನೊಂದುಕಾಲದಲ್ಲಿ ಇಂದ್ರನು ವಾಲಖಿಲ್ಯರಿಗೆ ಅವಮಾನಪಡಿಸಿದನು. ಈ ಅಪಮಾನವನ್ನು ಸಹಿಸಲಾರದೆ ವಾಲಖಿಲ್ಯರು ಈಶ್ವರನನ್ನು ಕುರಿತು ತಪಸ್ಸುಮಾಡಿದರು. ಈಶ್ವರನು ಸಂತುಷ್ಟನಾಗಿ ಇವರ ಸಹಾಯಕ್ಕಾಗಿ ಗರುಡನನ್ನು ಕಳುಹಿಸಿಕೊಟ್ಟನು. ಅವನು ಸೋಮಲತೆಯನ್ನು ಗೆದ್ದುತಂದ ಮಹಾವೀರನು. ಅವನನ್ನು ಜಯಿಸಲು ಯಾರಿಗೂ ಸಾಧ್ಯವಿಲ್ಲ.

೧೭. ಮಹಾಪ್ರಳಯಕಾಲಯ ಕಾಲದಲ್ಲಿ ಈಶ್ವರನು ಸಮಸ್ತವಾದ ಅಪ್ತತ್ವವನ್ನೂ ಸಂಹರಿಸಿದನು. ಆದರೂ ದೇವತೆಗಳ ಇಷ್ಟಾನುಸಾರ ಅವರ ಪ್ರಾರ್ಥನೆಯಂತೆ ಸೃಷ್ಟಿಕಾಲದಲ್ಲಿ ಅಪ್ತತ್ವವನ್ನೇ ಮೊದಲು ಸೃಷ್ಟಿಸಿದನು.

೧೮-೧೯. ಅತ್ರಿಮಹರ್ಷಿಗಳ ಧರ್ಮಪತ್ನಿಯಾದ ಅನಸೂಯೆಯು ಬಹಳ ಪತಿವ್ರತೆಯು. ಇವಳು ಈಶ್ವರನನ್ನು ಸಂತೋಷಪಡಿಸುವುದಕ್ಕಾಗಿ ಮುಶಲವೆಂಬ ಕ್ಷೇತ್ರದಲ್ಲಿ ಮುನ್ನೂರು ವರ್ಷಕಾಲ ಆಹಾರವಿಲ್ಲದೆ ಮಲಗಿದಳು. ಈ ಘೋರವಾದ ವ್ರತದಿಂದ ಈಶ್ವರನು ಸಂತೋಷಪಟ್ಟು ದತ್ತಾತ್ರೇಯನನ್ನೂ, ಚಂದ್ರನನ್ನೂ, ದೂರ್ವಾಸಮಹರ್ಷಿಯನ್ನೂ ಪುತ್ರರನ್ನಾಗಿ ಅನುಗ್ರಹಿಸಿದನು. ಇವಳು ತನ್ನ ತಪಃ ಪ್ರಭಾವದಿಂದ ಚಿತ್ರಕೂಟಪರ್ವತದಲ್ಲಿ ಗಂಗೆಯು ಹರಿಯುವಂತೆ ಮಾಡಿದಳು.

ವಿಕರ್ಣಶ್ಚ ಮಹಾದೇವಂ ತಥಾಭಕ್ತಸುಖಾವಹಂ ।
ಪ್ರಸಾದ್ಯ ಮಹತೀಂ ಸಿದ್ಧಿಮಾಪ್ತವಾನ್ಮಧುಸೂದನಃ ॥ ೨೦ ॥

ಚಿತ್ರಸೇನೋ ನೃಪಶ್ಶಂಭುಂ ಪ್ರಸಾದ್ಯ ದೃಢಭಕ್ತಿಮಾನ್ ।
ಸಮಸ್ತನೃಪಭೀತಿಭ್ಯೋಽಭಯಂ ಪ್ರಾಪಾತುಲಂ ಚ ಕಂ ॥ ೨೧ ॥

ಶ್ರೀಕರೋ ಗೋಪಿಕಾಸೂನುರ್ನೃಪಪೂಜಾವಿಲೋಕನಾತ್ ।
ಜಾತಭಕ್ತಿರ್ಮಹಾದೇವೇ ಪರಮಾಂ ಸಿದ್ಧಿಮಾಪ್ತವಾನ್ ॥ ೨೨ ॥

ಚಿತ್ರಾಂಗದೋ ನೃಪಸುತಸ್ಸೀಮಂತಿನ್ಯಾಃ ಪತಿರ್ಹರೇ ।
ಶಿವಾನುಗ್ರಹತೋ ಮಗ್ನೋ ಯಮುನಾಯಾಂ ಮೃತೋ ನ ಹಿ ॥ ೨೩ ॥

೨೦. ಎಲೈ ಕೃಷ್ಣನೇ, ಕೇಳು. ಈಶ್ವರನು ಭಕ್ತರಿಗೆ ಸುಖವನ್ನು ಉಂಟು ಮಾಡತಕ್ಕವನು. ಹಿಂದೆ ಹೇಳಿದ ಭಕ್ತರು ಫಲಗಳನ್ನು ಹೊಂದಿದಂತೆಯೇ ವಿಕರ್ಣನೆಂಬುವನು ಈಶ್ವರನನ್ನು ತಪಸ್ಸಿನಿಂದ ಸಂತೋಷಪಡಿಸಿ ಮಹತ್ತರ ಸಿದ್ಧಿಯನ್ನು ಹೊಂದಿದನು.

೨೧. ಚಿತ್ರಸೇನನೆಂಬ ರಾಜನು ಈಶ್ವರನಲ್ಲಿ ದೃಢವಾದ ಭಕ್ತಿಯುಳ್ಳವನು. ಇವನು ಈಶ್ವರನನ್ನು ಕುರಿತು ತಪಸ್ಸುಮಾಡಿದನು. ಈಶ್ವರನು ಪ್ರಸನ್ನನಾಗಿ ಇವನ ಇಷ್ಟಾರ್ಥದಂತೆ ಯಾವ ರಾಜನಿಂದಲೂ ಇವನಿಗೆ ಭಯವುಂಟಾಗದಂತೆ ಅನುಗ್ರಹಿಸಿದನು. ಅಲ್ಲದೆ ಅಪರಿಮಿತವಾದ ಸುಖವನ್ನೂ ದಯಪಾಲಿಸಿದನು.

೨೨. ಎಲೈ ರಾಜಶ್ರೇಷ್ಠನಾದ ಕೃಷ್ಣನೇ, ಗೊಲ್ಲರವಳ ಮಗನಾದ ಶ್ರೀಕರನೆಂಬುವನು ಈಶ್ವರನ ಪೂಜೆಯನ್ನು ಒಂದಾನೊಂದುದಿನ ನೋಡಿದನು. ಅದರಿಂದ ಅವನಿಗೆ ಈಶ್ವರನಲ್ಲಿ ಭಕ್ತಿಯು ಉಂಟಾಯಿತು. ಆ ಭಕ್ತಿಯಿಂದ ಅವನು ಅಪಾರವಾದ ಸಿದ್ಧಿಯನ್ನು ಹೊಂದಿದನು.

೨೩-೨೪. ಚಿತ್ರಾಂಗದನ ವಿಷಯವನ್ನು ಹೇಳುವೆನು ಕೇಳು. ಇವನು ಒಬ್ಬ ರಾಜನ ಮಗನು. ಇವನಿಗೆ ಸೀಮಂತಿನೀ ಎಂಬ ಧರ್ಮಪತ್ನಿಯೋರ್ವಳಿದ್ದಳು. ಈಶ್ವರಭಕ್ತನಾದ ಇವನು ಒಂದುದಿನ ಯಮುನಾನದಿಯಲ್ಲಿ ಬಿದ್ದು ಮುಳುಗಿದನು. ಆದರೂ ಆ ಪರಮೇಶ್ವರನ ಪರಮಾನುಗ್ರಹದಿಂದ ಮರಣಹೊಂದಲಿಲ್ಲ. ಅವನು ತನ್ನ ವ್ರತದ

ಸ ಚ ತಕ್ಷಾಲಯಂ ಗತ್ವಾ ತನ್ಮೈತ್ರೀಂ ಪ್ರಾಪ್ಯ ಸುವ್ರತಃ ।
ಆಯಾತಃ ಸ್ವಗೃಹಂ ಪ್ರೀತೋ ನಾನಾಧನಸಮನ್ವಿತಃ ॥ ೨೪ ॥

ಸೀಮಂತಿನೀ ಪ್ರಿಯಾ ತಸ್ಯ ಸೋಮವ್ರತಪರಾಯಣಾ ।
ಶಿವಾನುಗ್ರಹತಃ ಕೃಷ್ಣ ಲೇಭೇ ಸೌಭಾಗ್ಯಮುತ್ತಮಂ ॥ ೨೫ ॥

ತತ್ಪ್ರಭಾವಾದ್ವ್ರತೇ ತಸ್ಮಿನ್ನೇಕೋ ದ್ವಿಜಸುತಃ ಪುರಾ ।
ಕಶ್ಚಿತ್ಸ್ತ್ರೀತ್ವಂ ಗತೋ ಲೋಭಾತ್ಕೃತದಾರಾಕೃತಿಶ್ಛಲಾತ್ ॥ ೨೬ ॥

ಚಂಚುಕಾ ಪುಂಶ್ಚಲೀ ದುಷ್ಟಾ ಗೋಕರ್ಣೇ ದ್ವಿಜತಃ ಪುರಾ ।
ಶ್ರುತ್ವಾ ಧರ್ಮಕಥಾಂ ಶಂಭೋರ್ಭಕ್ತ್ಯಾ ಪ್ರಾಪ ಪರಾಂ ಗತಿಂ ॥ ೨೭ ॥

ಸ್ವಸ್ತ್ರ್ಯನುಗ್ರಹತಃ ಪಾಪೀ ಬಿಂದುಗೋ ಚಂಚುಕಾಪತಿಃ ।
ಶ್ರುತ್ವಾ ಶಿವಪುರಾಣಂ ಚ ಸದ್ಗತಿಂ ಪ್ರಾಪ ಶಾಂಕರೀಂ ॥ ೨೮ ॥

---

ಮಹಾತ್ಮ್ಯದಿಂದ ತಕ್ಷಗೃಹವನ್ನು ಪ್ರವೇಶಿಸಿ, ಅಲ್ಲಿ ತಕ್ಷನೊಂದಿಗೆ ಸ್ನೇಹವನ್ನು ಬೆಳಸಿ ಅನೇಕವಿಧವಾದ ಧನವನ್ನು ಸಂಪಾದಿಸಿಕೊಂಡು ತನ್ನ ಸ್ವಂತಮನೆಗೆ ಬಂದು ಸೇರಿದನು.

೨೫-೨೬. ಚಿತ್ರಾಂಗದನ ಧರ್ಮಪತ್ನಿಯಾದ ಸೀಮಂತಿನಿಯು ಸೋಮವ್ರತವನ್ನು ಮಾಡಿ ಈಶ್ವರನ ಅನುಗ್ರಹದಿಂದ ಶ್ರೇಷ್ಠವಾದ ಸೌಭಾಗ್ಯವನ್ನು ಹೊಂದಿದಳು. ಇವಳು ಸೋಮವ್ರತವನ್ನು ಮಾಡುತ್ತಿರುವಾಗ ಬ್ರಾಹ್ಮಣ ಬಾಲಕನೊಬ್ಬನು ಕುಚೇಷ್ಟೆಯಿಂದ ಸ್ತ್ರೀವೇಷವನ್ನು ಧರಿಸಿ ಅಲ್ಲಿಗೆ ಬಂದನು. ಸೀಮಂತಿನಿಯ ಪ್ರಭಾವದಿಂದ ಅವನಿಗೆ ನಿಜವಾಗಿಯೂ ಸ್ತ್ರೀರೂಪವೇ ಉಂಟಾಯಿತು.

೨೭. ಚಂಚುಕೆ ಎಂಬುವಳು ಮಹಾವ್ಯಭಿಚಾರಪರಳು, ಅತಿದುಷ್ಟಳು. ಇವಳು ಗೋಕರ್ಣಕ್ಷೇತ್ರದಲ್ಲಿ ಬ್ರಾಹ್ಮಣನ ಮುಖದಿಂದ ಧರ್ಮಯುಕ್ತವಾದ ಈಶ್ವರನ ಪವಿತ್ರವಾದ ಕಥೆಯನ್ನು ಒಮ್ಮೆ ಕೇಳಿದಳು. ಕೇಳಿದ ಮಾತ್ರದಿಂದಲೇ ಅವಳಿಗೆ ಈಶ್ವರನಲ್ಲಿ ಭಕ್ತಿಯುಂಟಾಗಿ ಸದ್ಗತಿಯನ್ನು ಹೊಂದಿದಳು.

೨೮. ಈ ಚಂಚುಕೆ ಎಂಬುವಳಿಗೆ ಪತಿಯಾದವನು ಬಿಂದುಗನು. ಇವನು ಮಹಾಪಾಪಿಷ್ಠನು. ಇವನು ತನ್ನ ಹೆಂಡತಿಯ ಅನುಗ್ರಹದಿಂದ ಶಿವಪುರಾಣವನ್ನು ಕೇಳಿ ಸದ್ಗತಿಯಾದ ಕೈವಲ್ಯವನ್ನು ಹೊಂದಿದನು.

**ಪಿಂಗಲಾ ಗಣಿಕಾ ಖ್ಯಾತಾ ಮದರಾಹ್ವೋ ದ್ವಿಜಾಧಮಃ ।**
**ಶೈವವೃಷಭಮಭ್ಯರ್ಚ್ಯ ಲೇಭಾತೇ ಸದ್ಗತಿಂ ಚ ತೌ ॥ ೨೯ ॥**

**ಮಹಾನಂದಾಭಿದಾ ಕಾಚಿದ್ವೇಶ್ಯಾ ಶಿವಪದಾರತಾ ।**
**ದೃಢಾತ್ಪಣಾತ್ಸುಪ್ರಸಾದ್ಯ ಶಿವಂ ಲೇಭೇ ಚ ಸದ್ಗತಿಂ ॥ ೩೦ ॥**

**ಕೈಕೇಯೀ ದ್ವಿಜಬಾಲಾ ಚ ಸಾದರಾಹ್ವಾ ಶಿವವ್ರತಾ ।**
**ಪರಮಂ ಹಿ ಸುಖಂ ಪ್ರಾಪ ಶಿವೇಶವ್ರತಧಾರಣಾತ್ ॥ ೩೧ ॥**

**ವಿಮರ್ಷಣಶ್ಚ ನೃಪತಿಶ್ಶಿವಭಕ್ತಿಂ ವಿಧಾಯ ವೈ ।**
**ಗತಿಂ ಲೇಭೇ ಪರಾಂ ಕೃಷ್ಣ ಶಿವಾನುಗ್ರಹತಃ ಪುರಾ ॥ ೩೨ ॥**

೨೯. ಪಿಂಗಲೆ ಎಂಬ ಪ್ರಸಿದ್ಧಳಾದ ವೇಶ್ಯೆಯೂ, ಮದರನೆಂಬ ಬ್ರಾಹ್ಮಣಾಧಮನೂ ಈಶ್ವರನನ್ನು ಆರಾಧಿಸಿದವರಲ್ಲ. ಈಶ್ವರನಿಗೆ ದಿವ್ಯವಾಹನವಾದ ವೃಷಭವನ್ನು ಆರಾಧಿಸಿದವರು. ಆದರೂ ಇವರಿಬ್ಬರೂ ಉತ್ತಮಗತಿಯನ್ನು ಪಡೆದಿರುವರು. ತನ್ನ ವಾಹನವನ್ನು ಮಾತ್ರ ಆರಾಧಿಸಿದವರ ಇಷ್ಟಾರ್ಥಗಳನ್ನು ಪೂರ್ತಿಗೊಳಿಸತಕ್ಕ ಈಶ್ವರನು, ತನ್ನನ್ನೇ ಆರಾಧಿಸುವವರ ಇಷ್ಟಾರ್ಥಗಳನ್ನು ಪೂರ್ತಿಮಾಡುವುದರಲ್ಲಿ ಸಂಶಯವೇನಿರುವುದು ?

೩೦. ಮಹಾನಂದೆಯೆಂಬ ಓರ್ವ ವೇಶ್ಯಾಸ್ತ್ರೀಯಿದ್ದಳು. ಅವಳು ಬಹುರೂಪವತಿಯು. ಈಶ್ವರನ ಪಾದಕಮಲಗಳಲ್ಲಿ ದೃಢವಾದ ಭಕ್ತಿಯುಳ್ಳವಳು. ಇವಳು ತನ್ನ ದೃಢವಾದ ಪ್ರತಿಜ್ಞೆಯಿಂದ ಈಶ್ವರನನ್ನು ಸಂತೋಷಪಡಿಸಿ ಸದ್ಗತಿಯನ್ನು ಹೊಂದಿದಳು.

೩೧. ಸರ್ವನಿಯಾಮಕನಾದ ಈಶ್ವರನ ವ್ರತವನ್ನು ಕೈಕೊಂಡು ಈಶ್ವರಭಕ್ತಳಾದ ಕೈಕೇಯಿಯೂ ಎಂಬವಳೂ, ಬ್ರಾಹ್ಮಣಬಾಲೆಯಾದ ಸಾದರೆ ಎಂಬುವಳೂ ಶಾಶ್ವತವಾದ ಸುಖವನ್ನು ಹೊಂದಿದರು.

೩೨. ಎಲೈ ಕೃಷ್ಣನೇ, ಇನ್ನುಮುಂದೆ ರಾಜರುಗಳ ಸಮಾಚಾರವನ್ನು ಹೇಳುವೆನು ಕೇಳು. ವಿಮರ್ಷಣನೆಂಬ ರಾಜನು ಪ್ರಸಿದ್ಧನಾದವನು. ಇವನು ಈಶ್ವರನಲ್ಲಿ ಭಕ್ತಿಯನ್ನು ಮಾಡಿ ಈಶ್ವರನ ಪರಮಾನುಗ್ರಹದಿಂದ ಶ್ರೇಷ್ಠವಾದ ಗತಿಯನ್ನು ಹೊಂದಿದನು.

**ದುರ್ಜನಶ್ಚ ನೃಪಃ ಪಾಪೀ ಬಹುಸ್ತ್ರೀಲಂಪಟಃ ಖಲಃ ।**
**ಶಿವಭಕ್ತ್ಯಾ ಶಿವಂ ಪ್ರಾಪ ನಿರ್ಲಿಪ್ತಃ ಸರ್ವಕರ್ಮಸು　　॥ ೩೩ ॥**

**ಸಸ್ತ್ರೀಕಶ್ಶಬರೋ ನಾಮ್ನಾ ಶಂಕರಶ್ಚ ಶಿವವ್ರತೀ ।**
**ಚಿತಾಭಸ್ಮರತೋ ಭಕ್ತ್ಯಾ ಲೇಭೇ ತದ್ಗತಿಮುತ್ತಮಾಂ　　॥ ೩೪ ॥**

**ಸೌಮಿನೀ ನಾಮ ಚಾಂಡಾಲೀ ಸಂಪೂಜ್ಯಾಜ್ಞಾನತೋ ಹಿ ಸಾ ।**
**ಲೇಭೇ ಶೈವೀಂ ಗತಿಂ ಕೃಷ್ಣ ಶಂಕರಾನುಗ್ರಹಾತ್ಪರಾತ್　　॥ ೩೫ ॥**

**ಮಹಾಕಾಲಾಭಿಧೋ ವ್ಯಾಧೋ ಕಿರಾತಃ ಪರಹಿಂಸಕಃ ।**
**ಸಮಭ್ಯರ್ಚ್ಯ ಶಿವಂ ಭಕ್ತ್ಯಾ ಲೇಭೇ ಸದ್ಗತಿಮುತ್ತಮಾಂ　　॥ ೩೬ ॥**

---

೩೩. ದುರ್ಜನನೆಂಬ ಹೆಸರಿನ ರಾಜನ ವಿಚಾರವನ್ನು ಹೇಳುವೆನು ಕೇಳು. "ರೂಪಮೇವಾಸ್ಯೈತನ್ಮಹಿಮಾನಮಾಚಷ್ಟೇ" ಎಂಬಂತೆ ಇವನ ಹೆಸರೇ ಇವನ ವೃತ್ತವನ್ನು ವ್ಯಕ್ತಪಡಿಸುತ್ತಿರುವುದು. ಇವನು ಅತಿ ಪಾಪಿಷ್ಟನು. ಅನೇಕ ಸ್ತ್ರೀಯರಲ್ಲಿ ಆಸಕ್ತನಾಗಿದ್ದನು. ಬಹಳ ದುಷ್ಟನು. ಇಂತಹ ದುರ್ಜನನೂ ಈಶ್ವರನಲ್ಲಿ ಭಕ್ತಿಯನ್ನು ಮಾಡಿ ಅವನ ಅನುಗ್ರಹದಿಂದ ಸಕಲವಿಧವಾದ ಕರ್ಮಗಳ ಲೇಪವಿಲ್ಲದವನಾಗಿ, ವೈರಾಗ್ಯವನ್ನು ಹೊಂದಿ, ಈಶ್ವರಸಾಯುಜ್ಯವನ್ನು ಹೊಂದಿದನು.

೩೪. ಈಶ್ವರ ವ್ರತವನ್ನು ಕೈಗೊಂಡ ಶಂಕರನೆಂಬುವನೂ, ಶಬರನೂ ಮತ್ತು ಇವನ ಧರ್ಮಪತ್ನಿಯೂ ಸಹ ಈಶ್ವರನಲ್ಲಿ ದೃಢವಾದ ಭಕ್ತಿಯನ್ನು ಮಾಡಿ ಅವನ ಕೃಪಾಕಟಾಕ್ಷದಿಂದ ಉತ್ತಮವಾದ ಗತಿಯನ್ನೈದಿದರು.

೩೫. ಎಲೈ ಕೃಷ್ಣನೇ, ಈಶ್ವರನ ಅನುಗ್ರಹದ ಮಹಿಮೆಯನ್ನು ನಾನು ಎಷ್ಟೆಂದು ಹೇಳಲಿ? ಅದು ಬಹಳ ದೊಡ್ಡದು. ಸೌದಾಮಿನಿ ಎಂಬುವಳು ಚಂಡಾಲ ಜಾತಿಗೆ ಸೇರಿದವಳು. ಇವಳು ಬುದ್ಧಿಪೂರ್ವಕವಾಗಿ ಈಶ್ವರನನ್ನು ಆರಾಧಿಸಲಿಲ್ಲ. ಏನೋ ಅಜ್ಞಾನವಶದಿಂದ ಸ್ವಲ್ಪಮಟ್ಟಿಗೆ ಪೂಜಿಸಿದಳು. ಆದರೂ ಶ್ರೇಷ್ಠವಾದ ಈಶ್ವರನ ಅನುಗ್ರಹದಿಂದ ಉತ್ತಮಗತಿಯನ್ನು ಪಡೆದಳು.

೩೬. ಮಹಾಕಾಲನೆಂಬುವನು ಒಬ್ಬ ಬೇಡರವನು. ಮತ್ತೊಬ್ಬರನ್ನು ಹಿಂಸಿಸುವುದೇ ಅವನ ಸ್ವಭಾವ. ಇಂತಹವನೂ ಪರಮಭಕ್ತಿಯಿಂದ ಈಶ್ವರನನ್ನು ಪೂಜಿಸಿ ಶ್ರೇಷ್ಠವಾದ ಗತಿಯನ್ನು ಹೊಂದಿದನು.

ದುರ್ವಾಸಾ ಮುನಿಶಾರ್ದೂಲಶ್ಶಿವಾನುಗ್ರಹತಃ ಪುರಾ ।
ತಸ್ತಾರ ಸ್ವಮತಂ ಲೋಕೇ ಶಿವಭಕ್ತಿಂ ವಿಮುಕ್ತಿದಾಂ ॥ ೩೭ ॥

ಕೌಶಿಕಶ್ಚ ಸಮಾರಾಧ್ಯ ಶಂಕರಂ ಲೋಕಶಂಕರಂ ।
ಬ್ರಾಹ್ಮಣೋಽಭೂತ್ಕ್ಷತ್ರಿಯಶ್ಚ ದ್ವಿತೀಯ ಇವ ಪದ್ಮಭೂಃ ॥ ೩೮ ॥

ಶಿವಮಭ್ಯರ್ಚ್ಯ ಸದ್ಭಕ್ತ್ಯಾ ವಿರಂಚಿಶ್ಶೈವಸತ್ತಮಃ ।
ಅಭೂತ್ಸರ್ಗಕರಃ ಕೃಷ್ಣ ಸರ್ವಲೋಕಪಿತಾಮಹಃ ॥ ೩೯ ॥

ಮಾರ್ಕಂಡೇಯೋ ಮುನಿವರಶ್ಚಿರಂಜೀವೀ ಮಹಾಪ್ರಭುಃ ।
ಶಿವಭಕ್ತವರಃ ಶ್ರೀಮಾಂಚ್ಛಿವಾನುಗ್ರಹತೋ ಹರೇ ॥ ೪೦ ॥

---

೩೭. ಋಷಿಶ್ರೇಷ್ಠರೂ ಸಹ ಅನೇಕರು ಈಶ್ವರನ ಅನುಗ್ರಹಕ್ಕೆ ಪಾತ್ರರಾಗಿರುವರು. ಎಲೈ ಕೃಷ್ಣನೇ, ಅವರಲ್ಲಿಯೂ ಕೆಲವರನ್ನು ಹೇಳುತ್ತೇನೆ ಕೇಳು. ದೂರ್ವಾಸನು ಪ್ರಸಿದ್ಧನಾದ ಋಷಿಶ್ರೇಷ್ಠನು. ಈ ಮುನಿಯು ಶಿವಭಕ್ತಿಯೇ ಮುಕ್ತಿಯನ್ನು ಕೊಡತಕ್ಕದು ಎಂಬ ಸಿದ್ಧಾಂತವನ್ನು ಈಶ್ವರನ ಅನುಗ್ರಹದಿಂದ ಲೋಕದಲ್ಲಿ ಸ್ಥಿರಪಡಿಸಿ ತಾನೂ ಈಶ್ವರಾನುಗ್ರಹದಿಂದ ಮುಕ್ತಿಯನ್ನು ಹೊಂದಿದನು.

೩೮. ವಿಶ್ವಾಮಿತ್ರಮಹರ್ಷಿಯು ಕ್ಷತ್ರಿಯವರ್ಗಕ್ಕೆ ಸೇರಿದವನು. ಎರಡನೆಯ ಬ್ರಹ್ಮನೋ ಎಂಬತ್ತಿದ್ದನು. ಈ ಮಹರ್ಷಿಯು ಪ್ರಪಂಚಕ್ಕೆಲ್ಲಾ ಕ್ಷೇಮವನ್ನುಂಟುಮಾಡುವ ಶಿವನನ್ನು ಆರಾಧಿಸಿ ಅವನ ಅನುಗ್ರಹದಿಂದ ಬ್ರಾಹ್ಮಣ್ಯವನ್ನು ಸಂಪಾದಿಸಿ ಬ್ರಾಹ್ಮಣನಾದನು.

೩೯. ಎಲೈ ಕೃಷ್ಣನೇ ಕೇಳು, ಚತುರ್ಮುಖಬ್ರಹ್ಮನು ಶಿವಭಕ್ತಾಗ್ರಗಣ್ಯನು. ಇವನು ಪರಮಭಕ್ತಿಯಿಂದ ಶಿವನನ್ನು ಆರಾಧಿಸಿ ಸಕಲಪ್ರಪಂಚವನ್ನೂ ಸೃಷ್ಟಿ ಮಾಡಲು ಅಧಿಕಾರವನ್ನು ಸಂಪಾದಿಸಿದನು. ಇದರಿಂದಲೇ ಇವನು ಎಲ್ಲ ಲೋಕಕ್ಕೂ ಪಿತಾಮಹನಾಗಿ ಇರುವನು.

೪೦. ಮಾರ್ಕಂಡೇಯನು ಮತ್ತೊಬ್ಬ ಋಷಿಶ್ರೇಷ್ಠನು. ಅತಿ ಸಮರ್ಥನು. ಈಶ್ವರಭಕ್ತರಲ್ಲಿ ಅಗ್ರಗಣ್ಯನು. ಇವನು ಈಶ್ವರನ ಅನುಗ್ರಹದಿಂದ ಚಿರಂಜೀವಿಯಾದನು.

ದೇವೇಂದ್ರೋ ಹಿ ಮಹಾಶೈವಸ್ತ್ರೈಲೋಕ್ಯಂ ಬುಭುಜೇ ಪುರಾ ।
ಶಿವಾನುಗ್ರಹತಃ ಕೃಷ್ಣ ಸರ್ವದೇವಾಧಿಪಃ ಪ್ರಭುಃ ॥ ೪೧ ॥

ಬಲಿಪುತ್ರೋ ಮಹಾಶೈವಶ್ಶಿವಾನುಗ್ರಹತೋ ವಶೀ ।
ಬಾಣೋ ಬಭೂವ ಬ್ರಹ್ಮಾಂಡನಾಯಕಸ್ಸಕಲೇಶ್ವರಃ ॥ ೪೨ ॥

ಹರಿಶ್ಶಕ್ತಿಶ್ಚ ಸದ್ಭಕ್ತ್ಯಾ ದಧೀಚಶ್ಚ ಮಹೇಶ್ವರಃ ।
ಶಿವಾನುಗ್ರಹತೋಽಭೂವಂಸ್ತಥಾ ರಾಮೋ ಹಿ ಶಂಕರಃ ॥ ೪೩ ॥

ಕಾಣಾದೋ ಭಾರ್ಗವಶ್ಚೈವ ಗುರುರ್ಗೌತಮ ಏವ ಚ ।
ಶಿವಭಕ್ತ್ಯಾ ಬಭೂವುಸ್ತೇ ಮಹಾಪ್ರಭವ ಈಶ್ವರಾಃ ॥ ೪೪ ॥

ಶಾಕಲ್ಯಶ್ಶಂಸಿತಾತ್ಮಾ ಚ ನವವರ್ಷಶತಾನ್ಯಪಿ ।
ಭವಮಾರಾಧಯಾಮಾಸ ಮನೋಯಜ್ಞೇನ ಮಾಧವ ॥ ೪೫ ॥

೪೧. ಇಂದ್ರನು ಸಮಸ್ತ ದೇವತೆಗಳಿಗೂ ಅಧಿಪತಿಯು. ಮಹಾಸಮರ್ಥನು. ಈಶ್ವರನಲ್ಲಿ ಅತ್ಯಧಿಕ ಭಕ್ತಿಯುಳ್ಳವನು. ಇವನು ಈಶ್ವರನ ಅನುಗ್ರಹದಿಂದ ತ್ರಿಲೋಕಾಧಿಪತ್ಯವನ್ನು ಅನುಭವಿಸಿದನು.

೪೨. ಬಲಿಚಕ್ರವರ್ತಿಯ ಮಗನಾದ ಬಾಣಾಸುರನು ಈಶ್ವರನ ಭಕ್ತರಲ್ಲಿ ಪ್ರಮುಖನು. ಇವನು ಈಶ್ವರನ ಅನುಗ್ರಹದಿಂನ ಜಿತೇಂದ್ರಿಯತ್ವವನ್ನೂ ಸರ್ವ ನಿಯಮನ ಶಕ್ತಿಯನ್ನೂ ಸಂಪಾದಿಸಿ ಈ ಬ್ರಹ್ಮಾಂಡಕ್ಕೆ ಅಧಿಪತಿಯಾದನು.

೪೩. ವಿಷ್ಣು, ಶಕ್ತಿ, ದಧೀಚಿ, ಮಹೇಶ್ವರ, ರಾಮ ಇವರೆಲ್ಲರೂ ಈಶ್ವರನ ಭಕ್ತರು. ಇವರು ಈಶ್ವರನ ಅನುಗ್ರಹದಿಂದ ಗಣ್ಯತೆಯನ್ನು ಪಡೆದು ತಮ್ಮ ತಮ್ಮ ಇಷ್ಟಾರ್ಥಗಳನ್ನು ಹೊಂದಿದರು.

೪೪. ವೈಶೇಷಿಕಮತ ಪ್ರವರ್ತಕನಾದ ಕಣಾದಮಹರ್ಷಿಯೂ, ಪರಶುರಾಮನೂ, ಬೃಹಸ್ಪತ್ಯಾಚಾರ್ಯನೂ, ಗೌತಮಮಹರ್ಷಿಯೂ ಸಹ ಈಶ್ವರನಲ್ಲಿ ಭಕ್ತಿಯನ್ನು ಮಾಡಿ ಮಹಾಪ್ರಭಾವವನ್ನೂ, ಐಶ್ವರ್ಯವನ್ನೂ ಪಡೆದರು.

೪೫–೪೬. ಶಾಕಲ್ಯಮಹರ್ಷಿಯು ಸ್ಥಿರಬುದ್ಧಿಯಿಂದ ಒಂಭೈನೂರು ವರ್ಷ ಕಾಲ ಮನೋಯಜ್ಞದಿಂದ ಈಶ್ವರನನ್ನು ಆರಾಧಿಸಿದನು. ಈಶ್ವರನು ಸಂತೋಷ

ತುತೋಽಷ ಭಗವಾನಾಹ ಗ್ರಂಥಕರ್ತಾ ಭವಿಷ್ಯಸಿ ।
ವತ್ಸಾಕ್ಷಯ್ಯಾ ಚ ತೇ ಕೀರ್ತಿಸ್ತ್ರೈಲೋಕ್ಯೇ ಪ್ರಭವಿಷ್ಯತಿ ॥ ೪೬ ॥

ಅಕ್ಷಯಂ ಚ ಕುಲಂ ತೇಽಸ್ತು ಮಹರ್ಷಿಭಿರಲಂಕೃತಂ ।
ಭವಿಷ್ಯಸಿ ಋಷಿಶ್ರೇಷ್ಠ ಸೂತ್ರಕರ್ತಾ ತತಸ್ತತಃ ॥ ೪೭ ॥

ಇತ್ಯೇವಂ ಶಂಕರಾತ್ಪ್ರಾಪ ವರಂ ಮುನಿವರಸ್ಸ ವೈ ।
ತ್ರೈಲೋಕ್ಯೇ ವಿತತಶ್ಚಾಸೀತ್ಪೂಜ್ಯಶ್ಚ ಯದುನಂದನ ॥ ೪೮ ॥

ಸಾವರ್ಣಿರಿತಿ ವಿಖ್ಯಾತ ಋಷಿರಾಸೀತ್ಕೃತೇ ಯುಗೇ ।
ಇಹ ತೇನ ತಪಸ್ತಪ್ತಂ ಷಷ್ಟಿವರ್ಷಶತಾನಿ ಚ ॥ ೪೯ ॥

ತಮಾಹ ಭಗವಾನ್ರುದ್ರಸ್ಸಾಕ್ಷಾತ್ತುಷ್ಟೋಽಸ್ಮಿ ತೇಽನಘ ।
ಗ್ರಂಥಕೃಲ್ಲೋಕವಿಖ್ಯಾತೋ ಭವಿತಾಸ್ಯಜರಾಮರಃ ॥ ೫೦ ॥

ಪಟ್ಟು ಅವನನ್ನು ಕುರಿತು ಎಲೈ ಪ್ರೀತಿಪಾತ್ರನಾದ ಶಾಕಲ್ಯನೇ, ನೀನು ಗ್ರಂಥಗಳನ್ನು ರಚಿಸಲು ಶಕ್ತನಾಗುವೆ. ನಿನ್ನ ಕೀರ್ತಿಯು ಶಾಶ್ವತವಾದುದಾಗಿ ಮೂರು ಲೋಕದಲ್ಲಿಯೂ ಹರಡುವುದು ಎಂದು ಅನುಗ್ರಹಿಸಿದನು.

೪೭-೪೮. ಎಲೈ ಕೃಷ್ಣನೇ ಕೇಳು, ಶಾಕಲ್ಯಋಷಿಗೆ ಹಿಂದೆ ಹೇಳಿದವುಗಳಲ್ಲದೆ ಇನ್ನೂ ಕೆಲವು ವರಗಳನ್ನು ಅನುಗ್ರಹಿಸಿದನು. ಅವುಗಳನ್ನೂ ಹೇಳುವೆನು ಕೇಳು. ಈಶ್ವರನು ಋಷಿಶ್ರೇಷ್ಠನಾದ ಶಾಕಲ್ಯನನ್ನು ನೋಡಿ ಎಲೈ ಶಾಕಲ್ಯನೇ, ನಿನ್ನ ಕುಲವು ಶಾಶ್ವತವಾಗಿರಲಿ. ಅನೇಕ ಮಹರ್ಷಿಗಳು ನಿನ್ನ ಕುಲವನ್ನು ಅಲಂಕರಿಸಲಿ, ನೀನು ಪ್ರಸಿದ್ಧನಾದ ಸೂತ್ರಕಾರನಾಗುವಿ ಎಂದು ವರವನ್ನು ಕೊಟ್ಟನು. ಈಶ್ವರಾನುಗ್ರಹದಿಂದ ಶಾಕಲ್ಯನು ಮೂರುಲೋಕದಲ್ಲಿಯೂ ಪ್ರಸಿದ್ಧನಾಗಿ ಎಲ್ಲರಿಂದಲೂ ಪೂಜಿತನಾದನು.

೪೯-೫೦. ಕೃತಯುಗದಲ್ಲಿ ಸಾವರ್ಣಿ ಎಂದು ಪ್ರಖ್ಯಾತನಾದ ಓರ್ವ ಮಹರ್ಷಿಯು ಇದೇ ಆಶ್ರಮದಲ್ಲಿ ಆರುಸಹಸ್ರ ವರ್ಷಕಾಲ ಈಶ್ವರನನ್ನು ಕುರಿತು ತಪಸ್ಸನ್ನು ಮಾಡಿದನು. ಈ ತಪಸ್ಸಿನಿಂದ ಈಶ್ವರನು ಸಂತೋಷಪಟ್ಟು ಎಲೈ ದೋಷರಹಿತನಾದ ಸಾವರ್ಣಿಯೇ, ನಿನ್ನ ತಪಸ್ಸಿಗೆ ಸಂತೋಷಪಟ್ಟೆನು. ನಿನಗೆ ಮುಪ್ಪು ಮರಣಗಳು ಸಂಭವಿಸುವುದಿಲ್ಲ. ಅನೇಕ ಗ್ರಂಥಗಳನ್ನು ರಚಿಸಿ ಪ್ರಪಂಚದಲ್ಲಿ ಪ್ರಸಿದ್ಧಿಯನ್ನು ಹೊಂದುತ್ತೀಯೆ ಎಂದು ವರಗಳನ್ನು ಅನುಗ್ರಹಿಸಿದನು.

ಏವಂವಿಧೋ ಮಹಾದೇವಃ ಪುಣ್ಯಪೂರ್ವತರೈಸ್ತತಃ ।
ಸಮರ್ಚಿತಶ್ಶುಭಾನ್ಕಾಮಾನ್ಪ್ರದದಾತಿ ಯಥೇಪ್ಸಿತಾನ್ ॥ ೫೧ ॥

ಏಕೇನೈವ ಮುಖೇನಾಹಂ ವಕ್ತುಂ ಭಗವತೋ ಗುಣಾಃ ।
ಯೇ ಸಂತಿ ತಾನ್ನ ಶಕ್ನೋಮಿ ಹ್ಯಪಿ ವರ್ಷಶತೈರಪಿ ॥ ೫೨ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಸನತ್ಕುಮಾರಸಂವಾದೇ ಉಪಮನ್ಯೂಪದೇಶೋ ನಾಮ
ದ್ವಿತೀಯೋऽಧ್ಯಾಯಃ



೫೧-೫೨. ಎಲೈ ಕೃಷ್ಣನೇ, ಈಶ್ವರನ ಗುಣಗಳು ಅನಂತವಾದುವು. ನನಗೆ ಇರುವುದು ಒಂದೇ ಮುಖವು. ಈ ನನ್ನ ಒಂದು ಮುಖದಿಂದ ಒಂದುನೂರು ವರ್ಷಕಾಲವಾದರೂ ಈಶ್ವರನ ಗುಣಗಳನ್ನು ಸಂಪೂರ್ಣವಾಗಿ ಹೇಳಲು ನನಗೆ ಸಾಮರ್ಥ್ಯವಿಲ್ಲ. ಈಶ್ವರನ ಮಹಿಮೆಯು ಅಪಾರವಾದುದು. ಇದುವರಿಗೂ ನಾನು ಹೇಳಿರುವ ಜನರೆಲ್ಲರೂ ಈಶ್ವರಾನುಗ್ರಹದಿಂದ ಸಕಲಸಿದ್ಧಿಯನ್ನು ಪಡೆದಿರುವರು. ಆದ್ದರಿಂದ ಈಶ್ವರನನ್ನು ಆರಾಧಿಸಿದರೆ ಅವರವರು ಅಪೇಕ್ಷಿಸಿದ ಶುಭಫಲಗಳನ್ನು ಅವನು ಕೊಡುತ್ತಾನೆ ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಸನತ್ಕುಮಾರಸಂವಾದದಲ್ಲಿ ಉಪಮನ್ಯೂಪದೇಶವೆಂಬ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ತೃತೀಯೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಏತಚ್ಛ್ರುತ್ವಾ ವಚಸ್ತಸ್ಯ ಸೋಽಬ್ರವೀತ್ತಂ ಮಹಾಮುನಿಂ
ವಿಸ್ಮಯಂ ಪರಮಂ ಗತ್ವೋಪಮನ್ಯುಂ ಶಾಂತಮಾನಸಂ ॥ ೧ ॥

॥ ವಾಸುದೇವ ಉವಾಚ ॥

ಧನ್ಯಸ್ತ್ವಮಸಿ ವಿಪ್ರೇಂದ್ರ ಕಸ್ತ್ವಾಂ ಸ್ತೋತುಮಲಂಕೃತೀ ।
ಯಸ್ಯ ದೇವಾದಿದೇವಸ್ತೇ ಸಾನ್ನಿಧ್ಯಂ ಕುರುತೇ ಶ್ರಮೇ ॥ ೨ ॥

### ಮೂರನೆಯ ಅಧ್ಯಾಯವು

೧-೨. ಉಪಮನ್ಯುವು ಬಹು ಶಾಂತವಾದ ಮನಸ್ಸುಳ್ಳವನು. ಮಹಾಮುನಿನ ಶೀಲನು. ಇವನ ಮಾತನ್ನು ಕೇಳಿ ಕೃಷ್ಣನು ಆಶ್ಚರ್ಯಪಟ್ಟು, ಓ ಬ್ರಾಹ್ಮಣಶ್ರೇಷ್ಠನಾದ ಉಪಮನ್ಯುವೇ, ನೀನು ಧನ್ಯನು. ನಿನ್ನನ್ನು ಸ್ತೋತ್ರಮಾಡುವವರು ಎಷ್ಟು ಸುಕೃತವನ್ನು ಮಾಡಿರಬೇಕು. ದೇವತೆಗಳಿಗೆಲ್ಲರಿಗೂ ದೇವನಾದ ಈಶ್ವರನು ನಿನ್ನ ಈ ಆಶ್ರಮದಲ್ಲಿ ಯಾವಾಗಲೂ ಸನ್ನಿಹಿತನಾಗಿರುವನು. ನಿನ್ನನ್ನು ಸ್ತೋತ್ರ ಮಾಡಲು ಯಾರುತಾನೇ ಶಕ್ತರು ?

**ದರ್ಶನಂ ಮುನಿಶಾರ್ದೂಲ ದದ್ಯಾತ್ಸ ಭಗವಾಞ್ಶಿವಃ ।**
**ಅಪಿ ತಾವನ್ಮಮಾಪ್ಯೇವಂ ಪ್ರಸಾದಂ ವಾ ಕರೋತ್ವಸೌ ॥ ೩ ॥**

**॥ ಉಪಮನ್ಯುರುವಾಚ ॥**

**ಅಚಿರೇಣೈವ ಕಾಲೇನ ಮಹಾದೇವಂ ನ ಸಂಶಯಃ ।**
**ತಸ್ಯೈವ ಕೃಪಯಾ ತ್ವಂ ವೈ ದ್ರಕ್ಷ್ಯಸೇ ಪುರುಷೋತ್ತಮ ॥ ೪ ॥**

**ಷೋಡಶೇ ಮಾಸಿ ಸುವರಾನ್ಪ್ರಾಪ್ಸ್ಯಸಿ ತ್ವಂ ಮಹೇಶ್ವರಾತ್ ।**
**ಸಪತ್ನೀಕಾತ್ಕಥಂ ನೋ ದಾಸ್ಯತೇ ದೇವೋ ವರಾನ್ಹರೇ ॥ ೫ ॥**

**ಪೂಜ್ಯೋऽಸಿ ದೈವತೈಸ್ಸರ್ವೈಃ ಶ್ಲಾಘನೀಯಸ್ಸದಾ ಗುಣೈಃ ।**
**ಜಾಪ್ಯಂ ತೇऽಹಂ ಪ್ರವಕ್ಷ್ಯಾಮಿ ಶ್ರದ್ಧಧಾನಾಯ ಚಾಚ್ಯುತ ॥ ೬ ॥**

**ತೇನ ಜಪಪ್ರಭಾವೇಣ ಸತ್ಯಂ ದ್ರಕ್ಷ್ಯಸಿ ಶಂಕರಂ ।**
**ಆತ್ಮತುಲ್ಯಬಲಂ ಪುತ್ರಂ ಲಭಿಷ್ಯಸಿ ಮಹೇಶ್ವರಾತ್ ॥ ೭ ॥**

೩. ಎಲೈ ಮುನಿಶ್ರೇಷ್ಠನೇ, ಸರ್ವಜ್ಞನಾಗಿಯೂ, ಐಶ್ವರ್ಯಾದಿಗುಣಗಳಿಂದ ಅಲಂಕೃತನೂ ಆದ ಆ ಈಶ್ವರನು ನಿನ್ನಂತೆಯೇ ನನಗೂ ದರ್ಶನವನ್ನು ಕೊಡವನೇ ಇಲ್ಲವೇ ? ಇಂತಹ ಸರ್ವೇಶ್ವರನ ಅನುಗ್ರಹವನ್ನು ಪಡೆಯಲು ಉಪಾಯವೇನು ? ಎಂದು ಕೇಳಲು,

೪-೫. ಉಪಮನ್ಯುವಿಂತೆಂದನು :—ಎಲೈ ಕೃಷ್ಣನೇ ಕೇಳು. ಈಶ್ವರನು ಪರಮದಯಾಶಾಲಿಯು. ಅವನ ಅನುಗ್ರಹದಿಂದ ಅತಿ ಶೀಘ್ರದಲ್ಲಿಯೇ ನಿನಗೆ ಅವನ ದರ್ಶನವಾಗುವುದು. ನಿನ್ನಂತಹವರು ಈರೀತಿಯಲ್ಲಿ ಸಂಶಯಪಡಬಾರದು. ಹದಿನಾರನೆಯ ತಿಂಗಳಲ್ಲಿ ಶ್ರೇಷ್ಠವಾದ ವರಗಳನ್ನು ಈಶ್ವರನು ಅನುಗ್ರಹಿಸುವನು. ಜಗನ್ಮಾತೆಯಾದ ಪಾರ್ವತಿಯು ಪಕ್ಕದಲ್ಲಿರುವಾಗ ಈಶ್ವರನು ವರಗಳನ್ನು ಕೊಡದೇ ಇರಲು ಹೇಗೆತಾನೇ ಸಾಧ್ಯವು ?

೬-೭. ಎಲ್ಲಾ ದೇವತೆಗಳೂ ನಿನ್ನನ್ನು ಪೂಜಿಸುವರು. ನಿನ್ನ ಗುಣಗಳೋ ಯಾವಾಗಲೂ ಶ್ಲಾಘಿಸತಕ್ಕವುಗಳು. ನಿನ್ನ ಬುದ್ಧಿಯು ಬಹು ಆಸ್ತಿಕ್ಯದಿಂದ ಕೂಡಿರುವುದು. ಎಲೈ ಅಚ್ಯುತನೇ, “ ನಮಶ್ಶಿವಾಯ ” ಎಂಬ ಮಂತ್ರಶ್ರೇಷ್ಠವನ್ನು ನಿನಗೆ ಉಪದೇಶಿಸುವೆನು. ಈ ಮಂತ್ರವು ಸಕಲ ವಿಧವಾದ ಇಷ್ಟಾರ್ಥಗಳನ್ನೂ ಕೊಡತಕ್ಕುದು, ದಿವ್ಯವಾದುದು, ಭುಕ್ತಿಮುಕ್ತಿಗಳನ್ನು ಕೊಡತಕ್ಕದ್ದು. ಈ ಮಂತ್ರ

ಜಪ್ತೋ ನಮಶ್ಶಿವಾಯೇತಿ ಮಂತ್ರರಾಜಮಿಮಂ ಹರೇ ।
ಸರ್ವಕಾಮಪ್ರದಂ ದಿವ್ಯಂ ಭುಕ್ತಿಮುಕ್ತಿಪ್ರದಾಯಕಂ ॥ ೮ ॥

॥ ಸನತ್ಕುಮಾರ ಉವಾಚ ॥

ಏವಂ ಕಥಯತಸ್ತಸ್ಯ ಮಹಾದೇವಾಶ್ರಿತಾಃ ಕಥಾಃ ।
ದಿನಾನ್ಯಷ್ಟೌ ಪ್ರಯಾತಾನಿ ಮುಹೂರ್ತಮಿವ ತಾಪಸ ॥ ೯ ॥

ನವಮೇ ತು ದಿನೇ ಪ್ರಾಪ್ತೇ ಮುನಿನಾ ಸ ಚ ದೀಕ್ಷಿತಃ ।
ಮಂತ್ರಮಧ್ಯಾಪಿತಂ ಶಾರ್ವಮಾಥರ್ವಶಿರಸಂ ಮಹತ್ ॥ ೧೦ ॥

ಜಟೀ ಮುಂಡೀ ಚ ಸದ್ಯೋಽಸೌ ಬಭೂವ ಸುಸಮಾಹಿತಃ ।
ಪಾದಾಂಗುಷ್ಠೋದ್ಧೃತತನುಸ್ತೇಪೇ ಚೋರ್ಧ್ವಭುಜಸ್ತಥಾ ॥ ೧೧ ॥

ಸಂಪ್ರಾಪ್ತೇ ಷೋಡಶೇ ಮಾಸಿ ಸಂತುಷ್ಟಃ ಪರಮೇಶ್ವರಃ ।
ಪಾರ್ವತ್ಯಾ ಸಹಿತಶ್ಶಂಭುರ್ದದೌ ಕೃಷ್ಣಾಯ ದರ್ಶನಂ ॥ ೧೨ ॥

---

ವನ್ನು ಜಪಿಸಿ, ಇದರ ಪ್ರಭಾವದಿಂದ ಈಶ್ವರನನ್ನು ಪ್ರತ್ಯಕ್ಷವಾಗಿ ನೋಡುವೆ. ನಿನಗೆ ಸಮಾನವಾದ ಬಲವುಳ್ಳ ಪುತ್ರನನ್ನು ಈಶ್ವರನ ಅನುಗ್ರಹದಿಂದ ಪಡೆಯುತ್ತೀಯೆ. ಇದು ಸತ್ಯವು ಎಂದನು.

೯. ಸನತ್ಕುಮಾರನಿಂತೆಂದನು :— ಎಲೈ ವ್ಯಾಸನೇ, ಈರೀತಿಯಾಗಿ ಉಪಮನ್ಯುವು ಶ್ರೀ ಕೃಷ್ಣನಿಗೆ ಈಶ್ವರನ ಅತ್ಯದ್ಭುತವಾದ ಕಥೆಗಳನ್ನು ಹೇಳುತ್ತಿರುವಾಗ ಎಂಟುದಿನಗಳು ಒಂದುಕ್ಷಣದಂತೆ ಕಳೆದುಹೋದುವು.

೧೦-೧೧. ಒಂಭತ್ತನೆಯದಿನ ಉಪಮನ್ಯುವು ಕೃಷ್ಣನಿಗೆ ಶಿವದೀಕ್ಷೆಯನ್ನಿತ್ತು ಅಥರ್ವಶಿರೋಪನಿಷತ್ತಿನಲ್ಲಿ ಹೇಳಿರುವ ಶೈವಮಂತ್ರವನ್ನು ಉಪದೇಶಿಸಿದನು. ಆ ಮಂತ್ರವು ಅತಿ ಶ್ರೇಷ್ಠವಾದುದು. ಕೂಡಲೇ ಶ್ರೀ ಕೃಷ್ಣನು ದೀಕ್ಷೆಗೆ ಉಪಯುಕ್ತವಾದ ಜಟಾದಿ ಸಂಸ್ಕಾರಗಳನ್ನು ಹೊಂದಿ, ಕಾಲಿನ ಅಂಗುಷ್ಠದ ಮೇಲೆ ದೇಹದ ಭಾರವೆಲ್ಲವೂ ಬೀಳುವಂತೆ ನಿಂತು, ಎರಡು ಬಾಹುಗಳನ್ನು ಮೇಲಕ್ಕೆತ್ತಿ ಹಿಡಿದುಕೊಂಡು ಶಿವನನ್ನು ಧ್ಯಾನಿಸುತ್ತಾ ತಪಸ್ಸುಮಾಡಲಾರಂಭಿಸಿದನು.

೧೨. ಈರೀತಿ ತಪಸ್ಸುಮಾಡಲು ಆರಂಭಿಸಿದ ಮೇಲೆ ಹದಿನಾರನೆಯ ತಿಂಗಳು ಬರಲು ಈ ತಪಸ್ಸಿನಿಂದ ಸಂತುಷ್ಟನಾದ ಈಶ್ವರನು ಪಾರ್ವತೀಸಮೇತನಾಗಿ ಶ್ರೀ ಕೃಷ್ಣನಿಗೆ ದರ್ಶನವನ್ನಿತ್ತನು.

ಪಾರ್ವತ್ಯಾ ಸಹಿತಂ ದೇವಂ ತ್ರಿನೇತ್ರಂ ಚಂದ್ರಶೇಖರಂ ।
ಬ್ರಹ್ಮಾದ್ಯೈಃ ಸ್ತೂಯಮಾನಂ ತು ಪೂಜಿತಂ ಸಿದ್ಧಕೋಟಿಭಿಃ ॥ ೧೩ ॥

ದಿವ್ಯಮಾಲ್ಯಾಂಬರಧರಂ ಭಕ್ತಿನಮ್ರೈಃ ಸುರಾಸುರೈಃ ।
ಪ್ರಣತಂ ಚ ವಿಶೇಷೇಣ ನಾನಾಭೂಷಣಭೂಷಿತಂ ॥ ೧೪ ॥

ಸರ್ವಾಶ್ಚರ್ಯಮಯಂ ಕಾಂತಂ ಮಹೇಶಮಜಮವ್ಯಯಂ ।
ನಾನಾಗಣಾನ್ವಿತಂ ತುಷ್ಟಂ ಪುತ್ರಾಭ್ಯಾಂ ಸಂಯುತಂ ಪ್ರಭುಂ ॥ ೧೫ ॥

ಶ್ರೀಕೃಷ್ಣಃ ಪ್ರಾಂಜಲಿರ್ದೃಷ್ಟ್ವಾ ವಿಸ್ಮಯೋತ್ಫುಲ್ಲಲೋಚನಃ ।
ಈದೃಶಂ ಶಂಕರಂ ಪ್ರೀತಃ ಪ್ರಣನಾಮ ಮಹೋತ್ಸವಃ ॥ ೧೬ ॥

ನಾನಾವಿಧೈಃ ಸ್ತುತಿಪದ್ಯೈರ್ವಾಙ್ಮಯೇನಾರ್ಚಯತ್ತದಾ ।
ಸಹಸ್ರನಾಮ್ನಾ ದೇವೇಶಂ ತುಷ್ಟಾವ ನತಕಂಧರಃ ॥ ೧೭ ॥

೧೩—೧೬. ಆಗ ಕ್ರೀಡಾಶಾಲಿಯಾದ ಈಶ್ವರನು ಪಾರ್ವತೀಸಹಿತನಾಗಿದ್ದನು. ಅವನಿಗೆ ಮೂರು ಕಣ್ಣುಗಳಿದ್ದವು. ಅವನು ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿದ್ದನು. ಒಂದುಕಡೆಯಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳು ಸ್ತೋತ್ರ ಮಾಡುತ್ತಿದ್ದರು. ಮತ್ತೊಂದುಕಡೆ ಕೋಟಿಸಂಖ್ಯರಾದ ಸಿದ್ಧಪುರುಷರು ಆರಾಧಿಸುತ್ತಿದ್ದರು. ದಿವ್ಯವಾದ ಮಾಲಿಕೆಗಳನ್ನೂ ದಿವ್ಯವಾದ ವಸ್ತ್ರಗಳನ್ನೂ ಧರಿಸಿದ್ದನು. ದೇವತೆಗಳೂ ರಾಕ್ಷಸರೂ ಸಹ ಭಕ್ತಿಭರದಿಂದ ನಮಸ್ಕರಿಸುತ್ತಿದ್ದರು. ನಾನಾವಿಧವಾದ ಗಣಗಳೂ ಸುತ್ತಲೂ ಕುಳಿತಿದ್ದವು. ಗಣಪತಿಯೂ ಷಣ್ಮುಖನೂ ಸಹ ಹತ್ತಿರದಲ್ಲಿ ಕುಳಿತಿದ್ದರು. ಈಶ್ವರನು ಆಶ್ಚರ್ಯಕರವಾದ ರೂಪವನ್ನು ಧರಿಸಿ ಮನೋಹರನಾಗಿದ್ದನು. ಸಂತೋಷವು ಅವನಲ್ಲಿ ತುಂಬಿತ್ತು. ಜನ್ಮಮರಣರಹಿತನಾದ ಇಂತಹ ಮಹೇಶ್ವರನನ್ನು ಶ್ರೀ ಕೃಷ್ಣನು ನೋಡಿ, ಆಶ್ಚರ್ಯದಿಂದ ಅವನ ಕಣ್ಣುಗಳು ಅರಳಲು, ಬಹಳ ಭಕ್ತಿಯಿಂದ ಕೈಮುಗಿದುಕೊಂಡು ಈಶ್ವರನಿಗೆ ನಮಸ್ಕಾರ ಮಾಡಿದನು.

೧೭. ಶ್ರೀ ಕೃಷ್ಣನು ಕತ್ತನ್ನು ಬಗ್ಗಿಸಿಕೊಂಡು ಸ್ತೋತ್ರಾರ್ಹವಾದ ನಾನಾವಿಧವಾದ ವಚನಗಳಿಂದ ಈಶ್ವರನನ್ನು ಪೂಜಿಸಿದನು. ಸಹಸ್ರನಾಮದಿಂದ ಸ್ತೋತ್ರ ಮಾಡಿದನು.

ತತೋ ದೇವಾಸ್ಸಗಂಧರ್ವಾ ವಿದ್ಯಾಧರಮಹೋರಗಾಃ ।
ಮುಮುಚುಃ ಪುಷ್ಪವೃಷ್ಟಿಂ ಚ ಸಾಧುವಾದಾನ್ಮನೋಽನುಗಾನ್ ॥ ೧೮ ॥

ಪಾರ್ವತ್ಯಾಶ್ಚ ಮುಖಂ ದೃಷ್ಟ್ವಾ ಭಗವಾನ್ಭಕ್ತವತ್ಸಲಃ ।
ಉವಾಚ ಕೇಶವಂ ತುಷ್ಟೋ ರುದ್ರಶ್ಚಾಥ ಬಿಡೌಜಸಾ ॥ ೧೯ ॥

॥ ಮಹಾದೇವ ಉವಾಚ ॥

ಕೃಷ್ಣಂ ಜಾನಾಮಿ ಭಕ್ತಂ ತ್ವಾಂ ಮಯಿ ನಿತ್ಯಂ ದೃಢವ್ರತಂ ।
ವೃಣೀಷ್ವ ತ್ವಂ ವರಾನ್ಮತ್ತಃ ಪುಣ್ಯಾಂಸ್ತ್ರೈಲೋಕ್ಯದುರ್ಲಭಾನ್ ॥ ೨೦ ॥

॥ ಸನತ್ಕುಮಾರ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ಕೃಷ್ಣಃ ಪ್ರಾಂಜಲಿರಾದರಾತ್ ।
ಪ್ರಾಹ ಸರ್ವೇಶ್ವರಂ ಶಂಭುಂ ಸುಪ್ರಣಮ್ಯ ಪುನಃ ಪುನಃ ॥ ೨೧ ॥

೧೮-೧೯. ಆಗ ದೇವತೆಗಳೂ, ಗಂಧರ್ವರೂ, ವಿದ್ಯಾಧರರೆಂಬ ದೇವಯೋನಿ ವಿಶೇಷದವರೂ, ಮಹೋರಗರೂ ಸಹ ಪುಷ್ಪವೃಷ್ಟಿಯನ್ನು ಸುರಿಸಿದರು. ತಮ್ಮ ತಮ್ಮ ಮನಸ್ಸಿಗೆ ಬಂದಂತೆ ಸಾಧುವಾದಗಳನ್ನು ಹೇಳಿದರು. ಭಕ್ತವತ್ಸಲನೂ ಸರ್ವಗುಣಾಲಂಕೃತನೂ ಆದ ಈಶ್ವರನು ಪಾರ್ವತಿಯ ಮುಖವನ್ನು ನೋಡಿ ಬಹಳ ಸಂತೋಷದಿಂದ ಕೃಷ್ಣನನ್ನು ಕುರಿತು,

೨೦. ಎಲೈ ಕೃಷ್ಣನೇ, ನೀನು ನನ್ನ ವಿಷಯದಲ್ಲಿ ದೃಢವಾದ ವ್ರತವುಳ್ಳವನು. ಭಕ್ತಾಗ್ರಗಣ್ಯನು. ಇದನ್ನು ನಾನು ತಿಳಿದಿರುವೆನು. ಈ ಮೂರು ಲೋಕಗಳಲ್ಲಿಯೂ ಹೊಂದಲು ಅಸಾಧ್ಯವಾದ ಶ್ರೇಷ್ಠವಾದ ವರಗಳನ್ನು ಕೇಳಿಕೋ. ನಾನು ಕೊಡಲು ಸಿದ್ಧನಾಗಿರುವೆನು ಎಂದನು.

೨೧. ಈಶ್ವರನ ಮಾತುಗಳನ್ನು ಕೇಳಿ ಕೂಡಲೇ ಕೃಷ್ಣನು ಸರ್ವೇಶ್ವರನಾದ ಆ ಶಿವನಿಗೆ ಅನೇಕ ನಮಸ್ಕಾರಗಳನ್ನು ಮಾಡಿ ಕೈಮುಗಿದುಕೊಂಡು ನಿಂತು ಇಂತೆಂದನು.

॥ ಕೃಷ್ಣ ಉವಾಚ ॥

ದೇವದೇವ ಮಹಾದೇವ ಯಾಚೇಽಹಂ ಹ್ಯುತ್ತಮಾನ್ವರಾನ್ ।
ತ್ವತ್ತೋಽಷ್ಟಪ್ರಮಿತಾನ್ನಾಥ ತ್ವಯೋದ್ದಿಷ್ಟಾನ್ಮಹೇಶ್ವರ ॥ ೨೨ ॥

ತವ ಧರ್ಮೇ ಮತಿರ್ನಿತ್ಯಂ ಯಶಶ್ಚಾಪ್ರಚಲಂ ಮಹತ್ ।
ತ್ವತ್ಸಾಮೀಪ್ಯಂ ಸ್ಥಿರಾ ಭಕ್ತಿಸ್ತ್ವಯಿ ನಿತ್ಯಂ ಮಮಾಸ್ತ್ವಿತಿ ॥ ೨೩ ॥

ಪುತ್ರಾಣಿ ಚ ದಶಾದ್ಯಾನಾಂ ಪುತ್ರಾಣಾಂ ಮಮ ಸಂತು ವೈ ।
ವಧ್ಯಾಶ್ಚ ರಿಪವಸ್ಸರ್ವೇ ಸಂಗ್ರಾಮೇ ಬಲದರ್ಪಿತಾಃ ॥ ೨೪ ॥

ಅಪಮಾನೋ ಭವೇನ್ನೈವ ಕ್ವಚಿನ್ಮೇ ಶತ್ರುತಃ ಪ್ರಭೋ ।
ಯೋಗಿನಾಮಪಿ ಸರ್ವೇಷಾಂ ಭವೇಯಮತಿವಲ್ಲಭಃ ॥ ೨೫ ॥

ಇತ್ಯಷ್ಟೌ ಸುವರಾನ್ದೇಹಿ ದೇವದೇವ ನಮೋಽಸ್ತು ತೇ ।
ಸರ್ವೇಶ್ವರಸ್ತ್ವಮೇವಾಸಿ ಮತ್ಪ್ರಭುಶ್ಚ ವಿಶೇಷತಃ ॥ ೨೬ ॥

---

೨೨. ಎಲೈ ಈಶ್ವರನೇ, ನೀನು ದೇವತೆಗಳಿಗೂ ದೇವತೆಯು. ನೀನೇ ಮಹಾದೇವನು. ನಾನು ಶ್ರೇಷ್ಠವಾದ ಎಂಟು ವರಗಳನ್ನು ಕೇಳಬೇಕೆಂದು ಉದ್ದೇಶಿಸಿರುವೆನು. ಅವುಗಳನ್ನು ನೀನು ಅನುಗ್ರಹಿಸಬೇಕೆಂದು ಬೇಡುತ್ತೇನೆ.

೨೩-೨೫. ಎಲೈ ಈಶ್ವರನೇ, ಯಾವಾಗಲೂ ನಿನ್ನ ಧರ್ಮದಲ್ಲಿ ಸ್ಥಿರವಾದ ಬುದ್ಧಿಯು ಇರಲಿ. ನನಗೆ ಹೆಚ್ಚಾದ ಕೀರ್ತಿಯುಂಟಾಗಲಿ. ಯಾವಾಗಲೂ ನಿನ್ನ ಸಾನ್ನಿಧ್ಯವು ಉಂಟಾಗಲಿ. ನನಗೆ ನಿನ್ನಲ್ಲಿ ಸ್ಥಿರವಾದ ಭಕ್ತಿಯುಂಟಾಗಲಿ. ಹತ್ತು ಜನ ಮಕ್ಕಳು ಉಂಟಾಗಲಿ. ನನ್ನ ಮೊದಲನೆಯ ಮಗನು ಯುದ್ಧದಲ್ಲಿ ಬಲದಿಂದ ಕೊಬ್ಬಿರುವ ಶತ್ರುಗಳನ್ನು ಸಂಹರಿಸಲಿ. ಎಲೈ ಸರ್ವಸಮರ್ಥನೇ, ನನಗೆ ಯಾವಾಗಲೂ ಶತ್ರುಗಳಿಂದ ಅವಮಾನವು ಸಂಭವಿಸಕೂಡದು. ಯೋಗಾಭ್ಯಾಸವನ್ನು ಮಾಡುವವರಿಗೆಲ್ಲರಿಗೂ ನಾನು ಪ್ರೀತಿಪಾತ್ರನೂ, ಯಜಮಾನನೂ ಆಗಬೇಕು. ಇವೇ ನಾನು ಕೇಳುವ ಎಂಟು ವರಗಳು.

೨೬. ಎಲೈ ದೇವದೇವನಾದ ಈಶ್ವರನೇ ನೀನು ಸರ್ವನಿಯಾಮಕನು. ವಿಶೇಷವಾಗಿ ನನಗೆ ನೀನು ಪ್ರಭುವು. ನಿನಗೆ ನಮಸ್ಕರಿಸುವೆನು. ಈ ಎಂಟು ವರಗಳನ್ನು ನನಗೆ ಕೊಟ್ಟು ಅನುಗ್ರಹಿಸು ಎಂದನು.

॥ ಸನತ್ಕುಮಾರ ಉವಾಚ ॥
ತಸ್ಯ ತದ್ವಚನಂ ಶ್ರುತ್ವಾ ತಮಾಹ ಭಗವಾನ್ಭವಃ ।
ಸರ್ವಂ ಭವಿಷ್ಯತೀತ್ಯೇವಂ ಪುನಸ್ಸ ಪ್ರಾಹ ಶೂಲಧೃಕ್ ॥ ೨೭ ॥

ಸಾಂಬೋ ನಾಮ ಮಹಾವೀರ್ಯಃ ಪುತ್ರಸ್ತೇ ಭವಿತಾ ಬಲೀ ।
ಘೋರಸಂವರ್ತಕಾದಿತ್ಯಶ್ಶಪ್ತೋ ಮುನಿಭಿರೇವ ಚ ॥ ೨೮ ॥

ಮಾನುಷೋ ಭವಿತಾಸೀತಿ ಸ ತೇ ಪುತ್ರೋ ಭವಿಷ್ಯತಿ ।
ಯದ್ಯಚ್ಚ ಪ್ರಾರ್ಥಿತಂ ಕಿಂಚಿತ್ತತ್ಸರ್ವಂ ಚ ಲಭಸ್ವ ವೈ ॥ ೨೯ ॥

॥ ಸನತ್ಕುಮಾರ ಉವಾಚ ॥
ಏವಂ ಲಬ್ಧ್ವಾ ವರಾನ್ಸರ್ವಾನ್ಶ್ರೀಕೃಷ್ಣಃ ಪರಮೇಶ್ವರಾತ್ ।
ನಾನಾವಿಧಾಭಿರ್ಬಹ್ವೀಭಿಸ್ಸ್ತುತಿಭಿಸ್ಸಮತೋಷಯತ್ ॥ ೩೦ ॥

ತಮಾಹಾಥ ಶಿವಾ ತುಷ್ಟಾ ಪಾರ್ವತೀ ಭಕ್ತವತ್ಸಲಾ ।
ವಾಸುದೇವಂ ಮಹಾತ್ಮಾನಂ ಶಂಭುಭಕ್ತಂ ತಪಸ್ವಿನಂ ॥ ೩೧ ॥

೨೭. ಭಗವಂತನಾದ ಈಶ್ವರನು ಈಪರಿಯಾದ ಕೃಷ್ಣನ ಮಾತುಗಳನ್ನು ಕೇಳಿ ನೀನು ಅಪೇಕ್ಷಿಸಿದ ವರಗಳೆಲ್ಲವೂ ಸಿದ್ಧಿಸುವುವು ಎಂದು ಹೇಳಿ ಮತ್ತಿಂತೆಂದನು.

೨೮-೨೯. ಋಷಿಗಳು, ಘೋರಸಂವರ್ತಕಾದಿತ್ಯನಿಗೆ ನೀನು ಮನುಷ್ಯನಾಗು ಎಂದು ಶಾಪವನ್ನು ಕೊಟ್ಟಿರುವರು. ಅವನು ಈಗ ನಿನಗೆ ಪುತ್ರನಾಗಿ ಜನಿಸುವನು. ಅವನಿಗೆ ಸಾಂಬನೆಂದು ಹೆಸರಾಗುವುದು. ಅವನು ಬಹು ಪರಾಕ್ರಮವುಳ್ಳವನು. ಅತಿಬಲಿಷ್ಠನು. ಇನ್ನೂ ಯಾವಯಾವುದನ್ನು ಪ್ರಾರ್ಥಿಸಿರುವೆಯೋ ಅದೆಲ್ಲವನ್ನೂ ನೀನು ಖಂಡಿತವಾಗಿಯೂ ಹೊಂದುವೆ ಎಂದನು.

೩೦-೩೧. ಸನತ್ಕುಮಾರನಿಂತೆಂದನು :—ಎಲೈ ವ್ಯಾಸನೇ, ಶ್ರೀ ಕೃಷ್ಣನು ಈರೀತಿಯಾಗಿ ಈಶ್ವರನಿಂದ ವರಗಳನ್ನು ಪಡೆದು ಅವನನ್ನು ನಾನಾವಿಧವಾಗಿ ಅಸಂಖ್ಯಾತಸ್ತೋತ್ರಗಳಿಂದ ಸಂತೋಷಪಡಿಸಿದನು. ಬಳಿಕ ಭಕ್ತರನ್ನು ಪ್ರೀತಿಸತಕ್ಕ ಪಾರ್ವತಿಯು—ವಸುದೇವನ ಮಗನಾದ ಎಲೈ ಕೃಷ್ಣನೇ, ನೀನು ಮಹಾತ್ಮನು. ನಿನಗೆ ಈಶ್ವರನಲ್ಲಿ ದೃಢವಾದ ಭಕ್ತಿಯಿರುವುದು. ನೀನು ಮಹಾತಪಸ್ವಿಯು. ಮಹಾಪ್ರಾಜ್ಞನು. ಪಾಪವಿಲ್ಲದವನು. ನಿನ್ನನ್ನು ನೋಡಿ ನನಗೆ ಸಂತೋಷವಾಯಿತು.

॥ ಪಾರ್ವತ್ಯುವಾಚ ॥
ವಾಸುದೇವ ಮಹಾಬುದ್ಧೇ ಕೃಷ್ಣ ತುಷ್ಟ್ಯೋಽಸ್ಮಿ ತೇಽನಘ ।
ಗೃಹಾಣ ಮತ್ತಶ್ಚ ವರಾನ್ಮನೋಜ್ಞಾನ್ಭುವಿ ದುರ್ಲಭಾನ್ ॥ ೩೨ ॥

॥ ಸನತ್ಕುಮಾರ ಉವಾಚ ॥
ಇತ್ಯಾಕರ್ಣ್ಯ ವಚಸ್ತಸ್ಯಾಃ ಪಾರ್ವತ್ಯಾಸ್ಸ ಯದೂದ್ವಹಃ ।
ಉವಾಚ ಸುಪ್ರಸನ್ನಾತ್ಮಾ ಭಕ್ತಿಯುಕ್ತೇನ ಚೇತಸಾ ॥ ೩೩ ॥

॥ ಶ್ರೀಕೃಷ್ಣ ಉವಾಚ ॥
ದೇವಿ ತ್ವಂ ಪರಿತುಷ್ಟಾಸಿ ಚೇದ್ದದಾಸಿ ವರಾನ್ಹಿ ಮೇ ।
ತಪಸಾಽನೇನ ಸತ್ಯೇನ ಬ್ರಾಹ್ಮಣಾನ್ಪ್ರತಿ ಮಾಸ್ಮಭೂತ್ ॥ ೩೪ ॥

ದ್ವೇಷಃ ಕದಾಚಿದ್ಭದ್ರಂ ತು ಪೂಜಯೇಯಂ ದ್ವಿಜಾನ್ಸದಾ ।
ತುಷ್ಟೌ ಚ ಮಾತಾಪಿತರೌ ಭವೇತಾಂ ಮಮ ಸರ್ವದಾ ॥ ೩೫ ॥

ಸರ್ವಭೂತೇಷ್ವಾನುಕೂಲ್ಯಂ ಭಜೇಯಂ ಯತ್ರ ತತ್ರಗಃ ।
ಕುಲೇ ಪ್ರಸೂತಿರುಚಿತಾ ಮಮಾಸ್ತು ತವ ದರ್ಶನಾತ್ ॥ ೩೬ ॥

ಭೂಲೋಕದಲ್ಲಿ ಹೊಂದಲು ಅಸಾಧ್ಯವಾದ ಮನೋಹರವಾದ ವರಗಳನ್ನು ಕೊಡುವೆನು. ಸ್ವೀಕರಿಸು ಎಂದಳು.

೩೩. ಯದುಶ್ರೇಷ್ಠನಾದ ಶ್ರೀ ಕೃಷ್ಣನು ಈಪರಿಯಾದ ಪಾರ್ವತಿಯ ಮಾತನ್ನು ಕೇಳಿ, ಪಾರ್ವತಿಯನ್ನು ಕುರಿತು ಭಕ್ತಿಪರವಶನಾಗಿ ಇಂತೆಂದನು.

೩೪-೩೫. ಎಲೌ ಪಾರ್ವತಿಯೇ, ನನ್ನ ತಪಸ್ಸಿಗೆ ನೀನು ಸಂತೋಷಪಟ್ಟು ವರಗಳನ್ನು ಕೊಡುವಿಯಾದರೆ ಈ ನನ್ನ ತಪಸ್ಸಿನ ಸತ್ಯದಿಂದ ನನಗೆ ಯಾವಾಗಲೂ ಬ್ರಾಹ್ಮಣರಲ್ಲಿ ದ್ವೇಷವುಂಟಾಗಕೂಡದು. ಬ್ರಾಹ್ಮಣರನ್ನು ಯಾವಾಗಲೂ ನಾನು ಪೂಜಿಸಬೇಕು. ಹೀಗಾದಪಕ್ಷದಲ್ಲಿ ನನಗೆ ಕ್ಷೇಮವಾಗುವುದು. ನನ್ನ ತಾಯಿ ತಂದೆಗಳು ಯಾವಾಗಲೂ ಸಂತುಷ್ಟರಾಗಿರಬೇಕು.

೩೬-೩೮. ನಾನು ಎಲ್ಲಿದ್ದರೂ ಸಮಸ್ತವಾದ ಭೂತಗಳಲ್ಲಿಯೂ ಅನುಕೂಲನಾಗಿರುವಂತೆ ಅನುಗ್ರಹಿಸು. ನಿನ್ನ ಅನುಗ್ರಹದಿಂದ ನನ್ನ ವಂಶದಲ್ಲಿ ಯೋಗ್ಯವಾದ ಸಂತಾನವು ಉಂಟಾಗಲಿ. ದೇವೇಂದ್ರನೇ ಮೊದಲಾದ ದೇವತೆಗಳನ್ನು

ತರ್ಪಯೇಯಂ ಸುರೇಂದ್ರಾದೀನ್ದೇವಾನ್ಯಜ್ಞಶತೇನ ತು ।
ಯತೀನಾಮತಿಥೀನಾಂ ಚ ಸಹಸ್ರಾಣ್ಯಥ ಸರ್ವದಾ ॥ ೩೭ ॥

ಭೋಜಯೇಯಂ ಸದಾ ಗೇಹೇ ಶ್ರದ್ಧಾಪೂತಂ ತು ಭೋಜನಂ ।
ಬಾಂಧವೈಸ್ಸಹ ಪ್ರೀತಿಸ್ತು ನಿತ್ಯಮಸ್ತು ಸುನಿರ್ವೃತಿಃ ॥ ೩೮ ॥

ದೇವಿ ಭಾರ್ಯಾಸಹಸ್ರಾಣಾಂ ಭವೇಯಂ ಪ್ರಾಣವಲ್ಲಭಃ ।
ಅಕ್ಷೀಣಾ ಕಾಮ್ಯತಾ ತಾಸು ಪ್ರಸಾದಾತ್ತವ ಶಾಂಕರಿ ॥ ೩೯ ॥

ಆಸಾಂ ಚ ಪಿತರೋ ಲೋಕೇ ಭವೇಯುಂ ಸತ್ಯವಾದಿನಃ ।
ಇತ್ಯಾದ್ಯಾಃ ಸುವರಾಃ ಸಂತು ಪ್ರಸಾದಾತ್ತವ ಪಾರ್ವತಿ ॥ ೪೦ ॥

॥ ಸನತ್ಕುಮಾರ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ದೇವೀ ತಂ ಚಾಹ ವಿಸ್ಮಿತಾ ।
ಏವಮಸ್ತ್ವಿತಿ ಭದ್ರಂ ತೇ ಶಾಶ್ವತೀ ಸರ್ವಕಾಮದಾ ॥ ೪೧ ॥

ನೂರು ಯಾಗಗಳಿಂದ ತೃಪ್ತಿಪಡಿಸುವಂತೆ ಕೃಪೆಮಾಡು. ನನ್ನ ಮನೆಯಲ್ಲಿ ಸಹಸ್ರಜನ ಸನ್ಯಾಸಿಗಳಿಗೂ ಸಾವಿರಮಂದಿ ಅತಿಥಿಗಳಿಗೂ ಶ್ರದ್ಧೆಯಿಂದ ಪರಿಶುದ್ಧವಾದ ಭೋಜನವನ್ನು ಮಾಡಿಸುವಂತೆ ಅನುಗ್ರಹಿಸು. ನನಗೆ ಯಾವಾಗಲೂ ನನ್ನ ಬಾಂಧವರಲ್ಲಿ ಪ್ರೀತಿ ಇರಬೇಕು. ಯಾವಾಗಲೂ ನನಗೆ ಉತ್ತಮವಾದ ಸೌಖ್ಯವು ಉಂಟಾಗುವಂತೆ ಅನುಗ್ರಹಿಸು.

೩೯-೪೦. ಎಲೌ ಪಾರ್ವತಿಯೇ, ನಾನು ಸಾವಿರ ಸ್ತ್ರೀಯರಿಗೆ ಪ್ರಾಣಕಾಂತನಾಗಬೇಕು. ನಿನ್ನ ಅನುಗ್ರಹದಿಂದ ಅವರಲ್ಲಿ ನನ್ನ ಕಾಮೇಚ್ಛೆಯು ಕ್ಷಯವನ್ನು ಹೊಂದಬಾರದು. ಆ ಸ್ತ್ರೀಯರ ತಾಯಿತಂದೆಗಳು ಪ್ರಪಂಚದಲ್ಲಿ ಸತ್ಯವನ್ನು ನುಡಿಯುವವರಾಗಬೇಕು. ಇದೇ ಮೊದಲಾದ ವರಗಳು ನಿನ್ನ ಅನುಗ್ರಹದಿಂದ ನನಗೆ ಸಿದ್ಧಿಸಲಿ ಎಂದು ಪ್ರಾರ್ಥಿಸಿದನು.

೪೧-೪೨. ಸನತ್ಕುಮಾರನಿಂತೆಂದನು :—ಸಕಲವಾದ ಇಷ್ಟಾರ್ಥಗಳನ್ನೂ ಕೊಡತಕ್ಕ ಪಾರ್ವತಿಯು ನಿತ್ಯಳು. ಇವಳು ಕೃಷ್ಣನ ಮಾತುಗಳನ್ನು ಕೇಳಿ ಆಶ್ಚರ್ಯಪಟ್ಟು ಎಲೈ ಕೃಷ್ಣನೇ, ನಿನಗೆ ಮಂಗಳವಾಗಲಿ. ನೀನು ಕೇಳಿದ ವರಗಳೆಲ್ಲ ಸಿದ್ಧಿಸಲಿ

ತಸ್ಮಿಂಸ್ತಾಂಶ್ಚ ವರಾನ್ದತ್ವಾ ಪಾರ್ವತೀಪರಮೇಶ್ವರೌ ।
ತತ್ರೈವಾಂತರ್ದಧತುಃ ಕೃತ್ವಾ ಕೃಷ್ಣಸ್ಯ ಸತ್ಕೃಪಾಂ ॥ ೪೨ ॥

ಕೃಷ್ಣಃ ಕೃತಾರ್ಥಮಾತ್ಮಾನಮಮನ್ಯತ ಮುನೀಶ್ವರ ।
ಉಪಮನ್ಯೋರ್ಮುನೇರಾಶು ಪ್ರಾಪಾಶ್ರಮಮನುತ್ತಮಂ ॥ ೪೩ ॥

ಪ್ರಣಮ್ಯ ಶಿರಸಾ ತತ್ರ ತಂ ಮುನಿಂ ಕೇಶಿಹಾ ತತಃ ।
ತಥಾ ವೃತ್ತಂ ಚ ತಸ್ಮೈ ತತ್ಸಮಾಚಷ್ಟೋಪಮನ್ಯವೇ ॥ ೪೪ ॥

ಸ ಚ ತಂ ಪ್ರಾಹ ಕೋಽನ್ಯಸ್ಸ್ಯಾಚ್ಛರ್ವಾದ್ದೇವಾಜ್ಜನಾರ್ದನ ।
ಮಹಾದಾನಪತಿರ್ಲೋಕೇ ಕ್ರೋಧೇ ವಾಽತೀವ ದುಸ್ಸಹಃ ॥ ೪೫ ॥

ಜ್ಞಾನೇ ತಪಸಿ ವಾ ಶೌರ್ಯೇ ಸ್ಥೈರ್ಯೇ ವಾಪದ್ಯ ಏವ ಚ ।
ಶೃಣು ಶಂಭೋಸ್ತು ಗೋವಿಂದ ದೇವೈಶ್ವರ್ಯಂ ಮಹಾಯಶಾಃ ॥ ೪೬ ॥

---

ಎಂದು ಅನುಗ್ರಹಿಸಿದಳು. ಈರೀತಿಯಾಗಿ ಪಾರ್ವತೀಪರಮೇಶ್ವರರು ಕೃಷ್ಣನಿಗೆ ಸಮಸ್ತ ವರಗಳನ್ನೂ ಕೊಟ್ಟು, ಅನುಗ್ರಹಿಸಿ, ಅಲ್ಲಿಯೇ ಅಂತರ್ಧಾನರಾದರು.

೪೩-೪೪. ಎಲೈ ಮುನಿಶ್ರೇಷ್ಠನಾದ ವ್ಯಾಸನೇ ಕೇಳು. ಒಳಿಕ ಶ್ರೀ ಕೃಷ್ಣನು ಪಾರ್ವತೀಪರಮೇಶ್ವರರ ಅನುಗ್ರಹದಿಂದ ಕೃತಾರ್ಥನಾದೆನೆಂದು ತಿಳಿದುಕೊಂಡು ನಂತರ ಉಪಮನ್ಯುವಿನ ಅತ್ಯುತ್ತಮವಾದ ಆಶ್ರಮಕ್ಕೆ ಹೋಗಿ ಅವನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ನಡೆದ ಸಂಗತಿಗಳೆಲ್ಲವನ್ನೂ ಅವನಿಗೆ ತಿಳಿಸಿದನು.

೪೫-೪೬. ಆದನ್ನು ಕೇಳಿ ಮುನೀಶ್ವರನಾದ ಉಪಮನ್ಯುವು ಕೃಷ್ಣನನ್ನು ಕುರಿತು, ಎಲೈ ಕೀರ್ತಿವಂತನಾದ ಕೃಷ್ಣನೇ, ಮಹಾ ಇಷ್ಟಾರ್ಥಗಳನ್ನು ಕೊಡಲು ಸಮರ್ಥರಾದವರು ಈಶ್ವರನಿಗಿಂತಲೂ ಬೇರೆ ಯಾರಿರುವರು ? ಅವನಿಗೆ ಕೋಪವು ಬಂದರೆ ಅದನ್ನು ಸಹಿಸುವುದು ಬಹು ಕಷ್ಟವಾದುದು. ಜ್ಞಾನ, ತಪಸ್ಸು, ಪರಾಕ್ರಮ, ಆಪತ್ತು ಸಂಭವಿಸಿದರೂ ಸ್ಥಿರವಾಗಿರುವಿಕೆ, ಇವುಗಳಲ್ಲಿ ಈಶ್ವರನಿಗೆ ಸದೃಶರು ಅಥವಾ ಅಧಿಕರು ಬೇರೆಯಾರೂ ಇಲ್ಲವು. ಎಲೈ ಕೃಷ್ಣನೇ, ಈಶ್ವರನ ಐಶ್ವರ್ಯವನ್ನು ಹೇಳುವೆನು ಕೇಳು ಎನ್ನಲು,

ತಚ್ಛ್ರುತ್ವಾ ಶ್ರದ್ಧಯಾ ಯುಕ್ತೋऽಭವಚ್ಛಂಭೋಽಸ್ತು ಭಕ್ತಿಮಾನ್ ।
ಪ್ರಪಚ್ಛ ಶಿವಮಾಹಾತ್ಮ್ಯಂ ಸ ತಂ ಪ್ರಾಹ ಮುನೀಶ್ವರಃ ॥ ೪೭ ॥

॥ ಉಪಮನ್ಯುರುವಾಚ ॥

ಭಗವಾಞ್ಛಂಕರಃ ಪೂರ್ವಂ ಬ್ರಹ್ಮಲೋಕೇ ಮಹಾತ್ಮನಾ ।
ಸ್ತುತೋ ನಾಮ ಸಹಸ್ರೇಣ ದಂಡಿನಾ ಬ್ರಹ್ಮಯೋಗಿನಾ ॥ ೪೮ ॥

ಸಾಂಖ್ಯಾಃ ಪಠಂತಿ ತದ್ಗೀತಂ ವಿಸ್ತೀರ್ಣಂ ಚ ನಿಘಂಟುವತ್ ।
ದುಜ್ಞಾನಂ ಮಾನುಷಾಣಾಂ ತು ಸ್ತೋತ್ರಂ ತತ್ಸರ್ವಕಾಮದಂ ॥ ೪೯ ॥

ಸ್ಮರನ್ನಿತ್ಯಂ ಶಂಕರಂ ತ್ವಂ ಗಚ್ಛ ಕೃಷ್ಣ ಗೃಹಂ ಸುಖೀ ।
ಭವಿಷ್ಯಸಿ ಸದಾ ತಾತ ಶಿವಭಕ್ತಗಣಾಗ್ರಣೀಃ ॥ ೫೦ ॥

ಇತ್ಯುಕ್ತಸ್ತಂ ನಮಸ್ಕೃತ್ಯ ವಾಸುದೇವೋ ಮುನೀಶ್ವರಂ ।
ಮನಸಾ ಸಂಸ್ಮರಞ್ಛಂಭುಂ ಕೇಶವೋ ದ್ವಾರಕಾಂ ಯಯೌ ॥ ೫೧ ॥

೪೭. ಈಶ್ವರಭಕ್ತನಾದ ಕೃಷ್ಣನು ಈಪರಿಯಾದ ಉಪಮನ್ಯುವಿನ ಮಾತುಗಳನ್ನು ಕೇಳಿ, ಬಹಳ ಶ್ರದ್ಧೆಯಿಂದ ಈಶ್ವರನ ಮಹಾತ್ಮ್ಯವನ್ನು ಹೇಳುವಂತೆ ಉಪಮನ್ಯುವನ್ನು ಪ್ರಾರ್ಥಿಸಿದನು. ಆ ಋಷಿಶ್ರೇಷ್ಠನೂ ಸಹ ಕೃಷ್ಣನಿಗೆ ಈಶ್ವರನ ಮಾಹಾತ್ಮ್ಯವನ್ನು ಹೇಳತೊಡಗಿದನು.

೪೮. ಎಲೈ ಕೃಷ್ಣನೇ, ಹಿಂದೆ ಬ್ರಹ್ಮಲೋಕದಲ್ಲಿ ಮಹಾತ್ಮನಾದ ದಂಡಿಯೆಂಬ ಬ್ರಹ್ಮಯೋಗಿಯು ಸಕಲಗುಣಪರಿಪೂರ್ಣನಾದ ಈಶ್ವರನನ್ನು ಸಹಸ್ರನಾಮದಿಂದ ಸ್ತೋತ್ರಮಾಡಿದನು.

೪೯. ಈಶ್ವರನ ಗೀತೆಯು ನಿಘಂಟುವಿನಂತೆ ಬಹು ವಿಸ್ತಾರವಾದುದು. ಮನುಷ್ಯರು ಅದನ್ನು ತಿಳಿಯಲು ಸಾಧ್ಯವಿಲ್ಲ. ಅವನ ಸ್ತೋತ್ರವು ಸಕಲ ಇಷ್ಟಾರ್ಥಗಳನ್ನೂ ಕೊಡತಕ್ಕುದು.

೫೦-೫೧ ಎಲೈ ಕೃಷ್ಣನೇ, ನೀನು ಈಶ್ವರನನ್ನು ಯಾವಾಗಲೂ ಸ್ಮರಿಸುತ್ತಿರು. ನೀನು ಶಿವಭಕ್ತರುಗಳ ಸಮೂಹದಲ್ಲಿ ಯಾವಾಗಲೂ ಅಗ್ರಗಣ್ಯನಾಗಿರುತ್ತೀಯೆ. ಇನ್ನು ನೀನು ನಿನ್ನ ಮನೆಗೆ ಹೋಗು ಎಂದು ಉಪಮನ್ಯುವು ಕೃಷ್ಣನಿಗೆ ಹೇಳಲು, ಶ್ರೀ ಕೃಷ್ಣನು ಮುನಿಶ್ರೇಷ್ಠನಾದ ಉಪಮನ್ಯುವಿಗೆ ನಮಸ್ಕರಿಸಿ ಈಶ್ವರನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ದ್ವಾರಕಾಪಟ್ಟಣಕ್ಕೆ ಹೊರಟುಹೋದನು.

॥ ಸನತ್ಕುಮಾರ ಉವಾಚ ॥

ಏವಂ ಕೃಷ್ಣಸ್ಸಮಾರಾಧ್ಯ ಶಂಕರಂ ಲೋಕಶಂಕರಂ ।
ಕೃತಾರ್ಥೋಽಭೂನ್ಮುನಿಶ್ರೇಷ್ಠ ಸರ್ವಾಜೇಯೋಽಭವತ್ತಥಾ ॥ ೫೨ ॥

ತಥಾ ದಾಶರಥೀ ರಾಮಶ್ಶಿವಮಾರಾಧ್ಯ ಭಕ್ತಿತಃ ।
ಕೃತಾರ್ಥೋಽಭೂನ್ಮುನಿಶ್ರೇಷ್ಠ ವಿಜಯೀ ಸರ್ವತೋಽಭವತ್ ॥ ೫೩ ॥

ತಪಸ್ತಪ್ತ್ವಾಽತಿ ವಿಪುಲಂ ಪುರಾ ರಾಮೋ ಗಿರೌ ಮುನೇ ।
ಶಿವಾದ್ಧನುಶ್ಶರಂ ಚಾಪಂ ಜ್ಞಾನಂ ವೈ ಪರಮುತ್ತಮಂ ॥ ೫೪ ॥

ರಾವಣಂ ಸಗಣಂ ಹತ್ವಾ ಸೇತುಂ ಬದ್ಧ್ವಾಂಭಸಾಂ ನಿಧೌ ।
ಸೀತಾಂ ಪ್ರಾಪ್ಯ ಗೃಹಂ ಯಾತೋ ಬುಭುಜೇ ನಿಖಿಲಾಂ ಮಹೀಂ ॥ ೫೫ ॥

ತಥಾ ಚ ಭಾರ್ಗವೋ ರಾಮೋ ಹ್ಯಾರಾಧ್ಯ ತಪಸಾ ವಿಭುಂ ।
ನಿರೀಕ್ಷ್ಯ ದುಃಖಿತಶ್ಶರ್ವಾತ್ಪಿತರಂ ಕ್ಷತ್ರಿಯೈರ್ಹತಂ ॥ ೫೬ ॥

೫೨. ಎಲೈ ಮುನಿಶ್ರೇಷ್ಠನಾದ ವ್ಯಾಸನೇ, ಈರೀತಿಯಾಗಿ ಶ್ರೀ ಕೃಷ್ಣನು ಲೋಕಗಳಿಗೆ ಮಂಗಳವನ್ನು ಉಂಟುಮಾಡುವ ಈಶ್ವರನನ್ನು ಆರಾಧಿಸಿ ಕೃತಾರ್ಥನಾದನು. ಅಜೇಯತ್ವವನ್ನು ಪಡೆದನು.

೫೩-೫೫. ಎಲೈ ಮುನಿಶ್ರೇಷ್ಠನೇ, ಇದೇ ರೀತಿಯಲ್ಲಿ ದಶರಥನ ಮಗನಾದ ಶ್ರೀರಾಮನೂ ಸಹ ಅತ್ಯಂತ ಭಕ್ತಿಯಿಂದ ಈಶ್ವರನನ್ನು ಆರಾಧಿಸಿ ಕೃತಾರ್ಥನಾದನು. ಸರ್ವಪ್ರಕಾರದಿಂದಲೂ ಜಯಶಾಲಿಯಾದನು. ಈ ವಿಷಯವನ್ನು ಸ್ಪಷ್ಟವಾಗಿ ಹೇಳುವೆನು ಕೇಳು. ಎಲೈ ವ್ಯಾಸನೇ, ಹಿಂದೆ ಶ್ರೀರಾಮನು ಒಂದು ಬೆಟ್ಟದಲ್ಲಿ ಕುಳಿತು ಈಶ್ವರನನ್ನು ಉದ್ದೇಶಿಸಿ ಘೋರವಾದ ತಪಸ್ಸನ್ನು ಮಾಡಿ ಈಶ್ವರನಿಂದ ನಾನಾವಿಧವಾದ ಧನುಸ್ಸುಗಳನ್ನೂ, ಬಾಣಗಳನ್ನೂ, ಉತ್ತಮವಾದ ಜ್ಞಾನವನ್ನೂ ಪಡೆದನು. ನಂತರ ಸಮುದ್ರದಲ್ಲಿ ಸೇತುಬಂಧನವನ್ನು ಮಾಡಿ ಸೇನಾಸಮೇತನಾಗಿ ಹೊರಟು ರಾವಣನನ್ನು ಸಂಹರಿಸಿ ಸೀತಾಸಮೇತನಾಗಿ ಅಯೋಧ್ಯೆಗೆ ತೆರಳಿ ಸಮಸ್ತವಾದ ಭೂಮಂಡಲವನ್ನೂ ಧರ್ಮದಿಂದ ಆಳಿದನು.

೫೬-೫೯. ಇನ್ನು ಪರಶುರಾಮನ ವಿಷಯವನ್ನು ಹೇಳುವೆನು ಕೇಳು. ತನ್ನ ತಂದೆಯಾದ ಜಮದಗ್ನಿಯನ್ನು ಕ್ಷತ್ರಿಯರು ಕೊಲ್ಲಲು, ಇವನಿಗೆ ಬಹಳವಾಗಿ ವ್ಯಸನ

್ಂ ಸ ಪರಶುಂ ಲೇಭೇ ನಿರ್ದದಾಹ ಚ ತೇನ ತಾನ್ ।
ತ್ರಿಸ್ಸಪ್ತಕೃತ್ವಃ ಕ್ಷತ್ರಾಂಶ್ಚ ಪ್ರಸನ್ನಾತ್ಪರಮೇಶ್ವರಾತ್ ॥ ೫೭ ॥

ಅಜೇಯಶ್ಚಾಮರೈಶ್ಚೈವ ಸೋಽದ್ಯಾಪಿ ತಪಸಾಂ
ಲಿಂಗಾರ್ಚನರತೋ ನಿತ್ಯಂ ದೃಶ್ಯತೇ ಸಿದ್ಧಚಾರಣೈಃ ॥ ೫೮ ॥

ಮಹೇಂದ್ರಪರ್ವತೇ ರಾಮಃ ಸ್ಥಿತಸ್ತಪಸಿ ತಿಷ್ಠತಿ ।
ಕಲ್ಪಾಂತೇ ಪುನರೇವಾಸಾವೃಷಿಸ್ಥಾನಮವಾಪ್ಸ್ಯತಿ ॥ ೫೯ ॥

ಅಸಿತಸ್ಯಾನುಜಃ ಪೂರ್ವಂ ಪೀಡಯಾ ಕೃತವಾಂಸ್ತಪಃ ।
ಮೂಲಗ್ರಾಹೇಣ ವಿಶ್ವಸ್ಯ ದೇವಲೋ ನಾಮ ತಾಪಸಃ ॥ ೬೦ ॥

ಪುರಂದರೇಣ ಶಪ್ತಸ್ತು ತಪಸ್ವೀ ಯಶ್ಚ ಸುಸ್ಥಿರಂ ।
ಅಧರ್ಮ್ಯಂ ಧರ್ಮಮಲಭಲ್ಲಿಂಗಮಾರಾಧ್ಯ ಕಾಮದಂ ॥ ೬೧ ॥

ವುಂಟಾಯಿತು. ಅವನು ತಪಸ್ಸನ್ನು ಮಾಡಿ ಸರ್ವಸಮರ್ಥನಾದ ಈಶ್ವರನನ್ನು ಸಂತೋಷಪಡಿಸಿ ಪ್ರಸನ್ನನಾದ ಈಶ್ವರನ ಅನುಗ್ರಹದಿಂದ ತೀಕ್ಷ್ಣವಾದ ಕೊಡಲಿಯನ್ನು ಪಡೆದನು. ಈ ಕೊಡಲಿಯಿಂದ ಇಪ್ಪತ್ತೊಂದಾವರ್ತಿ ಕ್ಷತ್ರಿಯರನ್ನು ಧ್ವಂಸ ಮಾಡಿದನು. ಈ ತಪೋನಿಧಿಯಾದ ಪರಶುರಾಮನನ್ನು ಜಯಿಸಲು ಯಾರಿಗೂ ಸಾಧ್ಯವಿಲ್ಲ. ಅವನು ಚಿರಂಜೀವಿಯು. ಯಾವಾಗಲೂ ಲಿಂಗವನ್ನು ಪೂಜಿಸುತ್ತಿರುವನು. ಸಿದ್ಧರೂ ಚಾರಣರೂ ಸಹ ಈಗಲೂ ಅವನನ್ನು ನೋಡಬಹುದು. ಅವನು ಈಗ ಮಹೇಂದ್ರಪರ್ವತದಲ್ಲಿ ತಪಸ್ಸುಮಾಡುತ್ತಿರುವನು. ಕಲ್ಪದ ಕೊನೆಯಲ್ಲಿ ಅವನು ತಿರುಗಿ ಋಷಿಯಾಗುವನು.

೬೦-೬೧. ಪೂರ್ವಕಾಲದಲ್ಲಿ ಪ್ರಪಂಚಕ್ಕೆ ಮೂಲಗ್ರಾಹದಿಂದ ಉಪದ್ರವವುಂಟಾಗಲು ಅಸಿತಮಹರ್ಷಿಯ ತಮ್ಮನಾದ ದೇವಲನೆಂಬ ಋಷಿಯು ಈಶ್ವನನನ್ನು ಕುರಿತು ತಪಸ್ಸುಮಾಡಿ ಪ್ರಪಂಚಕ್ಕೆ ಕಲ್ಯಾಣವನ್ನುಂಟುಮಾಡಿದನು. ಮತ್ತೊಬ್ಬ ಋಷಿಗೆ ಇಂದ್ರನು ಶಾಪವನ್ನು ಕೊಡಲು ಇದರಿಂದ ಅವನು ಅತ್ಯಂತ ಅಧರ್ಮನಿರತನಾಗಿದ್ದನು. ಅವನೂ ಸಹ ಸಕಲ ಇಷ್ಟಾರ್ಥಗಳನ್ನೂ ಕೊಡತಕ್ಕ ಲಿಂಗವನ್ನು ಆರಾಧಿಸಿ ಧರ್ಮಿಷ್ಠನಾದನು.

ಚಾಕ್ಷುಷಸ್ಯ ಮನೋಃ ಪುತ್ರೋ ಮೃಗೋऽಭೂತ್ತು ಮರುಸ್ಥಲೇ ।
ವಸಿಷ್ಠಶಾಪಾದ್ಗೃತ್ಸಮದೋ ದಂಡಕಾರಣ್ಯ ಏಕಲಃ ॥ ೬೨ ॥

ಹೃದಯೇ ಸಂಸ್ಮರನ್ಭಕ್ತ್ಯಾ ಪ್ರಣವೇನ ಯುತಂ ಶಿವಂ ।
ತಸ್ಮಾನ್ಮೃತ್ಯುಮುಖಾಕಾರೋ ಗಣೋ ಮೃಗಮುಖೋऽಭವತ್ ॥ ೬೩ ॥

ಅಜರಾಮರತಾಂ ನೀತಸ್ತ್ವೇತ್ವಾರ್ ಶಾಪಂ ಪುನಶ್ಚ ಸಃ ।
ಶಂಕರೇಣ ಕೃತಃ ಪ್ರೀತ್ಯಾ-ನಿತ್ಯಂ ಲಂಬೋದರಾನುಗಃ ॥ ೬೪ ॥

ಗಾರ್ಗ್ಯಾಯ ಪ್ರದದೌ ಶರ್ವೋ ಮೋಕ್ಷಂ ಚ ಭುವಿ ದುರ್ಲಭಂ ।
ಕಾಮಚಾರೀ ಮಹಾಕ್ಷೇತ್ರಂ ಕಾಲಜ್ಞಾನಂ ಮಹದ್ಧಿಮತ್ ॥ ೬೫ ॥

ಚತುಷ್ಪಾದಂ ಸರಸ್ವತ್ಯಾಃ ಪಾರಗತ್ವಂ ಚ ಶಾಶ್ವತಂ ।
ನ ತುಲ್ಯಂ ಚ ಸಹಸ್ರಂ ತು ಪುತ್ರಾಣಾಂ ಪ್ರದದೌ ಶಿವಃ ॥ ೬೬ ॥

ವೇದವ್ಯಾಸಂ ತು ಯೋಗೀಂದ್ರಂ ಪುತ್ರಂ ತುಷ್ಟಃ ಪಿನಾಕಧೃಕ್ ।
ಪರಾಶರಾಯ ಚ ದದೌ ಜರಾಮೃತ್ಯುವಿವರ್ಜಿತಂ ॥ ೬೭ ॥

---

೬೨-೬೪. ಚಾಕ್ಷುಷ ಮನುವಿನ ಪುತ್ರನಿಗೆ ವಸಿಷ್ಠನು ಶಾಪವನ್ನು ಕೊಡಲು ಅವನು ದಂಡಕಾರಣ್ಯದ ಮರಳುಕಾಡಿನಲ್ಲಿ ಮೃಗವಾಗಿ ಜನಿಸಿ ಒಂಟಿಯಾಗಿಯೇ ಸಂಚರಿಸುತ್ತಿದ್ದನು. ಇವನೂ ಸಹ ಪ್ರಣವದಿಂದ ಕೂಡಿದ ಈಶ್ವರಮಂತ್ರವನ್ನು ಜಪಿಸಿದ್ದರಿಂದ ಈಶ್ವರನು ಸಂತುಷ್ಟನಾಗಿ ಮೃತ್ಯುಮುಖದಂತಿದ್ದ ತನ್ನ ಗಣವು ಮೃಗದ ಮುಖದಂತೆ ಇರುವ ಹಾಗೆ ಏರ್ಪಡಿಸಿದನು. ಅಲ್ಲದೆ ಅವನಿಗೆ ಶಾಪ ವಿಮೋಚನೆಯನ್ನು ಮಾಡಿ ಮುಪ್ಪು ಮರಣಗಳು ಸಂಭವಿಸದಂತೆ ಅನುಗ್ರಹಿಸಿ ಯಾವಾಗಲೂ ಗಣಪತಿಗೆ ಭಕ್ತನಾಗಿರುವಂತೆ ಮಾಡಿದನು.

೬೫-೬೬. ಇದಲ್ಲದೆ, ಮಹೇಶ್ವರನು ಗಾರ್ಗ್ಯನಿಗೆ ಭೂಲೋಕದಲ್ಲಿ ಹೊಂದಲು ಅಸಾಧ್ಯವಾದ ಮೋಕ್ಷವನ್ನೂ, ಸಂಪದ್ಯುಕ್ತವಾದ ಕ್ಷೇತ್ರವನ್ನೂ, ತ್ರಿಕಾಲಜ್ಞಾನವನ್ನೂ ಅನುಗ್ರಹಿಸಿದನು. ಸರಸ್ವತಿಯು ಯಾವಾಗಲೂ ಸಂಪೂರ್ಣವಾಗಿ ಇವನಲ್ಲಿ ನೆಲೆಸುವಂತೆ ಎಂದರೆ ವಿದ್ಯಾವಂತನಾಗುವಂತೆ ಮಾಡಿ, ಅಸಮಾನರಾದ ಸಹಸ್ರ ಪುತ್ರರನ್ನೂ ಕೊಟ್ಟನು.

೬೭. ಪರಾಶರಮುನಿಯ ತಪಸ್ಸಿನಿಂದ ಸಂತೋಷಗೊಂಡ ಈಶ್ವರನು ಇವನಿಗೆ ವೇದವ್ಯಾಸನೆಂಬ ಮಗನನ್ನು ಕೊಟ್ಟನು. ಆ ವೇದವ್ಯಾಸನಿಗೆ ಜರಾಮರಣಗಳು ಇಲ್ಲದಂತೆಯೂ ಅನುಗ್ರಹಿಸಿದನು.

ಮಾಂಡವ್ಯಶ್ಶಂಕರೇಣೈವ ಜೀವಂ ದತ್ವಾ ವಿಸರ್ಜಿತಃ ।
ವರ್ಷಾಣಾಂ ದಶ ಲಕ್ಷಾಣಿ ಶೂಲಾಗ್ರಾದವರೋಪಿತಃ ॥ ೬೮ ॥

ದರಿದ್ರೋ ಬ್ರಾಹ್ಮಣಃ ಕಶ್ಚಿನ್ನಿಕ್ಷಿಪ್ಯ ಗುರುವೇಶ್ಮನಿ ।
ಪುತ್ರಂ ತು ಗಾಲವಂ ಯಶ್ಚ ಪೂರ್ವಮಾಸೀದ್ಗೃಹಾಶ್ರಮೀ ॥ ೬೯ ॥

ಗುಪ್ತೋ ವಾ ಮುನಿಶಾಲಾಯಾಂ ಭಿಕ್ಷುರಾಯಾತಿ ತದ್ಗೃಹಂ ।
ಭಾರ್ಯಾಮುವಾಚ ಯಃ ಕಶ್ಚಿದವಶ್ಯಂ ನಿರ್ಧನೋ ಯತಃ ॥ ೭೦ ॥

ಸ ತು ವಾಚ್ಯೋ ಭವತ್ಯಾ ಚ ಸ ದೃಶ್ಯಂತ ಇತಿ ಪ್ರಿಯಃ ।
ಅತಿಥೇರಾಗತಸ್ಯಾಪಿ ಕಿಂ ದಾಸ್ಯಾಮಿ ಗೃಹೇ ವಸನ್ ॥ ೭೧ ॥

ಕದಾಚಿದತಿಥಿಃ ಕಶ್ಚಿತ್ಕ್ಷುತ್ತೃಷಾಕ್ರಾಮತರ್ಷಿತಃ ।
ತಾಮುವಾಚ ಸ ಭರ್ತಾ ತೇ ಕ್ವ ಗತಶ್ಚೇತಿ ತಂ ಚ ಸಾ ॥ ೭೨ ॥

೬೮. ಮಾಂಡವ್ಯನು ಹತ್ತುಲಕ್ಷ ವರ್ಷಗಳು ಶೂಲದಲ್ಲಿ ಏರಿಸಲ್ಪಟ್ಟಿದ್ದನು. ಇವನಿಗೆ ಪರಮಾನುಗ್ರಹದಿಂದ ಜೀವದಾನವನ್ನು ಮಾಡಿ ಈಶ್ವರನು ಇವನನ್ನು ಬಿಡಿಸಿದನು.

೬೯-೭೧. ದರಿದ್ರನಾದ ಬ್ರಾಹ್ಮಣನೊಬ್ಬನು ಗೃಹಸ್ಥಾಶ್ರಮಧರ್ಮಗಳನ್ನು ಅನುಷ್ಠಿಸುತ್ತಿದ್ದನು. ಇವನಿಗೆ ಗಾಲವನೆಂಬ ಮಗನಿದ್ದನು. ಈ ಬ್ರಾಹ್ಮಣನು ತನ್ನ ಮನೆಗೆ ಭಿಕ್ಷುಕರು ಬರುತ್ತಾರೆಂಬ ಭಯದಿಂದ ತನ್ನ ಮಗನನ್ನು ಗುರುಕುಲ ವಾಸಕ್ಕೆ ಕಳುಹಿಸಿ, ಋಷಿಗಳ ಆಶ್ರಮದಲ್ಲಿ ಅವಿತುಕೊಳ್ಳುತ್ತಿದ್ದನು. ಒಂದುದಿನ ಇವನು ತನ್ನ ಹೆಂಡತಿಯನ್ನು ಕುರಿತು, ಈ ದಿನ ಒಬ್ಬ ಭಿಕ್ಷುಕನು ನನ್ನ ಮನೆಗೆ ಬರುವನು. ದರಿದ್ರರ ಮನೆಗೆ ಭಿಕ್ಷುಕರು ಬರುವುದು ಹೆಚ್ಚು. ನಾನು ಬಹಳ ಬಡವನು. ಮನೆಯಲ್ಲಿದ್ದು ಬಂದ ಭಿಕ್ಷುಕನಿಗೆ ಏನನ್ನು ನೀಡಲಿ? ಇಲ್ಲ ಎಂದು ಹೇಳಲು ನನಗೆ ಬಾಯಿ ಬರದು. ಆದುದರಿಂದ ನಾನು ಮನೆಯಲ್ಲಿಯೇ ಅವಿತು ಕೊಳ್ಳುವೆನು. ನೀನು ನನ್ನ ಯಜಮಾನರು ಮನೆಯಲ್ಲಿ ಇಲ್ಲವೆಂದು ಭಿಕ್ಷುಕನಿಗೆ ಹೇಳು ಎಂದನು.

೭೨. ಹೀಗಿರಲು ಒಂದಾನೊಂದು ದಿವಸ ಹಸಿವುಬಾಯಾರಿಕೆಗಳಿಂದ ಬಳಲಿದವನಾಗಿ ಒಬ್ಬ ಅತಿಥಿಯು ಮನೆಗೆ ಬಂದನು. ಇವನ ಹೆಂಡತಿಯನ್ನು ನೋಡಿ, ಅತಿಥಿಯು ನಿನ್ನ ಯಜಮಾನರು ಎಲ್ಲಿರುವರೆಂದು ಕೇಳಿದನು. ಅವಳು ಯಜಮಾನರ

**ಪ್ರಾಹ ಭರ್ತಾ ಮದೀಯಸ್ತು ಸಾಂಪ್ರತಂ ನ ಚ ದೃಶ್ಯತೇ ।**
**ಸ ಋಷಿಸ್ತಾಮುವಾಚೇದಂ ಜ್ಞಾತ್ವಾ ದಿವ್ಯೇನ ಚಕ್ಷುಷಾ ॥ ೭೩ ॥**

**ಗೃಹಸ್ಥಿತಃ ಪ್ರತಿಚ್ಛನ್ನಸ್ತತ್ರೈವ ಸ ಮೃತೋ ದ್ವಿಜಃ ।**
**ವಿಶ್ವಾಮಿತ್ರಾಭ್ಯನುಜ್ಞಾತಸ್ತತ್ಪುತ್ರೋ ಗಾಲವಸ್ತಥಾ ॥ ೭೪ ॥**

**ಗೃಹಮಾಗತ್ಯ ಮಾತುಸ್ಸ ಶ್ರುತ್ವಾ ಶಾಪಂ ಸುದಾರುಣಂ ।**
**ಆರಾಧ್ಯ ಶಂಕರಂ ದೇವಂ ಪೂಜಾಂ ಕೃತ್ವಾ ತು ಶಾಂಭವೀಂ ॥ ೭೫ ॥**

**ಗೃಹಾದಸೌ ವಿನಿಷ್ಕ್ರಾಂತಸ್ಸಂಸ್ಮರಞ್ಛಂಕರಂ ಹೃದಾ ।**
**ಅಥ ತಂ ತನಯಂ ದೃಷ್ಟ್ವಾ ಪಿತಾ ತಂ ಪ್ರಾಹ ಸಾಂಜಲಿಂ ॥ ೭೬ ॥**

**ಮಹಾದೇವಪ್ರಸಾದಾಚ್ಚ ಕೃತಕೃತ್ಯೋಽಸ್ಮಿ ಕೃತ್ಯತಃ ।**
**ಧನವಾನ್ಪುತ್ರವಾಂಶ್ಚೈವ ಮೃತೋಽಹಂ ಜೀವಿತಃ ಪುನಃ ॥ ೭೭ ॥**

---

ಅಪ್ಪಣೆಯಂತೆ ನನ್ನ ಯಜಮಾನರು ಈಗ ಮನೆಯಲ್ಲಿ ಇಲ್ಲವೆಂದು ಅತಿಥಿಗೆ ಪ್ರತ್ಯುತ್ತರವನ್ನಿತ್ತಳು.

೭೩. ಈ ಮಾತನ್ನು ಕೇಳಿದ ಆ ಋಷಿಯು ತನ್ನ ದಿವ್ಯಜ್ಞಾನದಿಂದ ಯಥಾವಸ್ಥಿತಸಂಗತಿಯನ್ನು ತಿಳಿದುಕೊಂಡು ಎಲೌ ತರುಣಿಯೇ, ನಿನ್ನ ಯಜಮಾನನು ಮನೆಯಲ್ಲಿಯೇ ಅವಿತುಕೊಂಡಿರುವನಲ್ಲವೇ. ಸುಳ್ಳುಹೇಳಿದುದರ ಫಲವಾಗಿ ಅವನು ಅಲ್ಲಿಯೇ ಮೃತಿಯನ್ನು ಹೊಂದಲಿ ಎಂದನು.

೭೪-೭೫. ಇಷ್ಟರಲ್ಲಿ ಈ ಬ್ರಾಹ್ಮಣನ ಮಗನಾದ ಗಾಲವನು ತನ್ನ ಗುರುವಾದ ವಿಶ್ವಾಮಿತ್ರಮಹರ್ಷಿಯ ಅಪ್ಪಣೆಯನ್ನು ಪಡೆದು ಮನೆಗೆ ಬಂದು ಕುಶಲಪ್ರಶ್ನೆ ಮಾಡುತ್ತಿರಲು, ತಾಯಿಯು ತಂದೆಗೆ ಬಂದ ಕಠೋರವಾದ ಶಾಪವನ್ನು ತಿಳಿಸಿದಳು. ಗಾಲವನು ಈಶ್ವರನ ಪೂಜೆಯನ್ನು ಮಾಡಿ ಈಶ್ವರನನ್ನು ಸಂತೋಷಪಡಿಸಿ ಮನಸ್ಸಿನಲ್ಲಿ ಈಶ್ವರವನ್ನು ಧ್ಯಾನಿಸುತ್ತಾ ಮನೆಯಿಂದ ಹೊರಟನು.

೭೬-೭೭. ಅಷ್ಟುಹೊತ್ತಿಗೆ ಇವನ ತಂದೆಯು ಬಂದು ತನ್ನ ಮಗನಾದ ಗಾಲವನನ್ನು ನೋಡಿದನು. ಗಾಲವನು ತಂದೆಗೆ ನಮಸ್ಕರಿಸಿ ಕೈಮುಗಿದುಕೊಂಡು ನಿಲ್ಲಲು, ಬ್ರಾಹ್ಮಣನು ಮಗನನ್ನು ನೋಡಿ, ಈಶ್ವರನ ಅನುಗ್ರಹದಿಂದ ನಾನು ಕೃತಕೃತ್ಯನಾದೆನು. ಇನ್ನುಮುಂದೆ ಈರೀತಿಯಾಗಿ ಮಾಡುವ ಸಂಭವವಿಲ್ಲ. ಈಶ್ವರನ

**ಇತಿ ವಃ ಕಥಿತಮಶೇಷಂ ನಾಹಂ ಶಕ್ತಃ ಸಮಾಸತೋ ವ್ಯಾಸಾತ್ ।**
**ವಕ್ತುಂ ಶಂಭೋಶ್ಚ ಗುಣಾನ್ಶೇಷಸ್ಯಾಪಿ ನ ಮುಖಾನಿ ಸ್ಯುಃ ॥ ೭೮ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಸನತ್ಕುಮಾರಸಂವಾದೇ ಕೃಷ್ಣಾದಿಶಿವಭಕ್ತೋದ್ಧಾರಣಶಿವಮಾಹಾತ್ಮ್ಯ ವರ್ಣನಂ ನಾಮ ತೃತೀಯೋಽಧ್ಯಾಯಃ**



ಅನುಗ್ರಹದಿಂದ ಶ್ರೀಮಂತನಾದ ಧನವಂತನಾದೆನು. ಪುತ್ರಲಾಭವೂ ಉಂಟಾಯಿತು. ಸತ್ತಿದ್ದ ನಾನು ತಿರುಗಿ ಬದುಕಿರುವೆನು ಎಂದು ಹೇಳಿದನು.

೭೮. ಎಲೈ ಶೌನಕಾದಿ ಮಹರ್ಷಿಗಳೇ, ನಿಮಗೆ ನಾನು ಈರೀತಿಯಲ್ಲಿ ಈಶ್ವರನ ಅದ್ಭುತ ಲೀಲೆಗಳನ್ನು ಸಾಂಗವಾಗಿ ಹೇಳಿರುವೆನು. ನಾನು ವ್ಯಾಸನಿಗಿಂತಲೂ ಸಮರ್ಥನಲ್ಲ. ಹೆಚ್ಚು ಹೇಳಿ ಪ್ರಯೋಜನವೇನು? ಈಶ್ವರನ ಗುಣಗಳನ್ನು ಪೂರ್ಣವಾಗಿ ಹೇಳಲು ಆದಿಶೇಷನ ಸಹಸ್ರ ಮುಖಗಳಿಗೂ ಸಾಮರ್ಥ್ಯವಿರುವುದಿಲ್ಲ. ಎಂದ ಮೇಲೆ, ನಾನು ಎಷ್ಟೇ ಹೇಳಿದರೂ ಅದು ಅತ್ಯಲ್ಪವೆಂಬುದರಲ್ಲಿ ಸಂಶಯವೇನಿರುವುದು? ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಶಿವಮಾಹಾತ್ಮ್ಯವರ್ಣನವೆಂಬ ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಚತುರ್ಥೋಽಧ್ಯಾಯಃ

॥ ಮುನಯ ಊಚುಃ ॥

ತಾತ ತಾತ ಮಹಾಭಾಗ ಧನ್ಯಸ್ತ್ವಂ ಹಿ ಮಹಾಮತೇ ।
ಅದ್ಭುತೇಯಂ ಕಥಾ ಶಂಭೋಃ ಶ್ರಾವಿತಾ ಪರಭಕ್ತಿದಾ ॥ ೧ ॥

ಪುನರ್ಬ್ರೂಹಿ ಕಥಾಂ ಶಂಭೋರ್ವ್ಯಾಸಪ್ರಶ್ನಾನುಸಾರತಃ ।
ಸರ್ವಜ್ಞಸ್ತ್ವಂ ವ್ಯಾಸಶಿಷ್ಯಃ ಶಿವತತ್ತ್ವವಿಚಕ್ಷಣಃ ॥ ೨ ॥

## ನಾಲ್ಕನೆಯ ಅಧ್ಯಾಯವು

೧. ಋಷಿಗಳಿಂತೆಂದರು :—ಎಲೈ ಸೂತನೇ, ನೀನು ಮಹಾಮೇಧಾವಿಯು, ಅತಿಧನ್ಯನು. ಈಶ್ವರನ ಚರಿತ್ರೆಯು ಅತ್ಯದ್ಭುತವಾದುದು. ಪರಭಕ್ತಿಯನ್ನುಂಟು ಮಾಡುವುದು. ಇಂತಹ ಅದ್ಭುತವಾದ ಈಶ್ವರನ ಚರಿತ್ರೆಯನ್ನು ನಿನ್ನ ಅನುಗ್ರಹದಿಂದ ನಾವು ಕೇಳಿದೆವು.

೨. ನೀನು ಸರ್ವಜ್ಞನು. ಶಿವನ ತತ್ತ್ವವನ್ನು ಚೆನ್ನಾಗಿ ತಿಳಿದಿರುವವನು. ನೀನು ವ್ಯಾಸಶಿಷ್ಯನಾದುದರಿಂದ ಹಿಂದೆ ವ್ಯಾಸನು ಸನತ್ಕುಮಾರನನ್ನು ಕೇಳಿದ ರೀತಿಯಲ್ಲಿ ಪವಿತ್ರವಾದ ಈಶ್ವರನ ಚರಿತ್ರೆಯನ್ನು ಇನ್ನೂ ವಿವರವಾಗಿ ವಿವರಿಸಿ ಹೇಳು ಎಂದರು.

॥ ಸೂತ ಉವಾಚ ॥

ಏವಮೇವ ಗುರುರ್ವ್ಯಾಸಃ ಪೃಷ್ಟವಾನ್ವಿಧಿಜಸಂಭವಂ ।
ಸನತ್ಕುಮಾರಂ ಸರ್ವಜ್ಞಂ ಶಿವಭಕ್ತಂ ಮುನೀಶ್ವರಂ ॥ ೩ ॥

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ಶ್ರಾವಿತೇಯಂ ಶುಭಾ ಕಥಾ ।
ಶಂಕರಸ್ಯ ಮಹೇಶಸ್ಯ ನಾನಾಲೀಲಾವಿಹಾರಿಣಃ ॥ ೪ ॥

ಪುನರ್ಬ್ರೂಹಿ ಮಹಾದೇವಮಹಿಮಾನಂ ವಿಶೇಷತಃ ।
ಶ್ರದ್ಧಾ ಚ ಮಹತೀ ಶ್ರೋತುಂ ಮಮ ತಾತ ಪ್ರವರ್ದ್ಧತೇ ॥ ೫ ॥

ಮಹಿಮ್ನಾ ಯೇನ ಶಂಭೋಸ್ತು ಯೇ ಯೇ ಲೋಕೇ ವಿಮೋಹಿತಾಃ ।
ಮಯಯಾ ಜ್ಞಾನಮಾಹೃತ್ಯ ನಾನಾಲೀಲಾವಿಹಾರಿಣಃ ॥ ೬ ॥

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸ ಮಹಾಬುದ್ಧೇ ಶಾಂಕರೀಂ ಸುಖದಾಂ ಕಥಾಂ ।
ಯಸ್ಯಾಃ ಶ್ರವಣಮಾತ್ರೇಣ ಶಿವೇ ಭಕ್ತಿಃ ಪ್ರಜಾಯತೇ ॥ ೭ ॥

---

೩. ಸೂತನಿಂತೆಂದನು :—ಎಲೈ ಋಷಿಗಳೇ, ಸನತ್ಕುಮಾರನು ಬ್ರಹ್ಮನ ಮಗನು. ಎಲ್ಲವನ್ನೂ ತಿಳಿದವನು. ಈಶ್ವರನಲ್ಲಿ ಅತ್ಯಂತ ಭಕ್ತಿಯುಳ್ಳವನು. ಋಷಿಶ್ರೇಷ್ಠನು. ಇಂತಹ ಸನತ್ಕುಮಾರನನ್ನು ನನಗೆ ಗುರುವಾದ ವ್ಯಾಸನು ಪ್ರಶ್ನೆ ಮಾಡಿ ತಿಳಿದುಕೊಂಡ ಈಶ್ವರನ ದಿವ್ಯಚರಿತ್ರೆಯನ್ನು ಹೇಳುವೆನು. ಸಾವಧಾನವಾಗಿ ಕೇಳಿ ಎಂದು ಹೇಳಲುಪಕ್ರಮಿಸಿದನು.

೪-೬. ವ್ಯಾಸನು ಸನತ್ಕುಮಾರನನ್ನು ಕುರಿತು, ಎಲೈ ಸರ್ವಜ್ಞನಾದ ಸನತ್ಕುಮಾರನೇ, ನೀನು ಹೇಳಿದ ಈಶ್ವರನ ಚರಿತ್ರೆಯನ್ನು ನಾನು ಕೇಳಿದೆನು. ಆದರೆ ಇನ್ನೂ ನನಗೆ ತೃಪ್ತಿಯುಂಟಾಗಲಿಲ್ಲ. ಈಶ್ವರನು ಮಹಾಮಹಿಮೆಯುಳ್ಳವನು. ನಾನಾವಿಧವಾದ ಲೀಲಾವಿನೋದವುಳ್ಳವನು. ಪ್ರಪಂಚದಲ್ಲಿ ಅವನ ಮಾಯೆಗೆ ಸಿಲುಕಿ ಯಾರು ಯಾರು ಮೋಹವನ್ನು ಹೊಂದಿರುವರು? ನನಗೆ ಈಶ್ವರನ ಚರಿತೆಯನ್ನು ಕೇಳಲು ಅತ್ಯಧಿಕವಾದ ಶ್ರದ್ಧೆಯುಂಟಾಗಿರುವುದು. ಆದುದರಿಂದ ಮಹಾದೇವನ ಮಹಿಮೆಯನ್ನು ವಿಶೇಷವಾಗಿ ಬಣ್ಣಿಸಿ ಹೇಳು ಎಂದನು.

೭. ಸನತ್ಕುಮಾರನಿಂತೆಂದನು :—ಎಲೈ ಬುದ್ಧಿವಂತನಾದ ವ್ಯಾಸನೇ, ಈಶ್ವರನ ಚರಿತ್ರೆಯನ್ನು ಕೇಳಿದ ಮಾತ್ರದಿಂದಲೇ ಭಕ್ತಿಯು ಹೆಚ್ಚುವುದು. ಈ

**ಶಿವಸ್ಸರ್ವೇಶ್ವರೋ ದೇವಸ್ಸರ್ವಾತ್ಮಾ ಸರ್ವದರ್ಶನಃ ।**
**ಮಹಿಮ್ನಾ ತಸ್ಯ ಸರ್ವಂ ಹಿ ವ್ಯಾಪ್ತಂ ಚ ಸಕಲಂ ಜಗತ್ ॥ ೮ ॥**

**ಶಿವಸ್ಯೈವ ಪರಾ ಮೂರ್ತಿರ್ಬ್ರಹ್ಮವಿಷ್ಣ್ವೀಶ್ವರಾತ್ಮಿಕಾ ।**
**ಸರ್ವಭೂತಾತ್ಮಭೂತಾಖ್ಯಾ ತ್ರಿಲಿಂಗಾಲಿಂಗರೂಪಿಣೀ ॥ ೯ ॥**

**ದೇವಾನಾಂ ಯೋನಯಶ್ಚಾಷ್ಟೌ ಮಾನುಷೋ ನವಮೀ ಚ ಯಾ ।**
**ತಿರಶ್ಚಾಂ ಯೋನಯಃ ಪಂಚ ಭವಂತ್ಯೇವಂ ಚತುರ್ದಶ ॥ ೧೦ ॥**

**ಭೂತಾ ವಾ ವರ್ತಮಾನಾ ವಾ ಭವಿಷ್ಯಾಶ್ಚೈವ ಸರ್ವಶಃ ।**
**ಶಿವಾತ್ಸರ್ವೇ ಪ್ರವರ್ತಂತೇ ಲೀಯಂತೇ ವೃದ್ಧಿಮಾಗತಾಃ ॥ ೧೧ ॥**

ಚರಿತ್ರೆಯು ಸರ್ವರಿಗೂ ಸುಖವನ್ನುಂಟುಮಾಡುವುದು ಅದನ್ನು ಹೇಳುವೆನು ಕೇಳು.

೮. ಈಶ್ವರನು ಎಲ್ಲರಿಗೂ ಅಧಿಪತಿಯು. ಎಲ್ಲರಿಗೂ ಆತ್ಮಭೂತನು. ಎಲ್ಲವನ್ನೂ ಸಾಕ್ಷಿಭೂತನಾಗಿ ನೋಡುವವನು. ಅವನ ಮಹಿಮೆಯಿಂದಲೇ ಈ ಸಮಸ್ತ ಜಗತ್ತೂ ಉಂಟಾಗಿರುವುದು. ಎಲ್ಲೆಲ್ಲಿಯೂ ಅವನ ಮಹಿಮೆಯೇ ಕಾಣಬರುವುದು.

೯. ಈಶ್ವರನಿಗೆ ಬ್ರಹ್ಮ, ವಿಷ್ಣು, ಶಿವಾತ್ಮಕವಾದ ಒಂದು ಆಕಾರವಿರುವುದು. ಇದು ಎಲ್ಲರಲ್ಲೂ ಪ್ರವೇಶಿಸಿರುವುದರಿಂದ ಇದಕ್ಕೆ "ಸರ್ವಭೂತಾತ್ಮಭೂತ" ಎಂದು ಹೆಸರಿರುವುದು. ಇದು ಲಿಂಗರೂಪವಾಗಿಯೂ ಇರುವುದು. ಸೃಷ್ಟಿ, ಸ್ಥಿತಿ, ಲಯಗಳೆಂಬ ಮೂರು ಲಿಂಗಗಳು ಈ ಆಕಾರದಲ್ಲಿ ಅಡಕವಾಗಿರುವುವು.

೧೦. ದೇವಯೋನಿ ವಿಶೇಷಗಳು ಎಂಟು ವಿಧಗಳಾಗಿರುವುವು ಎಂದರೆ ದೇವತೆಗಳಲ್ಲಿ ಎಂಟು ವಿಧವು. ಮನುಷ್ಯಯೋನಿಯು ಒಂದೇ ವಿಧವಾದುದು. ಪಶುಯೋನಿಗಳು ಐದುವಿಧಗಳಾಗಿರುವುವು. ಇವೆಲ್ಲವೂ ಈಶ್ವರನಿಂದಲೇ ಉಂಟಾಗತಕ್ಕವುಗಳು.

೧೧. ಹಿಂದೆ ಹುಟ್ಟಿದವುಗಳೂ, ಈಗ ಹುಟ್ಟುತ್ತಿರುವವುಗಳೂ ಮುಂದೆ ಹುಟ್ಟತಕ್ಕವುಗಳೂ ಎಲ್ಲವು ಈಶ್ವರನಿಂದಲೇ ಹುಟ್ಟಿ, ಬೆಳದು, ಅವನಲ್ಲಿಯೇ ಲಯವನ್ನು ಹೊಂದುವವು.

ಬ್ರಹ್ಮೇಂದ್ರೋಪೇಂದ್ರಚಂದ್ರಾಣಾಂ ದೇವದಾನವಭೋಗಿನಾಂ ।
ಗಂಧರ್ವಾಣಾಂ ಮನುಷ್ಯಾಣಾಮನ್ಯೇಷಾಂ ವಾಪಿ ಸರ್ವಶಃ ॥ ೧೨ ॥

ಬಂಧುರ್ಮಿತ್ರಮಥಾಚಾ ರಕ್ಷನ್ನೇತಾರ್ಯೋರ್ಥವಾನ್ಗುರುಃ ।
ಕಲ್ಪದ್ರುಮೋಽಥ ವಾ ಭ್ರಾತಾ ಪಿತಾ ಮಾತಾ ಶಿವೋ ಮತಃ ॥ ೧೩ ॥

ಶಿವಸ್ಸರ್ವಮಯಃ ಪುಂಸಾಂ ಸ್ವಯಂ ವೇದ್ಯಃ ಪರಾತ್ಪರಃ ।
ವಕ್ತುಂ ನ ಶಕ್ಯತೇ ಯಶ್ಚ ಪರಂ ಚಾನುಪರಂ ಚ ಯತ್ ॥ ೧೪ ॥

ತನ್ಮಾಯಾ ಪರಮಾ ದಿವ್ಯಾ ಸರ್ವತ್ರ ವ್ಯಾಪಿನೀ ಮುನೇ ।
ತದಧೀನಂ ಜಗತ್ಸರ್ವಂ ಸದೇವಾಸುರಮಾನುಷಂ ॥ ೧೫ ॥

೧೨-೧೩. ಬ್ರಹ್ಮನಿಗೂ, ವಿಷ್ಣುವಿಗೂ, ಇಂದ್ರನಿಗೂ, ದೇವತೆಗಳು, ರಾಕ್ಷಸರು, ಸರ್ಪಗಳು, ಗಂಧರ್ವರು ಇವರಿಗೂ, ಮನುಷ್ಯರಿಗೂ ಮಿಕ್ಕ ಎಲ್ಲಾ ಪ್ರಾಣಿಗಳಿಗೂ ಈಶ್ವರನೇ ಬಂಧುವು. ಅವನೇ ಸ್ನೇಹಿತನು. ಶಾಸ್ತ್ರಾರ್ಥಗಳನ್ನು ತಾನು ಅನುಷ್ಠಿಸಿ ಅವರೂ ಸಹ ಅನುಷ್ಠಿಸುವಂತೆ ಮಾಡುವ ಆ ಆಚಾರ್ಯನೂ ಈಶ್ವರನೇ. ಇವನೇ ಕಾಪಾಡತಕ್ಕವನು. ಇವನೇ ಯಜಮಾನನು. ಇವರ ಅಂಧಕಾರನಿವಾರಕನಾದ ಗುರುವೂ ಇವನೇ. ಕಲ್ಪವೃಕ್ಷದಂತೆ ಕೇಳಿದುದೆಲ್ಲವನ್ನೂ ಕೊಡತಕ್ಕವನೂ ಈಶ್ವರನೇ. ಸಹೋದರನೂ ತಂದೆತಾಯಿಯೂ ಈಶ್ವರನೇ, ಇದನ್ನು ನೀನು ದೃಢವಾಗಿ ತಿಳಿದುಕೋ.

೧೪. ಈಶ್ವರನು ಸರ್ವರಿಗೂ ಅಂತರ್ಯಾಮಿಯು. ಸ್ವಪ್ರಕಾಶಸ್ವರೂಪನು. ಉತ್ಕೃಷ್ಟರಾದ ಬ್ರಹ್ಮಾದಿಗಳಿಗಿಂತಲೂ ಪರಮೋತ್ಕೃಷ್ಟನು. ಉತ್ಕೃಷ್ಟವಾದ ಪದಾರ್ಥಗಳೂ ಅಪಕೃಷ್ಟವಾದ ಪದಾರ್ಥಗಳೂ ಎಲ್ಲವೂ ಈಶ್ವರನಿಗೆ ಶರೀರಭೂತಗಳು. ಆದುದರಿಂದ ಈಶ್ವರನನ್ನು ಪರಿಚ್ಛೇದಮಾಡಿ ಹೇಳಲು ಸಾಧ್ಯವಿಲ್ಲ.

೧೫. ಎಲೈ ಋಷಿಯೇ, ಈಶ್ವರನ ಮಾಯೆಯು ದಿವ್ಯವಾದುದು. ಇದಕ್ಕಿಂತಲೂ ಉತ್ಕೃಷ್ಟವಾದುದು ಮತ್ತೊಂದಿಲ್ಲ. ಇದು ಸರ್ವಪ್ರದೇಶವನ್ನೂ ಆಕ್ರಮಿಸಿರುವುದು. ದೇವತೆಗಳು ರಾಕ್ಷಸರು ಮತ್ತು ಮನುಷ್ಯರು ಇವರಿಂದ ಕೂಡಿದ ಈ ಪ್ರಪಂಚವೆಲ್ಲವೂ ಆ ಮಾಯೆಗೆ ಅಧೀನವಾಗಿರುವುದು.

**ಕಾಮೇನ ಸ್ವಸಹಾಯೇನ ಪ್ರಬಲೇನ ಮನೋಭುವಾ ।**
**ಸರ್ವಃ ಪ್ರಧರ್ಷಿತೋ ವೀರೋ ವಿಷ್ಣ್ವಾದಿಪ್ರಬಲೋಽಪಿ ಹಿ　　॥ ೧೬ ॥**

**ಶಿವಮಾಯಾಪ್ರಭಾವೇಣಾಭೂದ್ಧರಿಃ ಕಾಮಮೋಹಿತಃ ।**
**ಪರಸ್ತ್ರೀಘರ್ಷಣಂ ಚಕ್ರೇ ಬಹುವಾರಂ ಮುನೀಶ್ವರ　　॥ ೧೭ ॥**

**ಇಂದ್ರಸ್ತ್ರಿದಶಪೋ ಭೂತ್ವಾ ಗೌತಮಸ್ತ್ರೀವಿಮೋಹಿತಃ ।**
**ಪಾಪಂ ಚಕಾರ ದುಷ್ಟಾತ್ಮಾ ಶಾಪಂ ಪ್ರಾಪ ಮುನೇಸ್ತದಾ　　॥ ೧೮ ॥**

**ಪಾವಕೋಽಪಿ ಜಗಚ್ಛ್ರೇಷ್ಠೋ ಮೋಹಿತಶ್ಶಿವಮಾಯಯಾ ।**
**ಕಾಮಾಧೀನಃ ಕೃತೋ ಗರ್ವಾತ್ತತಸ್ತೇನೈವ ಚೋದ್ಧೃತಃ　　॥ ೧೯ ॥**

**ಜಗತ್ಪ್ರಾಣೋಽಪಿ ಗರ್ವೇಣ ಮೋಹಿತಶ್ಶಿವಮಾಯಯಾ ।**
**ಕಾಮೇನ ನಿರ್ಜಿತೋ ವ್ಯಾಸಶ್ಚಕ್ರೇಽನ್ಯಸ್ತ್ರೀರತಿಂ ಪುರಾ　　॥ ೨೦ ॥**

---

೧೬. ಸಂಕಲ್ಪಮಾತ್ರದಿಂದ ಸನ್ನಿಹಿತನಾಗುವ ಮನ್ಮಥನು ಅತಿಪ್ರಬಲನು. ಇವನ ಸಹಾಯದಿಂದ ವಿಷ್ಣ್ವಾದಿಗಳಿಗಿಂತಲೂ ಪ್ರಬಲರಾದ ಎಲ್ಲಾ ವೀರರನ್ನೂ ಈಶ್ವರನು ಜಯಿಸುವನು.

೧೭. ಎಲೈ ಋಷಿಶ್ರೇಷ್ಠನಾದ ವ್ಯಾಸನೇ ಕೇಳು. ಈಶ್ವರನ ಮಾಯಾ ಪ್ರಭಾವದಿಂದಲೇ ವಿಷ್ಣುವು ಕಾಮಮೋಹಿತನಾಗಿ ಅನೇಕಾವರ್ತಿ ಪರಸ್ತ್ರೀಯರಲ್ಲಿ ಆಸಕ್ತನಾದನು.

೧೮. ಇಂದ್ರನು ದೇವತೆಗಳಿಗೆಲ್ಲಾ ಅಧಿಪತಿಯು. ಇಂತಹ ಇಂದ್ರನು ಈಶ್ವರನ ಮಾಯಾಪ್ರಭಾವದಿಂದ ಗೌತಮಮುನಿಯ ಧರ್ಮಪತ್ನಿಯಾದ ಅಹಲ್ಯೆಯನ್ನು ಮೋಹಿಸಿ ಅತ್ಯಾಚಾರಮಾಡಿದನು. ಇದನ್ನು ತಿಳಿದ ಗೌತಮನು ಇಂದ್ರನಿಗೆ ಶಾಪವನ್ನು ಕೊಟ್ಟನು.

೧೯. ಅಗ್ನಿಯು ಪ್ರಪಂಚದಲ್ಲಿ ತಾನೇ ಶ್ರೇಷ್ಠನೆಂದು ಗರ್ವಪಡುತ್ತಿದ್ದನು. ಇವನನ್ನು ಈಶ್ವರನು ತನ್ನ ಮಾಯೆಯಿಂದ ಕಾಮನಿಗೆ ಅಧೀನವಾಗುವಂತೆ ಮಾಡಿದನು. ಅನಂತರ ತಾನೇ ಉದ್ಧಾರಮಾಡಿದನು.

೨೦. ಪ್ರಪಂಚಕ್ಕೆ ಪ್ರಾಣದಾಯಕನಾದ ವಾಯುವನ್ನು ಈಶ್ವರನು ತನ್ನ ಮಾಯೆಯಿಂದ ಮೋಹಗೊಳಿಸಿದನು. ಇದೇರೀತಿಯಲ್ಲಿ ವ್ಯಾಸಮಹರ್ಷಿಯು ಕಾಮನಿಗೆ ಅಧೀನನಾಗಿ ಒಂದಾನೊಂದು ಕಾಲದಲ್ಲಿ ಪರಸ್ತ್ರೀಸಂಗವನ್ನು ಮಾಡಿದನು.

ಚಂಡರಶ್ಮಿಸ್ತು ಮಾರ್ತಾಂಡೋ ಮೋಹಿತಶ್ಶಿವಮಾಯಯಾ ।
ಕಾಮಾಕುಲೋ ಬಭೂವಾಶು ದೃಷ್ಟ್ವಾಶ್ವೀಂ ಹಯರೂಪಧೃಕ್ ॥ ೨೦ ॥

ಚಂದ್ರಶ್ಚ ಮೋಹಿತಶ್ಶಂಭೋರ್ಮಾಯಯಾ ಕಾಮಸಂಕುಲಃ ।
ಗುರುಪತ್ನೀಂ ಜಹಾರಾಥ ಯುತಸ್ತೇನೈವ ಚೋದ್ಧೃತಃ ॥ ೨೨ ॥

ಪೂರ್ವಂ ತು ಮಿತ್ರಾವರುಣೌ ಘೋರೇ ತಪಸಿ ಸಂಸ್ಥಿತೌ ।
ಮೋಹಿತೌ ತಾವಪಿ ಮುನೀ ಶಿವಮಾಯಾವಿಮೋಹಿತೌ ॥ ೨೩ ॥

ಊರ್ವಶೀಂ ತರುಣೀಂ ದೃಷ್ಟ್ವಾ ಚಸ್ಕಂಭೋಭೌ ಬಭೂವತುಃ ।
ಮಿತ್ರಃ ಕುಂಭೇ ಜಹೌ ರೇತೋ ವರುಣೋಽಪಿ ತಥಾ ಜಲೇ ॥ ೨೪ ॥

೨೧. ಪ್ರಚಂಡವಾದ ಕಿರಣಗಳನ್ನು ಹೊಂದಿರುವ ಸೂರ್ಯನು ಈಶ್ವರನ ಮಾಯೆಗೆ ಸಿಲುಕಿ ಕಾಮಪರವಶನಾಗಿ ಹತ್ತಿರದಲ್ಲಿದ್ದ ಹೆಣ್ಣು ಕುದುರೆಯನ್ನು ನೋಡಿ ಅದರಲ್ಲಿ ರತಿಕ್ರೀಡೆಯನ್ನನುಭವಿಸಬೇಕೆಂದು ಬಯಸಿ, ತಾನೂ ಸಹ ಕುದುರೆಯ ರೂಪವನ್ನು ಹೊಂದಿದನು.

೨೨. ಚಂದ್ರನು ಈಶ್ವರನ ಮಾಯೆಯಿಂದ ಮೋಹಿತನಾಗಿ ಕಾಮೋದ್ರೇಕದಿಂದ ವಿವೇಚನೆಯಿಲ್ಲದೆ ತನಗೆ ಗುರುವಾದ ಬೃಹಸ್ಪತಿಯ ಧರ್ಮಪತ್ನಿಯನ್ನು ಅಪಹರಿಸಿ ಅವಳಲ್ಲಿ ಸುಖವನ್ನನುಭವಿಸುತ್ತಿರಲು, ಈಶ್ವರನೇ ಪರಮಾನುಗ್ರಹದಿಂದ ಇವನನ್ನು ಉದ್ಧರಿಸಿದನು.

೨೩-೨೪. ಪೂರ್ವದಲ್ಲಿ ಮಿತ್ರ ಮತ್ತು ವರುಣ ಎಂಬಿಬ್ಬರು ಘೋರವಾದ ತಪಸ್ಸನ್ನು ಮಾಡುತ್ತಿದ್ದರು. ಈ ಪರಿಯಾದ ಪರಮ ಘೋರವಾದ ತಪಸ್ಸನ್ನು ಮಾಡತಕ್ಕ ಋಷಿಗಳೂ ಸಹ ಈಶ್ವರನ ಮಾಯೆಯಿಂದ ಮೋಹಿತರಾಗಿ ಸುಂದರಿಯಾದ ಊರ್ವಶಿಯೆಂಬ ಅಪ್ಸರಸ್ತ್ರೀಯನ್ನು ನೋಡಿ ಕಾಮಪರವಶರಾದರು. ಅದರಿಂದ ಇವರ ವೀರ್ಯವು ಸ್ಖಲನವಾಯಿತು. ನಂತರ ಮಿತ್ರನೆಂಬ ಋಷಿಯು ತನ್ನ ರೇತಸ್ಸನ್ನು ಒಂದು ಕುಂಭದಲ್ಲಿ ಬಿಟ್ಟುಬಿಟ್ಟನು. ಆ ಕುಂಭದಿಂದ ವಸಿಷ್ಠಮಹರ್ಷಿಯು ಹುಟ್ಟಿದನು. ಆದುದರಿಂದ ವಸಿಷ್ಠಮಹರ್ಷಿಯನ್ನು ಮಿತ್ರಮಹರ್ಷಿಯ ಮಗನೆಂದು ಹೇಳುವರು. ವರುಣಮಹರ್ಷಿಯು ತನ್ನ ರೇತಸ್ಸನ್ನು ನೀರಿನಲ್ಲಿ

**ತತಃ ಕುಂಭಾತ್ಸಮುತ್ಪನ್ನೋ ವಸಿಷ್ಠೋ ಮಿತ್ರಸಂಭವಃ ।**
**ಅಗಸ್ತ್ಯೋ ವರುಣಾಜ್ಜಾತೋ ಬಡವಾಗ್ನಿಸಮದ್ಯುತಿಃ ॥ ೨೫ ॥**

**ದಕ್ಷಶ್ಚ ಮೋಹಿತಶ್ಶಂಭೋರ್ಮಾಯಯಾ ಬ್ರಹ್ಮಣಸ್ಸುತಃ ।**
**ಭ್ರಾತೃಭಿಸ್ಸ ಭಗಿನ್ಯಾಂ ವೈ ಭೋಕ್ತುಕಾಮೋಽಭವತ್ಪುರಾ ॥ ೨೬ ॥**

**ಬ್ರಹ್ಮಾ ಚ ಬಹುವಾರಂ ಹಿ ಮೋಹಿತಶ್ಶಿವಮಾಯಯಾ ।**
**ಅಭವದ್ಭೋಕ್ತುಕಾಮಶ್ಚ ಸ್ವಸುತಾಯಾಂ ಪರಾಸು ಚ ॥ ೨೭ ॥**

**ಚ್ಯವನೋಽಪಿ ಮಹಾಯೋಗೀ ಮೋಹಿತಶ್ಶಿವಮಾಯಯಾ ।**
**ಸುಕನ್ಯಯಾ ವಿಜಹ್ರೇ ಸ ಕಾಮಾಸಕ್ತೋ ಬಭೂವ ಹ ॥ ೨೮ ॥**

**ಕಶ್ಯಪಃ ಶಿವಮಾಯಾತೋ ಮೋಹಿತಃ ಕಾಮಸಂಕುಲಃ ।**
**ಯಯಾಚೇ ಕನ್ಯಕಾಂ ಮೋಹಾದ್ಧನ್ವನೋ ನೃಪತೇಃ ಪುರಾ ॥ ೨೯ ॥**

ಬಿಡಲು, ಆ ನೀರಿನಿಂದ ಅಗಸ್ತ್ಯಮಹರ್ಷಿಯು ಹುಟ್ಟಿದನು. ಆ ಅಗಸ್ತ್ಯನೋ ಬಡಬಾಗ್ನಿಗೆ ಸಮಾನವಾದ ಕಾಂತಿಯುಳ್ಳವನು.

೨೬. ದಕ್ಷನು ಚತುರ್ಮುಖಬ್ರಹ್ಮನ ಮಗನು. ಇವನು ಈಶ್ವರನ ಮಾಯೆಯಿಂದ ಮೋಹಿತನಾಗಿ ತನ್ನ ತಂಗಿಯನ್ನೇ ಅನುಭವಿಸಲು ಆಶೆಯುಳ್ಳವನಾದನು.

೨೭. ಇನ್ನು ಬ್ರಹ್ಮನ ವಿಚಾರವನ್ನು ಹೇಳುವೆನು ಕೇಳು, ಈ ಚತುರ್ಮುಖ ಬ್ರಹ್ಮನೂ ಸಹ ಈಶ್ವರನ ಮಾಯೆಗೆ ಅನೇಕಾವರ್ತಿ ಸಿಲುಕಿ ತನ್ನ ಸ್ವಂತ ಮಗಳಲ್ಲಿಯೂ ಪರಸ್ತ್ರೀಯರಲ್ಲಿಯೂ ಸುಖವನ್ನು ಅನುಭವಿಸಲು ಆಶೆಪಟ್ಟನು.

೨೮. ಚ್ಯವನನೆಂಬುವನು ಮಹಾಯೋಗಿಯು. ಇವನು ಈಶ್ವರನ ಮಾಯೆಯಿಂದ ಮೋಹಿತನಾಗಿ ಸುಕನ್ಯೆಯೆಂಬ ರಾಜಕುಮಾರಿಯನ್ನು ಮದುವೆಯಾಗಿ ಅವಳಲ್ಲಿ ಕಾಮಾಸಕ್ತಿಯಿಂದ ಬಗೆಬಗೆಯಾಗಿ ವಿಹರಿಸಿದನು.

೨೯. ಈಶ್ವರನ ಮಾಯೆಯಿಂದ ಮೋಹಿತನಾದ ಕಶ್ಯಪಋಷಿಯು ಕಾಮಪೀಡಿತನಾಗಿ ಧನ್ವನೆಂಬ ರಾಜನ ಬಳಿಗೆ ಹೋಗಿ ಮೋಹದಿಂದ ಕಂಗೆಟ್ಟು ಎಂಟು ವರ್ಷದ ಕನ್ನಿಕೆಯನ್ನು ತನಗೆ ಮದುವೆಮಾಡಿಕೊಡಬೇಕೆಂದು ಬೇಡಿದನು.

ಗರುಡಃ ಶಾಂಡಿಲೀಂ ಕನ್ಯಾಂ ನೇತುಕಾಮುಸ್ಸುಮೋಹಿತಃ ।
ವಿಜ್ಞಾತಸ್ತು ತಯಾ ಸದ್ಯೋ ದಗ್ಧಪಕ್ಷೋ ಬಭೂವ ಹ ॥ ೩೦ ॥

ವಿಭಾಂಡಕೋ ಮುನಿರ್ನಾರೀಂ ದೃಷ್ಟ್ವಾ ಕಾಮುವಶಂ ಗತಃ ।
ಋಷ್ಯಶೃಂಗಸುತಸ್ತಸ್ಯ ಮೃಗ್ಯಾಂ ಜಾತಶ್ಶಿವಾಜ್ಞಯಾ ॥ ೩೧ ॥

ಗೌತಮುಶ್ಚ ಮುನಿಶ್ಶಂಭೋರ್ಮಾಯಾಮೋಹಿತಮಾನಸಃ ।
ದೃಷ್ಟ್ವಾ ಶಾರದ್ವತೀಂ ನಗ್ನಾಂ ರರಾಮ ಕ್ಷುಭಿತಸ್ತಯಾ ॥ ೩೨ ॥

ರೇತಃ ಸ್ಕನ್ನಂ ದಧಾರ ಸ್ವಂ ದ್ರೋಣ್ಯಾಂ ಚೈವ ಸ ತಾಪಸಃ ।
ತಸ್ಮಾಚ್ಚ ಕಲಶಾಜ್ಜಾತೋ ದ್ರೋಣಶ್ಶಸ್ತ್ರಭೃತಾಂ ವರಃ ॥ ೩೩ ॥

ಪರಾಶರೋ ಮುಹಾಯೋಗೀ ಮೋಹಿತಶ್ಶಿವಮಾಯಯಾ ।
ಮತ್ಸ್ಯೋದರ್ಯಾ ಚ ಚಿಕ್ರೀಡೇ ಕುಮಾರ್ಯಾ ದಾಶಕನ್ಯಯಾ ॥ ೩೪ ॥

೩೦. ಗರುಡನು ಈಶ್ವರನ ಮಾಯೆಯಿಂದ ಮೋಹಿತನಾಗಿ ಶಾಂಡಿಲಿ ಎಂಬ ತಪಸ್ವಿನಿಯನ್ನು ಅಪಹರಿಸಲು ಆಶೆಪಟ್ಟನು. ಈ ವಿಷಯವು ಅವಳಿಗೆ ತಿಳಿಯಲು ಅವಳು ಕೊಟ್ಟ ಶಾಪದಿಂದ ತಕ್ಷಣವೇ ಇವನ ರೆಕ್ಕೆಗಳು ಸುಟ್ಟುಹೋದವು.

೩೧. ವಿಭಾಂಡಕನೆಂಬ ಮುನಿಯು ಓರ್ವ ಸ್ತ್ರೀಯನ್ನು ನೋಡಿ ಮೋಹಿಸಿ ಕಾಮುಪರವಶನಾಗಲು ಅವನಿಂದ ಋಷ್ಯಶೃಂಗನೆಂಬ ಋಷಿಯು ಹೆಣ್ಣುಜಿಂಕೆಯಲ್ಲಿ ಉತ್ಪನ್ನನಾದನು. ಇದೆಲ್ಲಾ ಶಿವಾಜ್ಞೆಯಲ್ಲದೆ ಬೇರೆಯಲ್ಲ.

೩೨-೩೩. ಗೌತಮುಮುಹರ್ಷಿಯ ಮನಸ್ಸನ್ನು ಈಶ್ವರನು ತನ್ನ ಮಾಯೆಯಿಂದ ಮೋಹಗೊಳಿಸಿದನು. ಇವನು ಬೆತ್ತಲೆಯಾಗಿದ್ದ ಶಾರದ್ವತಿ ಎಂಬುವಳನ್ನು ನೋಡಿ ಮನೋವಿಕಾರವುಂಟಾಗಲು ಅವಳಲ್ಲಿ ಕ್ರೀಡಿಸಿದನು. ತನ್ನ ರೇತಸ್ಸು ಸ್ಖಲನವಾಗಲು ಅದನ್ನು ದ್ರೋಣಿಯಲ್ಲಿ ಅಂದರೆ ಒಂದು ಕುಂಭದಲ್ಲಿ ಬಿಟ್ಟನು. ಆ ಕುಂಭದಲ್ಲಿ ದ್ರೋಣಾಚಾರ್ಯನು ಹುಟ್ಟಿದನು. ಈ ದ್ರೋಣಾಚಾರ್ಯನು ಶಸ್ತ್ರವಿದ್ಯೆಯಲ್ಲಿ ಅತಿ ಸಮರ್ಥನೆನಿಸಿದನು.

೩೪. ಎಲೈ ವ್ಯಾಸನೇ, ನಿನ್ನ ತಂದೆಯಾದ ಪರಾಶರಮುಹರ್ಷಿಯು ಯೋಗಿಶ್ರೇಷ್ಠನು. ಇವನೂ ಈಶ್ವರನ ಮಾಯೆಗೆ ಸಿಕ್ಕಿಬಿದ್ದು ಬೆಸ್ತರ ಮಗಳಾದ ಮತ್ಸ್ಯಗಂಧಿಯೆಂಬ ಕನ್ನಿಕೆಯಲ್ಲಿ ಕ್ರೀಡಿಸಿದನು.

ವಿಶ್ವಾಮಿತ್ರೋ ಬಭೂವಾಥ ಮೋಹಿತಶ್ಶಿವಮಾಯಯಾ ।
ರೇಮೇ ಮೇನಕಯಾ ವ್ಯಾಸ ವನೇ ಕಾಮವಶಂ ಗತಃ ॥ ೩೫ ॥

ವಸಿಷ್ಠೇನ ವಿರೋಧಂ ತು ಕೃತವಾನ್ನಷ್ಟಚೇತನಃ ।
ಪುನಃ ಶಿವಪ್ರಸಾದಾಚ್ಚ ಬ್ರಾಹ್ಮಣೋಽಭೂತ್ಸ ಏವ ವೈ ॥ ೩೬ ॥

ರಾವಣೋ ವೈಶ್ರವಾಃ ಕಾಮೀ ಬಭೂವ ಶಿವಮಾಯಯಾ ।
ಸೀತಾಂ ಜಹ್ರೇ ಕುಬುದ್ಧಿಸ್ತು ಮೋಹಿತೋ ಮೃತ್ಯುಮಾಪ ಚ ॥ ೩೭ ॥

ಬೃಹಸ್ಪತಿರ್ಮುನಿವರೋ ಮೋಹಿತಶ್ಶಿವಮಾಯಯಾ ।
ಭ್ರಾತೃಪತ್ನ್ಯಾ ವಶೀ ರೇಮೇ ಭರದ್ವಾಜಸ್ತತೋಽಭವತ್ ॥ ೩೮ ॥

೩೫-೩೬. ವಿಶ್ವಾಮಿತ್ರಮಹರ್ಷಿಯು ಕ್ಷತ್ರಿಯಶ್ರೇಷ್ಠನು. ಇವನು ವಸಿಷ್ಠರ ಪ್ರಭಾವವನ್ನು ತಿಳಿಯದೆ ಆ ಮಹರ್ಷಿಯೊಂದಿಗೆ ವಿರೋಧವನ್ನು ಕಟ್ಟಿಕೊಂಡು ಅವನಿಂದ ಪರಾಜಿತನಾಗಿ ಬ್ರಾಹ್ಮಣ್ಯವನ್ನು ಸಂಪಾದಿಸಲು ನಿರ್ಧರಿಸಿಕೊಂಡು ಕಾಡಿನಲ್ಲಿ ತಪಸ್ಸುಮಾಡುತ್ತಿರುವಾಗ ತಪಸ್ಸಿಗೆ ವಿಘ್ನಮಾಡಲು ದೇವತೆಗಳ ಅಪ್ಪಣೆಯಂತೆ ಮೇನಕೆಯು ಬರಲು ಅವಳನ್ನು ನೋಡಿ ಈಶ್ವರನ ಮಾಯಾಪ್ರಭಾವದಿಂದ ಆ ಮೇನಕೆಯಲ್ಲಿ ರಮಿಸಿದನು. ಸ್ವಲ್ಪಕಾಲ ಕಳೆಯಲು ಈಶ್ವರನ ಪರಮಾನುಗ್ರಹದಿಂದಲೇ ಬ್ರಾಹ್ಮಣ್ಯವನ್ನು ಸಂಪಾದಿಸಿ ಬ್ರಾಹ್ಮಣನಾದನು.

೩೭. ವೈಶ್ರವಣನ ಮಗನಾದ ರಾವಣನು ಈಶ್ವರನ ಮಾಯಾಮಹಿಮೆಯಿಂದ ಕಾಮಪೀಡಿತನಾಗಿ ಬುದ್ಧಿಗೆಟ್ಟು ಸೀತೆಯನ್ನು ಅಪಹರಿಸಿದನು. ಕೊನೆಗೆ ಸೀತೆಯ ಮೇಲಿನ ಮೋಹದಿಂದಲೇ ಯುದ್ಧದಲ್ಲಿ ರಾಮನಿಂದ ಹತನಾದನು.

೩೮. ಬೃಹಸ್ಪತಿಯು ಋಷಿಶ್ರೇಷ್ಠನು, ಜಿತೇಂದ್ರಿಯನು. ಇವನೂ ಸಹ, ಈಶ್ವರನ ಮಾಯೆಯಿಂದ ಮೋಹಿತನಾಗಿ ತನ್ನ ಸಹೋದರನ ಪತ್ನಿಯಲ್ಲಿ ರಮಿಸಿದನು. ಇವಳಲ್ಲಿ ಭರದ್ವಾಜಮಹರ್ಷಿಯು ಹುಟ್ಟಿದನು.

ಇತಿ ಮಾಯಾಪ್ರಭಾವೋ ಹಿ ಶಂಕರಸ್ಯ ಮಹಾತ್ಮನಃ ।
ವರ್ಣಿತಸ್ತೇ ಮಯಾ ವ್ಯಾಸ ಕಿಮನ್ಯಚ್ಛ್ರೋತುಮಿಚ್ಛಸಿ ॥ ೩೯

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಶಿವಮಾಯಾಪ್ರಭಾವವರ್ಣನಂ ನಾಮ ಚತುರ್ಥೋಽಧ್ಯಾಯಃ**



೩೯. ಎಲೈ ವ್ಯಾಸನೇ, ಈರೀತಿಯಾಗಿ ಈಶ್ವರನ ಮಾಯಾಮಹಿಮೆಯನ್ನು ನಾನು ನಿನಗೆ ಹೇಳಿದೆನು. ಅವನ ಲೀಲೆಗಳು ಅತ್ಯದ್ಭುತವಾದವುಗಳು. ಎಲೈ ವ್ಯಾಸನೇ, ಈಗ ಮತ್ತೇನನ್ನು ಕೇಳಬಯಸುವೆ? ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಶಿವಮಾಯಾಪ್ರಭಾವ ವರ್ಣನವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಪಂಚಮೋಽಧ್ಯಾಯಃ

॥ ವ್ಯಾಸ ಉವಾಚ ॥

**ಯೇ ಪಾಪನಿರತಾ ಜೀವಾ ಮಹಾನರಕಹೇತವಃ ।**
**ಭಗವಂಸ್ತಾನ್ಸಮಾಚಕ್ಷ್ವ ಬ್ರಹ್ಮಪುತ್ರ ನಮೋಽಸ್ತು ತೇ ೧ ॥**

॥ ಸನತ್ಕುಮಾರ ಉವಾಚ ॥

**ಯೇ ಪಾಪನಿರತಾ ಜೀವಾ ಮಹಾನರಕಹೇತವಃ ।**
**ತೇ ಸಮಾಸೇನ ಕಥ್ಯಂತೇ ಸಾವಧಾನತಯಾ ಶೃಣು ॥ ೨ ॥**

## ಐದನೆಯ ಅಧ್ಯಾಯವು

೧. ವ್ಯಾಸನು ಕೇಳಿದನು :—ಎಲೈ ಸನತ್ಕುಮಾರನೇ, ನೀನು ಬ್ರಹ್ಮನ ಮಗನು, ಐಶ್ವರ್ಯಾದಿ ಗುಣಪರಿಪೂರ್ಣನು. ನಿನಗೆ ನಮಸ್ಕರಿಸುವೆನು. ಇನ್ನು ಮುಂದೆ ಜೀವರುಗಳು ಯಾವ ಯಾವ ಪಾಪಗಳನ್ನು ಮಾಡಿ ಯಾವ ಯಾವ ನರಕಗಳಿಗೆ ಹೋಗುತ್ತಾರೆಂಬ ವಿಷಯವನ್ನು ದಯವಿಟ್ಟು ತಿಳಿಸು ಎಂದನು.

೨. ಸನತ್ಕುಮಾರನಿಂತೆಂದನು :—ಎಲೈ ವ್ಯಾಸನೇ, ಪಾಪಾಸಕ್ತರಾಗಿ ನರಕವನ್ನು ಹೊಂದುವ ಜೀವರು ಯಾರು ಎಂಬುದನ್ನು ಸಂಗ್ರಹವಾಗಿ ಹೇಳುವೆನು, ಸಾವಧಾನದಿಂದ ಕೇಳು.

ಪರಸ್ತ್ರೀದ್ರವ್ಯಸಂಕಲ್ಪಚೇತಸ್ಯಾನಿಷ್ಟಚಿಂತನಂ ।
ಅಕಾರ್ಯಾಭಿನಿವೇಶಶ್ಚ ಚತುರ್ಧಾ ಕರ್ಮ ಮಾನಸಂ ॥ ೩ ॥

ಅನಿಬದ್ಧಪ್ರಲಾಪತ್ವಮಸತ್ಯಂ ಚಾಪ್ರಿಯಂ ಚ ಯತ್ ।
ಪರೋಕ್ಷತಶ್ಚ ಪೈಶುನ್ಯಂ ಚತುರ್ಧಾ ಕರ್ಮ ವಾಚಿಕಂ ॥ ೪ ॥

ಅಭಕ್ಷ್ಯಭಕ್ಷಣಂ ಹಿಂಸಾ ಮಿಥ್ಯಾಕಾರ್ಯನಿವೇಶನಂ ।
ಪರಸ್ವಾನಾಮುಪಾದಾನಂ ಚತುರ್ಧಾ ಕರ್ಮ ಕಾಯಿಕಂ ॥ ೫ ॥

ಇತ್ಯೇತದ್ದ್ವಾದಶವಿಧಂ ಕರ್ಮ ಪ್ರೋಕ್ತಂ ತ್ರಿಸಾಧನಂ ।
ಅಸ್ಯ ಭೇದಾನ್ಪುನರ್ವಕ್ಷ್ಯೇ ಯೇಷಾಂ ಫಲಮನಂತಕಂ ॥ ೬ ॥

೩. ಮಾನಸಿಕ, ವಾಚಿಕ, ಕಾಯಿಕ ಎಂದು ಪಾಪಕರ್ಮಗಳು ಮೂರು ವಿಧಗಳಾಗಿರುವುವು. ಪರಸ್ತ್ರೀಯಲ್ಲಿ ಆಶೆ, ಪರದ್ರವ್ಯಾಭಿಲಾಷೆ, ಇತರರಿಗೆ ಕೇಡಾಗಲೆಂದು ಬಯಸುವುದು, ಕೆಟ್ಟಕೆಲಸಮಾಡಬೇಕೆಂದು ಮನಸ್ಸಿನಲ್ಲಿ ಯೋಚಿಸುವುದು, ಇವು ನಾಲ್ಕೂ ಮಾನಸಿಕ ಪಾಪಗಳು.

೪. ತನಗೆ ಸಂಬಂಧವಿಲ್ಲದೇ ಇರುವ ವಿಷಯದಲ್ಲಿ ಮನಸ್ಸೀ ಮಾತನಾಡುವುದು, ಸುಳ್ಳು ಹೇಳುವುದು, ಪ್ರಿಯವಲ್ಲದೇ ಇರುವುದನ್ನು ಹೇಳುವುದು, ಪರೋಕ್ಷದಲ್ಲಿ ಚಾಡಿ ಹೇಳುವುದು ಈ ನಾಲ್ಕು ವಾಚಿಕವಾದ ಪಾಪಕರ್ಮಗಳು.

೫. ಶಾಸ್ತ್ರನಿಷಿದ್ಧವಾದ ಆಹಾರವನ್ನು ಸೇವಿಸುವುದು, ಅಶಾಸ್ತ್ರೀಯವಾದ ಹಿಂಸೆಯನ್ನು ಮಾಡುವುದು, ಕೆಟ್ಟ ಕೆಲಸವನ್ನು ಮಾಡುವುದು, ಮತ್ತೊಬ್ಬರ ಸ್ವತ್ತನ್ನು ಅಪಹರಿಸುವುದು ಈ ನಾಲ್ಕು ಕಾಯಿಕ ಪಾಪಕರ್ಮಗಳು.

೬. ಪಾಪಕರ್ಮಗಳಿಗೆ ವಾಙ್ಮನಃಕಾಯಗಳೆಂಬ ಮೂರು ಸಾಧನಗಳಿರುವುವು. ಈ ಕರ್ಮ ಹನ್ನೆರಡು ಬಗೆಯಾಗಿರುವುದೆಂದು ಸಂಗ್ರಹಿಸಿ ಹೇಳಿದೆನು. ಇವುಗಳ ಭೇದಗಳೂ ಫಲಗಳೂ ಅನಂತವಾಗಿರುವುವು. ಅವುಗಳನ್ನು ಹೇಳುವೆನು ಕೇಳು.

ಯೇ ದ್ವಿಷಂತಿ ಮಹಾದೇವಂ ಸಂಸಾರಾರ್ಣವತಾರಕಂ ।
ಸುಮಹತ್ಪಾತಕಂ ತೇಷಾಂ ನಿರಯಾರ್ಣವಗಾಮಿನಾಂ ॥ ೭ ॥

ಯೇ ಶಿವಜ್ಞಾನವಕ್ತಾರಂ ನಿಂದಂತಿ ಚ ತಪಸ್ವಿನಂ ।
ಗುರೂನ್ಪಿತ್ರ್ಯಾನಥೋನ್ಮತ್ತಾಸ್ತೇ ಯಾಂತಿ ನಿರಯಾರ್ಣವಂ ॥ ೮ ॥

ಶಿವನಿಂದಾ ಗುರೋರ್ನಿಂದಾ ಶಿವಜ್ಞಾನಸ್ಯ ದೂಷಣಂ ।
ದೇವದ್ರವ್ಯಾಪಹರಂ ದ್ವಿಜದ್ರವ್ಯವಿನಾಶನಂ ॥ ೯ ॥

ಹರಂತಿ ಯೇ ಚ ಸಂಮೂಢಾಶ್ಶಿವಜ್ಞಾನಸ್ಯ ಪುಸ್ತಕಂ ।
ಮಹಾಂತಿ ಪಾತಕಾನ್ಯಾಹುರನಂತಫಲಧಾನಿ ಷಟ್ ॥ ೧೦ ॥

ನಾಭಿನಂದಂತಿ ಯೇ ದೃಷ್ಟ್ವಾ ಶಿವಪೂಜಾಂ ಪ್ರಕಲ್ಪಿತಾಂ ।
ನ ನಮಂತ್ಯರ್ಚಿತಂ ದೃಷ್ಟ್ವಾ ಶಿವಲಿಂಗಂ ಸ್ತುವಂತಿ ನ ॥ ೧೧ ॥

---

೭. ಈಶ್ವರನು ಸಂಸಾರ ಸಮುದ್ರವನ್ನು ದಾಟಿಸತಕ್ಕವನು. ಅವನನ್ನು ಯಾರು ದ್ವೇಷಿಸುವರೋ ಅವರು ಮಹಾಪಾತಕಿಗಳು. ಅವರಿಗೆ ನರಕವು ಸಿದ್ಧವಾದುದು

೮. ಈಶ್ವರಜ್ಞಾನವನ್ನು ಬೋಧಿಸತಕ್ಕ ಮಹಾ ತಪಸ್ವಿಯನ್ನು ಯಾರು ದೂಷಿಸುತ್ತಾರೆಯೋ ಅಥವಾ ಗುರುವನ್ನೂ ತಂದೆತಾಯಿಗಳನ್ನೂ ಯಾರು ದೂಷಿಸುತ್ತಾರೆಯೋ ಅವರು ಉನ್ಮತ್ತರು ಎಂದರೆ ಬುದ್ಧಿಯಿಲ್ಲದ ಅವಿವೇಕಿಗಳು. ಅವರು ಸಮುದ್ರದಂತೆ ವಿಸ್ತಾರವಾಗಿರುವ ನರಕವನ್ನು ಪ್ರವೇಶಿಸುವರು.

೯-೧೦. ಈಶ್ವರನನ್ನು ದೂಷಿಸುವುದು, ಗುರುವನ್ನು ದೂಷಿಸುವುದು, ಈಶ್ವರನ ಜ್ಞಾನವನ್ನು ದೂಷಿಸುವುದು, ದೇವದ್ರವ್ಯಗಳನ್ನು ಕದಿಯುವುದು, ಬ್ರಾಹ್ಮಣರ ಪದಾರ್ಥಗಳನ್ನು ನಾಶಮಾಡುವುದು, ಶಿವಜ್ಞಾನವನ್ನು ಬೋಧಿಸತಕ್ಕ ಪುಸ್ತಕವನ್ನು ಅಪಹರಿಸುವುದು ಈ ಆರೂ ಮಹಾಪಾತಕಗಳು. ಇವುಗಳಿಗೆ ಫಲಗಳು ಅನಂತವಾಗಿರುವುವು.

೧೧-೧೩. ಈಶ್ವರನಿಗೆ ಮಾಡುತ್ತಿರುವ ಪೂಜೆಯನ್ನು ನೋಡಿ ಯಾರು ಅಭಿನಂದಿಸುವುದಿಲ್ಲವೋ, ಪೂಜಿತನಾದ ಈಶ್ವರನನ್ನು ನೋಡಿ ಯಾರು ನಮಸ್ಕರಿಸುವುದಿಲ್ಲವೋ, ಯಾರು ಈಶ್ವರನ ಲಿಂಗವನ್ನು ಸ್ತೋತ್ರಮಾಡುವುದಿಲ್ಲವೋ ಅವರು

ಯಥೇಷ್ಟಚೇಷ್ಟಾ ನಿಶ್ಶಂಕಾಸ್ಸಂತಿಷ್ಠಂತೇ ರಮಂತಿ ಚ ।
ಉಪಚಾರವಿನಿರ್ಮುಕ್ತಾಶ್ಶಿವಾಗ್ರೇ ಗುರುಸನ್ನಿಧೌ ॥ ೧೨ ॥

ಸ್ಥಾನಸಂಸ್ಕಾರಪೂಜಾಂ ಚ ಯೇ ನ ಕುರ್ವಂತಿ ಪರ್ವಸು ।
ವಿಧಿವದ್ವಾ ಗುರೂಣಾಂ ಚ ಕರ್ಮಯೋಗವ್ಯವಸ್ಥಿತಾಃ ॥ ೧೩ ॥

ಯೇ ತ್ಯಜಂತಿ ಶಿವಾಚಾರಂ ಶಿವಭಕ್ತಾನ್ದ್ವಿಷಂತಿ ಚ ।
ಅಸಂಪೂಜ್ಯ ಶಿವಜ್ಞಾನಂ ಯೇಽಧೀಯಂತೇ ಲಿಖಂತಿ ಚ ॥ ೧೪ ॥

ಅನ್ಯಾಯತಃ ಪ್ರಯಚ್ಛಂತಿ ಶೃಣ್ವಂತ್ಯುಚ್ಚಾರಯಂತಿ ಚ ।
ವಿಕ್ರೀಡಂತಿ ಚ ಲೋಭೇನ ಕುಜ್ಞಾನನಿಯಮೇನ ಚ ॥ ೧೫ ॥

ಅಸಂಸ್ಕೃತಪ್ರದೇಶೇಷು ಯಥೇಷ್ಟಂ ಸ್ಥಾಪಯಂತಿ ಚ ।
ಶಿವಜ್ಞಾನಕಥಾಕ್ಷೇಪಂ ಯಃ ಕೃತ್ವಾನ್ಯತ್ಪ್ರಭಾಷತೇ ॥ ೧೬ ॥

ಮಹಾಪಾತಕಿಗಳು. ಈಶ್ವರ, ಗುರು ಇವರುಗಳನ್ನು ಉಪಚಾರಾದಿ ಪೂಜೆಗಳಿಂದ ಸತ್ಕರಿಸದೆ ಅವರ ಎದುರಿಗೆ ನಿರ್ಭಯರಾಗಿ ಮನಬಂದಂತೆ ಚೇಷ್ಟೆಗಳನ್ನು ಮಾಡುವವರೂ, ಪರ್ವದಿನಗಳಲ್ಲಿ ತಮ್ಮ ಗುರುಗಳನ್ನು ಪೂಜಾದಿಗಳಿಂದ ಸತ್ಕರಿಸದಿರುವವರೂ ಮಹಾಪಾತಕಿಗಳು.

೧೪-೧೬. ಶಿವನಲ್ಲಿ ಭಕ್ತಿಯನ್ನುಂಟುಮಾಡುವ ಆಚಾರವನ್ನೂ, ಶಿವಭಕ್ತರನ್ನೂ ದ್ವೇಷಿಸುವವರು ಮಹಾಪಾತಕಿಗಳು. ಶಿವತತ್ತ್ವಜ್ಞಾನದಲ್ಲಿ ಶ್ರದ್ಧಾಭಕ್ತಿಗಳಿಲ್ಲದೆ ಅನಾದರದಿಂದ ಅದನ್ನು ಕಲಿಯುವವರೂ, ಕೇಳುವವರೂ, ಇತರರಿಗೆ ಉಪದೇಶಿಸುವವರೂ ಮಹಾಪಾತಕಿಗಳು. ಇದಲ್ಲದೆ ಮೌಢ್ಯದಿಂದ ಅಥವಾ ಅಹಂಕಾರದಿಂದ ಶಿವತತ್ತ್ವವನ್ನು ಪರಿಹಾಸ್ಯಮಾಡುವವರೂ, ಶಿವಜ್ಞಾನವನ್ನು ಬೋಧಿಸುವ ಪುಸ್ತಕವನ್ನು ಅಶುಚಿಯಾದ ಪ್ರದೇಶದಲ್ಲಿ ಇಡುವವರೂ, ಶಿವಕಥೆಯು ನಡೆಯುತ್ತಿರುವಾಗ ಇಲ್ಲದ ಆಕ್ಷೇಪಣೆಗಳನ್ನು ಮಾಡುತ್ತಲೂ ಅಥವಾ ಬೇರೆ ವಿಚಾರವಾಗಿ ಮಾತನಾಡುತ್ತಾ ಕಥಾಶ್ರವಣಕ್ಕೆ ಭಂಗವನ್ನುಂಟುಮಾಡುವವರೂ ಸಹ ಮಹಾಪಾತಕಿಗಳೆನಿಸುವರು.

ನ ಬ್ರವೀತಿ ಚ ಯಃ ಸತ್ಯಂ ನ ಪ್ರದಾನಂ ಕರೋತಿ ಚ ।
ಅಶುಚಿರ್ವಾsಶುಚಿಸ್ಥಾನೇ ಯಃ ಪ್ರವಕ್ತಿ ಶೃಣೋತಿ ಚ ॥ ೧೭ ॥

ಗುರುಪೂಜಾಮಕೃತ್ವೈವ ಯಶ್ಶಾಸ್ತ್ರಂ ಶ್ರೋತುಮಿಚ್ಛತಿ
ನ ಕರೋತಿ ಚ ಶುಶ್ರೂಷಾಮಾಜ್ಞಾಂ ಚ ಭಕ್ತಿಭಾವತಃ ॥ ೧೮ ॥

ನಾಭಿನಂದತಿ ತದ್ವಾಕ್ಯಮುತ್ತರಂ ಚ ಪ್ರಯಚ್ಛತಿ ।
ಗುರುಕರ್ಮಣ್ಯಸಾಧ್ಯಂ ಯತ್ತದುಪೇಕ್ಷಾಂ ಕರೋತಿ ಚ ॥ ೧೯ ॥

ಗುರುಮಾರ್ತಮಶಕ್ತಂ ಚ ವಿದೇಶಂ ಪ್ರಸ್ಥಿತಂ ತಥಾ ।
ವೈರಿಭಿಃ ಪರಿಭೂತಂ ವಾ ಯಸ್ಸಂತ್ಯಜತಿ ಪಾಪಕೃತ್ ॥ ೨೦ ॥

ತದ್ಭಾರ್ಯಾಪುತ್ರಮಿತ್ರೇಷು ಯಶ್ಚಾವಜ್ಞಾಂ ಕರೋತಿ ಚ ।
ಏವಂ ಸುವಾಚಕಸ್ಯಾಪಿ ಗುರೋರ್ಧರ್ಮಾನುದರ್ಶಿನಃ ॥ ೨೧ ॥

೧೭-೧೯. ಸತ್ಯವನ್ನು ಹೇಳದೇ ಇರುವವನೂ, ದಾನವನ್ನು ಮಾಡದೇ ಇರುವವನೂ, ಅಪರಿಶುದ್ಧನಾಗಿಯಾಗಲೀ ಅಪರಿಶುದ್ಧವಾದ ಪ್ರದೇಶದಲ್ಲಿಯಾಗಲೀ ಉಪದೇಶಮಾಡುವವನೂ, ಅಥವಾ ಶಾಸ್ತ್ರಾರ್ಥಗಳನ್ನು ಕೇಳುವವನೂ ಸಹ ಮಹಾ ಪಾತಕಿಯಾಗುವನು. ಗುರುವಿಗೆ ಪೂಜೆಯನ್ನು ಮಾಡದೆ ಶಾಸ್ತ್ರವನ್ನು ಕೇಳಲಿಚ್ಛಿಸುವವನು, ಗುರುವಿಗೆ ಶುಶ್ರೂಷೆಯನ್ನು ಮಾಡದೇ ಇರುವನು ಮತ್ತು ಅತ್ಯಂತ ಭಕ್ತಿಯಿಂದ ಗುರುವಿನ ಆಜ್ಞೆಯನ್ನು ಶಿರಸಾವಹಿಸಿ ನಡೆಸದೇ ಇರುವವನು ಮಹಾ ಪಾತಕಿಯಾಗುವನು. ಗುರುವಿನ ಮಾತನ್ನು ಅಭಿನಂದಿಸದೇ ಇರುವವನೂ, ಗುರುವಿನ ಮಾತಿಗೆ ಪ್ರತ್ಯುತ್ತರವನ್ನೀಯುವವನೂ ಮತ್ತು ಗುರುವಿನ ಕಾರ್ಯಗಳು ಕಷ್ಟಸಾಧ್ಯವಾಗಿದ್ದಲ್ಲಿ ಆ ಕಾರ್ಯಗಳಲ್ಲಿ ಉಪೇಕ್ಷೆಮಾಡುವವನೂ ಮಹಾ ಪಾತಕಿಯಾಗುವನು.

೨೦-೨೨. ಗುರುವು ಆರ್ತನಾಗಿದ್ದರೂ ಅಶಕ್ತನಾಗಿದ್ದರೂ ಅವನನ್ನು ಗೌರವಿಸಬೇಕು. ಒಂದುವೇಳೆ ಅವನು ದೇಶಾಂತರದಲ್ಲಿದ್ದರೂ ಅವನ ಧ್ಯಾನವನ್ನು ಮಾಡುತ್ತಾ ನಿರಂತರವೂ ಗುರುಸ್ಮರಣೆಯನ್ನು ಮಾಡುತ್ತಿರಬೇಕು. ಶತ್ರುಗಳು ಗುರುವಿಗೆ ಅಪಮಾನವನ್ನು ಮಾಡಿದಾಗ್ಯೂ ಅವನನ್ನು ಗೌರವಿಸಬೇಕು. ಹೀಗೆ ಮಾಡದಿದ್ದರೆ ಅವನು ಮಹಾ ಪಾತಕಿಯಾಗುವನು. ಗುರುವಿನ ಪುತ್ರ ಮಿತ್ರ

ಏತಾನಿ ಖಲು ಸರ್ವಾಣಿ ಕರ್ಮಾಣಿ ಮುನಿಸತ್ತಮ ।
ಸುಮಹತ್ಪಾತಕಾನ್ಯಾಹುಶ್ಶಿವನಿಂದಾಸಮಾನಿ ಚ ॥ ೨೨ ॥

ಬ್ರಹ್ಮಘ್ನಶ್ಚ ಸುರಾಪಶ್ಚ ಸ್ತೇಯೀ ಚ ಗುರುತಲ್ಪಗಃ ।
ಮಹಾಪಾತಕಿನಸ್ತ್ವೇತೇ ತತ್ಸಂಯೋಗೀ ಚ ಪಂಚಮಃ ॥ ೨೩ ॥

ಕ್ರೋಧಾಲ್ಲೋಭಾದ್ಭಯಾದ್ದ್ವೇಷಾದ್ಬ್ರಾಹ್ಮಣಸ್ಯ ವಧೇ ತು ಯಃ ।
ಮರ್ಮಾಂತಿಕಂ ಮಹಾದೋಷಮುಕ್ತ್ವಾ ಸ ಬ್ರಹ್ಮಹಾ ಭವೇತ್ ॥ ೨೪ ॥

ಬ್ರಾಹ್ಮಣಂ ಯಃ ಸಮಾಹೂಯ ದತ್ವಾ ಯಶ್ಚಾದದಾತಿ ಚ ।
ನಿರ್ದೋಷಂ ದೂಷಯೇದ್ಯಸ್ತು ಸ ನರೋ ಬ್ರಹ್ಮಹಾ ಭವೇತ್ ॥ ೨೫ ॥

ಯಶ್ಚ ವಿದ್ಯಾಭಿಮಾನೇನ ನಿಸ್ತೇಜಯತಿ ಸುದ್ವಿಜಂ ।
ಉದಾಸೀನಂ ಸಭಾಮಧ್ಯೇ ಬ್ರಹ್ಮಹಾ ಸ ಪ್ರತೀರ್ತಿತಃ ॥ ೨೬ ॥

---

ಕಳತ್ರರನ್ನು ತಿರಸ್ಕರಿಸಕೂಡದು. ಹಾಗೆ ತಿರಸ್ಕರಿಸಿದರೆ ಅವನು ಮಹಾಪಾತಕಿಯಾಗುವನು. ಎಲೈ ಮುನಿಶ್ರೇಷ್ಠನಾದ ವ್ಯಾಸನೇ, ಇವೆಲ್ಲವೂ ಮಹಾಪಾತಕಗಳು ಎಂದೂ, ಈಶ್ವರನಿಂದೆಗೆ ಸಮಾನವಾದುವುಗಳೆಂದೂ ಶಾಸ್ತ್ರಜ್ಞರು ಹೇಳುವರು.

೨೩. ಬ್ರಾಹ್ಮಣರನ್ನು ಕೊಲ್ಲುವವನೂ, ಮದ್ಯಪಾನಮಾಡುವವನೂ, ಕದಿಯುವವನೂ, ಗುರುಪತ್ನೀಗಮನಮಾಡುವವನೂ, ಈ ನಾಲ್ವರೊಂದಿಗೆ ಸೇರುವವನೂ ಸಹ ಮಹಾಪಾತಕಿಗಳು. ಬ್ರಹ್ಮಹತ್ಯಾದಿ ಮಹಾಪಾತಕಗಳಿಗೆ ಸಮಾನವಾದ ಪಾತಕಗಳನ್ನು ಹೇಳುತ್ತಾನೆ.

೨೪. ಕೋಪದಿಂದಾಗಲೀ, ದ್ರವ್ಯಾದಿಗಳ ಲಾಭದ ಆಶೆಯಿಂದಾಗಲೀ, ಭಯದಿಂದಾಗಲೀ, ದ್ವೇಷದಿಂದಾಗಲೀ ದೋಷಾದಿಗಳನ್ನು ಹೇಳಿ ಬ್ರಾಹ್ಮಣನ ವಧೆಗೆ ಸಹಾಯಕನಾದವನು ಬ್ರಹ್ಮಹತ್ಯೆಯನ್ನು ಮಾಡಿದವನೆಂತಲೇ ಪರಿಗಣಿಸಲ್ಪಡುವನು.

೨೫. ಬ್ರಾಹ್ಮಣನನ್ನು ಕರೆದು ದಾನಮಾಡಿ ಅದನ್ನು ಹಿಂದಕ್ಕೆ ತೆಗೆದುಕೊಳ್ಳುವವನೂ ಎಂದರೆ ದತ್ತಾಪಹಾರಮಾಡುವವನೂ, ದೋಷರಹಿತನಾಧ ಬ್ರಾಹ್ಮಣನನ್ನು ದೂಷಿಸುವವನೂ ಬ್ರಹ್ಮಘ್ನನಿಗೆ ಸಮಾನನಾಗುವನು.

೨೬. ಸಭಾಮಧ್ಯದಲ್ಲಿ ಉದಾಸೀನನಾಗಿ ಕುಳಿತಿರುವ ಶ್ರೇಷ್ಠನಾದ ಬ್ರಾಹ್ಮಣನನ್ನು ವಿದ್ಯಾಮದದಿಂದ ನಿಸ್ತೇಜಸ್ಕನನ್ನಾಗಿ ಮಾಡುವವನು ಎಂದರೆ ಅವಮಾನಪಡಿಸುವವನು ಬ್ರಹ್ಮಘ್ನನಿಗೆ ಸಮಾನನು.

ಮಿಥ್ಯಾಗುಣೈರ್ಯ ಆತ್ಮಾನಂ ನಯುತ್ಯುತ್ಕರ್ಷತಾಂ ಬಲಾತ್ ।
ಗುಣಾನಪಿ ನಿರುದ್ಧಾಸ್ಯ ಸ ಚ ವೈ ಬ್ರಹ್ಮಹಾ ಭವೇತ್ ॥ ೨೭ ॥

ಗವಾಂ ವೃಷಾಭಿಭೂತಾನಾಂ ದ್ವಿಜಾನಾಂ ಗುರುಪೂರ್ವಕಂ ।
ಯಸ್ಸಮಾಚರತೇ ವಿಘ್ನಂ ತಮಾಹುರ್ಬ್ರಹ್ಮಘಾತಕಂ ॥ ೨೮ ॥

ದೇವದ್ವಿಜಗವಾಂ ಭೂಮಿಂ ಪ್ರದತ್ತಾಂ ಹರತೇ ತು ಯಃ ।
ಪ್ರನಷ್ಟಾಮಪಿ ಕಾಲೇನ ತಮಾಹುರ್ಬ್ರಹ್ಮಘಾತಕಂ ॥ ೨೯ ॥

ದೇವದ್ವಿಜಸ್ವಹರಣಮನ್ಯಾಯೇನಾರ್ಜಿತಂ ತು ಯತ್ ।
ಬ್ರಹ್ಮಹತ್ಯಾಸಮಂ ಜ್ಞೇಯಂ ಪಾತಕಂ ನಾತ್ರ ಸಂಶಯಃ ॥ ೩೦ ॥

ಅಧೀತ್ಯ ಯೋ ದ್ವಿಜೋ ವೇದಂ ಬ್ರಹ್ಮಜ್ಞಾನಂ ಶಿವಾತ್ಮಕಂ ।
ಯದಿ ತ್ಯಜತಿ ಯೋ ಮೂಢಃ ಸುರಾಪಾನಸ್ಯ ತತ್ಸಮಂ ॥ ೩೧ ॥

೨೭. ತನ್ನಲ್ಲಿರುವ ದೋಷಗಳನ್ನು ಮುಚ್ಚಿಕೊಂಡು ತನ್ನಲ್ಲಿಲ್ಲದ ಗುಣಗಳನ್ನು ಪ್ರಶಂಸಿಸಿ ಬಲಾತ್ಕಾರದಿಂದ ಉತ್ಕರ್ಷವನ್ನು ಸಂಪಾದಿಸುವವನು ಬ್ರಹ್ಮಘ್ನನಿಗೆ ಸಮಾನನು.

೨೮. ಗೋವುಗಳು ವೃಷಭಸಂಗವನ್ನು ಮಾಡಲು ಅಡಚಣೆ ಮಾಡುವವನೂ, ಬ್ರಾಹ್ಮಣನಿಗೆ ಗುರುಲಾಭವೇ ಮೊದಲಾದ ಲಾಭಕ್ಕೆ ವಿಘ್ನ ಮಾಡುವವನೂ ಬ್ರಹ್ಮಘ್ನನಿಗೆ ಸಮಾನನು.

೨೯. ದೇವತೆಗಳು, ಬ್ರಾಹ್ಮಣರು, ಗೋವುಗಳು ಇವರಿಗೆ ಭೂಮಿಯನ್ನು ದಾನಮಾಡಿ ತಿರುಗಿಯೂ ಅದನ್ನು ಅಪಹರಿಸಿದವನು ಬ್ರಹ್ಮಘ್ನನಿಗೆ ಸಮನಾಗುವನು. ಆ ಭೂಮಿಯು ಕಲಾಂತರದಲ್ಲಿ ನಾಶವಾದರೂ ಅವನ ಪಾಪವು ಮಾತ್ರ ನಾಶವಾಗುವುದಿಲ್ಲ.

೩೦. ದೇವತೆಗಳ ಮತ್ತು ಬ್ರಾಹ್ಮಣರ ಸ್ವತ್ತನ್ನು ಅಪಹರಿಸುವುದು, ಅನ್ಯಾಯದಿಂದ ಸಂಪಾದಿಸುವುದು ಇವು ಬ್ರಹ್ಮಹತ್ಯೆಗೆ ಸಮವಾದ ಪಾತಕಗಳು. ಇದರಲ್ಲಿ ಸಂಶಯವಿಲ್ಲ.

೩೧-೩೨. ವೇದವು ಶಿವಾತ್ಮಕವಾದ ಬ್ರಹ್ಮಜ್ಞಾನವನ್ನು ಬೋಧಿಸತಕ್ಕ ಪವಿತ್ರವಾದ ಗ್ರಂಥವು. ಇಂತಹ ವೇದವನ್ನು ಅಧ್ಯಯನಮಾಡಿ ಮರೆಯಬಾರದು.

ಯತ್ಕಿಂಚಿದ್ಧಿ ವ್ರತಂ ಗೃಹ್ಯ ನಿಯಮಂ ಯಜನಂ ತಥಾ ।
ಸಂತ್ಯಾಗಃ ಪಂಚಯಜ್ಞಾನಾಂ ಸುರಾಪಾನಸ್ಯ ತತ್ಸಮಂ ॥ ೩೨ ॥

ಪಿತೃಮಾತೃಪರಿತ್ಯಾಗಃ ಕೂಟಸಾಕ್ಷ್ಯಂ ದ್ವಿಜಾನೃತಂ ।
ಆಮಿಷಂ ಶಿವಭಕ್ತಾನಾಮಭಕ್ಷ್ಯಸ್ಯ ಚ ಭಕ್ಷಣಂ ॥ ೩೩ ॥

ವನೇ ನಿರಪರಾಧಾನಾಂ ಪ್ರಾಣಿನಾಂ ಚಾಪಘಾತನಂ ।
ದ್ವಿಜಾರ್ಥಂ ಪ್ರಕ್ಷಿಪೇತ್ಸಾಧುರ್ನ ಧರ್ಮಾರ್ಥಂ ನಿಯೋಜಯೇತ್ ॥ ೩೪ ॥

ಗವಾಂ ಮಾರ್ಗೇ ವನೇ ಗ್ರಾಮೇ ಯೈಶ್ಚೈವಾಗ್ನಿಃ ಪ್ರದೀಯತೇ ।
ಇತಿ ಪಾಪಾನಿ ಘೋರಾಣಿ ಬ್ರಹ್ಮಹತ್ಯಾಸಮಾನಿ ಚ ॥ ೩೫ ॥

ದೀನಸರ್ವಸ್ವಹರಣಂ ನರಸ್ತ್ರೀಗಜವಾಜಿನಾಂ ।
ಗೋಭೂರಜತವಸ್ತ್ರಾಣಾಮೌಷಧೀನಾಂ ರಸಸ್ಯ ಚ ॥ ೩೬ ॥

ಬುದ್ಧಿಗೆಟ್ಟು ಮರೆತರೆ ಮದ್ಯಪಾನಕ್ಕೆ ಸಮಾನವಾದ ಪಾಪವು ಬರುವುದು. ಬ್ರಹ್ಮಯಜ್ಞ. ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞವೆಂಬ ಐದು ಯಜ್ಞಗಳು ನಿತ್ಯವೂ ಅನುಷ್ಠಿಸತಕ್ಕ ಶ್ರೇಷ್ಠವಾದ ಕರ್ಮಗಳು. ಇವುಗಳನ್ನು ಸಕಾಲದಲ್ಲಿ ಅನುಷ್ಠಿಸುತ್ತ ಬಾಕಿಯ ಸಮಯದಲ್ಲಿ ಇವನಿಗೆ ಇಷ್ಟಬಂದ ವ್ರತಗಳನ್ನು ಅನುಷ್ಠಿಸಬಹುದು. ಹಾಗಿಲ್ಲದೆ ವ್ರತ, ನಿಯಮ, ಯಜನ ಇವುಗಳನ್ನು ಮಾತ್ರ ಪರಿಗ್ರಹಿಸಿ ಪಂಚಮಹಾಯಜ್ಞಗಳನ್ನು ಬಿಟ್ಟರೆ ಮದ್ಯಪಾನಮಾಡಿದಂತಾಗುವುದು.

೩೩-೩೫. ತಂದೆತಾಯಿಗಳನ್ನು ಬಿಟ್ಟುಬಿಡುವುದು, ಸುಳ್ಳು ಸಾಕ್ಷಿಯನ್ನು ಹೇಳುವುದು, ಶಿವಭಕ್ತರಾದ ಬ್ರಾಹ್ಮಣರಲ್ಲಿ ಸುಳ್ಳು ಹೇಳುವುದು, ಕಾಡಿನಲ್ಲಿ ಸಂಚರಿಸತಕ್ಕ ನಿರಪರಾಧಿಗಳಾದ ಪ್ರಾಣಿಗಳಿಗೆ ಹಿಂಸೆಯನ್ನು ಮಾಡುವುದು, ಸಾಧುವಾದ ಮನುಷ್ಯನಿಗೆ ಧರ್ಮಾನುಷ್ಠಾನಕ್ಕೆ ಅವಕಾಶವನ್ನು ಕೊಡದೇ ಇರುವುದು, ಪಶುಗಳು ಸಂಚರಿಸತಕ್ಕ ದಾರಿಯಲ್ಲೂ, ಕಾಡುಗಳಲ್ಲಿಯೂ, ಗ್ರಾಮಗಳಲ್ಲಿಯೂ, ಬೆಂಕಿಹಾಕುವುದು ಇವು ಮಹಾ ಘೋರವಾದ ಪಾತಕಗಳು. ಬ್ರಹ್ಮಹತ್ಯೆಗೆ ಸಮಾನವಾದುವುಗಳು.

೩೬-೩೭. ದೀನರಾದವರ ಸರ್ವಸ್ವವನ್ನೂ ಅಪಹರಿಸುವುದು, ಮತ್ತು ಪುರುಷರು, ಹೆಂಗಸರು, ಆನೆ, ಕುದುರೆ, ಪಶು, ಭೂಮಿ, ಬೆಳ್ಳಿ, ಬಟ್ಟೆ, ಔಷಧಿಗಳು, ರಸಗಳು, ಚಂದನ ಅಗರು, ಕಸ್ತೂರಿ, ಕರ್ಪೂರ, ರೇಷ್ಮೆ ಬಟ್ಟೆ ಇವುಗಳನ್ನು ತನಗೆ ಯಾವ

**ಚಂದನಾಗರುಕರ್ಪೂರಕಸ್ತೂರೀಪಟ್ಟವಾಸಸಾಂ ।**
**ವಿಕ್ರಯಸ್ತ್ವವಿಪತ್ತೌ ಯಃ ಕುತೋಽ ಜ್ಞಾನಾದ್ದ್ವಿಜಾತಿಭಿಃ　　॥ ೩೭ ॥**

**ಹಸ್ತನ್ಯಾಸಾಪಹರಣಂ ರುಕ್ಮಸ್ತೇಯಸಮಂ ಸ್ಮೃತಂ ।**
**ಕನ್ಯಾನಾಂ ವರಯೋಗ್ಯಾನಾಮದಾನಂ ಸದೃಶೇ ವರೇ　　॥ ೩೮ ॥**

**ಪುತ್ರಮಿತ್ರಕಲತ್ರೇಷು ಗಮನಂ ಭಗಿನೀಷು ಚ ।**
**ಕುಮಾರೀಸಾಹಸಂ ಘೋರಮದ್ಯಪಸ್ತ್ರೀನಿಷೇವಣಂ　　॥ ೩೯ ॥**

**ಸವರ್ಣಾಯಾಶ್ಚ ಗಮನಂ ಗುರುಭಾರ್ಯಾಸಮಂ ಸ್ಮೃತಂ ।**
**ಮಹಾಪಾಪಾನಿ ಚೋಕ್ತಾನಿ ಶೃಣು ತ್ವಮುಪಪಾತಕಂ　　॥ ೪೦ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ**
**ಮಹಾಪಾತಕವರ್ಣನಂ ನಾಮ ಪಂಚಮೋಽಧ್ಯಾಯಃ**

ವಿಧವಾದ ಆಪತ್ತಿಲ್ಲದಿದ್ದಾಗ್ಯೂ ಮಾರುವುದು, ತನ್ನಲ್ಲಿ ನ್ಯಾಸರೂಪವಾಗಿ (ಗಿರವಿ) ಇಟ್ಟದ್ದನ್ನು ಹಿಂತಿರುಗಿ ಕೊಡದೆ ಅಪಹರಿಸುವುದು ಇವು ಸ್ವರ್ಣಸ್ತೇಯಕ್ಕೆ ಸಮಾನವಾದ ಮಹಾಪಾತಕಗಳು.

೩೮-೩೯. ಮದುವೆಮಾಡಲು ಪ್ರಾಪ್ತವಯಸ್ಕರಾದ ಕನ್ನಿಕೆಯರನ್ನು ಅನುರೂಪನಾದ ವರನಿಗೆ ಕೊಡದೇ ಇರುವುದು, ತಮ್ಮ ಮಕ್ಕಳ ಪತ್ನಿಯರನ್ನೂ ಸ್ನೇಹಿತರ ಪತ್ನಿಯರನ್ನೂ ಸಹೋದರಿಯರನ್ನೂ ಅನುಭವಿಸುವುದು, ಪುಷ್ಪವತಿಯಾಗದಿರುವ ಕನ್ಯೆಯರಲ್ಲಿ ಸಂಭೋಗಮಾಡುವುದಕ್ಕೆ ಸಾಹಸಪಡುವುದು, ಮದ್ಯಪಾನಮಾಡುವವನ ಸ್ತ್ರೀಯನ್ನು ಅನುಭವಿಸುವುದು, ಸಗೋತ್ರಳಾದ ಸ್ತ್ರೀಯನ್ನು ಅನುಭವಿಸುವುದು, ಇವೆಲ್ಲವೂ ಗುರುಭಾರ್ಯಾಗಮನಕ್ಕೆ ಸಮಾನವಾದ ಪಾಪಗಳು.

೪೦. ಎಲೈ ವ್ಯಾಸನೇ, ಈರೀತಿಯಾಗಿ ನಿನಗೆ ಮಹಾ ಪಾತಕಗಳನ್ನು ವಿವರಿಸಿ ಹೇಳಿರುವೆನು. ಇನ್ನು ಉಪಪಾತಕವನ್ನು ಹೇಳುವೆನು ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಮಹಾಪಾತಕಗಳ ವರ್ಣನವೆಂಬ ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಷಷ್ಠೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ದ್ವಿಜದ್ರವ್ಯಾಪಹರಣಮಪಿ ದಾಯವ್ಯತಿಕ್ರಮಃ ।
ಅತಿಮಾನೋಽತಿಕೋಪಶ್ಚ ದಾಂಭಿಕತ್ವಂ ಕೃತಘ್ನತಾ ॥ ೧ ॥

ಅತ್ಯಂತವಿಷಯಾಸಕ್ತಿಃ ಕಾರ್ಪಣ್ಯಂ ಸಾಧುಮತ್ಸರಂ ।
ಪರದಾರಾಭಿಗಮನಂ ಸಾಧುಕನ್ಯಾಸುದೂಷಣಂ ॥ ೨ ॥

---

## ಆರನೆಯ ಅಧ್ಯಾಯವು

೧-೨. ಸನತ್ಕುಮಾರನಿಂತೆಂದನು :—ಬ್ರಾಹ್ಮಣನ ದ್ರವ್ಯವನ್ನು ಅಪಹರಿಸುವವನು, ಉಪಪಾತಕಿ ಎನಿಸಿಕೊಳ್ಳುವನು. ಪಿತ್ರಾರ್ಜಿತವಾದ ಸ್ವತ್ತನ್ನು ಶಾಸ್ತ್ರಸಮ್ಮತವಾದ ರೀತಿಯಲ್ಲಿ ಭಾಗಮಾಡಿಕೊಳ್ಳದೇ ವ್ಯತ್ಯಾಸಮಾಡಿದರೆ ಅವನು ಉಪಪಾತಕಿಯಾಗುವನು. ಹೆಚ್ಚಾಗಿ ಗರ್ವಪಡುವವನೂ, ಹೆಚ್ಚು ಕೋಪಮಾಡುವವನೂ, ಡಂಭವನ್ನು ತೋರಿಸುವವನೂ, ಕೃತಘ್ನನೂ, ಸಹ ಉಪಪಾತಕಿಯಾಗುವನು. ಶಬ್ದಾದಿವಿಷಯಗಳಲ್ಲಿ ಅಧಿಕವಾಗಿ ಆಸಕ್ತನಾಗುವವನೂ, ಕೃಪಣನೂ, ಸತ್ಪುರುಷರಲ್ಲಿ ಮತ್ಸರ ತೋರುವವನೂ, ಪರಸ್ತ್ರೀಯರ ಸಂಗಮಾಡುವವನೂ, ಯೋಗ್ಯರಾದ ಕನ್ನಿಕೆಯರನ್ನು ಕೆಡಿಸುವವನೂ ಸಹ ಮಹಾ ಪಾತಕಿಯಾಗುವನು.

**ಪರಿವಿತ್ತಿಃ ಪರಿವೇತ್ತಾ ಚ ಯಯಾ ಚ ಪರಿವಿದ್ಯತೇ ।**
**ತಯೋರ್ದಾನಂ ಚ ಕನ್ಯಾಯಾಸ್ತಯೋರೇವ ಚ ಯಾಜನಂ		॥ ೩ ॥**

**ಶಿವಾಶ್ರಮತರೂಣಾಂ ಚ ಪುಷ್ಪಾರಾಮವಿನಾಶನಂ ।**
**ಯಃ ಪೀಡಾಮಾಶ್ರಮಸ್ಥಾನಾಮಾಚರೇದಲ್ಪಿಕಾಮಪಿ		॥ ೪ ॥**

**ಸಭೃತ್ಯಪರಿವಾರಸ್ಯ ಪಶುಧಾನ್ಯಧನಸ್ಯ ಚ ।**
**ಕುಪ್ಯಧಾನ್ಯಪಶುಸ್ತೇಯಮಪಾಂ ವ್ಯಾಪಾವನಂ ತಥಾ		॥ ೫ ॥**

**ಯಜ್ಞಾರಾಮತಡಾಗಾನಾಂ ದಾರಾಪತ್ಯಸ್ಯ ವಿಕ್ರಯಂ ।**
**ತೀರ್ಥಯಾತ್ರೋಪವಾಸಾನಾಂ ವ್ರತೋಪನಯಕರ್ಮಣಾಂ		॥ ೬ ॥**

೩. ಶ್ಲೋ ॥ ದಾರಾಗ್ನಿಹೋತ್ರ ಸಂಯೋಗಂ ಕುರುತೇಯೋಗ್ರಜೇ ಸ್ಥಿತೇ । ಪರಿವೇತ್ತಾಸವಿಜ್ಞೇಯಃ ಪರಿವಿತ್ತಿಸ್ತುಪೂರ್ವಜಃ ॥ ಎಂಬ ಮನುವಚನದಂತೆ ಅಣ್ಣ ಮದುವೆಮಾಡಿಕೊಳ್ಳದೇ ಇರುವಾಗ ತಮ್ಮನು ಮದುವೆಮಾಡಿಕೊಂಡರೆ ತಮ್ಮನು 'ಪರಿವೇತ್ತಾ' ಎಂದೂ, ಅಣ್ಣನು 'ಪರಿವಿತ್ತಿ' ಎಂದೂ ಕರೆಯಲ್ಪಡುತ್ತಾರೆ. ಇವರೀರ್ವರೂ ಉಪಪಾತಕಿಗಳು, ಇವರಿಗೆ ಕನ್ಯಾದಾನ ಮಾಡುವವನೂ, ಇವರಿಂದ ಯಾಗವನ್ನು ಮಾಡಿಸುವವನೂ ಸಹ ಉಪಪಾತಕಿಯಾಗುವನು.

೪-೫. ಶಿವಾಶ್ರಮದಲ್ಲಿರುದ ಮರಗಳನ್ನು ನಾಶಮಾಡುವವನೂ, ತೋಟಗಳನ್ನು ನಾಶಮಾಡುವವನೂ ಮತ್ತು ಶಿವಾಶ್ರಮದಲ್ಲಿರುವವರಿಗೆ ಎಳ್ಳಷ್ಟು ಪೀಡೆಮಾಡುವವನೂ ಉಪಪಾತಕಿಯಾಗುವನು. ಈಶ್ವರಭಕ್ತನ ಪರಿವಾರಕ್ಕೂ, ಧಾನ್ಯ ಧನ ಪಶು ಇವುಗಳಿಗೂ ಸಹ ಯಾವ ವಿಧವಾದ ಅತ್ಯಲ್ಪ ತೊಂದರೆಮಾಡುವವನೂ ಉಪಪಾತಕಿಯಾಗುವನು. ತಾಮ್ರವೇ ಮೊದಲಾದ ಲೋಹ, ಧಾನ್ಯ ಮತ್ತು ಪಶು ಇವುಗಳನ್ನು ಕದಿಯುವವನೂ, ನೀರನ್ನು ಕೆಡಿಸುವವನೂ ಸಹ ಉಪಪಾತಕಿಯಾಗುವನು.

೬-೭. ಯಜ್ಞ, ಉದ್ಯಾನವನ, ಕೆರೆ ಇವುಗಳನ್ನು ಹಾಳುಮಾಡುವುದು, ಹೆಂಡತಿ ಮತ್ತು ಮಕ್ಕಳನ್ನು ಮಾರುವುದು, ತೀರ್ಥಯಾತ್ರೆ, ವ್ರತ, ಉಪವಾಸ ಇವೇ ಮೊದಲಾದ ಒಳ್ಳೆಯ ಕಾರ್ಯಗಳನ್ನು ಮಾಡುವವರಿಗೆ ತೊಂದರೆಯನ್ನು ಕೊಡುವುದು, ಹೆಂಗಸರ ದುಡ್ಡಿನಿಂದಲೇ ಜೀವನವನ್ನು ಮಾಡುವುದು, ಹೆಂಗಸರ ಅಧೀನ

ಸ್ತ್ರೀಧನಾನ್ಯುಪಜೀವಂತಿ ಸ್ತ್ರೀಭಿರತ್ಯಂತನಿರ್ಜಿತಾಃ ।
ಅರಕ್ಷಣಂ ಚ ನಾರೀಣಾಂ ಮಾಯಯಾ ಸ್ತ್ರೀನಿಷೇವಣಂ ॥ ೭ ॥

ಕಾಲಾಗತಾಪ್ರದಾನಂ ಚ ಧಾನ್ಯವೃಷ್ಟ್ಯುಪಸೇವನಂ ।
ನಿಂದಿತಾಚ್ಚ ಧನಾದಾನಂ ಪಣ್ಯಾನಾಂ ಕೂಟಜೀವನಂ ॥ ೮ ॥

ವಿಷಮಾರಣ್ಯಪತ್ರಾಣಾಂ ಸತತಂ ವೃಷವಾಹನಂ ।
ಉಚ್ಚಾಟನಾಭಿಚಾರಂ ಚ ಧಾನ್ಯಾದಾನಂ ಭಿಷಕ್ಕ್ರಿಯಾ ॥ ೯ ॥

ಜಿಹ್ವಾಕಾಮೋಪಭೋಗಾರ್ಥಂ ಯಸ್ಯಾರಂಭಃ ಸುಕರ್ಮಸು ।
ಮೂಲೇನಾಧ್ಯಾಪಕೋ ನಿತ್ಯಂ ವೇದಜ್ಞಾನಾದಿಕಂ ಚ ಯತ್ ॥ ೧೦ ॥

ಬ್ರಾಹ್ಮ್ಯಾದಿವ್ರತಸಂತ್ಯಾಗಶ್ಚಾನ್ಯಾಚಾರನಿಷೇವಣಂ ।
ಅಸಚ್ಛಾಸ್ತ್ರಾಧಿಗಮನಂ ಶುಷ್ಕತರ್ಕಾವಲಂಬನಂ ॥ ೧೧ ॥

ದಲ್ಲಿದ್ದು ಅವರು ಹೇಳಿದಂತೆ ನಡೆಯುವುದು, ಹೆಂಗಸರನ್ನು ಸರಿಯಾಗಿ ಕಾಪಾಡದೆ ಇರುವುದು, ಮೋಸದಿಂದ ಸ್ತ್ರೀಸುಖವನ್ನು ಅನುಭವಿಸುವುದು, ಆಯಾಯ ಕಾಲದಲ್ಲಿ ಹೇಳಿರುವ ದಾನಧರ್ಮಾದಿಗಳನ್ನು ಮಾಡದೇ ಇರುವುದು, ಧಾನ್ಯವನ್ನು ಬೆಳೆಯುವುದಕ್ಕಾಗಿ ಉಪಯೋಗಿಸುವ ನೀರನ್ನು ಕೆಡಿಸುವುದು ಇವೆಲ್ಲವೂ ಉಪಪಾತಕಗಳು.

೮-೧೦. ಲೋಕದಲ್ಲಿ ನಿಂದೆಗೆ ಗುರಿಯಾದವನಿಂದ ದುಡ್ಡನ್ನು ತೆಗೆದುಕೊಳ್ಳುವುದು, ವ್ಯಾಪಾರಾದಿಗಳಲ್ಲಿ ಮೋಸದಿಂದ ಮಾರಿ ಜೀವಿಸುವುದು, ಸರಿಯಾದ ದಾರಿಯಲ್ಲದೆ ಹಳ್ಳಕೊಳ್ಳಗಳಿಂದ ಕೂಡಿದ ಕಷ್ಟವಾದ ದಾರಿಯಲ್ಲಿ ಭಾರವಾದ ಸಾಮಾನುಗಳನ್ನು ಎತ್ತಿನಮೇಲೆ ಹೇರಿ ತರುವುದು, ಉಚ್ಚಾಟನೆ, ಮಾರಣ, ಮಾಟ, ಕೂಟ ಮುಂತಾದ ಕೆಟ್ಟ ಕೆಲಸಗಳನ್ನು ಮಾಡುವುದು. ತಿನ್ನುವ ಧಾನ್ಯವನ್ನು ಮೋಸಮಾಡಿ ತೆಗೆದುಕೊಳ್ಳುವುದು, ವೈದ್ಯವೃತ್ತಿ, ತನ್ನ ಭೋಗಕ್ಕಾಗಿ ನಟನೆಯಿಂದ ಸತ್ಕರ್ಮಗಳನ್ನು ಆರಂಭಿಸುವುದು, ವೇದಶಾಸ್ತ್ರಾದಿಗಳನ್ನು ಇತರರಿಗೆ ಹೇಳಿಕೊಟ್ಟು ಅದಕ್ಕಾಗಿ ದ್ರವ್ಯವನ್ನು ಸ್ವೀಕರಿಸುವುದು, ವೇದ, ಜ್ಞಾನ ಇವುಗಳನ್ನು ಮಾರುವುದು ಇವುಗಳು ಉಪಪಾತಕಗಳು.

೧೧-೧೨, ಬ್ರಾಹ್ಮಣನು ತನ್ನ ವ್ರತವನ್ನು ಬಿಡುವುದು, ಇನ್ನೊಬ್ಬನ ಆಚಾರವನ್ನು ಅನುಸರಿಸುವುದು, ಕೆಡುಕನ್ನು ಉಂಟುಮಾಡುವ ಶಾಸ್ತ್ರವನ್ನು ಕಲಿಯು

ದೇವಾಗ್ನಿಗುರುಸಾಧೂನಾಂ ನಿಂದಯಾ ಬ್ರಾಹ್ಮಣಸ್ಯ ಚ ।
ಪ್ರತ್ಯಕ್ಷಂ ವಾ ಪರೋಕ್ಷಂ ವಾ ರಾಜ್ಞಾಂ ಮಂಡಲಿನಾಮಪಿ ॥ ೧೨ ॥

ಉತ್ಸನ್ನಪಿತೃದೇವೇಜ್ಯಾಃ ಸ್ವಕರ್ಮತ್ಯಾಗಿನಶ್ಚ ಯೇ ।
ದುಶ್ಶೀಲಾ ನಾಸ್ತಿಕಾಃ ಪಾಪಾಸ್ಸದಾ ಹ್ಯಸತ್ಯವಾದಿನಃ ॥ ೧೩ ॥

ಪರ್ವಕಾಲೇ ದಿವಾ ಹ್ಯಪ್ಸು ವಿಯೋನೌ ಪಶುಯೋನಿಷು ।
ರಜಸ್ವಲಾಯಾ ಯೋನೌ ಚ ಮೈಥುನಂ ಯಃ ಸಮಾಚರೇತ್ ॥ ೧೪ ॥

ಸ್ತ್ರೀಪುತ್ರಮಿತ್ರಸಂಪ್ರಾಪ್ತೇ ಆಶಾಚ್ಛೇದಕರಾಶ್ಚ ಯೇ ।
ಜನಸ್ಯಾಪ್ರಿಯವಕ್ತಾರಃ ಕ್ರೂರಾಸಮಯವೇದಿನಃ ॥ ೧೫ ॥

ಭೇತ್ತಾ ತಡಾಗಕೂಪಾನಾಂ ಸಂಕ್ರಯಾಣಾಂ ರಸಸ್ಯ ಚ ।
ಏಕಪಂಕ್ತಿಸ್ಥಿತಾನಾಂ ಚ ಪಾಕಭೇದಂ ಕರೋತಿ ಯಃ ೧೬ ॥

ವುದು, ಕೆಲಸಕ್ಕೆ ಬಾರದ ತರ್ಕಶಾಸ್ತ್ರದಲ್ಲಿ ಯಾವಾಗಲೂ ಕಾಲಕಳೆಯುವುದು, ದೇವತೆಗಳು, ಅಗ್ನಿ ಗುರು, ಸತ್ಪುರುಷರು ಇವರುಗಳ ಮತ್ತು ಬ್ರಾಹ್ಮಣರ ನಿಂದೆ ಮಾಡುವುದು, ಪ್ರತ್ಯಕ್ಷವಾಗಿಯಾಗಲಿ, ಹಿಂದುಗಡೆಯಲ್ಲಿಯಾಗಲಿ ರಾಜರ ಅಥವಾ ಐಶ್ವರ್ಯವಂತರ ನಿಂದೆಮಾಡುವುದು, ಇವುಗಳು ಉಪಪಾತಕಗಳು,

೧೩-೧೪. ದೇವಪಿತೃಗಳನ್ನು ಆಯಾಕಾಲದಲ್ಲಿ ಪೂಜಿಸದವರು, ತಮ್ಮ ತಮ್ಮ ಕರ್ಮಗಳನ್ನು ತ್ಯಾಗಮಾಡುವವರು, ಕೆಟ್ಟ ಸ್ವಭಾವದವರು, ನಾಸ್ತಿಕರು, ಪಾಪಕೆಲಸ ಮಾಡುವವರು, ಯಾವಾಗಲೂ ಸುಳ್ಳು ಹೇಳುವವರು, ಪರ್ವಕಾಲದಲ್ಲಿ, ಹಗಲು ಹೊತ್ತಿನಲ್ಲಿ, ನೀರಿನಲ್ಲಿ, ಪಶುಪಕ್ಷಿಯೋನಿಗಳಲ್ಲಿ, ಯೋನಿಯಲ್ಲದಿರುವ ಕಡೆಯಲ್ಲಿ, ಮುಟ್ಟಾದವಳಲ್ಲಿ ಭೋಗಪಡುವವರು ಇವರೆಲ್ಲರೂ ಉಪಪಾತಕಿಗಳಾಗುವರು.

೧೫-೧೬. ಸ್ತ್ರೀ, ಪುತ್ರ, ಸ್ನೇಹಿತ ಇವರುಗಳಿಗೆ ನಂಬಿಕೆಯಿಂದ ಆಸೆಯನ್ನು ಹುಟ್ಟಿಸಿ ಅದನ್ನು ಹಾಳುಮಾಡುವವರು, ಜನರಿಗೆ ಕೆಟ್ಟ ಮಾತನ್ನಾಡುವವರು, ಸರಿಯಲ್ಲದ ಕಾಲವನ್ನು ಕಾದು ಕೆಲಸಮಾಡುವವರು, ಕೆರೆ, ಕೊಳ ಇವುಗಳನ್ನು ಒಡೆದುಹಾಕುವವರು, ಉಪ್ಪು, ಎಣ್ಣೆ ಮುಂತಾದ ರಸದ್ರವ್ಯಗಳನ್ನು ಮಾರುವವರು, ಪಂಕ್ತಿಭೇದವನ್ನು ಮಾಡುವವರು, ಇವರು ಉಪಪಾತಕಗಳನ್ನು ಮಾಡುವವರಾಗುತ್ತಾರೆ. ಈ ಕೆಲಸಗಳನ್ನು ಮಾಡುವ ಹೆಂಗಸಾದರೂ, ಗಂಡಸಾದರೂ

ಇತ್ಯತಃ ಸ್ತ್ರೀನರಾಃ ಪಾಪೈರುಪಪಾತಕಿನಃ ಸ್ಮೃತಾಃ ।
ಯುಕ್ತಾ ಏಭಿಸ್ತಥಾನ್ಯೇಽಪಿ ಶೃಣು ತಾಂಸ್ತು ಬ್ರವೀಮಿ ತೇ ॥ ೧೭ ॥

ಯೇ ಗೋಬ್ರಾಹ್ಮಣಕನ್ಯಾನಾಂ ಸ್ವಾಮಿಮಿತ್ರತಪಸ್ವಿನಾಂ ।
ವಿನಾಶಯಂತಿ ಕಾರ್ಯಾಣಿ ತೇ ನರಾ ನಾರಕಾಃ ಸ್ಮೃತಾಃ ॥ ೧೮ ॥

ಪರಸ್ತ್ರಿಯಾಭಿತಪ್ಯಂತೇ ಯೇ ಪರದ್ರವ್ಯಸೂಚಕಾಃ ।
ಪರದ್ರವ್ಯಹರಾ ನಿತ್ಯಂ ತೌಲಮಿಥ್ಯಾನುಸಾರಕಾಃ ॥ ೧೯ ॥

ದ್ವಿಜದುಃಖಕರಾ ಯೇ ಚ ಪ್ರಹಾರಂ ಚೋದ್ಧರಂತಿ ಯೇ ।
ಸೇವಂತೇ ತು ದ್ವಿಜಾಶೂದ್ರಾಂ ಸುರಾಂ ಬಧ್ನಂತಿ ಕಾಮತಃ ॥ ೨೦ ॥

ಯೇ ಪಾಪನಿರತಾಃ ಕ್ರೂರಾ ಯೇಽಪಿ ಹಿಂಸಾಪ್ರಿಯಾ ನರಾಃ ।
ವೃತ್ತ್ಯರ್ಥಂ ಯೇಽಪಿ ಕುರ್ವಂತಿ ದಾನಯಜ್ಞಾದಿಕಾಃ ಕ್ರಿಯಾಃ ॥ ೨೧ ॥

ಪಾಪಸಂಬಂಧವುಂಟಾಗುವ ಕಾರಣ ಅವರು ಉಪಪಾತಕಿಗಳೆಂದು ಹೇಳಲ್ಪಡುವರು. ಈ ಕೆಲಸಗಳಂತೆಯೇ ಇನ್ನೂ ಬೇರೆಯ ವಿಧವಾದ ಪಾತಕಗಳನ್ನುಂಟುಮಾಡುವ ಕೆಟ್ಟ ಕೆಲಸಗಳನ್ನು ಹೇಳುವೆನು ಕೇಳು.

೧೮-೨೦. ಗೋವು, ಬ್ರಾಹ್ಮಣ, ಕನ್ಯಾ, ತನ್ನ ಯಜಮಾನ, ಸ್ನೇಹಿತ, ತಪಸ್ಸನ್ನು ಮಾಡುವವನು, ಇವರ ಕೆಲಸಗಳನ್ನು ಹಾಳುಮಾಡುವವರು ನರಕಕ್ಕೆ ಹೋಗುವರು. ಇತರರ ಸ್ತ್ರೀಯರಲ್ಲಿ ಅಭಿಲಾಷೆಯಿಂದ ಹೆಚ್ಚಾದ ಕಾಮವಿಕಾರದ ಕೆಲಸಮಾಡುವವರು, ಇತರರ ದ್ರವ್ಯದಲ್ಲಿ ಆಸೆಮಾಡುವವರು, ನಿತ್ಯವೂ ಇನ್ನೊಬ್ಬರ ದುಡ್ಡನ್ನು ಕದಿಯುವವರು, ತೂಕಮಾಡುವ ತಕ್ಕಡಿಯಲ್ಲಿ ಮೋಸಮಾಡಿ ಜೀವಿಸುವವರು, ದ್ವಿಜರಿಗೆ ತೊಂದರೆಯನ್ನು ಉಂಟುಮಾಡುವವರು, ಇನ್ನೊಬ್ಬರಿಗೆ ಚಾಡಿ ಹೇಳಿ ಏಟನ್ನು ಹೊಡಿಸುವವರು, ಶೂದ್ರಜಾತಿಯ ಹೆಂಗಸನ್ನು ಸೇವೆಮಾಡುವವರು, ಇಚ್ಛಾಪೂರ್ವಕವಾಗಿ ಮದ್ಯವನ್ನು ಸಿದ್ಧಮಾಡುವವರು, ಪಾಪಕೆಲಸಗಳನ್ನು ಮಾಡುತ್ತಾ ಕ್ರೂರರಾಗಿರುವವರು, ಇನ್ನೊಬ್ಬರಿಗೆ ಹಿಂಸೆಯನ್ನುಂಟುಮಾಡುವ ಸ್ವಭಾವದಿಂದ ಕ್ರೂರರಾಗಿರುವವರು ಇವರೆಲ್ಲರೂ ನರಕವನ್ನು ಹೊಂದುವರು.

೨೧-೨೪. ತನ್ನ ಜೀವನವನ್ನು ನಡೆಸುವುದಕ್ಕಾಗಿ ದಾನ, ಯಜ್ಞ ಇವೇ ಮೊದಲಾದ ಕೆಲಸಗಳನ್ನು ಮಾಡುವವರು, ದನಗಳು ವಾಸಮಾಡುವ ಪ್ರದೇಶ,

**ಗೋಷ್ಠಾಗ್ನಿ ಜಲರಥ್ಯಾಸು ತರುಚ್ಛಾಯಾನಗೇಷು ಚ ।**
**ತ್ಯಜಂತಿ ಯೇ ಪುರೀಷಾದ್ಯಾನ್ನಾರಾಮಾಯತನೇಷು ಚ ॥ ೨೨ ॥**

**ಲಜ್ಜಾಶ್ರಮಪ್ರಸಾದೇಷು ಮದ್ಯಪಾನರತಾಶ್ಚ ಯೇ ।**
**ಕೃತಕೇಲಿಭುಜಂಗಾಶ್ಚ ರಂಧ್ರಾನ್ವೇಷಣತತ್ಪರಾಃ ॥ ೨೩ ॥**

**ವಂಶೇಷ್ಟಕಾಲಿಕಾಕಾಷ್ಠೈಃ ಶೃಂಗೈಶ್ಶಂಕುಭಿರೇವ ಚ ।**
**ಯೇ ಮಾರ್ಗಮನುರುಂಧಂತಿ ಪರಸೀಮಾಂ ಹರಂತಿ ಚ ॥ ೨೪ ॥**

**ಕೂಟಶಾಸನಕರ್ತಾರಃ ಕೂಟಕರ್ಮಕ್ರಿಯಾರತಾಃ ।**
**ಕೂಟಸಾಕಾನ್ನವಸ್ತ್ರಾಣಾಂ ಕೂಟಸಂವ್ಯವಹಾರಿಣಃ ॥ ೨೫ ॥**

ಅಗ್ನಿಯನ್ನು ಇಡುವ ಸ್ಥಾನ, ನೀರಿರುವ ಜಾಗ, ಎಲ್ಲರೂ ತಿರುಗಾಡುವ ರಸ್ತೆ, ಮನೋಹರವಾದ ಇಂಪಾದ ಮರದ ನೆರಳು, ಸುಂದರವಾದ ಉದ್ಯಾನವನ, ಚೆನ್ನಾಗಿರುವ ಉಪ್ಪರಿಗೆ ಮನೆ, ಇವುಗಳ ಮಧ್ಯದಲ್ಲಿಯಾಗಲಿ ಇವುಗಳಲ್ಲಿಯಾಗಲಿ ಮಲಮೂತ್ರಗಳನ್ನು ವಿಸರ್ಜಿಸುವವರೂ, ಲಜ್ಜೆ, ಆಯಾಸ, ಸಂತೋಷಗಳೂ ಉಂಟಾಗುವ ಸಮಯಗಳಲ್ಲಿ ಮದ್ಯಪಾನಮಾಡುವ ಆಸಕ್ತಿಯುಳ್ಳವರು, ವಿನೋದಕ್ಕಾಗಿ ಹಾವನ್ನು ಆಡಿಸುವವರು, ಇನ್ನೊಬ್ಬರ ಹುಳುಕನ್ನು ಹುಡುಕುವುದರಲ್ಲಿ ಆಸಕ್ತಿಯುಳ್ಳವರು ಎಲ್ಲರೂ ಸಂಚರಿಸುವ ರಸ್ತೆಗಳಲ್ಲಿ ಬಿದಿರಿನ ಗೂಟಗಳನ್ನು ನೆಡುವುದು, ಇಟ್ಟಿಗೆ ಚೂರನ್ನು ಹರಡುವುದು, ಇಜ್ಜಲುಮಸಿಯನ್ನು ಹಾಕುವುದು, ಮುಳ್ಳು, ಕೊಂಬು, ಕಬ್ಬಿಣದ ಮೊನೆಚಾದ ಚೂರು ಇವುಗಳಿಂದ ಇತರರಿಗೆ ತೊಂದರೆಯನ್ನುಂಟುಮಾಡುವವರು, ಇನ್ನೊಬ್ಬರ ಗೃಹಕ್ಷೇತ್ರಾರಾಮಾದಿಗಳ ಎಲ್ಲೆಯನ್ನು ಒತ್ತರಿಸಿ ಆಕ್ರಮಿಸಿಕೊಳ್ಳುವವರು ಇವರೆಲ್ಲರೂ ನರಕಕ್ಕೆ ಹೋಗುವರು.

೨೫-೨೬. ಕೆಟ್ಟಕೆಲಸವಮಾಡುವಂತೆ ಅಪ್ಪಣೆಮಾಡುವವರು, ತಾವೂ ಕೆಟ್ಟ ಕೆಲಸಗಳನ್ನು ಮಾಡುವವರು, ಇನ್ನೊಬ್ಬರಿಗೆ ಹಿಂಸೆಯಾಗುವ ಹಾಗೆ ಮೋಸದಿಂದ ತಿನ್ನುವ ಪದಾರ್ಥಗಳನ್ನೂ, ಹೊದೆಯುವ ಬಟ್ಟೆಯನ್ನೂ ಕೊಟ್ಟು ಮೋಸದಿಂದ ವ್ಯವಹಾರವನ್ನು ಮಾಡುವವರು, ಧನಸ್ಸು, ಶಸ್ತ್ರ, ಕಬ್ಬಿಣದ ಮುಳ್ಳುಗಳು ಇವುಗಳನ್ನು ಮಾಡುವವರು, ಇವುಗಳನ್ನು ಮಾರಾಟಮಾಡುವವರು, ತನ್ನ ಸೇವಕರಲ್ಲಿ ಕೊಂಚವೂ ದಯೆಯಿಲ್ಲದವರು, ಮೂಗುಪ್ರಾಣಿಗಳನ್ನು ಬಲವಂತದಿಂದ ಹತೋಟಿಯಲ್ಲಿಡುವವರು, ರಹಸ್ಯವಾಗಿ ಮೆಲ್ಲಗೆ ಆಡುತ್ತಿರುವ ಮಾತುಗಳನ್ನು ಹೊಂಚು

ಧನುಷಃ ಶಸ್ತ್ರಶಲ್ಯಾನಾಂ ಕರ್ತಾ ಯಃ ಕ್ರಯವಿಕ್ರಯೀ ।
ನಿರ್ದಯೋಽತೀವ ಭೃತ್ಯೇಷು ಪಶೂನಾಂ ದಮನಶ್ಚ ಯಃ ॥ ೨೬ ॥

ಮಿಥ್ಯಾ ಪ್ರವದತೋ ವಾಚಾ ಆಕರ್ಣಯತಿ ಯಶ್ಚನೈಃ ।
ಸ್ವಾಮಿಮಿತ್ರಗುರುದ್ರೋಹೀ ಮಾಯಾವೀ ಚಪಲಶ್ಶಠಃ ॥ ೨೭ ॥

ಯೇ ಭಾರ್ಯಾಪುತ್ರಮಿತ್ರಾಣಿ ಬಾಲವೃದ್ಧಕೃಶಾತುರಾನ್ ।
ಭೃತ್ಯಾನತಿಥಿಬಂಧೂಂಶ್ಚ ತ್ಯಕ್ತ್ವಾಶ್ನಂತಿ ಬುಭುಕ್ಷಿತಾನ್ ॥ ೨೮ ॥

ಯಃ ಸ್ವಯಂ ಮಿಷ್ಟಮಶ್ನಾತಿ ವಿಪ್ರೇಭ್ಯೋ ನ ಪ್ರಯಚ್ಛತಿ ।
ವೃಥಾಪಾಕಸ್ಸ ವಿಜ್ಞೇಯೋ ಬ್ರಹ್ಮವಾದಿಷು ಗರ್ಹಿತಃ ॥ ೨೯ ॥

ನಿಯಮಾನ್ಸ್ವಯಮಾದಾಯ ಯೇ ತ್ಯಜಂತ್ಯಜಿತೇಂದ್ರಿಯಾಃ ।
ಪ್ರವ್ರಜ್ಯಾ ವಾಸಿತಾ ಯೇ ಚ ಹರಸ್ಯಾಸ್ಯ ಪ್ರಭೇದಕಃ ॥ ೩೦ ॥

ಹಾಕಿಕೊಂಡು ಕೇಳುವವರು, ತನ್ನ ಯಜಮಾನ, ಸ್ನೇಹಿತ, ಗುರು ಇವರುಗಳಿಗೆ ದ್ರೋಹವನ್ನು ಮಾಡುವವರು, ಮೋಸಗಾರರು, ಚಂಚಲವಾದ ಮನಸ್ಸುಳ್ಳವರು, ಹಠಗಾರರು ಇವರು ನರಕಕ್ಕೆ ಹೋಗುವವರು.

೨೭-೨೮. ತನ್ನ ಹೆಂಡತಿ, ಮಕ್ಕಳು, ಸ್ನೇಹಿತರು, ಹುಡುಗರು, ಮುದುಕರು, ಬಡವರು, ರೋಗಿಗಳು, ಊಳಿಗದವರು, ಅತಿಥಿಗಳು, ನೆಂಟರು ಇವರುಗಳು ಹಸಿದಿರುವಾಗ ಅವರನ್ನು ಬಿಟ್ಟು, ಅವರಿಗೆ ಆಹಾರವನ್ನು ಕೊಡದೆ ಊಟಮಾಡುವವರು ನರಕಭಾಗಿಗಳು.

೨೯. ಬ್ರಾಹ್ಮಣರಿಗೆ ಕೊಡದೆ ರುಚಿಕರವಾದ ಆಹಾರವನ್ನು ತಾನೊಬ್ಬನೇ ತಿನ್ನುವವನನ್ನು ಬ್ರಹ್ಮವಾದಿಗಳು ವೃಥಾಪಾಕಿ ಎಂದು ಹೇಳುವರು. ಆದ್ದರಿಂದ ಅವನು ನಿಂದ್ಯನು. ಇವನು ನರಕಭಾಗಿಯು.

೩೦-೩೩. ವ್ರತವೇ ಮೊದಲಾದ ನಿಯಮಗಳನ್ನು ಮಾಡಲು ಒಪ್ಪಿಕೊಂಡು ಮನಸ್ಸನ್ನು ಹತೋಟಿಗೆ ಇಡಲಾರದೆ ಆ ವ್ರತವನ್ನು ಮಧ್ಯದಲ್ಲಿ ಬಿಡುವವರು, ಸನ್ಯಾಸವನ್ನು ತೆಗೆದುಕೊಂಡು ನಿಯಮಗಳನ್ನು ಒಡಿಯುವವರು, ಹಸುವನ್ನು ತನ್ನ

**ಯೇ ತಾಡ್ಡಯಂತಿ ಗಾಂ ಕ್ರೂರಾ ದಮಯಂತೇ ಮುಹುರ್ಮುಹುಃ ।**
**ದುರ್ಬಲಾನ್ಯೇ ನ ಪುಷ್ಣಂತಿ ಸತತಂ ಯೇ ತ್ಯಜಂತಿ ಚ ॥ ೩೦ ॥**

**ಪೀಡಯಂತ್ಯತಿಭಾರೇಣಾಸಹಿತಂ ವಾಹಯಂತಿ ಚ ।**
**ಯೋಜಯನ್ನಕೃತಾಹಾರಾನ್ನ ವಿಮುಂಚಂತಿ ಸಂಯುತಾನ್ ॥ ೩೨ ॥**

**ಯೇ ಭಾರಕ್ಷತರೋಗಾರ್ತಾನ್ಗೋವೃಷಾಂಶ್ಚ ಕ್ಷುಧಾತುರಾನ್ ।**
**ನ ಪಾಲಯಂತಿ ಯತ್ನೇನ ಗೋಘ್ನಾಸ್ತೇ ನಾರಕಾಃ ಸ್ಮೃತಾಃ ॥ ೩೩ ॥**

**ವೃಷಾಣಾಂ ವೃಷಣಾನ್ಯೇ ಚ ಪಾಪಿಷ್ಠಾ ಗಾಲಯಂತಿ ಚ ।**
**ವಾಹಯಂತಿ ಚ ಗಾಂ ವಂಧ್ಯಾಂ ಮಹಾನಾರಕಿನೋ ನರಾಃ ॥ ೩೪ ॥**

**ಆಶಯಾ ಸಮನುಪ್ರಾಪ್ತಾನ್ಕ್ಷುತ್ತೃಷ್ಣಾಶ್ರಮಕರ್ಶಿತಾನ್ ।**
**ಅತಿಥೀಂಶ್ಚ ತಥಾನಾಥಾನ್ಸ್ವತಂತ್ರಾನ್ಗೃಹಮಾಗತಾನ್ ॥ ೩೫ ॥**

ಹತೋಟಿಯಲ್ಲಿರಿಸುವುದಕ್ಕಾಗಿ ಅದಕ್ಕೆ ದಿನಂಪ್ರತಿ ಹಿಂಸೆಮಾಡುವವರು, ಎತ್ತುಗಳಿಂದ ಬಲವಾಗಿ ಕೆಲಸಗಳನ್ನು ಮಾಡಿಸಿ, ಅವುಗಳು ಬಲವಿಲ್ಲದಂತೆ ಆದಾಗ ಅವುಗಳನ್ನು ಪೋಷಿಸದೆ ಬಿಡುವವರು, ಎತ್ತುಗಳಿಗೆ ಹೊರಲಾರದಷ್ಟು ಹೊರೆಯನ್ನು ಹಾಕಿ ಅವುಗಳನ್ನು ಹಿಂಸೆಮಾಡುವವರು, ಹೊರೆಯನ್ನು ಹೊರುವ ಎತ್ತುಗಳಿಗೆ ಅವುಗಳಿಂದ ಕೆಲಸಮಾಡಿಸಿಯೂ ಆಹಾರವನ್ನು ಕೊಡದಿರುವವರು, ಕೆಲಸಮಾಡುತ್ತಿರುವ ಎತ್ತುಗಳನ್ನು ವಿಶ್ರಾಂತಿಗಾಗಿ ಬಿಡದೇ ಕೆಲಸಮಾಡಿಸುವವರು, ಹೊರೆಯನ್ನು ಹೊತ್ತು ಗಾಯದಿಂದ ನರಳುತ್ತಲೂ ಹಸಿವೆಯಿಂದ ಕೂಡಿಯೂ ಇರುವ ಹಸು, ಎತ್ತು ಇವುಗಳನ್ನು ಕಾಪಾಡದಿರುವವರು ಗೋಹತ್ಯಕ್ಕೆ ಒಳಗಾಗುವ ಕಾರಣ ಇವರೆಲ್ಲರೂ ನರಕವನ್ನು ಹೊಂದುವರು.

೩೪-೩೬. ಎತ್ತುಗಳ ಬೀಜಗಳನ್ನು ಒಡೆಯುವ ಪಾಪಿಷ್ಠರಾದವರೂ, ಗೊಡ್ಡುಹಸುವನ್ನು ಕೆಲಸಕ್ಕೆ ಉಪಯೋಗಿಸುವ ಜನಗಳೂ, ಬಹಳ ದೊಡ್ಡ ಪಾಪಗಳನ್ನು ಮಾಡತಕ್ಕವರು. ಅನ್ನದ ಆಸೆಯಿಂದ ಮನೆಗೆ ಬಂದು ಹಸಿವೆ, ಬಾಯಾರಿಕೆ ಇವುಗಳಿಂದ ಆಯಾಸಪಟ್ಟು ಬಳಲುತ್ತಿರುವವರನ್ನೂ, ಅತಿಥಿಗಳನ್ನೂ, ದಿಕ್ಕಿಲ್ಲದವರನ್ನೂ, ಸಂಕಟಪಡುತ್ತಿರುವವರನ್ನೂ, ಎಳೆಯ ಮಕ್ಕಳು, ಮುದುಕರು, ಕ್ಷೀಣ

ಅನ್ನಾಭಿಲಾಷಾನ್ದೀನಾನ್ವಾ ಬಾಲವೃದ್ಧಕೃಶಾತುರಾನ್ ।
ನಾನುಕಂಪಂತಿ ಯೇ ಮೂಢಾಸ್ತೇ ಯಾಂತಿ ನರಕಾರ್ಣವಂ ॥ ೩೬ ॥

ಗೃಹೇಷ್ವರ್ಥಾ ನಿವರ್ತಂತೇ ಸ್ಮಶಾನಾದೇವ ಬಾಂಧವಾಃ ।
ಸುಕೃತಂ ದುಷ್ಕೃತಂ ಚೈವ ಗಚ್ಛಂತಮನುಗಚ್ಛತಿ ॥ ೩೭ ॥

ಅಜಾವಿಕೋ ಮಾಹಿಷಿಕಸ್ಸಾಮುದ್ರೋ ವೃಷಲೀಪತಿಃ ।
ಶೂದ್ರವತ್ಕ್ಷತ್ರವೃತ್ತಿಶ್ಚ ನಾರಕೀ ಸ್ಯಾದ್ದ್ವಿಜಾಧಮಃ ॥ ೩೮ ॥

ಶಿಲ್ಪಿನಃ ಕಾರವೋ ವೈದ್ಯಾ ಹೇಮಕಾರಾ ನೃಪಧ್ವಜಾಃ ।
ಭೃತಕಾಃ ಕೂಟಸಂಯುಕ್ತಾಃ ಸರ್ವೇ ತೇ ನಾರಕಾಃ ಸ್ಮೃತಾಃ ॥ ೩೯ ॥

ರಾದವರು, ರೋಗಿಗಳು ಇವರುಗಳನ್ನು ನೋಡಿ ಅವರ ವಿಷಯದಲ್ಲಿ ಕನಿಕರಪಡದ ದಡ್ಡರು ನರಕವನ್ನು ಹೊಂದುವರು.

೩೭-೩೯. ಮೃತನಾದವನ ದ್ರವ್ಯವು ಮನೆಯಲ್ಲಿಯೇ ಉಳಿಯುವುದು. ನೆಂಟರು ಸ್ಮಶಾನದವರೆಗೆ ಹೋಗಿ ಅಲ್ಲಿಂದ ಹಿಂತಿರುಗುವರು. ಆದರೆ ಮೃತನು ಮಾಡಿದ ಪಾಪಪುಣ್ಯಗಳು ಪರಲೋಕಕ್ಕೆ ಹೋಗುವ ಅವನನ್ನು ಹಿಂಬಾಲಿಸಿ ಬರುವುವು. ಆಡು, ಕುರಿ, ಎಮ್ಮೆ ಇವುಗಳನ್ನು ಸಾಕುತ್ತಾ ಜೀವಿಸುವವನೂ, (ಸಾಮುದ್ರನು) ವಿವಾಹಕ್ಕೆ ಮುಂಚೆ ಋತುಮತಿಯಾಗುವಳು ವೃಷಲೀ ಎನ್ನಿಸಿಕೊಳ್ಳುವಳು ಇವಳನ್ನು ಮದುವೆಯಾಗುವವನೂ, ಬ್ರಾಹ್ಮಣನಾದರೂ ಶೂದ್ರನಂತೆಯೂ ಕ್ಷತ್ರಿಯನಂತೆಯೂ ಜೀವನವನ್ನು ಮಾಡುವವನು, ಇವರೆಲ್ಲರೂ ನರಕಕ್ಕೆ ಹೋಗುವರು. ತಮ್ಮ ನಿಜವಾದ ವೃತ್ತಿಯನ್ನು ಬಿಟ್ಟು ಶಿಲ್ಪಕೆಲಸವನ್ನು ಮಾಡುವವರು, ಯಂತ್ರಗಳ ಕೆಲಸವನ್ನು ಮಾಡುವವರು, ವೈದ್ಯರು, ಅಕ್ಕಸಾಲಿಗರು, ರಾಜನೆಂದು ಹೆಸರನ್ನು ಹೊಂದಿರುವವರು, ಸಂಬಳದಿಂದ ವೇದಾಧ್ಯಾಯನ ಮಾಡಿಸುವವರು, ಮೋಸದಿಂದ ಕೂಡಿರುವವರು, ಇವರೆಲ್ಲರೂ ನರಕಭಾಗಿಗಳಾಗುವರು. ನ್ಯಾಯವನ್ನು ಮೀರಿ, ತನ್ನ ಇಚ್ಛೆಬಂದಂತೆ ಕಾಣಿಕೆಯನ್ನು ಜನರಿಂದ ತೆಗೆದುಕೊಳ್ಳುವವನೂ, ಯಾವಾಗಲೂ ದಂಡೋಪಾಯದಲ್ಲಿ ಅಭಿಲಾಷೆಯುಳ್ಳವನೂ ಆದ ರಾಜನು ನರಕಕ್ಕೆ ಹೋಗುವನು.

ಯಶ್ಶೋಚಿತಮತಿಕ್ರಮ್ಯ ಸ್ವೇಚ್ಛಯೈವಾಹರೇತ್ಕರಂ ।
ನರಕೇ ಪಚ್ಯತೇ ಸೋಽಪಿ ಯೋಽಪಿ ದಂಡರುಚಿರ್ನರಃ ॥ ೪೦ ॥

ಉತ್ಕೋಚಕೈ ರುಚಿಕ್ರೀತೈಸ್ತಸ್ಕರೈಶ್ಚ ಪ್ರಪೀಡ್ಯತೇ ।
ಯಸ್ಯ ರಾಜ್ಞಃ ಪ್ರಜಾ ರಾಷ್ಟ್ರೇ ಪಚ್ಯತೇ ನರಕೇಷು ಸಃ ॥ ೪೧ ॥

ಯೇ ದ್ವಿಜಾಃ ಪರಿಗೃಹ್ಣಂತಿ ನೃಪಸ್ಯಾನ್ಯಾಯವರ್ತಿನಃ ।
ತೇ ಪ್ರಯಾಂತಿ ತು ಘೋರೇಷು ನರಕೇಷು ನ ಸಂಶಯಃ ॥ ೪೨ ॥

ಅನ್ಯಾಯಾತ್ಸಮುಪಾದಾಯ ದ್ವಿಜೇಭ್ಯೋ ಯಃ ಪ್ರಯಚ್ಛತಿ ।
ಪ್ರಜಾಭ್ಯಃ ಪಚ್ಯತೇ ಸೋಽಪಿ ನರಕೇಷು ನೃಪೋ ಯಥಾ ॥ ೪೩ ॥

ಪಾರದಾರಿಕಚೌರಾಣಾಂ ಚಂಡಾನಾಂ ವಿದ್ಯತೇ ತ್ವಘಂ ।
ಪರದಾರರತಸ್ಯಾಪಿ ರಾಜ್ಞೋ ಭವತಿ ನಿತ್ಯಶಃ ॥ ೪೪ ॥

ಅಚೌರಂ ಚೌರವತ್ಪಶ್ಯೇಚ್ಚೌರಂ ವಾ ಚೌರರೂಪಿಣಂ ।
ಅವಿಚಾರ್ಯ ನೃಪಸ್ತಸ್ಮಾದ್ಘಾತಯನ್ನರಕಂ ವ್ರಜೇತ್ ॥ ೪೫ ॥

೪೦-೪೩. ಲಂಚಕೋರರಿಂದಲೂ, ಮನಸ್ಸಿಗೆ ಬಂದಹಾಗೆ ವ್ಯಾಪಾರ ಮಾಡುವವರಿಂದಲೂ, ಕಳ್ಳರಿಂದಲೂ, ಪ್ರಜೆಗಳು ತೊಂದರೆಯನ್ನು ಅನುಭವಿಸುತ್ತಿದ್ದರೆ ಅಂತಹ ಪ್ರಜೆಗಳಿಂದ ಕೂಡಿದ ರಾಷ್ಟ್ರಕ್ಕೆ ಅಧಿಪತಿಯಾದ ರಾಜನು ನರಕವನ್ನು ಹೊಂದುವನು. ಅನ್ಯಾಯದಿಂದ ನಡೆಯುವ ರಾಜನಿಂದ ದಾನವನ್ನು ತೆಗೆದುಕೊಳ್ಳುವವರು ಭಯಂಕರವಾದ ನರಕವನ್ನು ಹೊಂದುವರು. ಪ್ರಜೆಗಳಿಂದ ಅನ್ಯಾಯದಿಂದ ಕಿತ್ತುಕೊಂಡು, ಬ್ರಾಹ್ಮಣರಿಗೆ ದಾನಮಾಡುವವನಾದ ರಾಜನು ನರಕಕ್ಕೆ ಹೋಗುವನು.

೪೪. ಇನ್ನೊಬ್ಬರ ಹೆಂಡತಿಯಲ್ಲಿ ಆಸಕ್ತರು, ದುಷ್ಟರು, ಕಳ್ಳರು ಇವರುಗಳಿಗೆ ಪಾಪವು ಬರುತ್ತದೆ. ಇನ್ನೊಬ್ಬರ ಹೆಂಡತಿಯಲ್ಲಿ ಆಸಕ್ತನಾದ ರಾಜನಿಗೂ ಪಾಪದ ಸಂಬಂಧವು ಇರುತ್ತದೆ.

೪೫-೫೦. ಕಳ್ಳನಲ್ಲದವನನ್ನು ಕಳ್ಳನಂತೆ ಶಿಕ್ಷಿಸಿದರೆ ಅಥವಾ ಕಳ್ಳನನ್ನೂ, ಕಳ್ಳನ ರೂಪದಿಂದ ಇರುವವನನ್ನೂ ಚೆನ್ನಾಗಿ ವಿಚಾರಮಾಡದೆ ತೊಂದರೆಗೆ ಒಳಪಡಿ

ಘೃತತೈಲಾನ್ನಪಾನಾನಿ ಮಧುಮಾಂಸಸುರಾಸವಂ ।
ಗುಡೇಕ್ಷುಂಶಾಕದುಗ್ಧಾನಿ ದಧಿಮೂಲಫಲಾನಿ ಚ ॥ ೪೬ ॥

ತೃಣಂ ಕಾಷ್ಠಂ ಪತ್ರಪುಷ್ಪಮೌಷಧಂ ಚಾತ್ಮಭೋಜನಂ ।
ಉಪಾನಚ್ಛತ್ರಶಕಟಿಮಾಸನಂ ಚ ಕಮಂಡಲುಂ ॥ ೪೭ ॥

ತಾಮ್ರಸೀಸತ್ರಪುಃ ಶಸ್ತ್ರಂ ಶಂಖಾದ್ಯಂ ಚ ಜಲೋದ್ಭವಂ ।
ವೈದ್ಯಂ ಚ ವೈಣವಂ ಚಾನ್ಯದ್ಗೃಹೋಪಸ್ಕರಣಾನಿ ಚ ॥ ೪೮ ॥

ಔರ್ಣಕಾರ್ಪಾಸಕೌಶೇಯಪಟ್ಟಸೂತ್ರೋದ್ಭವಾನಿ ಚ ।
ಸ್ಥೂಲಸೂಕ್ಷ್ಮಾಣಿ ವಸ್ತ್ರಾಣಿ ಯೇ ಲೋಭಾದ್ಧಿ ಹರಂತಿ ಚ ॥ ೪೯ ॥

ಏವಮಾದೀನಿ ಚಾನ್ಯಾನಿ ದ್ರವ್ಯಾಣಿ ವಿವಿಧಾನಿ ಚ ।
ನರಕೇಷು ಧ್ರುವಂ ಯಾಂತಿ ಚಾಪಹೃತ್ಯಾಲ್ಪಕಾನಿ ಚ ॥ ೫೦ ॥

ತದ್ವಾಯದ್ವಾ ಪರದ್ರವ್ಯಮಪಿ ಸರ್ಷಪಮಾತ್ರಕಂ ।
ಅಪಹೃತ್ಯ ನರಾ ಯಾಂತಿ ನರಕಂ ನಾತ್ರ ಸಂಶಯಃ ॥ ೫೧ ॥

ಸಿದರೆ ಅಂತಹ ರಾಜನು ನರಕವನ್ನು ಹೊಂದುವನು. ತುಪ್ಪ, ಎಣ್ಣೆ, ಅನ್ನ, ಪಾನೀಯದ್ರವ್ಯಗಳು, ಮಧು, ಮಾಂಸ, ಮದ್ಯ, ಆಸವಗಳು, ಬೆಲ್ಲ, ಕಬ್ಬು, ತರಕಾರಿ, ಹಾಲು, ಮೊಸರು, ಗೆಡ್ಡೆಗೆಣಸು, ಹಣ್ಣುಗಳು, ಹುಲ್ಲು, ಸವುದೆ, ಎಲೆ, ಹೂವು, ಮೂಲಿಕೆಗಳು, ಊಟದ ಸಾಮಾನುಗಳು, ಪಾದರಕ್ಷೆ, ಛತ್ರಿ, ಗಾಡಿ, ಕೂತುಕೊಳ್ಳುವ ಮಣೆ, ಕಮಂಡಲು, ತಾಮ್ರ, ಸೀಸ ಇವುಗಳ ಪಾತ್ರೆ, ಆಯುಧ, ನೀರಿನಲ್ಲಿ ಹುಟ್ಟಿದ ಶಂಕವೇ ಮೊದಲಾದವುಗಳು, ವೈದ್ಯಕ್ಕೆ ಬೇಕಾದ ಪದಾರ್ಥ, ಬಿದರಿನ ಸಾಮಾನು ಇವೇ ಮೊದಲಾದ ಗೃಹಕೃತ್ಯದ ಪದಾರ್ಥಗಳು, ಉಣ್ಣೆಬಟ್ಟೆ, ಹತ್ತಿಬಟ್ಟೆ, ರೇಶ್ಮೆಯ ಬಟ್ಟೆ, ಜರತಾರಿಯಿಂದ ಕೂಡಿರುವ ಬಟ್ಟೆ, ದಪ್ಪನೂಲಿನ, ಸಣ್ಣನೂಲಿನ ಬಟ್ಟೆಗಳು, ಇವೇ ಮೊದಲಾದ ಪದಾರ್ಥಗಳನ್ನು ಆಸೆಯಿಂದ ಅಪಹರಿಸುವವರು ನರಕವನ್ನು ಹೊಂದುತ್ತಾರೆ.

೫೧-೫೩. ಯಾವ ಪದಾರ್ಥವೇ ಆಗಲಿ ಸಾಸಿವೆಕಾಳಿನಷ್ಟು ಪ್ರಮಾಣವಿರುವುದಾದರೂ, ಇನ್ನೊಬ್ಬರ ಪದಾರ್ಥವಾಗಿದ್ದರೆ ಅದನ್ನು ಕದಿಯುವವರು ನರಕಕ್ಕೆ ಹೋಗುವರು. ಇದರಲ್ಲಿ ಸಂಶಯವಿಲ್ಲ. ಮನುಷ್ಯನಾದವನು ಈ ಮೇಲೆಹೇಳಿರುವ

ಏವಮಾದ್ಯೈರ್ನರಃ ಪಾಪೈ ರುತ್ಕ್ರಾಂತಸಮನಂತರಂ ।
ಶರೀರಯಾತನಾರ್ಥಾಯ ಸರ್ವಾಕಾರಮವಾಪ್ನುಯಾತ್ ॥ ೫೨ ॥

ಯಮಲೋಕಂ ವ್ರಜಂತ್ಯೇತೇ ಶರೀರೇಣ ಯಮಾಜ್ಞಯಾ ।
ಯಮದೂತೈರ್ಮಹಾಘೋರೈರ್ನೀಯಮಾನಾಸ್ಸುದುಃಖಿತಾಃ ॥ ೫೩ ॥

ದೇವತಿರ್ಯಙ್ಮನುಷ್ಯಾಣಾಮಧರ್ಮನಿರತಾತ್ಮನಾಂ ।
ಧರ್ಮರಾಜಃ ಸ್ಮೃತಶ್ಶಾಸ್ತಾ ಸುಘೋರೈರ್ವಿವಿಧೈರ್ವಧೈಃ ॥ ೫೪ ॥

ನಿಯಮಾಚಾರಯುಕ್ತಾನಾಂ ಪ್ರಮಾದಾತ್ಸ್ಖಲಿತಾತ್ಮನಾಂ ।
ಪ್ರಾಯಶ್ಚಿತ್ತೈರ್ಗುರುಶ್ಶಾಸ್ತಾ ನ ಬುಧೈರಿಷ್ಯತೇ ಯಮಃ ॥ ೫೫ ॥

ಪಾರದಾರಿಕಚೌರಾಣಾಮನ್ಯಾಯವ್ಯವಹಾರಿಣಾಂ ।
ನೃಪತಿಶ್ಶಾಸಕಃ ಪ್ರೋಕ್ತಃ ಪ್ರಚ್ಛನ್ನಾನಾಂ ಸ ಧರ್ಮರಾಟ್ ॥ ೫೬ ॥

---

ಕಾರಣಗಳಿಂದ ಸಂಭವಿಸುವ ಕೆಲಸಗಳನ್ನು ಮಾಡಿದಲ್ಲಿ, ತನ್ನ ಶರೀರವನ್ನು ಬಿಟ್ಟ ಕೂಡಲೇ ಎಂದರೆ ಮೃತನಾದ ಕೂಡಲೇ ಪಾಪಕಾರ್ಯಗಳ ಫಲವನ್ನು ಅನುಭವಿಸುವುದಕ್ಕಾಗಿ ಅದಕ್ಕೆ ತಕ್ಕ ಎಲ್ಲಾ ವಿಧವಾದ ಆಕಾರವನ್ನು ಎಂದರೆ ಯಾತನಾಶರೀರವನ್ನು ಹೊಂದುವನು. ಹೀಗೆ ಪಾಪಗಳನ್ನು ಮಾಡುವವರು ಯಮನ ಅಪ್ಪಣೆಯಿಂದ ಬಹಳ ಕ್ರೂರರಾದ ಯಮದೂತರ ಅಧೀನಕ್ಕೆ ಸಿಕ್ಕಿ, ಬಹಳ ದುಃಖವನ್ನು ಅನುಭವಿಸುತ್ತಾ ಯಮನ ಅಪ್ಪಣೆಯ ಮೇರೆ ಯಮಲೋಕದಲ್ಲಿ ಇರುವರು.

೫೪-೫೫. ಅಧರ್ಮದಿಂದ ಪ್ರವರ್ತಿಸುತ್ತಿರುವ ದೇವತೆಗಳು, ತಿರ್ಯಕ್ ಪ್ರಾಣಿಗಳು, ಮನುಷ್ಯನು ಇವರುಗಳನ್ನು ಯಮಧರ್ಮರಾಜನು ಅನೇಕವಿಧವಾದ ಬಹಳ ಭಯಂಕರವಾದ ಶಿಕ್ಷೆಗೆ ಗುರಿಮಾಡುವನು. ಸರಿಯಾದ ನಿಯಮ, ಆಚಾರಗಳಿಂದ ಕೂಡಿ ಯಾವುದಾದರೂ ಕಾರಣಾಂತರದಿಂದ ನಿಯಮನ್ನು ತಪ್ಪಿ ನಡೆಯುವವರಿಗೆ ಗುರುವು ಸರಿಯಾದ ಪ್ರಾಯಶ್ಚಿತ್ತಗಳನ್ನು ಮಾಡಿಸಿ ಕಾಪಾಡುವನು. ಆದುದರಿಂದ ಗುರುವಿನ ಆಜ್ಞೆಯಂತೆ ನಡೆಯುವ ಜ್ಞಾನಿಗಳಾದವರು ಯಮನ ಆಜ್ಞೆಗೆ ಒಳಪಡುವುದಿಲ್ಲ.

೫೬-೫೭. ವ್ಯಭಿಚಾರಗಳು, ಕಳ್ಳರು ಮತ್ತು ಅನ್ಯಾಯಮಾರ್ಗದಿಂದ ವ್ಯವಹಾರಮಾಡುವವರು ಇವರುಗಳನ್ನು ದೊರೆಯು ಶಿಕ್ಷೆಮಾಡುವನು. ಯಾರಿಗೂ

**ತಸ್ಮಾತ್ಕೃತಸ್ಯ ಪಾಪಸ್ಯ ಪ್ರಾಯಶ್ಚಿತ್ತಂ ಸಮಾಚರೇತ್ ।**
**ನಾಭುಕ್ತಸ್ಯಾನ್ಯಥಾ ನಾಶಃ ಕಲ್ಪಕೋಟಿಶತೈರಪಿ ॥ ೫೬ ॥**

**ಯಃ ಕರೋತಿ ಸ್ವಯಂ ಕರ್ಮ ಕಾರಯೇಚ್ಚಾನುಮೋದಯೇತ್ ।**
**ಕಾಯೇನ ಮನಸಾ ವಾಚಾ ತಸ್ಯ ಪಾಪಗತಿಃ ಫಲಂ ॥ ೫೮ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ**
**ಪಾಪಭೇದವರ್ಣನಂ ನಾಮ ಷಷ್ಠೋಽಧ್ಯಾಯಃ**

ತಿಳಿಯದಂತೆ ಗುಟ್ಟಾಗಿ ಕೆಟ್ಟಕೆಲಸಗಳನ್ನು ಮಾಡುವವರನ್ನು ಯಮಧರ್ಮರಾಯನು ಶಿಕ್ಷೆಗೆ ಗುರಿಮಾಡುವನು. ಆದ್ದರಿಂದ ತಾನು ಆಚರಿಸಿದ ಪಾಪಕಾರ್ಯಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಮಾಡಿದ ಕೆಲಸದ ಫಲವನ್ನು ಅನುಭವಿಸದೆ ಇದ್ದರೆ ಅದು ಎಷ್ಟು ವರ್ಷಗಳಾದರೂ ಹಾಗೆಯೇ ಇರುವುದು. ಎಂದಿಗೂ ಅದು ನಾಶವನ್ನು ಹೊಂದುವುದಿಲ್ಲ. ಕೆಟ್ಟಕಾರ್ಯವನ್ನು ತಾನೇ ಮಾಡಿದರೂ, ಇನ್ನೊಬ್ಬರಿಂದ ಮಾಡಿಸಿದರೂ, ಮಾಡಿರುವ ಕೆಟ್ಟಕಾರ್ಯಕ್ಕೆ ಸಂತೋಷದಿಂದ ಒಪ್ಪಿಕೊಂಡರೂ ಮನಸ್ಸು, ಶರೀರ, ಮಾತುಗಳು ಇವುಗಳಿಂದಲೂ ಕೆಟ್ಟಕಾರ್ಯಗಳಿಗೆ ಸಹಾಯ ಮಾಡಿದರೂ, ಯಾರೇ ಆಗಲಿ ಅವರೆಲ್ಲರೂ ಪಾಪದ ಫಲಕ್ಕೆ ಈಡಾಗುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಪಾಪಭೇದಗಳ ವರ್ಣನವೆಂಬ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಸಪ್ತಮೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

**ಅಥ ಪಾಪೈರ್ನರಾ ಯಾಂತಿ ಯಮಲೋಕಂ ಚತುರ್ವಿಧೈಃ ।**
**ಸಂತ್ರಾಸಜನನಂ ಘೋರಂ ವಿವಶಾಸ್ಸರ್ವದೇಹಿನಃ ॥ ೧ ॥**

**ಗರ್ಭಸ್ಥೈರ್ಜಾಯಮಾನೈಶ್ಚ ಬಾಲೈಸ್ತರುಣಮಧ್ಯಮೈಃ ।**
**ಸ್ತ್ರೀಪುನ್ನಪುಂಸಕೈರ್ಜೀರ್ಣೈರ್ಜ್ಞಾತವ್ಯಂ ಸರ್ವಜಂತುಷು ॥ ೨ ॥**

### ಏಳನೆಯ ಅಧ್ಯಾಯವು

೧. ಸನತ್ಕುಮಾರನಿಂತೆಂದನು:—ಇದುವರೆಗೂ ಪಾಪಭೇದಗಳನ್ನು ಹೇಳಿಯಾಯಿತು. ಇನ್ನು ಈ ಪಾಪಗಳನ್ನು ಮಾಡಿದವರು ಯಮಲೋಕಕ್ಕೆ ಹೋಗುವ ವಿಧಾನವನ್ನು ವಿವರಿಸುವೆನು. ಜನಗಳು ಎಲ್ಲರೂ ಅವರವರ ಪಾಪಕರ್ಮಗಳ ಅನುಸಾರವಾಗಿ ಕ್ರೂರವಾಗಿರುವ, ಭಯವನ್ನುಂಟುಮಾಡುವ ಯಮಲೋಕವನ್ನು ಹೊಂದುವರು. ಈ ಪಾತಕಗಳು ನಾಲ್ಕು ವಿಧವಾದುವುಗಳೆಂದು ನಿಶ್ಚಯವಾಗಿರುವುದು.

೨. ಸ್ತ್ರೀಯರು, ಪುರುಷರು, ನಪುಂಸಕರು ಯಾರೇ ಆಗಲಿ, ಎಲ್ಲಾ ಪ್ರಾಣಿಗಳೂ ಗರ್ಭದಿಂದ ಹುಟ್ಟುವ ಮೊದಲುಗೊಂಡು ಬಾಲ್ಯದಲ್ಲಿಯೂ, ಪ್ರಾಯದಲ್ಲಿಯೂ, ವಾರ್ಧಿಕ್ಯದಲ್ಲಿಯೂ ಮಾಡುವ ಸಮಸ್ತ ಕರ್ಮಗಳ ಫಲಗಳನ್ನು ಅನುಭವಿಸಿಯೇ ತೀರಬೇಕು.

ಶುಭಾಶುಭಫಲಂ ಚಾತ್ರ ದೇಹಿನಾಂ ಸಂವಿಚಾರ್ಯತೇ ।
ಚಿತ್ರಗುಪ್ತಾದಿಭಿಸ್ಸರ್ವೈರ್ವಸಿಷ್ಠಪ್ರಮುಖೈಸ್ತಥಾ ॥ ೩ ॥

ನ ಕೇಚಿತ್ಪ್ರಾಣಿನಸ್ಸಂತಿ ಯೇ ನ ಯಾಂತಿ ಯಮಕ್ಷಯಂ ।
ಅವಶ್ಯಂ ಹಿ ಕೃತ ಕರ್ಮ ಭೋಕ್ತವ್ಯಂ ತದ್ವಿಚಾರ್ಯತಾಂ ॥ ೪ ॥

ತತ್ರ ಯೇ ಶುಭಕರ್ಮಾಣಸ್ಸೌಮ್ಯಚಿತ್ತಾ ದಯಾನ್ವಿತಾಃ ।
ತೇ ನರಾ ಯಾಂತಿ ಸೌಮ್ಯೇನ ಪೂರ್ವ ಯಮನಿಕೇತನಂ ॥ ೫ ॥

ಯೇ ಪುನಃ ಪಾಪಕರ್ಮಾಣಃ ಪಾಪಾ ದಾನವಿವರ್ಜಿತಾಃ ।
ತೇ ಘೋರೇಣ ಪಥಾ ಯಾಂತಿ ದಕ್ಷಿಣೇನ ಯಮಾಲಯಂ ॥ ೬ ॥

ಷಡಶೀತಿಸಹಸ್ರಾಣಿ ಯೋಜನಾನಾಮತೀತ್ಯ ತತ್ ।
ವೈವಸ್ವತಪುರಂ ಜ್ಞೇಯಂ ನಾನಾರೂಪಮವಸ್ಥಿತಂ ॥ ೭ ॥

---

೩. ಆಯಾಯ ಪ್ರಾಣಿಗಳಿಗೆ ಅನುಸಾರವಾಗಿರುವ ಕೆಟ್ಟದ್ದಾದ ಅಥವಾ ಒಳ್ಳೆಯದಾದ ಫಲಗಳನ್ನು ಚಿತ್ರಗುಪ್ತನೇ ಮೊದಲಾದವರೂ, ವಸಿಷ್ಠನೇ ಮೊದಲಾದ ಋಷಿಗಳೂ ಇವರೆಲ್ಲರೂ ಸೇರಿ ಚೆನ್ನಾಗಿ ವಿಚಾರಮಾಡುವರು.

೪. ತಾನು ಮಾಡಿದ ಕರ್ಮದ ಫಲವನ್ನು ಎಷ್ಟು ದಿನವಾದರೂ ಆಯಾಯ ಪ್ರಾಣಿಯು ಅನುಭವಿಸಿಯೇ ತೀರಬೇಕಾಗಿರುವ ಕಾರಣ ಅವಶ್ಯಕವಾಗಿ ಅದನ್ನು ವಿಚಾರಮಾಡಲೇಬೇಕು. ಮತ್ತು ಯಮನ ಮನೆಯನ್ನು ಎಂದರೆ ಯಮಲೋಕವನ್ನು ಹೊಂದದೆ ಇರುವ ಪ್ರಾಣಿಯು ಯಾವುದೂ ಇಲ್ಲವೇ ಇಲ್ಲ.

೫-೬. ಅವರಲ್ಲಿ ಒಳ್ಳೆಯ ಕೆಲಸವನ್ನು ಮಾಡಿರುವ ಸತ್ಪುರುಷರು ಒಳ್ಳೆಯ ಮನಸ್ಸಿನವರಾಗಿ ದಯೆಯುಳ್ಳವರಾದಕಾರಣ, ಒಳ್ಳೆಯ ಪೂರ್ವದಿಕ್ಕಿನ ದಾರಿಯಿಂದ ಯಮನ ಪಟ್ಟಣಕ್ಕೆ ಹೋಗುವರು. ಧರ್ಮವನ್ನು ಆಚರಿಸದೆ ಕೆಟ್ಟಕೆಲಸವನ್ನು ಮಾಡಿರುವ ಪಾಪಿಗಳು ಭಯಂಕರವಾದ ದಕ್ಷಿಣದಿಕ್ಕಿನ ಮಾರ್ಗದಿಂದ ಯಮನ ಮನೆಯನ್ನು ಸೇರುವರು.

೭. ಯಮನ ನಗರವು ಇಲ್ಲಿಂದ ಎಂಭತ್ತಾರುಸಾವಿರ ಯೋಜನಗಳ ದೂರದಲ್ಲಿ ಅನೇಕ ವಿಧವಾದ ಆಕಾರಗಳನ್ನು ಹೊಂದಿರುವ ಹಾಗೆ ಇರುವುದು ಎಂದು ತಿಳಿಯತಕ್ಕದ್ದು. ಪುಣ್ಯವಂತರಿಗೆ ಈ ನಗರವು ಹತ್ತಿರದಲ್ಲಿರುವಂತೆಯೂ, ಕಷ್ಟಕರವಾದ ದಾರಿಯಿಂದ ಸಂಚರಿಸುವ ಪಾಪಿಗಳಿಗೆ ಬಹಳ ದೂರವಾಗಿರುವಂತೆಯೂ ಇರುವುದು.

**ಸಮೀಪಸ್ಥಮಿವಾಭಾತಿ ನರಾಣಾಂ ಪುಣ್ಯಕರ್ಮಣಾಂ ।**
**ಪಾಪಿನಾಮತಿದೂರಸ್ಥಂ ಯಥಾ ರೌದ್ರೇಣ ಗಚ್ಛತಾಂ ॥ ೮ ॥**

**ತೀಕ್ಷ್ಣಕಂಟಕಯುಕ್ತೇನ ಶರ್ಕರಾವಿಚಿತೇನ ಚ ।**
**ಕ್ಷುರಧಾರಾನಿಭೈಸ್ತೀಕ್ಷ್ಣೈಃ ಪಾಷಾಣೈ ರಚಿತೇನ ಚ ॥ ೯ ॥**

**ಕ್ವಚಿತ್ಪಂಕೇನ ಮಹತಾ ಉರುತೋಕೈಶ್ಚ ಪಾತಕೈಃ ।**
**ಲೋಹಸೂಚೀನಿಭೈರ್ದರ್ಭೈಸ್ಸಂಪನ್ನೇನ ಪಥಾ ಕ್ವಚಿತ್ ॥ ೧೦ ॥**

**ತಟಪ್ರಾಯಾತಿವಿಷಮೈಃ ಪರ್ವತೈರ್ವೃಕ್ಷಸಂಕುಲೈಃ ।**
**ಪ್ರತಪ್ತಾಂಗಾರಯುಕ್ತೇನ ಯಾಂತಿ ಮಾರ್ಗೇಣ ದುಃಖಿತಾಃ ॥ ೧೧ ॥**

**ಕ್ವಚಿದ್ವಿಷಮಗರ್ತೈಶ್ಚ ಕ್ವಚಿಲ್ಲೋಷ್ಟೈಸ್ಸುದುಷ್ಕರೈಃ ।**
**ಸುತಪ್ತವಾಲುಕಾಭಿಶ್ಚ ತಥಾ ತೀಕ್ಷ್ಣೈಶ್ಚ ಶಂಕುಭಿಃ ॥ ೧೨ ॥**

೮-೧೦. ಪಾಪಕರ್ಮವನ್ನು ಮಾಡಿದವರು ಈ ಯಮನಗರಕ್ಕೆ ಹೋಗುವ ದಾರಿಯು ಕೆಲವು ಕಡೆಯಲ್ಲಿ ಮೊನಚಾದ ಮುಳ್ಳುಗಳಿಂದಲೂ, ಸಣ್ಣ ಸಣ್ಣ ಮೊನಚಾದ ಕಲ್ಲುಗಳಿಂದಲೂ, ಮತ್ತೆ ಕೆಲವು ಕಡೆ ಸಣ್ಣ ಚೂರಿಯ ಅಲಗಿಗೆ ಸಮನಾದ ಹರಿತವಾದ ಕಲ್ಲುಗಳಿಂದಲೂ, ಕೆಲವು ಕಡೆಯಲ್ಲಿ ಕೆಸರಿನಿಂದಲೂ ಕೂಡಿರುವುದು. ಹೆಚ್ಚಾಗಿ ಪಾಪವನ್ನು ಮಾಡಿದವರು ಹೋಗುವ ದಾರಿಯು ಲೋಹದ ಸೂಜಿಗಳಿಗೆ ಸಮನಾದ ದರ್ಭೆಗಳಿಂದ ಕೂಡಿದ್ದಾಗಿರುವುದು.

೧೧. ಈ ದಾರಿಯು ಕೆಲವು ಕಡೆಗಳಲ್ಲಿ ಸಮನಾದ ಜಾಗದಂತೆ ಕಾಣುತ್ತಿದ್ದರೂ ಬಹಳ ವಿಷಮವಾದ ಬೆಟ್ಟಗಳಿಂದಲೂ, ಮರಗಳ ಕಾಡುಗಳಿಂದಲೂ ಕೂಡಿರುವುದರಿಂದ ದುಃಖದಿಂದ ಪಾಪಿಗಳು ಅಲ್ಲಿ ಪ್ರಯಾಣಮಾಡಬೇಕಾಗಿರುವುದು.

೧೨-೧೩. ಪಾಪಿಗಳಾಗಿರುವ ಜನಗಳು ಯಮನ ನಗರಕ್ಕೆ ಹೋಗುವ ದಾರಿಯು ಕೆಲವು ಕಡೆಗಳಲ್ಲಿ ಸಮನಾಗಿಲ್ಲದಿರುವ ಹಳ್ಳಗಳಿಂದಲೂ, ಕೆಲವು ಕಡೆಗಳಲ್ಲಿ ಕಷ್ಟಕರವಾದ ಕಲ್ಲುಬಂಡೆಗಳಿಂದಲೂ, ಚೆನ್ನಾಗಿ ಕಾದಿರುವ ಮರಳುಗಳಿಂದಲೂ, ಮೊನೆಚಾಗಿರುವ ಗೂಟಗಳಿಂದಲೂ ಕೂಡಿರುವುದು. ಕೆಲವು ಕಡೆಗಳಲ್ಲಿ ಚೆನ್ನಾಗಿ

**ಅನೇಕಶಾಖಾವಿತತೈರ್ವ್ಯಾಪ್ತಂ ವಂಶವನೈಃ ಕ್ವಚಿತ್ ।**
**ಕಷ್ಟೇನ ತಮಸಾ ಮಾರ್ಗೇ ನಾನಾಲಂಬೇನ ಕುತ್ರಚಿತ್ ॥ ೧೩ ॥**

**ಅಯಃಶೃಂಗಾಟಕೈಸ್ತೀಕ್ಷ್ಣೈಃ ಕ್ವಚಿದ್ದಾವಾಗ್ನಿನಾ ಪುನಃ ।**
**ಕ್ವಚಿತ್ತಪ್ತಶಿಲಾಭಿಶ್ಚ ಕ್ವಚಿದ್ವ್ಯಾಪ್ತಂ ಹಿಮೇನ ಚ ॥ ೧೪ ॥**

**ಕ್ವಚಿದ್ವಾಲುಕಯಾ ವ್ಯಾಪ್ತಮಾಕಂಠಾಂತಃಪ್ರವೇಶಯಾ ।**
**ಕ್ವಚಿದ್ದುಷ್ಟಾಂಬುನಾ ವ್ಯಾಪ್ತಂ ಕ್ವಚಿಚ್ಚ ಕರಿಷಾಗ್ನಿನಾ ॥ ೧೫ ॥**

**ಕ್ವಚಿತ್ಸಿಂಹೈರ್ವೃಕೈರ್ವ್ಯಾಘ್ರೈರ್ಮಶಕೈಶ್ಚ ಸುದಾರುಣೈಃ ।**
**ಕ್ವಚಿನ್ಮಹಾಜಲೌಕಾಭಿಃ ಕ್ವಚಿಚ್ಚಾಜಗರೈಸ್ತಥಾ ॥ ೧೬ ॥**

**ಮಕ್ಷಿಕಾಭಿಶ್ಚ ರೌದ್ರಾಭಿಃ ಕ್ವಚಿತ್ಸರ್ಪೈರ್ವಿಷೋಲ್ಬಣೈಃ ।**
**ಮತ್ತಮಾತಂಗಯೂಥೈಶ್ಚ ಬಲೋನ್ಮತ್ತೈಃ ಪ್ರಮಾಥಿಭಿಃ ॥ ೧೭ ॥**

**ಪಂಥಾನಮುಲ್ಲಿಖದ್ಭಿಶ್ಚ ಸೂಕರೈಸ್ತೀಕ್ಷ್ಣದಂಷ್ಟ್ರಿಭಿಃ ।**
**ತೀಕ್ಷ್ಣಶೃಂಗೈಶ್ಚ ಮಹಿಷೈಸ್ಸರ್ವಭೂತೈಶ್ಚ ಶ್ವಾಪದೈಃ ॥ ೧೮ ॥**

ಬೆಳೆದಿರುವ ಬಿದಿರು ಮೆಳೆಗಳಿಂದಲೂ, ಕೆಲವು ಕಡೆಗಳಲ್ಲಿ ಕಷ್ಟಕರವಾದ ಕಗ್ಗತ್ತಲೆಯಿಂದ ಕೂಡಿದ್ದಾಗಿರುವುದು.

೧೪-೧೯. ಈ ದಾರಿಯು ಕೆಲವು ಕಡೆಗಳಲ್ಲಿ ಕಬ್ಬಿಣದ ಹರಿತವಾದ ಅಲಗುಗಳಿಂದ ಕೂಡಿರುವ ದೊಡ್ಡ ಚೌಕಗಳೂ, ಗಾಳಿ ಮತ್ತು ಬೆಂಕಿ ಇವುಗಳೂ, ಹಿಮವೂ ಇರುವುವು. ಮತ್ತು ಈ ದಾರಿಯಲ್ಲಿ ಕುತ್ತಿಗೆಯವರಿಗೂ ಹೂತುಕೊಳ್ಳುವ ಮರಳಿನ ಉಸುಬುಗಳು ಇರುವುವು. ಪಾಪಿಗಳು ಯಮನ ನಗರಕ್ಕೆ ಹೋಗುವ ದಾರಿಯಲ್ಲಿ ಕೆಟ್ಟನೀರು, ಕೆಲವು ಕಡೆ ಬೆಂಕಿಯು, ಕೆಲವು ಕಡೆ ಸಿಂಹ, ತೋಳ, ಹುಲಿ, ಕ್ರೂರವಾದ ಸೊಳ್ಳೆ, ದೊಡ್ಡ ಜಿಗಣೆಗಳು, ಹೆಬ್ಬಾವುಗಳು, ನೊಣಗಳು, ವಿಷವನ್ನು ಕಾರುತ್ತಿರುವ ಹಾವುಗಳು, ಸಿಕ್ಕಿದವರನ್ನು ನಾಶಮಾಡುವ ಮದಿಸಿದ ಆನೆಯ ಹಿಂಡುಗಳು, ದಾರಿಯನ್ನು ಕೊರೆಯುತ್ತಿರುವ ಹರಿತವಾದ ಕೋರೆದಾಡೆಗಳುಳ್ಳ ಹಂದಿಗಳು, ಮೊನೆಚಾದ ಕೊಂಬುಗಳಿಂದ ಕೂಡಿರುವ ಎಮ್ಮೆಗಳು, ಅನೇಕ ವಿಧವಾದ ದುಷ್ಟ ಪ್ರಾಣಿಗಳು, ಹಿಂಸೆಕೊಡುವ ಡಾಕಿನಿಯರು, ವಿರೂಪವಾದ ಆಕಾರವುಳ್ಳ ರಾಕ್ಷಸರು,

**ಡಾಕಿನೀಭಿಶ್ಚ ರೌದ್ರಾಭಿರ್ವಿಕರಾಲೈಶ್ಚ ರಾಕ್ಷಸೈಃ ।**
**ವ್ಯಾಧಿಭಿಶ್ಚ ಮಹಾಘೋರೈಃ ಪೀಡ್ಯಮಾನಾ ವ್ರಜಂತಿ ಹಿ ॥ ೧೯ ॥**

**ಮಹಾಧೂಲಿವಿಮಿಶ್ರೇಣ ಮಹಾಚಂಡೇನ ವಾಯುನಾ ।**
**ಮಹಾಪಾಷಾಣವರ್ಷೇಣ ಹನ್ಯಮಾನಾ ನಿರಾಶ್ರಯಾಃ ॥ ೨೦ ॥**

**ಕ್ವಚಿದ್ವಿದ್ಯುತ್ಪ್ರಪಾತೇನ ದಹ್ಯಮಾನಾ ವ್ರಜಂತಿ ಚ ।**
**ಮಹತಾ ಬಾಣವರ್ಷೇಣ ವಿಧ್ಯಮಾನಾಶ್ಚ ಸರ್ವತಃ ॥ ೨೧ ॥**

**ಪತದ್ಭಿರ್ವಜ್ರಪಾತೈಶ್ಚ ಉಲ್ಕಾಪಾತೈಶ್ಚ ದಾರುಣೈಃ ।**
**ಪ್ರದೀಪ್ತಾಂಗಾರವರ್ಷೇಣ ದಹ್ಯಮಾನಾಶ್ಚ ಸಂತಿ ಹಿ ॥ ೨೨ ॥**

**ಮಹತಾ ಪಾಂಶುವರ್ಷೇಣ ಪೂರ್ಯಮಾಣಾ ರುದಂತಿ ಚ ।**
**ಮಹಾಮೇಘರವೈರ್ಘೋರೈಸ್ತ್ರಸ್ಯಂತೇ ಚ ಮುಹುರ್ಮುಹುಃ ॥ ೨೩ ॥**

ಭಯಂಕರವಾದ ರೋಗಗಳು ಇವೆಲ್ಲವೂ ಇರುವುವು. ಪಾಪಿಗಳು ಇವುಗಳಿಂದ ತೊಂದರೆಯನ್ನು ಅನುಭವಿಸುತ್ತಾ ಹೋಗುತ್ತಿರುವರು.

೨೦-೨೨. ಮತ್ತು ಆ ದಾರಿಯಲ್ಲಿ ಬಹಳ ಧೂಳಿನಿಂದ ಕೂಡಿರುವ ಸುಂಟರ ಗಾಳಿಯಿರುವುದು. ಕಲ್ಲುಗಳ ಮಳೆಯನ್ನು ಉಂಟುಮಾಡುವ ಆ ಗಾಳಿಯ ಏಟನ್ನು ಅನುಭವಿಸುತ್ತಾ ಯಾವ ಆಶ್ರಯವೂ ಇಲ್ಲದೆ ಕೆಲವು ಕಡೆಗಳಲ್ಲಿ ಸಿಡಿಲಿನ ಏಟಿನಿಂದ ಸುಟ್ಟವರಾಗಿ ಪ್ರಯಾಣಮಾಡುತ್ತಿರುವರು. ಈ ಪಾಪಿಗಳು ಹೋಗುವ ದಾರಿಯಲ್ಲಿ ಎಲ್ಲಾ ಕಡೆಯಿಂದಲೂ ಬಾಣಗಳ ಏಟುಗಳು ಬಲವಾಗಿ ಬೀಳುವುವು. ಮತ್ತು ವಜ್ರಾಯುಧದ ಏಟುಗಳು, ಭಯಂಕರವಾದ ಕೊಳ್ಳಿಗಳು ಇವರುಗಳ ಮೇಲೆ ಬೀಳುವುವು. ಬಲವಾಗಿ ಸುಡುತ್ತಿರುವ ಕೆಂಡಗಳ ಮಳೆಯು ಆಗಾಗ ಸುರಿಯುವುದು. ಇವುಗಳಿಂದ ಇವರ ಶರೀರವು ಸುಡುತ್ತಿರುವುದು. ಇಂತಹ ಕಷ್ಟಗಳನ್ನು ಅನುಭವಿಸುತ್ತಾ ಪಾಪಿಗಳು ಪ್ರಯಾಣಮಾಡುವರು.

೨೩-೨೫. ಪಾಪಿಗಳು ಯಮನ ಪಟ್ಟಣಕ್ಕೆ ಹೋಗುವ ದಾರಿಯಲ್ಲಿ ಬಹಳವಾದ ಧೂಳಿನ ಮಳೆಯು ಸುರಿಯುವುದು. ಅದರಿಂದ ಅವರ ಮುಖ ಮೊದಲಾದವುಗಳಿಗೆ ಧೂಳು ತುಂಬಿ ಅಳುವರು. ಬಲವಾದ ಮತ್ತು ಭಯಂಕರವಾದ ಮೋಡ

**ನಿಶಿತಾಯುಧವರ್ಷೇಣ ಭಿದ್ಯಮಾನಾಶ್ಚ ಸರ್ವತಃ ।**
**ಮಹಾಕ್ಷಾರಾಂಬುಧಾರಾಭಿಸ್ಸಿಚ್ಯಮಾನಾ ವ್ರಜಂತಿ ಚ ॥ ೨೪ ॥**

**ಮಹಾಶೀತೇನ ಮಹತಾ ರೂಕ್ಷೇಣ ಪರುಷೇಣ ಚ ।**
**ಸಮಂತಾದ್ಬಾಧ್ಯಮಾನಾಶ್ಚ ಶುಷ್ಯಂತೇ ಸಂಕುಚಂತಿ ಚ ॥ ೨೫ ॥**

**ಇತ್ಥಂ ಮಾರ್ಗೇಣ ರೌದ್ರೇಣ ಪಾಥೇಯರಹಿತೇನ ಚ ।**
**ನಿರಾಲಂಬೇನ ದುರ್ಗೇಣ ನಿರ್ಜಲೇನ ಸಮಂತತಃ ॥ ೨೬ ॥**

**ವಿಷಮೇಣೈವ ಮಹತಾ ನಿರ್ಜನಾಪಾಶ್ರಯೇಣ ಚ ।**
**ತಮೋರೂಪೇಣ ಕಷ್ಟೇನ ಸರ್ವದುಷ್ಟಾಶ್ರಯೇಣ ಚ ॥ ೨೭ ॥**

**ನೀಯಂತೇ ದೇಹಿನಸ್ಸರ್ವೇ ಯೇ ಮೂಢಾಃ ಪಾಪಕರ್ಮಿಣಃ ।**
**ಯಮದೂತೈರ್ಮಹಾಘೋರೈಸ್ತದಾಜ್ಞಾಕಾರಿಭಿರ್ಬಲಾತ್ ॥ ೨೮ ॥**

ಗಳಿಂದ ಭಯವಾಗುವುದು. ಹರಿತವಾದ ಆಯುಧಗಳ ಮಳೆಯಿಂದ ಅವರ ಶರೀರವು ಛಿದ್ರಛಿದ್ರವಾಗುವುದು. ಬಹಳವಾದ ಉಪ್ಪುನೀರಿನ ಮಳೆಯು ಈ ಗಾಯಗಳ ಮೇಲೆ ಬೀಳುತ್ತಿರುವುದರಿಂದ ಬಹಳವಾಗಿ ವ್ಯಸನಪಡುತ್ತಾ ಪ್ರಯಾಣವನ್ನು ಮಾಡುವರು. ಅಲ್ಲದೆ ಅಲ್ಲಿ ಅತಿಶೈತ್ಯದಿಂದ ಗಾಳಿಯು ತಣ್ಣಗೆ ಶರೀರವು ಕೊರೆದುಹೋಗುವಂತೆ ಬೀಸುತ್ತಿರುವುದು. ಇಂತಹ ಗಾಳಿಯ ಹೊಡೆತಕ್ಕೆ ಸಿಕ್ಕಿ ಅವರ ಶರೀರಗಳು ಕೃಶವಾಗುವವು.

೨೬-೨೮. ತಿಳುವಳಿಕೆಯಿಲ್ಲದೆ ಪಾತಕಗಳನ್ನು ಮಾಡಿದ ಜನಗಳನ್ನು ಯಮನ ಅಪ್ಪಣೆಯಂತೆ ನಡೆಯುವ, ಬಹಳ ಭಯವನ್ನುಂಟುಮಾಡುವ ಆಕಾರವುಳ್ಳ ಯಮನ ದೂತರುಗಳು, ಯಮನ ಅಪ್ಪಣೆಯಮೇರೆ ಹಿಂದೆ ಹೇಳಿದ ಕಷ್ಟಕರವಾದ ದಾರಿಯಲ್ಲಿ ಕರೆದುಕೊಂಡು ಹೋಗುವರು. ಅಲ್ಲಿ ಆಹಾರಾದಿಗಳು ಯಾವುದೂ ಇರುವುದಿಲ್ಲ. ಸಂಚರಿಸಲು ದುಃಖಕರವಾಗಿಯೂ, ಬಹಳ ವಿಷಮಯವಾಗಿಯೂ, ಜನಸಂಚಾರವಿಲ್ಲದೆಯೂ, ಬಹಳ ಕಗ್ಗತ್ತಲೆಯಿಂದ ಕೂಡಿಯೂ, ದುಷ್ಟ ಜಂತುಗಳಿಗೆ ಆಶ್ರಯವಾಗಿ, ಕಷ್ಟಕರವಾಗಿಯೂ ಇರುವ ಇಂತಹ ದಾರಿಯಿಂದ ಪಾಪಿಗಳನ್ನು ಯಮನ ಪಟ್ಟಣಕ್ಕೆ ಬಲಾತ್ಕಾರದಿಂದ ಕರೆದುಕೊಂಡು ಹೋಗುವರು.

**ಏಕಾಕಿನಃ ಪರಾಧೀನಾ ಮಿತ್ರಬಂಧುವಿವರ್ಜಿತಾಃ ।**
**ಶೋಚಂತಸ್ಸ್ವಾನಿ ಕರ್ಮಾಣಿ ರುದಂತಶ್ಚ ಮುಹುರ್ಮುಹುಃ ॥ ೨೯ ॥**

**ಪ್ರೇತಾ ಭೂತ್ವಾ ವಿವಸ್ತ್ರಾಶ್ಚ ಶುಷ್ಕಕಂಠೌಷ್ಠತಾಲುಕಾಃ ।**
**ಅಸೌಮ್ಯಾ ಭವಭೀತಾಶ್ಚ ದಹ್ಯಮಾನಾಃ ಕ್ಷುಧಾನ್ವಿತಾಃ ॥ ೩೦ ॥**

**ಬದ್ಧಾಶ್ಶೃಂಖಲಯಾ ಕೇಚಿದುತ್ತಾನಪಾದಕಾ ನರಾಃ ।**
**ಕೃಷ್ಯಂತೇ ಕೃಷ್ಯಮಾಣಾಶ್ಚ ಯಮದೂತೈರ್ಬಲೋತ್ಕಟೈಃ ॥ ೩೧ ॥**

**ಉರಸಾಧೋಮುಖಾಶ್ಚಾನ್ಯೇ ಘೃಷ್ಯಮಾಣಾಸ್ಸುದುಃಖಿತಾಃ ।**
**ಕೇಶಪಾಶನಿಬಂಧೇನ ಸಂಕೃಷ್ಯಂತೇ ಚ ರಜ್ಜುನಾ ॥ ೩೨ ॥**

**ಲಲಾಟೇ ಚಾಂಕುಶೇನಾನ್ಯೇ ಭಿನ್ನಾ ದುಷ್ಯಂತಿ ದೇಹಿನಃ ।**
**ಉತ್ತಾನಾಃ ಕಂಟಕಪಥಾ ಕ್ವಚಿದಂಗಾರವರ್ತ್ಮನಾ ॥ ೩೩ ॥**

**ಪಶ್ಚಾದ್ಬಾಹುನಿಬದ್ಧಾಶ್ಚ ಜಠರೇಣ ಪ್ರಪೀಡಿತಾಃ ।**
**ಪೂರಿತಾಶ್ಶೃಂಖಲಾಭಿಶ್ಚ ಹಸ್ತಯೋಶ್ಚ ಸುಕೀಲಿತಾಃ ॥ ೩೪ ॥**

೨೯-೩೧. ಬಹಳ ಬಲಿಷ್ಠರಾದ ಯಮದೂತರು, ಪಾಪಗಳನ್ನು ಮಾಡಿದವರ ಕೈಕಾಲುಗಳಿಗೆ ಸರಪಳಿಯನ್ನು ಹಾಕಿ ಎಳೆದುಕೊಂಡು ಹೋಗುವಾಗ ದಾರಿಯಲ್ಲಿ ಒಬ್ಬಂಟಿಗರಾಗಿ ಇನ್ನೊಬ್ಬರ ಅಧೀನಕ್ಕೆ ಸಿಕ್ಕಿ, ಸ್ನೇಹಿತರು ನೆಂಟರು ಇವರುಗಳನ್ನು ಬಿಟ್ಟು, ತಾವು ಮಾಡಿದ ಕರ್ಮಗಳನ್ನು ಜ್ಞಾಪಿಸಿಕೊಂಡು ಬಾರಿಬಾರಿಗೂ ಅಳುತ್ತಾ ಮೈಮೇಲೆ ಬಟ್ಟೆಯೂ ಇಲ್ಲದೆ, ಕುತ್ತಿಗೆ, ತುಟಿ ಇವುಗಳು ಒಣಗುತ್ತಿರಲು, ಭಯದಿಂದಲೂ, ಹಸಿವೆಯಿಂದಲೂ ಕೂಡಿ ಪ್ರಯಾಣಮಾಡುವರು.

೩೨-೩೬. ಯಮನದೂತರು ಈ ಪಾಪಿಗಳನ್ನು ಕೆಳಗಡೆಗೆ ಮುಖವನ್ನು ಮಾಡಿ ಎದೆಗೆ ಹಗ್ಗವನ್ನು ಕಟ್ಟಿ ಎಳೆದು ದುಃಖಪಡಿಸುವರು. ತಲೆಯ ಕೂದಲನ್ನು ಕಟ್ಟುವಂತೆ ಹಗ್ಗದಿಂದ ಇವರನ್ನು ಬಿಗಿದು ಕಟ್ಟುವರು. ಕೆಲವರನ್ನು ಅವರ ಹಣೆಯ ಮೇಲೆ ಅಂಕುಶದಿಂದ ಹೊಡೆಯುವರು. ಕೆಲವರನ್ನು ಬೆಂಕಿಯ ಕೆಂಡಗಳನ್ನು ಹಾಸಿರುವ ಮತ್ತು ಮುಳ್ಳುಗಳು ತುಂಬಿರುವ ದಾರಿಯಲ್ಲಿ ಅಂಗತ್ತನಾಗಿ ಎಳೆದುಕೊಂಡು ಹೋಗುವರು. ಕೆಲವರಿಗೆ ಕೈಯನ್ನು ಹಿಂದಕ್ಕೆ ಕಟ್ಟಿ ಹೊಟ್ಟೆಯ ಮೇಲೆ ಹೊಡೆಯುವರು. ಕೈಯನ್ನು ಸರಪಣಿಯಿಂದ ಕಟ್ಟಿ, ಕುತ್ತಿಗೆಗೆ ಹಗ್ಗವನ್ನು ಹಾಕಿ ಬಲವಂತದಿಂದ ಎಳೆದುಕೊಂಡು ಹೋಗುವರು. ನಾಲಿಗೆಗೆ ಅಂಕುಶವನ್ನು ಚುಚ್ಚಿ ಹಗ್ಗ

ಗ್ರೀವಾಪಾಶೇನ ಕೃಷ್ಯಂತೇ ಪ್ರಯಾಂತ್ಯನ್ಯೇ ಸುದುಃಖಿತಾಃ ।
ಜಿಹ್ವಾಂಕುಶಪ್ರವೇಶೇನ ರಜ್ಜ್ವಾ ಕೃಷ್ಯಂತ ಏವ ತೇ ॥ ೩೫ ॥

ನಾಸಾಭೇದೇನ ರಜ್ಜ್ವಾ ವಾ ತ್ವಾಕೃಷ್ಯಂತೇ ತಥಾಪರೇ ।
ಭಿನ್ನಾಃ ಕಪಾಲಯೋಃ ರಜ್ಜ್ವಾ ಕೃಷ್ಯಂತೇಽನ್ಯೇ ತಥೌಷ್ಠಯೋಃ ॥ ೩೬ ॥

ಛಿನ್ನಾಗ್ರಪಾದಹಸ್ತಾಶ್ಚ ಛಿನ್ನಕರ್ಣೋಷ್ಠನಾಸಿಕಾಃ ।
ಸಂಛಿನ್ನಶಿಶ್ನವೃಷಣಾಃ ಛಿನ್ನಭಿನ್ನಾಂಗಸಂಧಯಃ ॥ ೩೭ ॥

ಅಭಿದ್ಯಮಾನಾಃ ಕುಂತೈಶ್ಚ ಭಿದ್ಯಮಾನಾಶ್ಚ ಸಾಯಕೈಃ ।
ಇತಶ್ಚೇತಶ್ಚ ಧಾವಂತಃ ಕ್ರಂದಮಾನಾ ನಿರಾಶ್ರಯಾಃ ॥ ೩೮ ॥

ಮುದ್ಗರೈರ್ಲೋಹದಂಡೈಶ್ಚ ಹನ್ಯಮಾನಾ ಮುಹುರ್ಮುಹುಃ ।
ಕಂಟಕೈರ್ವಿವಿಧೈರ್ಘೋರೈರ್ಜ್ವಲನಾರ್ಕಸಮಪ್ರಭೈಃ ॥ ೩೯ ॥

ಭಿಂದಿಪಾಲೈರ್ವಿಭಿದ್ಯಂತೇ ಸ್ರವಂತಃ ಪೂಯಶೋಣಿತಂ ।
ಶಕೃತಾಕ್ತಮಿದಿಗ್ಧಾಶ್ಚ ನಿಯಂತೇ ವಿವಶಾ ನರಾಃ ॥ ೪೦ ॥

ಯಾಚಮಾನಾಶ್ಚ ಸಲಿಲಮನ್ನಂ ವಾಪಿ ಬುಭುಕ್ಷಿತಾಃ ।
ಛಾಯಾಂ ಪ್ರಾರ್ಥಯಮಾನಾಶ್ಚ ಶೀತಾರ್ತಾಶ್ಚಾನಲಂ ಪುನಃ ॥ ೪೧ ॥

ಹಾಕಿ ಎಳೆಯುವರು. ಮೂಗನ್ನು ಚುಚ್ಚಿ ಹಗ್ಗವನ್ನು ಹಾಕಿ ಕೆಲವರನ್ನು ಎಳೆಯುವರು. ಕೆಲವರಿಗೆ ಕೆನ್ನೆಗೆ, ಕೆಲವರಿಗೆ ತುಟಿಗಳಿಗೆ ಹಗ್ಗವನ್ನು ಹಾಕಿ ಎಳೆದುಕೊಂಡು ಹೋಗುವರು.

೩೭-೪೧. ಪಾಪಗಳನ್ನು ಮಾಡಿದವರ ಕಾಲಿನ ತುದಿ, ಕಿವಿ, ತುಟಿ, ಮೂಗು ಅಪಾಯಸ್ಥಳ, ಶರೀರದ ಕೀಲುಗಳು ಇವುಗಳೆಲ್ಲವೂ ಕತ್ತರಿಸಿಹೋಗಿರುವುವು. ಕುಂತಗಳಿಂದಲೂ, ಬಾಣಗಳಿಂದಲೂ ಏಟನ್ನು ತಿನ್ನುತ್ತಾ ಇಲ್ಲಿಂದ ಅಲ್ಲಿಗೆ ಓಡುತ್ತಾ, ಅಳುತ್ತಾ, ಯಾರ ಆಶ್ರಯವೂ ಇಲ್ಲದೆ ಇರುವ ಈ ಪಾಪಿಗಳು, ಮುದ್ಗರಾಯುಧ, ಲೋಹದಂಡ, ಅನೇಕ ವಿಧವಾದ ಮುಳ್ಳುಗಳೂ, ಬೆಂಕಿ ಮತ್ತು ಸೂರ್ಯ ಇವರಿಗೆ ಸಮನಾದ ಅನೇಕ ವಿಧವಾದ ಭಿಂದಿವಾಲವೇ ಮೊದಲಾದ ಆಯುಧಗಳ ಪೆಟ್ಟಿನಿಂದ ರಕ್ತ, ಕೀವು ಇವುಗಳನ್ನು ಸುರಿಸುತ್ತಾ, ಮಲಮೂತ್ರಗಳು ಮತ್ತು ಕ್ರಿಮಿಗಳು ಇವುಗಳಿಂದ ಕೂಡಿದ ಶರೀರವುಳ್ಳವರಾಗಿ ಯಮದೂತರ ಅಧೀನಕ್ಕೆ ಸಿಕ್ಕಿ ದಾರಿಯಲ್ಲಿ ತೊಂದರೆಯನ್ನು ಅನುಭವಿಸುವರು.

**ದಾನಹೀನಾಃ ಪ್ರಯಾಂತ್ಯೇವಂ ಪ್ರಾರ್ಥಯಂತಃ ಸುಖಂ ನರಾಃ ।**
**ಗೃಹೀತದಾನಪಾಥೇಯಾಸ್ಸುಖಂ ಯಾಂತಿ ಯಮಾಲಯಂ ॥ ೪೨ ॥**

**ಏವಂ ನ್ಯಾಯೇನ ಕಷ್ಟೇನ ಪ್ರಾಪ್ತಾಃ ಪ್ರೇತಪುರಂ ಯದಾ ।**
**ಪ್ರಜ್ಞಾಪಿತಾಸ್ತತೋ ದೂತೈರ್ನಿವೇಶ್ಯಂತೇ ಯಮಾಗ್ರತಃ ॥ ೪೩ ॥**

**ತತ್ರ ಯೇ ಶುಭಕರ್ಮಾಣಸ್ತಾಂಸ್ತು ಸಂಮಾನಯೇದ್ಯಮಃ ।**
**ಸ್ವಾಗತಾಸನದಾನೇನ ಪಾದ್ಯಾರ್ಘ್ಯೇಣ ಪ್ರಿಯೇಣ ಚ ॥ ೪೪ ॥**

**ಧನ್ಯಾ ಯೂಯಂ ಮಹಾತ್ಮಾನೋ ನಿಗಮೋದಿತಕಾರಿಣಃ ।**
**ಯೈಶ್ಚ ದಿವ್ಯಸುಖಾರ್ಥಾಯ ಭವದ್ಭಿಸ್ಸುಕೃತಂ ಕೃತಂ ॥ ೪೫ ॥**

**ದಿವ್ಯಂ ವಿಮಾನಮಾರುಹ್ಯ ದಿವ್ಯಸ್ತ್ರೀಭೋಗಭೂಷಿತಂ ।**
**ಸ್ವರ್ಗಂ ಗಚ್ಛಧ್ವಮಮಲಂ ಸರ್ವಕಾಮಸಮನ್ವಿತಂ ॥ ೪೬ ॥**

೪೨-೪೩. ಧರ್ಮವನ್ನು ಮಾಡದಿರುವ ಜನರು ಹೀಗೆ ಕಷ್ಟದಿಂದ ಪ್ರಯಾಣ ಮಾಡುವರು. ಧರ್ಮವನ್ನು ಆಚರಿಸಿ ಅದರ ಫಲವನ್ನು ಬುತ್ತಿಯನ್ನಾಗಿ ಕಟ್ಟಿಕೊಂಡು ಹೋಗತಕ್ಕವರು ಸುಖವಾಗಿ ಯಮನ ಮನೆಯನ್ನು ತಲಪುವರು. ಹೀಗೆ ನ್ಯಾಯದಿಂದಲೂ ಕಷ್ಟಕರವಾದ ರೀತಿಯಿಂದಲೂ ಯಮನ ಪಟ್ಟಣಕ್ಕೆ ಬಂದಿರುವವರ ವಿಚಾರವನ್ನು ಅವನ ದೂತರು ಯಮನಿಗೆ ತಿಳಿಸಿದ ಕೂಡಲೆ, ಯಮನು ಅವರನ್ನು ತನ್ನ ಮುಂದುಗಡೆ ನಿಲ್ಲಿಸಿಕೊಂಡು ಅವರು ಮಾಡಿದ ಪಾಪಪುಣ್ಯಗಳನ್ನು ವಿಚಾರ ಮಾಡುವನು.

೪೪-೪೭. ಅವರಲ್ಲಿ ಪುಣ್ಯಮಾಡಿದವರನ್ನು ಯಮನು ಮರ್ಯಾದೆಮಾಡುವನು. ಅವರಿಗೆ ಆಸನವನ್ನು ಕೊಟ್ಟು ಸುಖವಾದ ಕುಶಲಪ್ರಶ್ನೆಯನ್ನು ಕೇಳಿ, ಅರ್ಘ್ಯ, ಪಾದ್ಯವೇ ಮೊದಲಾದವುಗಳಿಂದ ಅವರನ್ನು ಪೂಜಿಸಿದ ನಂತರ ಎಲ್ಲಾ ವಿಧವಾದ ನಿಮ್ಮ ಇಷ್ಟಾರ್ಥಗಳನ್ನು ಕೊಡುವ ನಿರ್ಮಲವಾದ ಸ್ವರ್ಗಕ್ಕೆ ನೀವು ಹೋಗಿರಿ. ಅಲ್ಲಿ ಉತ್ತಮವಾದ ಸುಖವನ್ನು ಅನುಭವಿಸುವುದಕ್ಕಾಗಿ ನೀವು ಪುಣ್ಯವನ್ನು ಮಾಡಿರುತ್ತೀರಿ. ನೀವುಗಳು ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಧರ್ಮವನ್ನು ಆಚರಿಸಿರುವ ಪುಣ್ಯವಂತರಾಗಿರುತ್ತೀರಿ. ನೀವು ಉತ್ತಮಸ್ತ್ರೀಯರಿಂದ ಕೂಡಿದ ಉತ್ತಮವಾದ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋಗಿ ಅಲ್ಲಿ ಬೇಕಾದ

ತತ್ರ ಭುಕ್ತ್ವಾ ಮಹಾಭೋಗಾನಂತೇ ಪುಣ್ಯಸ್ಯ ಸಂಕ್ಷಯಾತ್ ।
ಯತ್ಕಿಂಚಿದಲ್ಪಮಶುಭಂ ಪುನಸ್ತದಿಹ ಭೋಕ್ಷ್ಯಥ ॥ ೪೭ ॥

ಧರ್ಮಾತ್ಮಾನೋ ನರಾ ಯೇ ಚ ಮಿತ್ರಭೂತಾ ಇವಾತ್ಮನಃ ।
ಸೌಮ್ಯಂ ಸುಖಂ ಪ್ರಪಶ್ಯಂತಿ ಧರ್ಮರಾಜಾನಮೇವ ಚ ॥ ೪೮ ॥

ಯೇನ ಪುನಃ ಕ್ರೂರಕರ್ಮಾಣಸ್ತೇ ಪಶ್ಯಂತಿ ಭಯಾನಕಂ ।
ದಂಷ್ಟ್ರಾಕರಾಲವದನಂ ಭ್ರುಕುಟೀಕುಟಿಲೇಕ್ಷಣಂ ॥ ೪೯ ॥

ಊರ್ಧ್ವಕೇಶಂ ಮಹಾಶ್ಮಶ್ರುಮೂರ್ಧ್ವಪ್ರಸ್ಫುರಿತಾಧರಂ ।
ಅಷ್ಟಾದಶಭುಜಂ ಕ್ರುದ್ಧಂ ನೀಲಾಂಜನಚಯೋಪಮಂ ॥ ೫೦ ॥

ಸುಖವನ್ನು ಅನುಭವಿಸಿ, ಪುಣ್ಯವು ಮುಗಿದನಂತರ ಉಳಿದ ಕೊಂಚಮಟ್ಟಿನ ಪಾಪ ಕರ್ಮದ ಫಲವನ್ನು ಇಲ್ಲಿ ಅನುಭವಿಸುವುದಕ್ಕಾಗಿ ಬರುವಿರಿ ಎಂದು ಯಮನು ಅವರಿಗೆ ಹೇಳುವನು.

೪೮. ಧರ್ಮವನ್ನು ಆಚರಿಸುವ ಜನರು ಆತ್ಮನಿಗೆ ಸ್ನೇಹಿತರಾಗಿರುವರು. ಅವರು ಮೃದುಸ್ವಭಾವವಾಗಿರುವ ಯಮನ ರೂಪವನ್ನು ಮಾತ್ರ ನೋಡುವರು. ಮತ್ತು ಸುಖದಿಂದ ಯಮನ ದರ್ಶನವನ್ನು ಮಾಡುವರು.

೪೯-೫೧. ಕೆಟ್ಟಕೆಲಸವನ್ನು ಮಾಡಿದವರು ಯಮನ ಕ್ರೂರರೂಪವನ್ನು ನೋಡುವರು. ಅವರಿಗೆ ಯಮನು ಕೋರೆಯಹಲ್ಲಿನಿಂದ ಕ್ರೂರವಾದ ಮುಖವುಳ್ಳವನಾಗಿಯೂ, ಹುಬ್ಬುಗಂಟಿನಿಂದ ವಕ್ರದೃಷ್ಟಿಯುಳ್ಳವನಾಗಿಯೂ, ಮೇಲುಮುಖವಾದ ಕೂದಲುಗಳುಳ್ಳ ಬಲವಾದ ಮೀಶೆಯಿಂದಲೂ, ಮೇಲುಮುಖವಾಗಿ ಅದರುತ್ತಿರುವ ತುಟಿಗಳಿಂದಲೂ ಕೂಡಿ ಕಾಣಿಸುವನು. ಎಲ್ಲಾ ವಿಧವಾದ ಆಯುಧಗಳನ್ನೂ ಹಿಡಿದುಕೊಂಡಿರುವನು. ಹದಿನೆಂಟು ಕೈಗಳಿರುವುವು. ಕರಿಯದಾದ ಕಾಡಿಗೆಯ ಬೆಟ್ಟದಂತೆ ಇರುವ ಈ ಯಮಧರ್ಮರಾಜನು ದೊಡ್ಡದಾದ ಕೋಣವನ್ನು ಹತ್ತಿ ಅದರಮೇಲೆ ಕೂತುಕೊಂಡಿರುವನು. ಉರಿಯುತ್ತಿರುವ ಬೆಂಕಿಗೆ ಸಮನಾದ ಕಣ್ಣುಗಳಿರುವುವು. ಮೇರುಪರ್ವತದಂತೆ ಶರೀರವು ಎತ್ತರವಾಗಿರುವುದು. ಇಂತಹ ಯಮನು ಕೆಂಪು ಹೂವಿನ ಮಾಲೆಯನ್ನು ಧರಿಸಿ, ಕೆಂಪು ಬಟ್ಟೆಗಳನ್ನು ಧರಿಸಿ

**ಸರ್ವಾಯುಧೋದ್ಧೃತಕರಂ ಸರ್ವದಂಡೇನ ತರ್ಜಯನ್ ।**
**ಮಹಾಮಹಿಷಮಾರೂಢಂ ದೀಪ್ತಾಗ್ನಿಸಮಲೋಚನಂ ॥ ೫೦ ॥**

**ರಕ್ತಮಾಲ್ಯಾಂಬರಧರಂ ಮಹಾಮೇರುಮಿವೋಚ್ಛ್ರಿತಂ ।**
**ಪ್ರಲಯಾಂಬುದನಿರ್ಘೋಷಂ ಪಿಬನ್ನಿವ ಮಹೋದಧಿಂ ॥ ೫೨ ॥**

**ಗ್ರಸಂತಮಿವ ಶೈಲೇಂದ್ರಮುದ್ಗಿರಂತಮಿವಾನಲಂ ।**
**ಮೃತ್ಯುಶ್ಚೈವ ಸಮೀಪಸ್ಥಃ ಕಾಲಾನಲಸಮಪ್ರಭಃ ॥ ೫೩ ॥**

**ಕಾಲಶ್ಚಾಂಜನಸಂಕಾಶಃ ಕೃತಾಂತಶ್ಚ ಭಯಾನಕಃ ।**
**ಮಾರೀ ಚೋಗ್ರಮಹಾಮಾರೀ ಕಾಲರಾತ್ರಿಶ್ಚ ದಾರುಣಾ ॥ ೫೪ ॥**

**ವಿವಿಧಾ ವ್ಯಾಧಯಃ ಕುಷ್ಠಾ ನಾನಾರೂಪಾ ಭಯಾವಹಾಃ ।**
**ಶಕ್ತಿಶೂಲಾಂಕುಶಧರಾಃ ಪಾಶಚಕ್ರಾಸಿಪಾಣಯಃ ॥ ೫೫ ॥**

ಕೊಂಡು ಎಲ್ಲರನ್ನೂ ತನ್ನ ಯಮದಂಡದಿಂದ ಬೆದರಿಸುತ್ತಿರುವುದನ್ನು ನೋಡುವರು.

೫೨-೫೪. ಆಗ ಯಮಧರ್ಮರಾಜನು ಪ್ರಳಯಕಾಲದ ಮೇಘದಂತೆ ಗರ್ಜಿಸುತ್ತಿರುವನು. ಸಮುದ್ರವನ್ನೆಲ್ಲವನ್ನೂ ಪಾನಮಾಡುವಂತೆ ಆರ್ಭಟಮಾಡುತ್ತಿರುವನು. ದೊಡ್ಡ ಬೆಟ್ಟವನ್ನು ನುಂಗುವವನ ಹಾಗೆಯೂ, ಬೆಂಕಿಯನ್ನು ಉಗುಳುವವನ ಹಾಗೆಯೂ ಇರುವನು. ಈ ಯಮನ ಹತ್ತಿರದಲ್ಲಿ ಪ್ರಳಯಕಾಲದ ಬೆಂಕಿಗೆ ಸಮನಾದ ಕಾಂತಿಯುಳ್ಳ ಮೃತ್ಯುವೂ, ಕಾಡಿಗೆಯಂತೆ ಇರುವ ಆಕಾರವನ್ನು ಧರಿಸಿರುವ ಕಾಲಪುರುಷನೂ, ಭಯಂಕರನಾದ ಕೃತಾಂತನೆಂಬುವನೂ ಇರುವರು. ಮತ್ತು ಈ ಯಮನ ಹತ್ತಿರದಲ್ಲಿ ಮಾರಿಯೂ, ಕ್ರೂರಳಾದ ಮಹಾಮಾರಿ ದೇವತೆಯೂ, ಭಯಂಕರಳಾದ ಕಾಳರಾತ್ರಿಶಕ್ತಿಯೂ, ಅನೇಕ ವಿಧವಾದ ಕುಷ್ಠವೇ ಮೊದಲಾದ, ಆಕಾರವನ್ನು ಧರಿಸಿ ಭಯವನ್ನು ಉಂಟುಮಾಡುವ ರೋಗಗಳೂ, ಇವರೆಲ್ಲರೂ ಇರುವರು.

೫೫. ಯಮನ ದೂತರುಗಳು ಶಕ್ತಿ, ಶೂಲ, ಅಂಕುಶ, ಪಾಶ, ಚಕ್ರ, ಕತ್ತಿ ಇವೇ ಮೊದಲಾದ ಆಯುಧಗಳನ್ನು ಕೈಯಿನಲ್ಲಿ ಹಿಡಿದುಕೊಂಡು ಇರುವರು. ಇವರೆಲ್ಲರೂ ವಜ್ರದ ಮುಖವನ್ನು ಹೊಂದಿ ಇರುವರು.

**ವಜ್ರತುಂಡಧರಾ ರುದ್ರಾಃ ಕ್ಷುರತೂಣಧನುರ್ಧರಾಃ ।**
**ನಾನಾಯುಧಧರಾಸ್ಸರ್ವೇ ಮಹಾವೀರಾ ಭಯಂಕರಾಃ ॥ ೫೬ ॥**

**ಅಸಂಖ್ಯಾತಾ ಮಹಾವೀರಾಃ ಕಾಲಂಜನಸಮಪ್ರಭಾಃ ।**
**ಸರ್ವಾಯುಧೋದ್ಯತಕರಾ ಯಮದೂತಾ ಭಯಾನಕಾಃ ॥ ೫೭ ॥**

**ಅನೇನ ಪರಿಚಾರೇಣ ವೃತಂ ತಂ ಘೋರದರ್ಶನಂ ।**
**ಯಮಂ ಪಶ್ಯಂತಿ ಪಾಪಿಷ್ಠಾಶ್ಚಿತ್ರಗುಪ್ತಂ ಚ ಭೀಷಣಂ ॥ ೫೮ ॥**

**ನಿರ್ಭರ್ತ್ಸಯತಿ ಚಾತ್ಯಂತಂ ಯಮಸ್ತಾನ್ಪಾಪಕರ್ಮಣಃ ।**
**ಚಿತ್ರಗುಪ್ತಶ್ಚ ಭಗವಾನ್ಧರ್ಮವಾಕ್ಯೈಃ ಪ್ರಬೋಧಯೇತ್ ॥ ೫೯ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ನರಕಲೋಕಮಾರ್ಗಯಮದೂತಸ್ವರೂಪವರ್ಣನಂ ನಾಮ ಸಪ್ತಮೋಽಧ್ಯಾಯಃ**

೫೬-೫೮. ಯಮನ ದೂತರುಗಳೆಲ್ಲರೂ ಭಯಂಕರರಾಗಿರುವರು. ಕತ್ತಿ, ಬಿಲ್ಲು, ಬತ್ತಳಿಕೆ ಮತ್ತು ಇತರ ಅನೇಕವಾದ ಆಯುಧಗಳನ್ನು ಧರಿಸಿಕೊಂಡು ಬಹಳ ಶೂರರಾಗಿರುವರು. ಇವರು ಅನೇಕಮಂದಿ ಇರುವರು. ಇವರೆಲ್ಲರ ಶರೀರಗಳು ಕಪ್ಪಗೆ ಕರಿಯ ಕಾಡಿಗೆಗೆ ಸಮನಾದ ಕಾಂತಿಯನ್ನು ಹೊಂದಿರುವುವು. ಎಲ್ಲಾ ವಿಧ ವಾದ ಆಯುಧಗಳನ್ನೂ ಕೈಗಳಲ್ಲಿ ಧರಿಸಿ ಭಯವನ್ನುಂಟುಮಾಡುತ್ತಾ ಇರುವರು. ಈ ಪ್ರಕಾರದಿಂದ ಸುತ್ತುವರಿಯಲ್ಪಟ್ಟು ನೋಡಿದವರಿಗೆ ಭಯವನ್ನುಂಟುಮಾಡುವ ಯಮನನ್ನೂ, ಭಯಂಕರನಾದ ಚಿತ್ರಗುಪ್ತನನ್ನೂ ಪಾಪಮಾಡಿದವರು ನೋಡುವರು.

೫೯. ಯಮನೂ ಆ ಪಾಪಿಗಳನ್ನು ಬಹಳವಾಗಿ ಬೆದರಿಸುವನು. ಆದರೆ ಮೃದುಸ್ವಭಾವವುಳ್ಳ ಚಿತ್ರಗುಪ್ತನು ಆ ಪಾಪಿಗಳಿಗೆ ಧರ್ಮದಿಂದ ಕೂಡಿರುವ ವಾಕ್ಯ ಗಳಿಂದ ಬುದ್ಧಿವಾದ ಹೇಳಿ ಎಚ್ಚರಿಕೆಯನ್ನುಂಟುಮಾಡುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ನರಕಲೋಕಮಾರ್ಗ, ಯಮ ದೂತರ ಸ್ವರೂಪ ಇವುಗಳ ವರ್ಣನವೆಂಬ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಅಷ್ಟಮೋಽಧ್ಯಾಯಃ

॥ ಚಿತ್ರಗುಪ್ತ ಉವಾಚ ॥

ಭೋ ಭೋ ದುಷ್ಕೃತಕರ್ಮಾಣಃ ಪರದ್ರವ್ಯಾಪಹಾರಕಾಃ ।
ಗರ್ವಿತಾ ರೂಪವೀರ್ಯೇಣ ಪರದಾರಾವಮರ್ದಕಾಃ ॥ ೧ ॥

ಯತ್ಸ್ವಯಂ ಕ್ರಿಯತೇ ಕರ್ಮ ತದಿದಂ ಭುಜ್ಯತೇ ಪುನಃ ।
ತತ್ಕಿಮಾತ್ಮೋಪಘಾತಾರ್ಥಂ ಭವದ್ಭಿರ್ದುಷ್ಕೃತಂ ಕೃತಂ ॥ ೨ ॥

ಇದಾನೀಂ ಕಿಂ ಪ್ರಲಪ್ಯಧ್ವೇ ಪೀಡ್ಯಮಾನಾಸ್ಸ್ವಕರ್ಮಭಿಃ ।
ಭುಜ್ಯಂತಾಂ ಸ್ವಾನಿ ಕರ್ಮಾಣಿ ನಾಸ್ತಿ ದೋಷೋ ಹಿ ಕಸ್ಯ ಹಿ ॥ ೩ ॥

## ಎಂಟನೆಯ ಅಧ್ಯಾಯವು

೧-೩. ಚಿತ್ರಗುಪ್ತನು ಹೇಳುವನು:—ಎಲೈ ಪಾಪಾತ್ಮರುಗಳಿರಾ, ಕೇಳಿ. ನೀವು ಕೆಟ್ಟಕೆಲಸವನ್ನು ಮಾಡಿ ಇನ್ನೊಬ್ಬರ ದ್ರವ್ಯವನ್ನು ಅಪಹರಿಸಿದಿರಿ. ರೂಪ ಯೌವನಮದದಿಂದ ಇತರರ ಹೆಂಡತಿಯರನ್ನು ಕೆಡಿಸಿದಿರಿ. ನೀವೇ ಮಾಡಿಕೊಂಡ ಇಂತಹ ದುಷ್ಕೃತ್ಯದಿಂದ ನಿಮ್ಮ ನಾಶವನ್ನು ನೀವೇ ಮಾಡಿಕೊಂಡಂತಾಗಿರುವುದು. ವ್ಯಸನಪಟ್ಟರೆ ಪ್ರಯೋಜನವಿಲ್ಲ. ನಿಮ್ಮ ಕರ್ಮದ ಫಲವನ್ನು ನೀವೇ ಅನುಭವಿಸಬೇಕು. ಇದರಲ್ಲಿ ಯಾರ ದೋಷವೂ ಇಲ್ಲ ಎನ್ನುವನು.

॥ ಸನತ್ಕುಮಾರ ಉವಾಚ ॥
ಏವಂ ತೇ ಪೃಥಿವೀಪಾಲಾಸ್ಸಂಪ್ರಾಪ್ತಾಸ್ತತ್ಸಮೀಪತಃ ।
ಸ್ವಕೀಯೈಃ ಕರ್ಮಭಿರ್ಘೋರೈರ್ದುಷ್ಕರ್ಮಬಲದರ್ಪಿಣಃ ॥ ೪ ॥

ತಾನಪಿ ಕ್ರೋಧಸಂಯುಕ್ತಶ್ಚಿತ್ರಗುಪ್ತೋ ಮಹಾಪ್ರಭುಃ ।
ಸಂಶಿಕ್ಷಯತಿ ಧರ್ಮಜ್ಞೋ ಯಮರಾಜಾನುಶಿಕ್ಷಯಾ ॥ ೫ ॥

॥ ಚಿತ್ರಗುಪ್ತ ಉವಾಚ ॥
ಭೋ ಭೋ ನೃಪಾ ದುರಾಚಾರಾಃ ಪ್ರಜಾವಿಧ್ವಂಸಕಾರಿಣಃ ।
ಅಲ್ಪಕಾಲಸ್ಯ ರಾಜ್ಯಸ್ಯ ಕೃತೇ ಕಿಂ ದುಷ್ಕೃತಂ ಕೃತಂ ॥ ೬ ॥

ರಾಜ್ಯಭೋಗೇನ ಮೋಹೇನ ಬಲಾದನ್ಯಾಯತಃ ಪ್ರಜಾಃ ।
ಯದ್ದಂಡಿತಾಃ ಫಲಂ ತಸ್ಯ ಭುಜ್ಯತಾಮಧುನಾ ನೃಪಾಃ ॥ ೭ ॥

ಕ್ವ ತದ್ರಾಜ್ಯಂ ಕಲತ್ರಂ ಚ ಯದರ್ಥಮಶುಭಂ ಕೃತಂ ।
ತತ್ಸರ್ವಂ ಸಂಪರಿತ್ಯಜ್ಯ ಯೂಯಮೇಕಾಕಿನಃ ಸ್ಥಿತಾಃ ॥ ೮ ॥

೪. ಸನತ್ಕುಮಾರನು ಹೇಳಿದನು:—ತಮ್ಮ ತಮ್ಮ ಕೆಟ್ಟ ಕರ್ಮಗಳಿಂದ ಉಂಟಾದ ಭಯಂಕರವಾದ ಕರ್ಮಗಳ ಶಕ್ತಿಯಿಂದ ಕೂಡಿ ರಾಜರುಗಳು ಚಿತ್ರಗುಪ್ತನ ಹತ್ತಿರಕ್ಕೆ ಹೀಗೆ ಬರುವರು.

೫. ಚಿತ್ರಗುಪ್ತನು ಧರ್ಮವನ್ನು ತಿಳಿದಿರುವ ದೊಡ್ಡ ಪ್ರಭುವಾಗಿರುವ ಕಾರಣ ಆ ರಾಜರುಗಳನ್ನು ನೋಡಿ, ಕೋಪವುಳ್ಳವನಾಗಿ ಯಮಧರ್ಮರಾಯನು ಹೇಳಿರುವ ಶಿಕ್ಷಾಕ್ರಮವನ್ನು ಅನುಸರಿಸಿ ಅವರಿಗೆ ಚೆನ್ನಾಗಿ ಬುದ್ಧಿಯನ್ನು ಹೇಳುವನು.

೬-೮. ಚಿತ್ರಗುಪ್ತನು ಹೇಳುವನು:—ಎಲೈ ರಾಜರುಗಳಿರಾ! ನೀವುಗಳು ಕೆಟ್ಟ ನಡತೆಯಿಂದ ಇದ್ದಿರಿ. ಪ್ರಜೆಗಳನ್ನು ತೊಂದರೆಗೆ ಸಿಕ್ಕಿಸಿ ಹಾಳುಮಾಡಿದಿರಿ. ಕೊಂಚಕಾಲದವರೆಗೆ ಅನುಭವಿಸಬೇಕಾದ ರಾಜ್ಯದ ನಿಮಿತ್ತವಾಗಿ ಕೆಟ್ಟ ಕೆಲಸವನ್ನು ಏತಕ್ಕೆ ಮಾಡಿದಿರಿ? ರಾಜ್ಯದಿಂದ ಭೋಗವನ್ನು ಅನುಭವಿಸಬೇಕೆಂಬ ಆಸೆಯಿಂದಲೂ ಅಜ್ಞಾನದಿಂದಲೂ, ಅನ್ಯಾಯದಿಂದಲೂ ಬಲಾತ್ಕಾರವಾಗಿ ಪ್ರಜೆಗಳನ್ನು ಹಿಂಸೆ ಮಾಡಿದ್ದರ ಫಲವನ್ನು ಈಗ ಅನುಭವಿಸಿರಿ. ನೀವು ಅನ್ಯಾಯವನ್ನು ಮಾಡಿ ಸುಖಪಟ್ಟ ಆ ರಾಜ್ಯವೂ, ಆ ಪತ್ನಿಯೇ ಮೊದಲಾದ ಪರಿವಾರವೂ ಎಲ್ಲಿ ಹೋದುವು?

ಪಶ್ಯಾಮಿ ತದ್ಬಲಂ ನಷ್ಟಂ ಯೇನ ವಿಧ್ವಂಸಿತಾಃ ಪ್ರಜಾಃ ।
ಯಮದೂತೈರ್ಯೋಜ್ಯಮಾನಾ ಅಧುನಾ ಕೀದೃಶಂ ಭವೇತ್ ॥ ೯ ॥

॥ ಸನತ್ಕುಮಾರ ಉವಾಚ ॥

ಏವಂ ಬಹುವಿಧೈರ್ವಾಕ್ಯೈರುಪಲಬ್ಧಾ ಯಮೇನ ತೇ ।
ಸ್ವಾನಿ ಕರ್ಮಾಣಿ ಶೋಚಂತಿ ತೂಷ್ಣೀಂ ತಿಷ್ಠಂತಿ ಪಾರ್ಥಿವಾಃ ॥ ೧೦ ॥

ಇತಿ ಕರ್ಮ ಸಮುದ್ದಿಶ್ಯ ನೃಪಾಣಾಂ ಧರ್ಮರಾಡ್ಯಮಃ ।
ತತ್ಪಾಪಪಂಕಶುದ್ಧ್ಯರ್ಥಮಿದಂ ದೂತಾನ್ಬ್ರವೀತಿ ಚ ॥ ೧೧ ॥

॥ ಯಮರಾಜ ಉವಾಚ ॥

ಭೋ ಭೋಶ್ಚಂಡ ಮಹಾಚಂಡ ನೀತ್ವಾ ಚ ನೃಪತೀನ್ಬಲಾತ್ ।
ನಿಯಮೇನ ವಿಶುದ್ಧ್ಯಧ್ವಂ ಕ್ರಮೇಣ ನರಕಾಗ್ನಿಷು ॥ ೧೨ ॥

ಅವೆಲ್ಲವನ್ನೂ ಬಿಟ್ಟು ನೀವು ಮಾತ್ರ ಒಬ್ಬಂಟಿಗರಾಗಿ ಇರುವಿರಿ. ಪ್ರಜೆಗಳಿಗೆ ಹಿಂಸೆಯನ್ನು ಉಂಟುಮಾಡಿದ ಆ ನಿಮ್ಮ ಸೇನೆಯು ಇಲ್ಲಿ ಕಾಣುವುದಿಲ್ಲ. ಈಗ ನಿಮ್ಮನ್ನು ಯಮದೂತರು ಯಾವ ಪ್ರಕಾರವಾಗಿ ಶಿಕ್ಷಿಸುವುರೆಂಬುದು ಗೊತ್ತೇ ?

೧೦-೧೧. ಸನತ್ಕುಮಾರನು ಹೇಳಿದನು :—ಯಮನು ಈರೀತಿಯಾದ ಅನೇಕ ವಿಧವಾದ ಮಾತುಗಳನ್ನು ಹೇಳುತ್ತಾ ಅವರನ್ನು ನಿಂದಿಸಲು, ಆ ರಾಜರು ತಾವು ಮಾಡಿರುವ ಕರ್ಮಗಳಿಗಾಗಿ ವ್ಯಸನಪಡುತ್ತಾ ಸುಮ್ಮನೆ ನಿಂತಿರುವರು. ಯಮಧರ್ಮರಾಜನು ಆ ರಾಜರಿಗೆ ಹೀಗೆ ಅವರ ಕರ್ಮಗಳನ್ನು ಹೇಳಿದನಂತರ, ಅವರು ಪಾಪಗಳ ಮಲಿನತೆಯಿಂದ ಶುದ್ಧಿಯನ್ನು ಹೊಂದುವುದಕ್ಕಾಗಿ ಅವರಿಗೆ ಶಿಕ್ಷೆಯನ್ನು ಮಾಡುವಂತೆ ದೂತರಿಗೆ ಅಪ್ಪಣೆಮಾಡುವನು.

೧೨. ಯಮರಾಜನು ಹೇಳುವನು :—ಎಲೈ ಚಂಡನೆ! ಮಹಾಚಂಡನೆ! ನೀವು ಈ ರಾಜರನ್ನು ಬಲವಂತದಿಂದ ಕರೆದುಕೊಂಡುಹೋಗಿ ಕ್ರಮವಾಗಿ ನರಕಗಳಲ್ಲಿರುವ ಅಗ್ನಿಗಳಿಂದ ಇವರಿಗೆ ಪರಿಶುದ್ಧತೆಯು ಉಂಟಾಗುವ ಹಾಗೆ ಮಾಡಿರಿ.

॥ ಸನತ್ಕುಮಾರ ಉವಾಚ ॥

ತತಶ್ಶೀಘ್ರಂ ಸಮಾದಾಯ ನೃಪಾನ್ಸಂಗೃಹ್ಯ ಪಾದಯೋಃ ।
ಭ್ರಾಮಯಿತ್ವಾ ತು ವೇಗೇನ ನಿಕ್ಷಿಪ್ಯೋರ್ಧ್ವಂ ಪ್ರಗೃಹ್ಯ ಚ ॥ ೧೩ ॥

ಸರ್ವಪ್ರಾಯೇಣ ಮಹತಾತೀವ ತಪ್ತೇ ಶಿಲಾತಲೇ ।
ಆಸ್ಫಾಲಯಂತಿ ತರಸಾ ವಜ್ರೇಣೇವ ಮಹಾದ್ರುಮಾನ್ ॥ ೧೪ ॥

ತತಸ್ಸರಕ್ತಂ ಶ್ರೋತ್ರೇಣ ಸ್ರವತೇ ಜರ್ಜರೀಕೃತಃ ।
ನಿಸ್ಸಂಜ್ಞಸ್ಸ ತದಾ ದೇಹೀ ನಿಶ್ಚೇಷ್ಟಸ್ಸಂಪ್ರಜಾಯತೇ ॥ ೧೫ ॥

ತತಸ್ಸ ವಾಯುನಾ ಸ್ಪೃಷ್ಟಸ್ಸ ತೈರುಜ್ಜೀವಿತಃ ಪುನಃ ।
ತತಃ ಪಾಪವಿಶುದ್ಧ್ಯರ್ಥಂ ಕ್ಷಿಪಂತಿ ನರಕಾರ್ಣವೇ ॥ ೧೬ ॥

ಅಷ್ಟಾವಿಂಶತಿಸಂಖ್ಯಾಭಿಃ ಕ್ಷಿತ್ಯಧಸ್ಸಪ್ತಕೋಟಯಃ ।
ಸಪ್ತಮಸ್ಯ ತಲಸ್ಯಾಂತೇ ಘೋರೇ ತಮಸಿ ಸಂಸ್ಥಿತಃ ॥ ೧೭ ॥

೧೩-೧೪. ಸನತ್ಕುಮಾರನು ಹೇಳಿದನು:—ಅವರು ಆ ಕೂಡಲೆ ಆ ರಾಜರ ಕಾಲುಗಳಿಗೆ ಹಗ್ಗಗಳನ್ನು ಕಟ್ಟಿ ಬಿಗಿದು ಹಿಡಿದುಕೊಂಡು ಬೇಗನೆ ತಿರುಗಿಸಿ ಮೇಲಕ್ಕೆ ಜೋರಾಗಿ ಎಸೆದು, ತಿರುಗಿ ಹಿಡಿದುಕೊಂಡು ಚೆನ್ನಾಗಿ ಕಾದಿರುವ ದೊಡ್ಡದಾದ ಕಲ್ಲಿನಮೇಲೆ, ದೊಡ್ಡ ಮರಗಳನ್ನು ವಜ್ರಾಯುಧದಿಂದ ಹೊಡೆಯುವ ಹಾಗೆ ಬಲವಾಗಿ ಬಡಿಯುವರು.

೧೫-೧೬. ಆದರಿಂದ ಅವರ ಶರೀರವು ಜರ್ಝರಿತವಾಗಿ ಕಿವಿಯಿಂದ ರಕ್ತವು ಸುರಿಯುವುದು. ಆಗ ಆ ಪ್ರಾಣಿಯು ಜ್ಞಾನವಿಲ್ಲದವನಾಗಿ ಯಾವ ವಿಧವಾದ ಚೇಷ್ಟೆಯನ್ನೂ ಮಾಡಲಸಮರ್ಥನಾಗಿರುವನು. ಅನಂತರ ಅಲ್ಲಿ ಬೀಸುವ ತಂಗಾಳಿಯಿಂದ ಕೊಂಚಮಟ್ಟಿಗೆ ಚೇತರಿಸಿಕೊಳ್ಳುವನು. ಆಮೇಲೆ ಅವನನ್ನು ಪರಿಶುದ್ಧನನ್ನಾಗಿ ಮಾಡುವುದಕ್ಕಾಗಿ ಸಮುದ್ರದಂತೆ ಇರುವ ನರಕಗಳಿಗೆ ತೆಗೆದುಕೊಂಡುಹೋಗುವರು.

೧೭-೨೧. ಕೋಟಿಸಂಖ್ಯಾತಗಳಾದ ಈ ನರಕಗಳು ಇಪ್ಪತ್ತೆಂಟು ವಿಧವಾಗಿ ಇರುವುವು. ಇವುಗಳು ಭೂಮಿಯ ಕೆಳಗಡೆಯಲ್ಲಿರುವುವು. ಏಳನೆಯ ಎಂಬ ತಲ ಭೂಮಿಯ ಕೆಳಭಾಗದ ಕೊನೆಯಲ್ಲಿ ಭಯಂಕರವಾದ ಕಗ್ಗತ್ತಲೆಯಲ್ಲಿರುವುವು.

**ಘೋರಾಖ್ಯಾ ಪ್ರಥಮಾ ಕೋಟಿಃ ಸುಘೋರಾ ತದಧಃಸ್ಥಿತಾ ।**
**ಅತಿಘೋರಾ ಮಹಾಘೋರಾ ಘೋರರೂಪಾ ಚ ಪಂಚಮೀ ॥ ೧೮ ॥**

**ಷಷ್ಠೀ ತಲಾತಲಾಖ್ಯಾ ಚ ಸಪ್ತಮೀ ಚ ಭಯಾನಕಾ ।**
**ಅಷ್ಟಮೀ ಕಾಲರಾತ್ರಿಶ್ಚ ನವಮೀ ಚ ಭಯೋತ್ಕಟಾ ॥ ೧೯ ॥**

**ದಶಮೀ ತದಧಶ್ಚಂಡಾ ಮಹಾಚಂಡಾ ತತೋಽಪ್ಯಧಃ ।**
**ಚಂಡಕೋಲಾಹಲಾ ಚಾನ್ಯಾ ಪ್ರಚಂಡಾ ಚಂಡನಾಯಿಕಾ ॥ ೨೦ ॥**

**ಪದ್ಮಾ ಪದ್ಮಾವತೀ ಭೀತಾ ಭೀಮಾ ಭೀಷಣನಾಯಿಕಾ ।**
**ಕರಾಲಾ ವಿಕರಾಲಾ ಚ ವಜ್ರಾ ವಿಂಶತಿಮಾ ಸ್ಮೃತಾ ॥ ೨೧ ॥**

**ತ್ರಿಕೋಣಾ ಪಂಚಕೋಣಾ ಚ ಸುದೀರ್ಘಾ ಚಾಖಿಲಾರ್ತಿದಾ ।**
**ಸಮಾ ಭೀಮಬಲಾಭೋಗ್ರಾ ದೀಪ್ತಪ್ರಾಯೇತಿ ಚಾಷ್ಟಮೀ ॥ ೨೨ ॥**

**ಇತಿ ತೇ ನಾಮತಃ ಪ್ರೋಕ್ತಾ ಘೋರಾ ನರಕಕೋಟಯಃ ।**
**ಅಷ್ಟಾವಿಂಶತಿರೇವೈತಾಃ ಪಾಪಾನಾಂ ಯಾತನಾತ್ಮಿಕಾಃ ॥ ೨೩ ॥**

ಮೊದಲನೆಯದಕ್ಕೆ ಘೋರ ಎಂದು ಹೆಸರು. ಎರಡನೆಯದು ಅದರ ಕೆಳಗೆ ಸುಘೋರ, ಮೂರನೆಯದು ಅತಿಘೋರ, ನಾಲ್ಕನೆಯದು ಮಹಾಘೋರ, ಐದನೆಯದು ಘೋರರೂಪಾ, ಆರನೆಯದು ತಲಾತಲ, ಏಳನೆಯದು ಭಯಾನಕ, ಎಂಟನೆಯದು ಕಾಳರಾತ್ರಿ, ಒಂಭತ್ತನೆಯದು ಭಯೋತ್ಕಟಾ, ಅದರ ಕೆಳಗಿನ ಹತ್ತನೆಯ ನರಕವು ಚಂಡ, ಹನ್ನೊಂದನೆಯದು ಮಹಾಚಂಡ, ಹನ್ನೆರಡನೆಯದು ಚಂಡಕೋಲಾಹಲ, ಹದಿಮೂರನೆಯದು ಪ್ರಚಂಡ, ಹದಿನಾಲ್ಕನೆಯದು ಚಂಡನಾಯಿಕಾ, ಹದಿನೈದನೆಯದು ಪದ್ಮಾ ಪದ್ಮಾವತೀ, ಹದಿನಾರನೆಯದು ಭೀತಾ ಭೀಮಾ, ಹದಿನೇಳನೆಯದು ಭೀಷಣನಾಯಿಕಾ, ಹದಿನೆಂಟನೆಯದು ಕರಾಳಾ, ಹತ್ತೊಂಭತ್ತನೆಯದು ವಿಕರಾಳಾ, ಇಪ್ಪತ್ತನೆಯದು ವಜ್ರ ಎಂಬ ಹೆಸರನ್ನು ಹೊಂದಿರುವುವು.

೨೨-೨೪. ತ್ರಿಕೋಣ, ಪಂಚಕೋಣ, ಸುದೀರ್ಘ, ಅಖಿಲಾರ್ತಿದಾ, ಸಮಾ, ಭೀಮಬಲಾಭಾ, ಉಗ್ರಾ, ದೀಪ್ತಪ್ರಾಯಾ ಎಂಬಿವು, ಉಳಿದ ಎಂಟು ನರಕಗಳ ಹೆಸರುಗಳು. ಈ ಪ್ರಕಾರವಾಗಿರುವ ನರಕಕೋಟಿಗಳನ್ನು ನಿನಗೆ ಹೇಳಿರುವೆನು. ಪಾಪಗಳನ್ನು ಮಾಡಿದವರಿಗೆ ಹಿಂಸೆಯನ್ನುಂಟುಮಾಡುವ ನರಕಗಳು ಈ ಇಪ್ಪ

ತಾಸಾಂ ಕ್ರಮೇಣ ವಿಜ್ಞೇಯಾಃ ಪಂಚ ಪಂಚೈವ ನಾಯಕಾಃ ।
ಪ್ರತ್ಯೇಕಂ ಸರ್ವಕೋಟೀನಾಂ ನಾಮತಸ್ಸಂನಿಬೋಧತ ॥ ೨೪ ॥

ರೌರವಃ ಪ್ರಥಮಸ್ತೇಷಾಂ ರುವಂತೇ ಯತ್ರ ದೇಹಿನಃ ।
ಮಹಾರೌರವಪೀಡಾಭಿರ್ಮಹಾಂತೋಽಪಿ ರುದಂತಿ ಚ ॥ ೨೫ ॥

ತತಶ್ಶೀತಂ ತಥಾ ಚೋಷ್ಣಂ ಪಂಚಾದ್ಯಾ ನಾಯಕಾಸ್ಸ್ಮೃತಾಃ ।
ಸುಘೋರಸ್ಸುಮಹಾತೀಕ್ಷ್ಣಸ್ತಥಾ ಸಂಜೀವನಃ ಸ್ಮೃತಃ ॥ ೨೬ ॥

ಮಹಾತಮೋ ವಿಲೋಮಶ್ಚ ವಿಲೋಪಶ್ಚಾಪಿ ಕಂಟಕಃ ।
ತೀವ್ರವೇಗಃ ಕರಾಲಶ್ಚ ವಿಕರಾಲಃ ಪ್ರಕಂಪನಃ ॥ ೨೭ ॥

ಮಹಾವಕ್ರಶ್ಚ ಕಾಲಶ್ಚ ಕಾಲಸೂತ್ರಃ ಪ್ರಗರ್ಜನಃ ।
ಸೂಚೀಮುಖಸ್ಸುನೇತಿಶ್ಚ ಖಾದಕಸ್ಸುಪ್ರಪೀಡನಃ ॥ ೨೮ ॥

ತ್ತಿಂಟೀ ಆಗಿರುವುವು. ಅವುಗಳಿಗೆ ಕ್ರಮವಾಗಿ ಐದು ಐದು ಮುಖ್ಯವಾಗಿರುವವು. ಹಿಂದೆ ಹೇಳಿರುವ ಎಲ್ಲಾ ಕೋಟಿಗಳಿಗೂ ಬೇರೆಯಾದ ಹೆಸರನ್ನು ಹೇಳುವೆನು.

೨೫-೨೯. ಹಿಂಸೆಯನ್ನು ತಡೆಯಲಾರದೆ ಕಿರಿಚಿಕೊಳ್ಳುತ್ತಿರುವುದರಿಂದ ಮೊದಲನೆಯ ನರಕಕ್ಕೆ ರೌರವವೆಂದು ಹೆಸರು. ಎರಡನೆಯದು ಮಹಾರೌರವವು. ಇಲ್ಲಿ ಪ್ರಾಣಿಗಳು ಗಟ್ಟಿಯಾಗಿ ಅಳುವರು. ಇನ್ನು ಅಲ್ಲಿ ಶೀತವೆಂಬ ನರಕದಲ್ಲಿ ಕೊರೆತವನ್ನುಂಟುಮಾಡುವ ಅತಿಶೈತ್ಯವೂ ಉಷ್ಣವೆಂಬ ನರಕದಲ್ಲಿ ಶರೀರಗಳನ್ನು ಸುಡುವಂತೆ ಇರುವ ಅತಿಯಾದ ಸೆಕೆಯೂ ಇರುವುವು. ಸುಘೋರವೆಂಬ ನರಕವು ಬಹಳ ಭಯಂಕರವಾಗಿರುವುದು. ಮಹಾತಮವೆಂಬ ನರಕದಲ್ಲಿ ಬಹಳ ಗಾಢಾಂಧಕಾರವಾದ ಕತ್ತಲೆಯು ಕವಿದಿರುವುದು. ವಿಲೋಮ ಮತ್ತು ವಿಲೋಪ ಎಂಬ ನರಕಗಳಲ್ಲಿ ಮೊನಚಾದ ಮುಳ್ಳುಗಳಿರುವುವು. ತೀವ್ರವೇಗವೆಂಬುದು ಬಹಳ ಭಯಂಕರವಾಗಿರುವುದು. ವಿಕರಾಲವೆಂಬ ನರಕವನ್ನು ನೋಡಿದಮಾತ್ರದಿಂದಲೇ ಪ್ರಾಣಿಗಳಿಗೆ ಭಯದಿಂದ ನಡುಕ ಹುಟ್ಟುವುದು. ಈ ನರಕಗಳಲ್ಲದೆ ಮಹಾವ್ರತ, ಕಾಲ, ಕಾಲಸೂತ್ರ, ಪ್ರಗರ್ಜನ, ಸೂಚೀಮುಖ, ಸುನೇತಿ, ಖಾದಕ ಸುಪ್ರಪೀಡನ, ಕುಂಭೀಪಾಕ, ಸುಪಾಕ, ಕ್ರಕಚ, ಅತಿದಾರುಣ, ಅಂಗಾರರಾಶಿ ಮೇದೋಸೃಕ್ಪ್ರಹಿತ

**ಕುಂಭೀಪಾಕಸುಪಾಕೌ ಚ ಕ್ರಕಚಶ್ಚಾತಿದಾರುಣಃ ।**
**ಅಂಗಾರರಾಶಿಭವನಂ ಮೇದೋಽಸೃಕ್ಪೂಹಿತಸ್ತತಃ ॥ ೨೯ ॥**

**ತೀಕ್ಷ್ಣತುಂಡಶ್ಚ ಶಕುನಿರ್ಮಹಾಸಂವರ್ತಕಃ ಕ್ರತುಃ ।**
**ಸಪ್ತಜಂತುಃ ಪಂಕಲೇಪಃ ಪ್ರತಿಮಾಂಸಸ್ತ್ರಪೂದ್ಭವಃ ॥ ೩೦ ॥**

**ಉಚ್ಛ್ವಾಸಸ್ಸನಿರುಚ್ಛ್ವಾಸೋ ಸುದೀರ್ಘಃ ಕೂಟಶಾಲ್ಮಲಿಃ ।**
**ದುರಿಷ್ಟಸ್ಸುಮಹಾವಾದಃ ಪ್ರವಾಹಸ್ಸುಪ್ರತಾಪನಃ ॥ ೩೦ ॥**

**ತತೋ ಮೇಘೋ ವೃಷಃ ಶಾಲ್ಮಸ್ಸಿಂಹವ್ಯಾಘ್ರಗಜಾನನಾಃ ।**
**ಶ್ವಸೂಕರಾಜಮಹಿಷಘೂಕಕೋಕವೃಕಾನನಾಃ ॥ ೩೨ ॥**

ಎಂಬ ನರಕಗಳಿರುವವು. ಇವುಗಳಲ್ಲಿ ಪ್ರಾಣಿಗಳು ವಿಧವಿಧವಾದ ಹಿಂಸೆಯನ್ನು ಅನುಭವಿಸುವರು.

೩೦-೩೧. ಇನ್ನು ಕೆಲವು ನರಕಗಳಲ್ಲಿ ಹರಿತವಾದ ಕೊಕ್ಕುಗಳಿಂದ ಕೂಡಿರುವ ಹಕ್ಕಿಗಳಿರುವವು. ಇವು ತಮ್ಮ ಕೊಕ್ಕುಗಳಿಂದ ಪ್ರಾಣಿಗಳ ಶರೀರಗಳನ್ನು ಕಿತ್ತು ತಿನ್ನುವವು. ಕೆಲವು ನರಕಗಳು ಸುಡುತ್ತಿರುವ ಹುಳುಗಳಿಂದ ಕೂಡಿರುವುದು. ಕೆಸರನ್ನು ಬಳಿಯುವುದು, ಮಾಂಸವನ್ನು ಬಲವಂತವಾಗಿ ಬಾಯಿಗೆ ತುರುಕುವುದು, ಸೀಸವನ್ನು ಕಾಯಿಸಿ ನೀರುಮಾಡಿ ಹುಯ್ಯುವುದು, ಊರ್ಧ್ವಮುಖವಾದ ಶ್ವಾಸವನ್ನುಂಟುಮಾಡುವುದು, ಉಸಿರನ್ನು ನಿಲ್ಲಿಸಿಬಿಡುವುದು, ಉದ್ದವಾಗಿ ಎಳೆಯುವುದು, ಬಹಳ ವಿವಾದ ಮಾಡುವುದು, ರಕ್ತಮಾಂಸಗಳನ್ನು ಕೋಡಿ ಹರಿಸುವುದು, ಸುಡುವುದು, ಇವುಗಳು ಈ ನರಕಗಳಲ್ಲಿ ಪಾಪಿಗಳಿಗೆ ಕೊಡುವ ಶಿಕ್ಷೆಗಳು.

೩೨. ಅಲ್ಲಿ ಮಳೆಯು ಸುರಿಯುವುದು, ಗೂಳಿ, ಶರಭ, ಸಿಂಹ, ಹುಲಿ, ಆನೆಯ ಮುಖದವರು, ನಾಯಿಗಳು, ಹಂದಿ, ಆಡು, ಎಮ್ಮೆ, ತೋಳ, ಕೋಕಪಕ್ಷಿ ಈ ಮುಖಗಳುಳ್ಳ ಪ್ರಾಣಿಗಳೂ, ಜಲಜಂತುಗಳೂ ಆ ನರಕಗಳಲ್ಲಿರುವವು. ಇವು ಪಾಪಿಗಳಿಗೆ ನಾನಾವಿಧವಾದ ತೊಂದರೆಯನ್ನುಂಟುಮಾಡುವವು.

ಗ್ರಾಹಕುಂಭೀನನಕ್ರಾಖ್ಯಾಸ್ಸರ್ಪಕೂರ್ಮಾಖ್ಯವಾಯಸಾಃ ।
ಗೃಧ್ರೋಲೂಕಹಲೌಕಾಖ್ಯಾಃ ಶಾರ್ದೂಲಕ್ರಥಕರ್ಕಟಾಃ ॥ ೩೩ ॥

ಮಂಡೂಕಾಃ ಪೂತಿವಕ್ತ್ರಾಶ್ಚ ರಕ್ತಾಕ್ಷಃ ಪೂತಿಮೃತ್ತಿಕಾಃ ।
ಕಣಧೂಮ್ರಸ್ತಥಾಗ್ನಿಶ್ಚ ಕೃಮಿಗಂಧಿವಪುಸ್ತಥಾ ॥ ೩೪ ॥

ಅಗ್ನೀಧ್ರಶ್ಚಾಪ್ರತಿಷ್ಠಶ್ಚ ರುಧಿರಾಭಶ್ವಭೋಜನಃ ।
ಲಾಲಾಭಕ್ಷಾಂತ್ರಭಕ್ಷೌ ಚ ಸರ್ವಭಕ್ಷಃ ಸುದಾರುಣಃ ॥ ೩೫ ॥

ಕಂಟಕಸ್ಸುವಿಶಾಲಶ್ಚ ವಿಕಟಃ ಕೂಟಪೂತನಃ ।
ಅಂಬರೀಷಃ ಕಟಾಹಶ್ಚ ಕಷ್ಟಾ ವೈತರಿಣೀ ನದೀ ॥ ೩೬ ॥

ಸುತಪ್ತಲೋಹಶಯನ ಏಕಪಾದಃ ಪ್ರಪೂರಣಃ ।
ಅಸಿತಾಲವನಂ ಘೋರಮಸ್ಥಿಭಂಗಃ ಸುಪೂರಣಃ ॥ ೩೭ ॥

೩೩-೩೭. ಮತ್ತು ಅಲ್ಲಿ ಮೊಸಳೆ, ಹಾವು, ಆಮೆ, ಕಾಗೆಗಳು, ಹದ್ದು, ಗೂಬೆ, ಹುಲಿಯ ಮುಖವುಳ್ಳ ನೀರಿನಲ್ಲಿ ವಾಸಿಸುವ ಪ್ರಾಣಿ, ನಳ್ಳಿ, ಕಪ್ಪೆ, ದುರ್ಗಂಧವುಳ್ಳ ಮುಖದಿಂದಿರುವ ಹುಳುಗಳು, ಕೆಂಪುಕಣ್ಣಿನ ಹುಳುಗಳು, ದುರ್ವಾಸನೆಯ ಮಣ್ಣು, ಸಣ್ಣ ಧೂಳು, ಬೆಂಕಿ ಇವುಗಳಿರುವವು. ಅಲ್ಲಿರುವ ಕೆಲವು ಪ್ರಾಣಿಗಳು ಹುಳುವಿನ ವಾಸನೆಯುಳ್ಳ ಶರೀರವನ್ನು ಹೊಂದಿರುವವು. ಕೆಲವು ಬೆಂಕಿಯಂತೆ ತೀಕ್ಷ್ಣ ವಾಗಿರುವವು. ಒಂದು ಕಡೆಯಲ್ಲಿಯೂ ಸರಿಯಾಗಿ ನಿಲ್ಲಿಸದಂತೆ ತಿರುಗಿಸುವುದು, ಕೆಲವು ರಕ್ತದಹಾಗೆಯೇ ಇರುವುದು, ನಾಯಿಯನ್ನು ತಿನ್ನುವುದು, ಜೊಲ್ಲನ್ನು ಕುಡಿಯುವುದು, ಕರುಳನ್ನು ತಿನ್ನುವುದು, ಎಲ್ಲವನ್ನೂ ತಿನ್ನುವುದು, ಬಹಳ ಕ್ರೂರ ವಾಗಿರುವುದು, ಮುಳ್ಳಿನಿಂದ ಕೂಡಿರುವುದು, ಬಹಳ ದೊಡ್ಡದಾಗಿರುವುದು, ವಿಕಾರ ವಾಗಿರುವುದು, ನೆಲದಲ್ಲಿ ಹಿಂಸೆಮಾಡುವ ಹುಳುವು, ಕೊಪ್ಪರಿಗೆಯು, ಕಷ್ಟಕರವಾದ ವೈತರಣೀ ನದಿಯು ಇವೆಲ್ಲವೂ ಇರುವವು. ಮತ್ತು ಅಲ್ಲಿ ಪ್ರಾಣಿಗಳಿಗೆ ಚೆನ್ನಾಗಿ ಕಾದಿರುವ ಲೋಹದಲ್ಲಿ ಮಲಗಿಸುವಿಕೆ, ಒಂದು ಕಾಲಿನಲ್ಲಿ ನಿಲ್ಲಿಸುವುದು, ಪೂರ್ತಿ ಯಾಗಿ ತುಂಬಿಸುವುದು, ಕತ್ತಿಯಂತಿರುವ ತಾಳೆಯ ಕಾಡಿನಲ್ಲಿ ಭಯಂಕರವಾದ ಹಿಂಸೆಯನ್ನೂ ಮೇಲೆ ಹೇಳಿದವುಗಳ ಜೊತೆಯಲ್ಲಿ ಉಂಟುಮಾಡುವುವು.

ವಿಲಾಸತೋಽಸುಯಂತ್ರೋಽಪಿ ಕೂಟಪಾಶಃ ಪ್ರಮರ್ದನಃ ।
ಮಹಾಚೂರ್ಣೋಽಸುಚೂರ್ಣೋಽಪಿ ತಪ್ತಲೋಹಮಯಂ ತಥಾ ॥ ೩೮ ॥

ಪರ್ವತಃ ಕ್ಷುರಧಾರಾ ಚ ತಥಾ ಯಮಲಪರ್ವತಃ ।
ಮೂತ್ರವಿಷ್ಠಾಶ್ರುಕೂಪಶ್ಚ ಕ್ಷಾರಕೂಪಶ್ಚ ಶೀತಲಃ ॥ ೩೯ ॥

ಮುಸಲೋಲೂಖಲಂ ಯಂತ್ರಂ ಶಿಲಾಶಕಟಲಾಂಗಲಂ ।
ತಾಲಪತ್ರಾಸಿಗಹನಂ ಮಹಾಶಕಟಮಂಡಪಂ ॥ ೪೦ ॥

ಸಂಮೋಹಮುಷ್ಠಿಭಂಗಶ್ಚ ತಪ್ತಶ್ಚೂಲಮಯೋಗುಡಂ ।
ಬಹು ದುಃಖಂ ಮಹಾಕ್ಲೇಶಃ ಕಶ್ಮಲಂ ಸಮಲಂ ಮಲಾತ್ ॥ ೧ ॥

ಹಾಲಾಹಲೋ ವಿರೂಪಶ್ಚ ಸ್ವರೂಪಶ್ಚ ಯಮಾನುಗಃ ।
ಏಕಪಾದಸ್ತ್ರಿಪಾದಶ್ಚ ತೀವ್ರಶ್ಚಾಚೀವರಂ ತಮಃ ॥ ೪೨ ॥

೩೮-೪೧. ಸಣ್ಣ ರಂಧ್ರಗಳಿಂದ ಹೊರಕ್ಕೆ ಎಳೆಯುತ್ತಾ ಯಂತ್ರದಿಂದ ಪ್ರಾಣವನ್ನು ಹಿಂಡುವುದು, ಗಂಟುಹಾಕಿರುವ ಹಗ್ಗದಿಂದ ಚೆನ್ನಾಗಿ ಮರ್ದಿಸುವುದು, ದಪ್ಪನಾಗಿರುವಹಾಗೆ ಹುಡಿಯನ್ನು ಮಾಡುವುದು, ಪ್ರಾಣವು ಹೋಗುವಂತೆಯೂ ಹುಡಿಮಾಡುವುದು, ಚೆನ್ನಾಗಿ ಕಾದಿರುವ ಲೋಹದಿಂದ ತುಂಬುವುದು, ಬೆಟ್ಟದಂತೆ ಇರುವ ಎತ್ತರವಾದ ಪ್ರದೇಶವು, ಕತ್ತಿಗಳ ಅಲಗುಗಳು, ಶಿಕ್ಷೆಯನ್ನು ಮಾಡುವುದಕ್ಕಾಗಿ ಸಿದ್ಧಮಾಡಿರುವ ಎರಡು ಪರ್ವತಗಳು, ಮಲಮೂತ್ರಗಳನ್ನೂ ಕಣ್ಣಿನ ನೀರನ್ನೂ ತುಂಬಿರುವ ಬಾವಿಯು, ಉಪ್ಪನ್ನು ತುಂಬಿರುವ ಬಾವಿಯು, ಛಳಿಯಿಂದ ಕೊರೆತವುಳ್ಳ ನೀರಿನಿಂದ ತುಂಬಿರುವ ಬಾವಿಯು, ಒನಕೆ, ಒರಳು, ಇನ್ನೂ ಕೆಲವು ಸಣ್ಣಗೆ ಅರೆಯುವ ಯಂತ್ರಗಳು, ಕಲ್ಲುಬಂಡೆ, ಗಾಡಿ, ನೇಗಿಲು, ಕತ್ತಿಯ ಅಲಗಿನಂತಿರುವ ತಾಳೆಯ ಗರಿಯ ಕಾಡು, ದೊಡ್ಡ ಗಾಡಿಯು ನಿಲ್ಲುವ ಮಂಟಪವು, ಮೂಳೆಯನ್ನು ಮುರಿಯುವುದು, ಚೆನ್ನಾಗಿ ಕಾದಿರುವ ಲೋಹದ ಕೊಪ್ಪರಿಗೆಯು, ಕಾದಿರುವ ಕಬ್ಬಿಣದ ಗುಂಡು, ಬಹಳ ದುಃಖವನ್ನುಂಟುಮಾಡುವುದೂ, ಜ್ಞಾನವನ್ನು ತಪ್ಪಿಸುವಂತೆ ಅಸಹ್ಯವನ್ನುಂಟುಮಾಡುವುದೂ, ಆದ ಶಿಕ್ಷೆಗಳು, ಮಲದಿಂದ ತುಂಬುವುದು ಇವೆಲ್ಲವೂ ನರಕಗಳಲ್ಲಿ ಮಾಡುವ ಶಿಕ್ಷೆಗಳು.

೪೨-೪೩. ಹಾಲಾಹಳವೆಂಬ ವಿಷವನ್ನು ತುಂಬಿರುವುದು, ಪ್ರಾಣಿಯ ಆಕಾರವನ್ನು ಬದಲಾಯಿಸುವುದು, ಅನಂತರ ಬದಲಾಗಿ ಸರಿಯಾದ ಆಕಾರಕ್ಕೆ ತರುವುದು,

ಅಷ್ಟಾವಿಂಶತಿರಿತ್ಯೇತೇ ಕ್ರಮಶಃ ಪಂಚಪಂಚಕಂ ।
ಕೋಟೇನಾಮಾನುಪೂರ್ವ್ಯೇಣ ಪಂಚಪಂಚೈವ ನಾಯಕಾಃ ॥ ೪೩ ॥

ರೌರವಾಯ ಪ್ರಬೋಧ್ಯಂತೇ ನರಕಾಣಾಂ ಶತಂ ಸ್ಮೃತಂ ।
ಚತ್ವಾರಿಂಶಚ್ಛತಂ ಪ್ರೋಕ್ತಂ ಮಹಾನರಕಮಂಡಲಂ ॥ ೪೪ ॥

ಇತಿ ತೇ ವ್ಯಾಸ ಸಂಪ್ರೋಕ್ತಾ ನರಕಸ್ಯ ಸ್ಥಿತಿರ್ಮಯಾ ।
ಪ್ರಸಂಖ್ಯಾನಾಚ್ಚ ವೈರಾಗ್ಯಂ ಶೃಣು ಪಾಪಗತಿಂ ಚ ತಾಂ ॥ ೪೫ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ನರಕಲೋಕವರ್ಣನಂ ನಾಮಾಷ್ಟಮೋಽಧ್ಯಾಯಃ



ಯಮನ ಜೊತೆಯಲ್ಲಿರಿಸಿರುವುದು, ಒಂದು ಕಾಲಿರುವಹಾಗೆ ಮಾಡುವುದು, ಮೂರು ಕಾಲಿರುವಂತೆ ಮಾಡುವುದು, ಬಹಳ ವೇಗವಾಗಿರುವಂತೆ ಮಾಡುವುದು, ಎಲ್ಲಾ ಕಡೆಯಲ್ಲಿಯೂ ಮೆತ್ತಿಕೊಳ್ಳುವಂತೆ ಇರುವ ಕಗ್ಗತ್ತಲೆಯ ಪ್ರದೇಶವು, ಇವೇ ಮೊದಲಾದ ನರಕಕ್ಕೆ ಸಂಬಂಧಪಟ್ಟ ಪ್ರದೇಶಗಳಿರುವವು. ಇವುಗಳು ಒಟ್ಟಿನಲ್ಲಿ ಇಪ್ಪತ್ತೆಂಟು ವಿಧವೆಂದು ಲೆಕ್ಕಮಾಡಿರುವರು. ಕ್ರಮವಾಗಿ ಐದು ಐದರ ಕ್ರಮದಿಂದ ಗುಂಪುಗುಂಪುಗಳಾಗಿರುವವು.

೪೪. ಅವಾಂತರ ಭೇದದಿಂದ ರೌರವವೇ ಮೊದಲಾದ ನರಕಗಳಲ್ಲಿ ನೂರರ ಗಟ್ಟಲೆಯ ಭೇದಗಳುಂಟಾಗುವುವು. ಇವೆಲ್ಲವೂ ಸೇರಿ ನಾಲ್ಕು ಸಾವಿರವಾಗುವುವು. ಇವುಗಳನ್ನು ದೊಡ್ಡದಾದ ನರಕಗಳ ಸಮೂಹವೆಂದು ಹೇಳುವರು.

೪೫. ಎಲೈ ವ್ಯಾಸಋಷಿಯೇ, ಕೇಳು. ನರಕದ ಸ್ಥಿತಿಯನ್ನು ಎಲ್ಲವನ್ನೂ ಸಂಪೂರ್ಣವಾಗಿ ಹೇಳಿರುವೆನು. ಪಾಪಗಳು ಅವುಗಳ ಅನುಭವದಿಂದ ನಾಶವಾಗಿ ವೈರಾಗ್ಯ ಜನಿಸುವ ವಿಧಾನವನ್ನು ಹೇಳುವೆನು, ಕೇಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ನರಕಲೋಕ ವರ್ಣನ
ವೆಂಬ ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ನವಮೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಏಷು ಪಾಪಾಃ ಪ್ರಪಚ್ಯಂತೇ ಶೋಷ್ಯಂತೇ ನರಕಾಗ್ನಿಷು ।
ಯಾತನಾಭಿರ್ವಿಚಿತ್ರಾಭಿರಾಸ್ವಕರ್ಮಕ್ಷಯಾದ್ಭೃಶಂ ॥ ೧ ॥

ಸ್ವಮಲಪ್ರಕ್ಷಯಾದ್ಯದ್ವದಗ್ನೌ ಧಾಸ್ಯಂತಿ ಧಾತವಃ ।
ತತ್ರ ಪಾಪಕ್ಷಯಾತ್ಪಾಪಾ ನರಾಃ ಕರ್ಮಾನುರೂಪತಃ ॥ ೨ ॥

### ಒಂಭತ್ತನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು:—ಈ ಪ್ರಕಾರದಿಂದ ಇರುವ ನರಕಗಳ ಬೆಂಕಿಯ ಜ್ವಾಲೆಗಳಲ್ಲಿ ಪಾಪಗಳನ್ನು ಮಾಡಿದವರು ಅವರವರ ಕರ್ಮಗಳು ಮುಗಿಯುವವರಿಗೂ ಅನೇಕ ವಿಧಗಳಾದ ಶಿಕ್ಷೆಗಳಿಂದ ಹಿಂಸೆಗಳನ್ನನುಭವಿಸುತ್ತಾ ಪರಿತಪಿಸುತ್ತಿರುವರು.

೨. ಲೋಹಗಳು ತಮ್ಮಲ್ಲಿರುವ ಕಶ್ಮಲಗಳನ್ನು ಅಗ್ನಿಯಲ್ಲಿ ನಾಶಮಾಡಿಕೊಂಡು ಪರಿಶುದ್ಧತೆಯನ್ನು ಹೊಂದುವಂತೆ ಪಾಪಮಾಡಿದವರು ಆ ನರಕಗಳಲ್ಲಿ ತಮ್ಮ ತಮ್ಮ ಕರ್ಮಗಳಿಗೆ ಅನುಸಾರವಾಗಿ ಶಿಕ್ಷೆಯನ್ನನುಭವಿಸಿ ಪಾಪಗಳನ್ನು ನಾಶಪಡಿಸಿಕೊಂಡು ಶುದ್ಧಿಯನ್ನು ಹೊಂದುವರು.

ಸುಗಾಢಂ ಹಸ್ತಯೋರ್ಬದ್ಧ್ವಾ ತತಶ್ಶೃಂಖಲಯಾ ನರಾಃ ।
ಮಹಾವೃಕ್ಷಾಗ್ರಶಾಖಾಸು ಲಂಬ್ಯಂತೇ ಯಮಕಿಂಕರೈಃ ॥ ೩ ॥

ತತಸ್ತೇ ಸರ್ವಯತ್ನೇನ ಕ್ಷಿಪ್ತಾ ದೋಲಂತಿ ಕಿಂಕರೈಃ ।
ದೋಲ್ಯಂತಶ್ಚಾತಿವೇಗೇನ ವಿಸಂಜ್ಞಾ ಯಾಂತಿ ಯೋಜನಂ ॥ ೪ ॥

ಅಂತರಿಕ್ಷಸ್ಥಿತಾನಾಂ ಚ ಲೋಹಭಾರಶತಂ ಪುನಃ ।
ಪಾದಯೋರ್ಬಧ್ಯತೇ ತೇಷಾಂ ಯಮದೂತೈರ್ಮಹಾಬಲೈಃ ॥ ೫ ॥

ತೇನ ಭಾರೇಣ ಮಹತಾ ಪ್ರಭೃಶಂ ತಾಡಿತಾ ನರಾಃ ।
ಧ್ಯಾಯಂತಿ ಸ್ವಾನಿ ಕರ್ಮಾಣಿ ತೂಷ್ಣೀಂ ತಿಷ್ಠಂತಿ ನಿಶ್ಚಲಾಃ ॥ ೬ ॥

ತತೋಽಙ್ಕುಶೈರಗ್ನಿವರ್ಣೈರ್ಲೋಹದಂಡೈಶ್ಚ ದಾರುಣೈಃ ।
ಹನ್ಯಂತೇ ಕಿಂಕರೈರ್ಘೋರೈಸ್ಸಮಂತಾತ್ಪಾಪಕರ್ಮಿಣಃ ॥ ೭ ॥

೩-೪. ಯಮನ ದೂತರುಗಳು ಪಾಪಿಗಳ ಕೈಗೆ ಸರಪಣಿಯನ್ನು ಹಾಕಿ ಬಲವಾಗಿ ಕಟ್ಟಿ ದೊಡ್ಡ ಮರಗಳ ಕೊಂಬೆಗಳಿಗೆ ತೂಗಹಾಕುವರು. ಅನಂತರ ಅವರು ತಮ್ಮ ಶಕ್ತಿಯಿರುವಮಟ್ಟಿಗೂ ಈ ಪಾಪಿಗಳನ್ನು ಉಯ್ಯಾಲೆ ತೂಗುವಂತೆ ದೂರಕ್ಕೆ ಎಸೆಯುವರು. ಬಹಳ ವೇಗದಿಂದ ತೂಗಿ ಎಸೆಯುವಾಗ ಈ ಪಾಪಿಗಳು ಜ್ಞಾನವಿಲ್ಲದವರಾಗಿ ಯೋಜನಗಳಷ್ಟು ದೂರದಲ್ಲಿ ಬೀಳುವರು.

೫-೬. ಮರದ ಕೊಂಬೆಗೆ ಕಟ್ಟಿ ನೇತುಹಾಕಿರುವ ಕೆಲವರ ಕಾಲುಗಳಿಗೆ ಭಾರವಾದ ಲೋಹದ ಗುಂಡುಗಳನ್ನು ಬಲಿಷ್ಠರಾದ ಯಮದೂತರು ಕಟ್ಟುವರು. ಬಹಳವಾದ ಆ ಭಾರದ ಹೊರೆಯನ್ನು ಹೊರಲಾರದೆ ಯಮದೂತರು ಹೊಡೆಯುವ ಏಟನ್ನು ತಡೆಯಲಾರದೆ ಪಾಪಿಗಳು ತಾವು ಮಾಡಿದ ಕರ್ಮಗಳನ್ನು ಜ್ಞಾಪಿಸಿಕೊಂಡು ಸುಮ್ಮನೆ ಅಲುಗಾಡದೆ ನಿಂತಿರುವರು.

೭-೮. ಅನಂತರ ಹೀಗೆ ಇರುವ ಪಾಪಿಗಳನ್ನು ಭಯಂಕರರಾದ ಯಮನ ದೂತರುಗಳು ಬೆಂಕಿಯಲ್ಲಿ ಕಾಯಿಸಿರುವುದರಿಂದ ಬೆಂಕಿಯಂತೆಯೇ ಇರುವ ಕ್ರೂರವಾದ ಅಂಕುಶಗಳಿಂದಲೂ, ಕಬ್ಬಿಣದ ಸಲಾಕೆಗಳಿಂದಲೂ ಎಲ್ಲಾ ಕಡೆಯಲ್ಲಿಯೂ

ತತಃ ಕ್ಷಾರೇಣ ದೀಪ್ತೇನ ವಹ್ನೇರಪಿ ವಿಶೇಷತಃ ।
ಸಮಂತತಃ ಪ್ರಲಿಪ್ಯಂತೇ ತೀವ್ರೇಣ ತು ಪುನಃ ಪುನಃ ॥ ೮ ॥

ಧೃತೇನಾತ್ಯಂತಲಿಪ್ತೇನ ಕೃತಾಂಗಾ ಜರ್ಜರೀಕೃತಾಃ ।
ಪುನರ್ವಿದಾರ್ಯ ಚಾಂಗಾನಿ ಶಿರಸಃ ಪ್ರಭೃತಿ ಕ್ರಮಾತ್ ॥ ೯ ॥

ವೃಂತಾಕವತ್ಪ್ರಪಚ್ಯಂತೇ ತಪ್ತಲೋಹಕಟಾಹಕೈಃ ।
ವಿಷ್ಠಾಪೂರ್ಣೇ ತಥಾ ಕೂಪೇ ಕೃಮೀಣಾಂ ನಿಚಯೇ ಪುನಃ ॥ ೧೦ ॥

ಮೇದೋಽಸೃಕ್ಪೂಯಪೂರ್ಣಾಯಾಂ ವಾಪ್ಯಾಂ ಕ್ಷಿಪ್ಯಂತಿ ತೇ ಪುನಃ ।
ಭಕ್ಷ್ಯಂತೇ ಕ್ರಿಮಿಭಿಸ್ತೀಕ್ಷ್ಣೈರ್ಲೋಹತುಂಡೈಶ್ಚ ವಾಯಸೈಃ ॥ ೧೧ ॥

ಶ್ವಭಿರ್ದಂಶೈರ್ವೃಕೈರ್ವ್ಯಾಘ್ರೈ ರೌದ್ರೈಶ್ಚ ವಿಕೃತಾನನೈಃ ।
ಪಚ್ಯಂತೇ ಮತ್ಸ್ಯವಚ್ಚಾಪಿ ಪ್ರದೀಪ್ತಾಂಗಾರರಾಶಿಷು ॥ ೧೨ ॥

ಹೊಡೆಯುವರು. ಆಮೇಲೆ ಬೆಂಕಿಗಿಂತಲೂ ಹೆಚ್ಚಾಗಿ ಕಾದಿರುವ ಖಾರದಪುಡಿಯನ್ನು ಇವರ ಶರೀರದ ಎಲ್ಲಾ ಕಡೆಗೂ ಬಳಿಯುವರು.

೯-೧೨. ಚೆನ್ನಾಗಿ ಕಾದಿರುವ ಖಾರದಪುಡಿಯನ್ನು ಕತ್ತರಿಸಿರುವ ಶರೀರದಲ್ಲಿ ಬಳಿಯುವುದರಿಂದ ಪಾಪಿಗಳು ಬಹಳ ಸಂಕಟಪಡುವರು. ಆಮೇಲೆ ಯಮನ ದೂತರುಗಳು ಈ ಪಾಪಿಗಳ ಶರೀರವನ್ನು ತಲೆಮೊದಲುಗೊಂಡು ಬದನೆಕಾಯಿಯನ್ನು ಹೆಚ್ಚಿದಂತೆ, ಸಣ್ಣದಾಗಿ ಸೀಳಿ ಕಾದಿರುವ ಲೋಹದ ಕೊಪ್ಪರಿಗೆಯಲ್ಲಿ ಹಾಕಿ ಬೇಯಿಸುವರು. ಕೆಲವರನ್ನು ಮಲ ಮತ್ತು ಹುಳುಗಳಿಂದ ತುಂಬಿರುವ ಬಾವಿಯಲ್ಲಿ ಹಾಕುವರು. ಕೆಲವರನ್ನು ಸೀಳಿ, ಮೇದಸ್ಸು, ರಕ್ತ ಇವುಗಳು ತುಂಬಿರುವ ಬಾವಿಯಲ್ಲಿ ಹಾಕುವರು. ಅಲ್ಲಿ ಇವರನ್ನು ಹುಳುಗಳೂ, ಲೋಹದ ಕೊಕ್ಕೆಗಳುಳ್ಳ ಕಾಗೆಗಳೂ, ನಾಯಿಗಳೂ, ರಕ್ತವನ್ನು ಹೀರುವ ನೊಣಗಳೂ, ತೋಳ, ಹುಲಿ ಇವೇ ಮೊದಲಾದ ಭಯಂಕರವೂ ವಿಕಾರವೂ ಆದ ಮುಖವುಳ್ಳ ಪ್ರಾಣಿಗಳೂ, ಕಚ್ಚಿ ತಿನ್ನುವುವು. ಮತ್ತೆ ಕೆಲವರನ್ನು ಬೆಂಕಿಯ ರಾಶಿಯಲ್ಲಿ ಹಾಕಿ ಮೀನನ್ನು ಬೇಯಿಸುವಂತೆ ಬೇಯಿಸುವರು.

ಭಿನ್ನಾಃ ಶೂಲೈಸ್ಸುತೀಕ್ಷ್ಣೈಶ್ಚ ನರಾಃ ಪಾಪೇನ ಕರ್ಮಣಾ ।
ತೈಲಯಂತ್ರೇಷು ಚಾಕ್ರಮ್ಯ ಘೋರೈಃ ಕರ್ಮಭಿರಾತ್ಮನಃ ॥ ೧೩ ॥

ತಿಲಾ ಇವ ಪ್ರಪೀಡ್ಯಂತೇ ಚಕ್ರಾಖ್ಯೇ ಜನಪಿಂಡಕಾಃ ।
ಭೃಜ್ಯಂತೇ ಚಾತಪೇ ತಪ್ತೇ ಲೋಹಭಾಂಡೇಷ್ವನೇಕಧಾ ॥ ೧೪ ॥

ತೈಲಪೂರ್ಣಕಟಾಹೇಷು ಸುತಪ್ತೇಷು ಪುನಃ ಪುನಃ ।
ಬಹುಧಾ ಪಚ್ಯತೇ ಜಿಹ್ವಾ ಪ್ರಪೀಡ್ಯೋರಸಿ ಪಾದಯೋಃ ॥ ೧೫ ॥

ಯಾತನಾಶ್ಚ ಮಹತ್ಯೋಽತ್ರ ಶರೀರಸ್ಯಾತಿ ಸರ್ವತಃ ।
ನಿಶ್ಶೇಷನರಕೇಷ್ವೇವಂ ಕ್ರಮಂತಿ ಕ್ರಮಶೋ ನರಾಃ ॥ ೧೬ ॥

ನರಕೇಷು ಚ ಸರ್ವೇಷು ವಿಚಿತ್ರಾ ಯಮಯಾತನಾಃ ।
ಯಾನ್ಯೈಶ್ಚ ದೀಯತೇ ವ್ಯಾಸ ಸರ್ವಾಂಗೇಷು ಸುಕಷ್ಟದಾಃ ॥ ೧೭ ॥

೧೩-೧೪. ಕೆಲವು ಜನ ಪಾಪಮಾಡಿದವರನ್ನು ಅವರ ಪಾಪಕರ್ಮಾನು ಸಾರವಾಗಿ ಮೊನಚಾಗಿ ಇರುವ ಹರಿತವಾದ ಶೂಲಗಳಿಂದ ಇರಿದು, ಎಣ್ಣೆಯನ್ನು ತೆಗೆಯುವ ಗಾಣದಲ್ಲಿ ಬಲವಂತದಿಂದ ಹಾಕಿ, ಚಕ್ರವೆಂದು ಹೆಸರುಳ್ಳ ಅದರಲ್ಲಿ ಎಳ್ಳನ್ನು ಹಿಂಡುವಂತೆ ಹಿಂಡಿ ಪೀಡಿಸುವರು. ಮತ್ತು ಲೋಹದ ಪಾತ್ರೆಗಳಲ್ಲಿ ಅನೇಕ ವಿಧಗಳಿಂದ ಚೆನ್ನಾಗಿ ಕಾಯಿಸಿ ಬಿಸಿಲಿನಲ್ಲಿ ಒಣಗಿಸುವರು.

೧೫-೧೬. ಯಮನ ದೂತರುಗಳು ಪಾಪಮಾಡಿದವರ ಎದೆಯನ್ನೂ ಕಾಲನ್ನೂ ಮೆಟ್ಟಿಕೊಂಡು, ನಾಲಿಗೆಗಳನ್ನು ಚೆನ್ನಾಗಿ ಕಾದಿರುವ ಎಣ್ಣೆಯ ಕೊಪ್ಪರಿಗೆ ಗಳಲ್ಲಿ ಅನೇಕ ರೀತಿಯಿಂದ ಬೇಯಿಸುವರು. ಈ ನರಕಗಳಲ್ಲಿ ಶರೀರದ ಎಲ್ಲಾ ಕಡೆ ಯಲ್ಲಿಯೂ, ಬಹಳ ವಿಧವಾದ ಹಿಂಸೆಯು ಉಂಟಾಗುವುದು. ಪಾಪಿಗಳಾದ ಜನ ರನ್ನು ಒಂದಾಗುತ್ತಲೊಂದು ಎಲ್ಲ ನರಕಗಳಲ್ಲಿ ಕ್ರಮವಾಗಿ ಹಾಕುವರು.

೧೭-೧೯. ಎಲೈ ವ್ಯಾಸಮುಷಿಯೆ! ಕೇಳು. ಯಮನದೂತರು ಅನೇಕ ವಿಧವಾದ ಎಲ್ಲಾ ನರಕಗಳಲ್ಲಿಯೂ, ಬೇರೆ ಬೇರೆ ಹಿಂಸೆಗಳನ್ನು ಪಾಪಿಗಳ ಶರೀರ ದಲ್ಲೆಲ್ಲಾ ಉಂಟಾಗುವಂತೆ ಮಾಡುವರು. ಉರಿಯುತ್ತಿರುವ ಕೆಂಡಗಳನ್ನು ತೆಗೆದು

ಜ್ವಲದಂಗಾರಮಾದಾಯ ಮುಖಮಾಪೂರ್ಯ ತಾಡ್ಯತೇ ।
ತತಃ ಕ್ಷಾರೇಣ ದೀಪ್ತೇನ ತಾಮ್ರೇಣ ಚ ಪುನಃ ಪುನಃ ॥ ೧೮ ॥

ಘೃತೇನಾತ್ಯಂತತಪ್ತೇನ ತದಾ ತೈಲೇನ ತನ್ಮುಖಂ ।
ಇತಸ್ತತಃ ಪೀಡಯಿತ್ವಾ ಭೃಶಮಾಪೂರ್ಯ ಹನ್ಯತೇ ॥ ೧೯ ॥

ವಿಷ್ಠಾಭಿಃ ಕೃಮಿಭಿಶ್ಚಾಪಿ ಪೂರ್ಯಮಾಣಾಃ ಕ್ವಚಿತ್ ಕ್ವಚಿತ್ ।
ಪರಿಷ್ವಜಂತಿ ಚಾತ್ಯುಗ್ರಾಂ ಪ್ರದೀಪ್ತಾಂ ಲೋಹಶಾಲ್ಮಲೀಂ ॥ ೨೦ ॥

ಹನ್ಯಂತೇ ಪೃಷ್ಠದೇಶೇ ಚ ಪುನರ್ದೀಪ್ತೈರ್ಮಹಾಘನೈಃ ।
ದಂತುರೇಣಾದಿಕಂಠೇನ ಕ್ರಕಚೇನ ಬಲೀಯಸಾ ॥ ೨೧ ॥

ಶಿರಃಪ್ರಭೃತಿ ಪೀಡ್ಯಂತೇ ಘೋರೈಃ ಕರ್ಮಭಿರಾತ್ಮಜೈಃ ।
ಖಾದ್ಯಂತೇ ಚ ಸ್ವಮಾಂಸಾನಿ ಪೀಯತೇ ಶೋಣಿತಂ ಸ್ವಕಂ ॥ ೨೨ ॥

ಕೊಂಡು ಬಂದು ಅದನ್ನು ಪಾಪಿಗಳ ಬಾಯಿತುಂಬ ಸುರಿದು ಚೆನ್ನಾಗಿ ಹೊಡೆಯು ವರು. ಕೆಂಪಗೆ ಚೆನ್ನಾಗಿ ಕಾದಿರುವ ತುಪ್ಪ ಅಥವಾ ಎಣ್ಣೆಯನ್ನು ತಂದು ಪಾಪಿಯ ಮುಖದಮೇಲೆ ಹಾಕಿ, ಬಾಯಿಗೂ ತುಂಬಿ, ಎಲ್ಲಾ ಕಡೆಯಲ್ಲಿಯೂ ಪೀಡಿಸಿದನಂತರ ಚೆನ್ನಾಗಿ ಹೊಡೆಯುವರು.

೨೦-೨೧. ಯಮನ ದೂತರುಗಳು, ಪಾಪಿಗಳನ್ನು ಅಲ್ಲಲ್ಲಿ ಮಲದಿಂದಲೂ, ಕ್ರಿಮಿಗಳಿಂದಲೂ ತುಂಬಿ ಚೆನ್ನಾಗಿ ಕಾದಿರುವ ಭಯಂಕರವಾದ ಲೋಹದ ಶಾಲ್ಮಲೀ ಎಂಬ ಮರವನ್ನು ಆಲಂಗಿಸುವಂತೆ ಮಾಡಿ ಶಿಕ್ಷೆಮಾಡುವರು. ಕಾದಿರುವ ಕಬ್ಬಿಣದ ಸಲಾಕಿಗಳಿಂದ ಲೋಹದ ಶಾಲ್ಮಲೀ ಮರಕ್ಕೆ ಕಟ್ಟಿ ಬೆನ್ನಿನಮೇಲೆ ಬಲವಾಗಿ ಹೊಡೆಯುವರು.ಹರಿತವಾದ ಹಲ್ಲುಗಳುಳ್ಳ ಗರಗಸಗಳಿಂದ ತಲೆ ಮೊದಲುಗೊಂಡು ಪಾಪಿಗಳ ಶರೀರವನ್ನು ಕೊಯ್ಯುವರು. ಪಾಪಿಗಳು ತಮ್ಮ ಕರ್ಮಗಳಿಗೆ ಅನುಸಾರವಾಗಿ ಬಗೆ ಬಗೆಯಾದ ಹಿಂಸೆಯನ್ನು ಅನುಭವಿಸುವರು.

೨೨-೨೩. ಪಾಪಿಗಳು ಆ ನರಕಗಳಲ್ಲಿ ತಮ್ಮ ಮಾಂಸವನ್ನೇ ತಿಂದು ತಮ್ಮ ಶರೀರದ ರಕ್ತವನ್ನು ಕುಡಿಯುವರು. ಅನ್ನ ಮತ್ತು ನೀರು ಇವುಗಳನ್ನು ಯಾರಿಗೂ

ಅನ್ನಂ ಪಾನಂ ನ ದತ್ತಂ ಯಸ್ಸರ್ವದಾ ಸ್ವಾತ್ಮಪೋಷಕೈಃ ।
ಇಕ್ಷುವತ್ತೇ ಪ್ರಪೀಡ್ಯಂತೇ ಜರ್ಜರೀಕೃತ್ಯ ಮುದ್ಗರೈಃ ॥ ೨೩ ॥

ಅಸಿತಾಲವನೇ ಘೋರೇ ಛಿದ್ಯಂತೇ ಖಂಡಶಸ್ತತಃ ।
ಸೂಚೀಭಿರ್ಭಿನ್ನಸರ್ವಾಂಗಾಸ್ತಪ್ತಶೂಲಾಗ್ರರೋಪಿತಾಃ ॥ ೨೪ ॥

ಸಂಚಾಲ್ಯಮಾನಾ ಬಹುಶಃ ಕ್ಲಿಶ್ಯಂತೇ ನ ಮ್ರಿಯಂತಿ ಚ ।
ತಥಾ ಚ ತಚ್ಛರೀರಾಣಿ ಸುಖದುಃಖಸಹಾನಿ ಚ ॥ ೨೫ ॥

ದೇಹಾದುತ್ಪಾಟ್ಯ ಮಾಂಸಾನಿ ಛಿದ್ಯಂತೇ ಸ್ವೈಶ್ಚ ಮುದ್ಗರೈಃ ।
ದಂತುರಾಕೃತಿಭಿರ್ಘೋರೈರ್ಯಮದೂತೈರ್ಬಲೋತ್ಕಟೈಃ ॥ ೨೬ ॥

ನಿರೂಚ್ಛ್ವಾಸೇ ನಿರುಚ್ಛ್ವಾಸಾಸ್ತಿಷ್ಠಂತಿ ನರಕೇ ಚಿರಂ ।
ಉತ್ಪಾಡ್ಯಂತೇ ತಥೋಚ್ಛ್ವಾಸೇ ವಾಲುಕಾಸದನೇ ನರಾಃ ॥ ೨೭ ॥

ಕೊಡದೆ, ಯಾವಾಗಲೂ ತಮ್ಮ ಶರೀರವನ್ನು ಪೋಷಿಸುತ್ತಿದ್ದವರನ್ನು ಯಮನ ದೂತರು ಮುದ್ಗರವೆಂಬ ಆಯುಧಗಳಿಂದ ಕಬ್ಬನ್ನು ಹಿಂಡುವಂತೆ ಹಿಂಡುವರು.

೨೪-೨೫. ಭಯಂಕರವಾದ ಅಸಿತಾಲವನವೆಂಬ ಕತ್ತಿಯ ಅಲಗಿನಂತಿರುವ ತಾಳೆಯಮರದ ಕಾಡಿನಲ್ಲಿ ಚೂರುಚೂರು ಮಾಡಿ ಹಾಕುವರು. ಅನಂತರ ಆ ಪಾಪಿಗಳನ್ನು ಸೂಜಿಗಳಿಂದ ಭೇದಿಸಿ ಅವರ ಶರೀರವನ್ನು ಕಾದಿರುವ ಶೂಲಗಳಿಗೆ ಏರಿಸುವರು. ಯಮನದೂತರು ಅವರನ್ನು ನಾನಾವಿಧವಾಗಿ ಎಳದಾಡಿ ಕ್ಲೇಶವನ್ನು ಕೊಟ್ಟು ಸಾಯವಮಟ್ಟಿಗೆ ಹಿಂಸೆಯನ್ನು ಕೊಡುವರು. ಆ ಪಾಪಿಗಳ ಯಾತನಾ ಶರೀರವು ಯಮದೂತರು ಕೊಡುತ್ತಿರುವ ಅಷ್ಟುಮಟ್ಟಿನ ಹಿಂಸೆಯನ್ನೂ ತಡೆಯ ಬಹುದಾದಷ್ಟು ಸಾಮರ್ಥ್ಯವುಳ್ಳದ್ದಾಗಿರುವುದು. ಆದರೆ ಸಾಯುವುದಿಲ್ಲ.

೨೬. ಭಯಂಕರರಾದ ಯಮನದೂತರು ಮೊನೆಚಾದ ತಮ್ಮ ಹಲ್ಲು ಗಳಿಂದಲೂ ಮುದ್ಗರಾಯುಧದಿಂದಲೂ ಪಾಪಿಗಳ ಶರೀರದಿಂದ ಮಾಂಸವನ್ನು ಕಿತ್ತು ತೆಗೆಯುವರು.

೨೭-೨೮. ನಿರುಚ್ಛ್ವಾಸವೆಂಬ ನರಕದಲ್ಲಿ ಪಾಪಿಗಳು ಗಟ್ಟಿಯಾಗಿ ಉಸಿರನ್ನು ಬಿಡುವುದಕ್ಕಾಗದೆ ಶಿಕ್ಷೆಯನ್ನು ಅನುಭವಿಸುವರು. ವಾಲುಕಾಸದನವೆಂಬ ನರಕ ದಲ್ಲಿ ಪಾಪಿಗಳು ಉಸಿರುಬಿಟ್ಟರೆ ಏಟುಗಳನ್ನು ತಿನ್ನುವ ಶಿಕ್ಷೆಯನ್ನು ಅನುಭವಿಸು

ರೌರವೇ ರೋದಮಾನಾಶ್ಚ ಪೀಡ್ಯಂತೇ ವಿವಿಧೈರ್ವಧೈಃ ।
ಮಹಾರೌರವಪೀಡಾಭಿರ್ಮಹಾಂತೋಽಪಿ ರುದಂತಿ ಚ　　॥ ೨೮ ॥

ಪತ್ಸು ವಕ್ತ್ರೇ ಗುದೇ ಮುಂಡೇ ನೇತ್ರಯೋಶ್ಚೈವ ಮಸ್ತಕೇ ।
ನಿಹನ್ಯಂತೇ ಘನೈಸ್ತೀಕ್ಷ್ಣೈಸ್ಸುತಪ್ತೈರ್ಲೋಹಶಂಕುಭಿಃ　　॥ ೨೯ ॥

ಸುತಪ್ತವಾಲುಕಾಯಾಂ ತು ಪ್ರಯೋಜ್ಯಂತೇ ಮುಹುರ್ಮುಹುಃ ।
ಜಂತುಪಂಕೇ ಭೃಶಂ ತಪ್ತೇ ಕ್ಷಿಪ್ತಾಃ ಕ್ರಂದಂತಿ ವಿಸ್ವರಂ　　॥ ೩೦ ॥

ಕುಂಭೀಪಾಕೇಷು ಪಚ್ಯಂತೇ ತಪ್ತತೈಲೇಷು ವೈ ಮುನೇ ।
ಪಾಪಿನಃ ಕ್ರೂರಕರ್ಮಾಣೋಽಸಹ್ಯೇಷು ಸರ್ವಥಾ ಪುನಃ　　॥ ೩೧ ॥

ಲಾಲಾಭಕ್ಷೇಷು ಪಾಪಾಸ್ತೇ ಪಾತ್ಯಂತೇ ದುಃಖದೇಷು ವೈ ।
ನಾನಾಸ್ಥಾನೇಷು ಚ ತಥಾ ನರಕೇಷು ಪುನಃ ಪುನಃ　　॥ ೩೨ ॥

ವರು. ರೌರವವೆಂಬ ನರಕದಲ್ಲಿ ಅನೇಕ ವಿಧವಾದ ಹಿಂಸೆಗಳಿಂದ ಅಳುತ್ತಾ ತೊಂದರೆಯನ್ನು ಅನುಭವಿಸುವರು. ಮಹಾರೌರವನರಕದಲ್ಲಿ ದೊಡ್ಡವರೂ ಕೂಡ ದುಃಖಪಡುವರು. ಕಾಲು, ಮುಖ, ಪೃಷ್ಠಭಾಗ, ಮುಂಡಭಾಗ, ಕಣ್ಣುಗಳು, ತಲೆ ಈ ಭಾಗಗಳಲ್ಲಿ ಪಾಪಿಗಳನ್ನು ಯಮನ ದೂತರುಗಳು ಲೋಹದ ಗೂಟಗಳನ್ನು ಮಾಡಿಕೊಂಡು ಅವುಗಳನ್ನು ಮೊನಚುಮಾಡಿ ಚೆನ್ನಾಗಿ ಕಾಯಿಸಿ ಅವುಗಳಿಂದ ಬಲವಾಗಿ ಚುಚ್ಚಿ ಹಿಂಸೆಮಾಡುವರು.

೩೦-೩೨. ಚೆನ್ನಾಗಿ ಕಾಯಿಸಿದ ಮರಳಿನಿಂದ ಕೂಡಿರುವ ನರಕದಲ್ಲಿ ಈ ಪಾಪಿಗಳನ್ನು ಬಾರಿಬಾರಿಗೂ ಮಲಗಿಸುವರು. ಕ್ರಿಮಿಗಳಿಂದ ಕೂಡಿ ಚೆನ್ನಾಗಿ ಕಾಯಿಸಿರುವ ಕೆಸರಿನಲ್ಲಿ ಇರಿಸಲು ಈ ಪಾಪಿಗಳು ಕೆಟ್ಟ ಧ್ವನಿಯಿಂದ ಕಿರಿಚಿಕೊಳ್ಳುವರು. ಎಲೈ ವ್ಯಾಸಋಷಿಯೆ! ಕೇಳು. ಕುಂಭೀಪಾಕವೆಂಬ ನರಕದಲ್ಲಿಯೂ, ಚೆನ್ನಾಗಿ ಕಾದಿರುವ ಎಣ್ಣೆಯ ಕೊಪ್ಪರಿಗೆಯಲ್ಲಿಯೂ, ಸಹಿಸಲು ಆಗದಿರುವ ಬೇರೆಬೇರೆಯಾದ ನರಕಗಳಲ್ಲಿಯೂ ಕೂಡ ಕ್ರೂರವಾದ ಕೆಲಸಗಳನ್ನು ಮಾಡಿರುವ ಪಾಪಿಗಳನ್ನು ಆಗಿಂದಾಗ್ಯೆ ಹಾಕಿ ಬೇಯಿಸುವರು. ದುಃಖಗಳನ್ನು ಉಂಟುಮಾಡುವ ಲಾಲಾಭಕ್ಷವೆಂಬ ನರಕಗಳಲ್ಲಿಯೂ, ಅನೇಕಸಾರಿ ಈ ಪಾಪಿಗಳನ್ನು ಹಾಕುವರು. ನರಕಗಳ ಅನೇಕ ಬೇರೆ ಬೇರೆ ಸ್ಥಾನಗಳಲ್ಲಿಯೂ, ಅನೇಕ ನರಕಗಳಲ್ಲಿಯೂ ಈ ಪಾಪಿಗಳನ್ನು ಅನೇಕಾವರ್ತಿ ಕೆಡುವುವರು.

ಸೂಚೀಮುಖೇ ಮಹಾಕ್ಲೇಶೇ ನರಕೇ ಪಾತ್ಯತೇ ನರಃ ।
ಪಾಪೀ ಪುಣ್ಯವಿಹೀನಶ್ಚ ತಾಡ್ಯತೇ ಯಮಕಿಂಕರೈಃ ॥ ೩೩ ॥

ಲೋಹಕುಂಭೇ ವಿನಿಃಕ್ಷಿಪ್ತಃ ಶ್ವಸಂತಶ್ಚ ಶನೈಶ್ಶನೈಃ ।
ಮಹಾಗ್ನಿನಾ ಪ್ರಪಚ್ಯಂತೇ ಸ್ವಪಾಪೈರೇವ ಮಾನವಾಃ ॥ ೩೪ ॥

ದೃಢಂ ರಜ್ಜ್ವಾದಿಭಿರ್ಬಧ್ವಾ ಪ್ರಪೀಡ್ಯಂತೇ ಶಿಲಾಸು ಚ ।
ಕ್ಷಿಪ್ಯೇತ ಚಾಂಧಕೂಪೇಷು ದಶ್ಯಂತೇ ಭ್ರಮರೈರ್ಭೃಶಂ ॥ ೩೫ ॥

ಕೃಮಿಭಿರ್ಭಿನ್ನಸರ್ವಾಂಗಾಶ್ಶತಶೋ ಜರ್ಜರೀಕೃತಾಃ ।
ಸೂತೀಕ್ಷ್ಣಕ್ಷಾರಕೂಪೇಷು ಕ್ಷಿಪ್ಯಂತೇ ತದನಂತರಂ ॥ ೩೬ ॥

ಮಹಾಜ್ವಾಲೇಽತ್ರ ನರಕೇ ಪಾಪಾಃ ಕ್ರಂದಂತಿ ದುಃಖಿತಾಃ ।
ಇತಶ್ಚೇತಶ್ಚ ಧಾವಂತಿ ದಹ್ಯಮಾನಾಸ್ತ್ವದರ್ಚಿಷಾ ॥ ೩೭ ॥

ಪೃಷ್ಠೇ ಚಾನೀಯ ತುಂಡಾಭ್ಯಾಂ ವಿನ್ಯಸ್ತಸ್ಕಂಧಯೋರ್ಜಿತೇ ।
ತಯೋರ್ಮಧ್ಯೇನ ವಾಕೃಷ್ಯ ಬಾಹುಪೃಷ್ಠೇನ ಗಾಢತಃ ॥ ೩೮ ॥

೩೩-೩೫. ಬಹಳ ದುಃಖವನ್ನೂ ಸಂಕಟವನ್ನೂ ಉಂಟುಮಾಡುವ ಸೂಚೀಮುಖವೆಂಬ ನರಕದಲ್ಲಿ ಯಮನ ದೂತರು ಪುಣ್ಯಮಾಡದಿರುವ ಪಾಪಿಗಳನ್ನು ಹಾಕಿ ಹೊಡೆಯುವರು. ಲೋಹಕುಂಭವೆಂಬ ನರಕದಲ್ಲಿ ಹಾಕಿದಾಗ ಈ ಪಾಪಿಗಳು ಮೆಲ್ಲ ಮೆಲ್ಲಗೆ ಉಸಿರನ್ನು ಬಿಡುತ್ತಾ ಬಲವಾದ ಬೆಂಕಿಯ ಉರಿಯಿಂದ ಉಂಟಾದ ಕ್ಲೇಶವನ್ನು ಸಹಿಸುತ್ತಾ ತಮ್ಮ ಪಾಪಕರ್ಮಗಳ ಫಲವನ್ನು ಅನುಭವಿಸುವರು. ಹಗ್ಗಗಳಿಂದ ಈ ಪಾಪಿಗಳನ್ನು ಬಲವಾಗಿ ಕಟ್ಟಿ ಕಲ್ಲಿನಮೇಲೆ ಬಡಿಯುವರು. ಅನಂತರ ಇವರನ್ನು ಕಗ್ಗತ್ತಲೆಯುಳ್ಳ ಹಾಳು ಭಾವಿಗಳಿಗೆ ಹಾಕಿ ದುಂಬಿಗಳಿಂದ ಕಚ್ಚಿಸುವರು.

೩೬-೩೯. ಕ್ರಿಮಿಗಳಿಂದ ಈ ಪಾಪಿಗಳ ಶರೀರವೆಲ್ಲವೂ ಗಾಯಗೊಂಡಿರುವಾಗ ಉಪ್ಪಿನ ಭಾವಿಗಳಿಗೆ ಇವರನ್ನು ತಳ್ಳುವರು. ಮಹಾಜ್ವಾಲವೆಂಬ ಈ ನರಕದಲ್ಲಿ ಪಾಪಮಾಡಿದವರು ದುಃಖದಿಂದ ಕಿರುಚುತ್ತಾ ಇರುವರು. ಆ ಅಗ್ನಿಜ್ವಾಲೆಯನ್ನು ತಡೆಯಲಾರದೆ ಇಲ್ಲಿಂದ ಅಲ್ಲಿಗೆ ಓಡಾಡುತ್ತಾ ಇರುವರು. ಬೆನ್ನಿನಲ್ಲಿ ಕೈಗಳನ್ನು ಸೇರಿಸಿ ಹೆಗಲಿನಲ್ಲಿ ಬೀರುಗಂಟಿನಿಂದ ತೋಳುಗಳ ಹಿಂಭಾಗಕ್ಕೂ ಸೇರಿಸಿ ಈ ಪಾಪಿಗಳನ್ನು ಬಲವಾಗಿ ಕಟ್ಟಿರುವರು. ಈ ರೀತಿ ಅವರವರ ಪಾಪರಜ್ಜುಗಳೆಲ್ಲವೂ ಅವ

**ಬದ್ಧಾಃ ಪರಸ್ಪರಂ ಸರ್ವೇ ಸುಭೃಶಂ ಪಾಪರಜ್ಜುಭಿಃ ।**
**ಬದ್ಧಪಿಂಡಾಸ್ತು ದೃಶ್ಯಂತೇ ಮಹಾಜ್ವಾಲೇ ತು ಯಾತನಾಃ ॥ ೩೯ ॥**

**ರಜ್ಜುಭಿರ್ವೇಷ್ಟಿತಾಶ್ಚೈವ ಪ್ರಲಿಪ್ತಾಃ ಕರ್ದಮೇನ ಚ ।**
**ಕರೀಷತುಷವಹ್ನೌ ಚ ಪಚ್ಯಂತೇ ನ ಮ್ರಿಯಂತಿ ಚ ॥ ೪೦ ॥**

**ಸುತೀಕ್ಷ್ಣಂ ಚರಿತಾಸ್ತೇ ಹಿ ಕರ್ಕಶಾಸು ಶಿಲಾಸು ಚ ।**
**ಆಸ್ಫಾಲ್ಯ ಶತಶಃ ಪಾಪಾಃ ಪಚ್ಯಂತೇ ತೃಣವತ್ತತಃ ॥ ೪೧ ॥**

**ಶರೀರಾಭ್ಯಂತರಗತೈಃ ಪ್ರಭೂತೈಃ ಕೃಮಿಭಿರ್ನರಾಃ ।**
**ಭಕ್ಷ್ಯಂತೇ ತೀಕ್ಷ್ಣವದನೈರಾತ್ಮದೇಹಕ್ಷಯಾದ್ಭೃಶಂ ॥ ೪೨ ॥**

**ಕೃಮೀಣಾಂ ನಿಚಯೇ ಕ್ಷಿಪ್ತಾಃ ಪೂಯಮಾಂಸಾಸ್ಥಿರಾಶಿಷು ।**
**ತಿಷ್ಠಂತ್ಯುದ್ವಿಗ್ನಹೃದಯಾಃ ಪರ್ವತಾಭ್ಯಾಂ ನಿಪೀಡಿತಾಃ ॥ ೪೩ ॥**

---

ರವರ ಶರೀರಕ್ಕೆ ಬಿಗಿದಿರುವ ಕಾರಣ ಮಹಾಜ್ವಾಲವೆಂಬ ನರಕದಲ್ಲಿ ಬಿದ್ದಾಗ ಅವುಗಳ ಯಾತನೆಗಳು ಬಹಳ ಚೆನ್ನಾಗಿ ಅವರ ಅನುಭವಕ್ಕೆ ಬರುತ್ತಿರುವುವು.

೪೦-೪೧. ಹಗ್ಗಗಳಿಂದ ಆ ಪಾಪಿಗಳ ಶರೀರವನ್ನು ಬಿಗಿದುಕಟ್ಟಿ ಕೆಸರನ್ನು ಬಳಿದು, ಇಜ್ಜಲು ಮತ್ತು ಹೊಟ್ಟಿನಿಂದ ಬೆಂಕಿಯನ್ನು ಹೊತ್ತಿಸಿ ಕರೀಷಾಗ್ನಿ ಮತ್ತು ತುಷಾಗ್ನಿಗಳಲ್ಲಿ ಈ ಪಾಪಿಗಳನ್ನು ಬೇಯಿಸುವರು. ಇದರಿಂದ ಪಾಪಿಗಳು ಮರಣವನ್ನು ಹೊಂದುವರು. ದುಃಖವನ್ನು ಕೊಡುವ ಕಠಿಣವಾಗಿರುವ ಕಲ್ಲುಗಳ ಮೇಲೆ ಬಹಳ ಕ್ರೂರತನದಿಂದ ಈ ಪಾಪಿಗಳನ್ನು ಅನೇಕ ಸಾರಿ ಒಣಗಿಸಿದನಂತರ ಹುಲ್ಲು ಕಡ್ಡಿಯನ್ನು ಬೇಯಿಸುವ ಹಾಗೆ ಬೇಯಿಸುವರು.

೪೨-೪೪. ಈ ನರಕಗಳಲ್ಲಿರುವ ಕ್ರಿಮಿಕೀಟಾದಿಗಳು ಪಾಪಿಗಳಾದ ಈ ಜನರ ಶರೀರದ ಒಳಭಾಗವನ್ನು ಪ್ರವೇಶಿಸಿ ಕ್ರೂರವಾದ ಹಿಂಸೆಯನ್ನು ಕೊಡುತ್ತಾ ಆ ಶರೀರವೆಲ್ಲವೂ ಮುಗಿಯುವವರಿಗೂ ತಿಂದುಬಿಡುವುವು. ಯಮನ ದೂತರುಗಳು ಕ್ರಿಮಿಗಳ ರಾಶಿಗಳಲ್ಲಿಯೂ ಕೀವು, ಮಾಂಸ ಮೂಳೆ ಇವುಗಳ ರಾಶಿಗಳಲ್ಲಿಯೂ ಪಾಪಿಗಳನ್ನು ಹಾಕಿದಾಗ ಅವರು ಬಹಳ ಹಿಂಸೆಯನ್ನು ಅನುಭವಿಸುವರು. ಬೆಟ್ಟಗಳನ್ನು ಮೇಲೆ ಹೇರಿದರೆ ಆಗುವಷ್ಟು ವ್ಯಥೆಯನ್ನು ಅನುಭವಿಸುತ್ತಿರುವರು. ಚೆನ್ನಾಗಿ ಕಾದಿರುವ ವಜ್ರದ ಲೇಪದಿಂದ ಶರೀರವನ್ನು ಲೇಪನಮಾಡುವರು. ಕಾಲು

**ತಪ್ತೇನ ವಜ್ರಲೇಪೇನ ಶರೀರಮನುಲಿಪ್ಯತೇ ।**
**ಅಧೋಮುಖೋರ್ಧ್ವಪಾದಾಶ್ಚ ತಾತಪ್ಯಂತೇ ಸ್ಮ ವಹ್ನಿನಾ ॥ ೪೪ ॥**

**ವದನಾಂತಃ ಪ್ರವಿನ್ಯಸ್ತಾಂ ಸುಪ್ರತಪ್ತಾಮಯೋಗದಾಂ ।**
**ತೇ ಖಾದಂತಿ ಪರಾಧೀನಾಸ್ತೈಸ್ತಾಡ್ಯಂತೇ ಸಮುದ್ಗರೈಃ ॥ ೪೫ ॥**

**ಇತ್ಥಂ ವ್ಯಾಸ ಕುಕರ್ಮಾಣೋ ನರಕೇಷು ಪಚಂತಿ ಹಿ ।**
**ವರ್ಣಯಾಮಿ ವಿವರ್ಣತ್ವಂ ತೇಷಾಂ ತತ್ತ್ವಾಯ ಕರ್ಮಿಣಾಂ ॥ ೪೬ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ**
**ಸಾಮಾನ್ಯತೋ ನರಕಗತಿವರ್ಣನಂ ನಾಮ ನವಮೋಽಧ್ಯಾಯಃ**



ಗಳು ಮೇಲುಗಡೆಗೂ, ಮುಖವು ಕೆಳಭಾಗಕ್ಕೂ ಬರುವಂತೆ ನೇತುಹಾಕಿ ಬೆಂಕಿಯಿಂದ ಚೆನ್ನಾಗಿ ಕಾಯಿಸಿ ಅನೇಕಸಾರಿ ಸಂಕಟವನ್ನುಂಟುಮಾಡುವರು.

೪೫. ಪಾಪಗಳನ್ನು ಮಾಡಿದವರು ಚೆನ್ನಾಗಿ ಕಾದಿರುವ ಉಕ್ಕಿನ ಗದೆಯನ್ನು ಬಾಯಿನೊಳಕ್ಕೆ ಹಾಕಿಕೊಂಡು ಯಮದೂತರ ಅಧೀನಕ್ಕೊಳಗಾಗಿ ನುಂಗುವರು. ಮತ್ತು ಅವರನ್ನು ಮುದ್ಗರವೆಂಬ ಆಯುಧಗಳಿಂದ ಹೊಡೆಯುವರು.

೪೬. ಎಲೈ ವ್ಯಾಸಋಷಿಯೆ! ಕೇಳು, ಕೆಟ್ಟಕೆಲಸಗಳನ್ನು ಮಾಡಿರುವ ಪಾಪಿಗಳು ನರಕಗಳಲ್ಲಿ ಶಿಕ್ಷೆಯನ್ನು ಈ ಪ್ರಕಾರವಾಗಿ ಹೊಂದುವರು. ಆಯಾಯ ಕರ್ಮಗಳನ್ನು ಮಾಡುವುದರಿಂದ ಆಯಾಯ ಶಿಕ್ಷೆಗಳುಂಟಾಗುವುವೆಂದು ಅವರಿಗೆ ಸರಿಯಾದ ತಿಳುವಳಿಕೆಯು ಉಂಟಾಗುವುದಕ್ಕಾಗಿ ಇದನ್ನೆಲ್ಲಾ ವರ್ಣಿಸಿ ಹೇಳಿರುವೆನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಸಾಮಾನ್ಯವಾಗಿರುವ ನರಕ ಗತಿಗಳ ವರ್ಣನವೆಂಬ ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

# ದಶಮೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಮಿಥ್ಯಾಗಮಂ ಪ್ರವೃತ್ತಸ್ತು ದ್ವಿಜಿಹ್ವಾಖ್ಯಂ ಚ ಗಚ್ಛತಿ ।
ಜಿಹ್ವಾರ್ಧಕೋಶವಿಸ್ತೀರ್ಣಹಲೈಸ್ತೀಕ್ಷ್ಣೈಃ ಪ್ರಪೀಡ್ಯತೇ ॥ ೧ ॥

ನಿರ್ಭರ್ತ್ಸಯತಿ ಯಃ ಕ್ರೂರೋ ಮಾತರಂ ಪಿತರಂ ಗುರುಂ ।
ವಿಷ್ಠಾಭಿಃ ಕೃಮಿಮಿಶ್ರಾಭಿರ್ಮುಖಮಾಪೂರ್ಯ ಹನ್ಯತೇ ॥ ೨ ॥

ಯೇ ಶಿವಾಯತನಾರಾಮವಾಪೀಕೂಪತಡಾಗಕಾನ್ ।
ವಿದ್ರವಂತಿ ದ್ವಿಜಸ್ಥಾನಂ ನರಾಸ್ತತ್ರ ರಮಂತಿ ಚ ॥ ೩ ॥

---

## ಹತ್ತನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ಸುಳ್ಳಾದ ಶಾಸ್ತ್ರವನ್ನು ನಂಬಿಕೊಂಡು ಅದರಂತೆ ಆಚರಣೆಯನ್ನು ಮಾಡುವವನು ಮತ್ತು ಮಾಡಿಸುವವನೂ ದ್ವಿಜಿಹ್ವಾ ಎಂಬ ನರಕವನ್ನು ಹೊಂದುವರು. ಈ ನರಕದಲ್ಲಿ ನಾಲಿಗೆಯನ್ನು ಮೊನಚಾದ ಕತ್ತಿಯಿಂದ ಅರ್ಧಭಾಗಕ್ಕೆ ಸರಿಯಾಗಿ ಸೀಳಿ ನಾನಾ ವಿಧವಾಗಿ ಹಿಂಸೆಮಾಡುವರು.

೨-೫. ತಂದೆತಾಯಿಗಳನ್ನೂ ಗುರುವನ್ನೂ ಕ್ರೂರವಾಗಿ ದೂಷಿಸುವವನಿಗೆ ಕ್ರಿಮಿಗಳಿಂದ ಕೂಡಿರುವ ಮಲವನ್ನು ಬಾಯಿಗೆ ತುಂಬಿ ಹೊಡೆಯುವರು. ಶಿವನ ದೇವಸ್ಥಾನದ ಉದ್ಯಾನವನ, ಭಾವಿ, ಕೊಳ, ಕೆರೆ ಇವುಗಳನ್ನು ಕೆಡಿಸುವವರು,

ಕಾಮಯೋದ್ವರ್ತನಾಭ್ಯಂಗಂ ಸ್ನಾನಪಾನಾಂಬುಭೋಜನಂ ।
ಕ್ರೀಡನಂ ಮೈಥುನಂ ದ್ಯೂತಮಾಚರಂತಿ ಮುದೋದ್ಧತಾಃ ॥ ೪ ॥

ಪೇಚಿರೇ ವಿವಿಧೈರ್ಘೋರೈರಿಕ್ಷುಯಂತ್ರಾದಿಪೀಡನೈಃ ।
ನಿರಯಾಗ್ನಿಷು ಪಚ್ಯಂತೇ ಯಾವದಾಭೂತಸಂಪ್ಲವಂ ॥ ೫ ॥

ತೇನ ತೇನೈವ ರೂಪೇಣ ತಾಡ್ಯಂತೇ ಪಾರದಾರಿಕಾಃ ।
ಗಾಢಮಾಲಿಂಗ್ಯ ತೇ ನಾರೀಂ ಸುತಪ್ತಾಂ ಲೋಹನಿರ್ಮಿತಾಂ ॥ ೬ ॥

ಪೂರ್ವಾಕಾರಾಶ್ಚ ಪುರುಷಾಃ ಪ್ರಜ್ವಲಂತಿ ಸಮಂತತಃ ।
ದುಶ್ಚಾರಿಣೀಂ ಸ್ತ್ರಿಯಂ ಗಾಢಮಾಲಿಂಗಂತಿ ರುದಂತಿ ಚ ॥ ೭ ॥

ಯೇ ಶೃಣ್ವಂತಿ ಸತಾಂ ನಿಂದಾಂ ತೇಷಾಂ ಕರ್ಣಪ್ರಪೂರಣಂ ।
ಅಗ್ನಿವರ್ಣೈರಯಃಕೀಲೈಸ್ತಪ್ತೈಸ್ತಾಮ್ರಾದಿನಿರ್ಮಿತೈಃ ॥ ೮ ॥

ಋಷ್ಯಾಶ್ರಮಗಳಲ್ಲಿ ವಿಹಾರಮಾಡುವವರು, ತಮ್ಮ ತಮ್ಮ ಇಚ್ಛಾನುಸಾರವಾಗಿ ಎಣ್ಣೆಯನ್ನು ಹಚ್ಚಿಕೊಂಡು ಅಭ್ಯಂಜನವನ್ನು ಮಾಡುವವರು, ನಿಯಮವನ್ನು ಬಿಟ್ಟು ಸ್ನಾನ ಪಾನ, ಊಟಮಾಡುವವರು, ವಿಹಾರಮಾಡುವವರು ಸ್ತ್ರೀ ಸಂಭೋಗವನ್ನು ಮಾಡುವವರು ಇವುಗಳು ಮದದಿಂದ ಕೊಬ್ಬಿರುವುದರಿಂದ ಇವರನ್ನು ಪಂಚಭೂತಗಳ ಪ್ರಳಯವಾಗುವವರಿಗೂ ಅನೇಕ ವಿಧವಾದ ಭಯಂಕರವಾದ (ಇಕ್ಷುಯಂತ್ರ ಪ್ರಪೀಡನ) ಕಬ್ಬಿನ ಗಾಣವೇ ಮೊದಲಾದುವುಗಳಲ್ಲಿ ಹಾಕಿ ಶಿಕ್ಷೆಯನ್ನು ಮಾಡುವರು ಮತ್ತು ಯಮನ ದೂತರು ನರಕಗಳ ಅಗ್ನಿಗಳಲ್ಲಿ ಬೇಯಿಸುವರು.

೬-೭. ಇನ್ನೊಬ್ಬರ ಹೆಂಡತಿಯರಲ್ಲಿ ಹಾದರವನ್ನು ಮಾಡುವವರನ್ನು ಅವರು ಯಾವ ಯಾವ ರೀತಿಯಲ್ಲಿ ಹಾದರ ಮಾಡಿರುವರೋ ಆಯಾಯ ರೀತಿಯಲ್ಲಿ ಶಿಕ್ಷೆಗಳನ್ನು ಮಾಡುವರು. ಲೋಹದಿಂದ ನಿರ್ಮಿಸಿದ ಸ್ತ್ರೀಯನ್ನು ಚೆನ್ನಾಗಿ ಕಾಯಿಸಿ ಆ ಕೆಟ್ಟ ನಡತೆಯುಳ್ಳವರು ಆ ಪ್ರತಿಮೆಯನ್ನು ತಬ್ಬಿಕೊಳ್ಳುವಹಾಗೆ ಮಾಡುವರು. ಹಿಂದಿನ ಆಕಾರದ ಹಾಗೆ ಇರುವ ಆಕಾರವುಳ್ಳ ಕೆಟ್ಟ ನಡತೆಯುಳ್ಳ ಪಾಪಿಗಳಾದ ಹೆಂಗಸನ್ನು ಬಲವಾಗಿ ತಬ್ಬಿಕೊಂಡು ಅಳುವರು.

೮-೯. ಸತ್ಪುರುಷರ ನಿಂದೆಯನ್ನು ಕೇಳುವವರ ಕಿವಿಗೆ ಲೋಹವನ್ನು ಕಾಯಿಸಿ ತುಂಬುವರು. ಬೆಂಕಿಯಂತೆ ಕಾದಿರುವ ತಾಮ್ರದ ಮಳೆಗಳಿಂದಲೂ

ತ್ರಪುಸೀಸಾರಕೂಟಾದ್ಭಿಃ ಕ್ಷೀರೇಣ ಚ ಪುನಃ ಪುನಃ ।
ಸುತಪ್ತತೀಕ್ಷ್ಣತೈಲೇನ ವಜ್ರಲೇಪೇನ ವಾ ಪುನಃ ।                    ॥ ೯ ॥

ಕ್ರಮಾದಾಪೂರ್ಯ ಕರ್ಣಾಂಸ್ತು ನರಕೇಷು ಚ ಯಾತನಾಃ ।
ಅನುಕ್ರಮೇಣ ಸರ್ವೇಷು ಭವಂತ್ಯೇತಾಃ ಸಮಂತತಃ                    ॥ ೧೦ ॥

ಸರ್ವೇಂದ್ರಿಯಾಣಾಮಪ್ಯೇವಂ ಕ್ರಮಾತ್ಪಾಪೇನ ಯಾತನಾಃ ।
ಭವಂತಿ ಘೋರಾಃ ಪ್ರತ್ಯೇಕಂ ಶರೀರೇಣ ಕೃತೇನ ಚ                    ॥ ೧೧ ॥

ಸ್ಪರ್ಶದೋಷೇಣ ಯೇ ಮೂಢಾಃ ಸ್ಪೃಶಂತಿ ಚ ಪರಸ್ತ್ರಿಯಂ ।
ತೇಷಾಂ ಕರೋಽಗ್ನಿವರ್ಣಾಭಿಃ ಪಾಂಶುಭಿಃ ಪೂರ್ಯತೇ ಭೃಶಂ    ॥ ೧೨ ॥

ತೇಷಾಂ ಕ್ಷಾರಾದಿಭಿಸ್ಸರ್ವೈಶ್ಶರೀರಮನುಲಿಪ್ಯತೇ ।
ಯಾತನಾಶ್ಚ ಮಹಾಕಷ್ಟಾಸ್ಸರ್ವೇಷು ನರಕೇಷು ಚ                    ॥ ೧೩ ॥

ಕಬ್ಬಿಣದ ಮಳೆಗಳಿಂದಲೂ ಚುಚ್ಚುವರು. ಮತ್ತು ಸೀಸ, ತವರ ಇವುಗಳನ್ನು ಚೆನ್ನಾಗಿ ಕಾಯಿಸಿ ಕಿವಿಗೆ ತುಂಬುವರು. ಚೆನ್ನಾಗಿ ಕಾದಿರುವ ಎಣ್ಣೆಯನ್ನು ತುಂಬಿ ವಜ್ರಲೇಪವನ್ನು ಮಾಡುವರು. ಯಮದೂತರು ನರಕಗಳಲ್ಲಿ ಈ ಪ್ರಕಾರವಾದ ಶಿಕ್ಷೆಗಳನ್ನು ಮಾಡುವರು.

೧೦-೧೩. ಯಮದೂತರು ಪಾಪಿಗಳಿಗೆ ಈ ವಿಧವಾದ ಶಿಕ್ಷೆಗಳನ್ನು ಎಲ್ಲಾ ಕಡೆಯಲ್ಲೂ ಮಾಡುವರು. ಇದರಂತೆಯೇ ಎಲ್ಲಾ ಇಂದ್ರಿಯಗಳ ಮೂಲಕ ಪಾಪಗಳನ್ನು ಮಾಡಿದವರಿಗೆ ಕ್ರಮವಾಗಿ ಶಿಕ್ಷೆಯು ಆಗುವುದು. ಶರೀರದಿಂದ ನಡೆಸಿದ ಪಾಪಗಳಿಗೆ ಬೇರೆ ಬೇರೆಯಾಗಿ ಭಯಂಕರವಾದ ಶಿಕ್ಷೆಗಳು ಉಂಟಾಗುವುವು. ಇನ್ನೊಬ್ಬರ ಸ್ತ್ರೀಯನ್ನು ಮುಟ್ಟಿದ ಪಾಪಿಗಳ ಕೈಗಳನ್ನು ಹಿಡಿದುಕೊಂಡು ಆ ಕೈಯಿಗಳಿಗೆ ಬೆಂಕಿಯಂತೆ ಕಾದಿರುವ ಮರಳನ್ನು ತುಂಬುವರು. ಅವರ ಶರೀರವೆಲ್ಲಕ್ಕೂ ಕಾದಿರುವ ಉಪ್ಪು ನೊದಲಾದುವುಗಳಿಂದ ಲೇಪಮಾಡುವರು. ಎಲ್ಲಾ ನರಕಗಳಲ್ಲಿಯೂ ಉಂಟಾಗುವ ಯಾತನೆಗಳು ಸಹಿಸಲು ಅಸಾಧ್ಯವಾಗಿ ಬಹಳ ಕಷ್ಟವನ್ನುಂಟು ಮಾಡತಕ್ಕದ್ದಾಗಿರುವುದು.

ಕುರ್ವಂತಿ ಪಿತ್ರೋರ್ಭ್ರೂಕುಟಿಂ ಕರನೇತ್ರಾಣಿ ಯೇ ನರಾಃ ।
ವಕ್ತ್ರಾಣಿ ತೇಷಾಂ ಸಾಂತಾನಿ ಕೀರ್ಯಂತೇ ಶಂಕುಭಿರ್ದೃಢಂ ॥ ೧೪ ॥

ಯೈರಿಂದ್ರಿಯೈರ್ನರಾ ಯೇ ಚ ವಿಕುರ್ವಂತಿ ಪರಸ್ತ್ರಿಯಂ ।
ಇಂದ್ರಿಯಾಣಿ ಚ ತೇಷಾಂ ವೈ ವಿಕುರ್ವಂತಿ ತಥೈವ ಚ ॥ ೧೫ ॥

ಪರದಾರಾಂಶ್ಚ ಪಶ್ಯಂತಿ ಲುಬ್ಧಾಸ್ತುಷ್ಟೇನ ಚಕ್ಷುಷಾ ।
ಸೂಚೀಭಿಶ್ಚಾಗ್ನಿವರ್ಣಾಭಿಸ್ತೇಷಾಂ ನೇತ್ರಪ್ರಪೂರಣಂ ॥ ೧೬ ॥

ಕ್ಷಾರಾದ್ಯೈಶ್ಚ ಕ್ರಮಾತ್ಸರ್ವಾ ಇಹೈವ ಯಮಯಾತನಾಃ ।
ಭವಂತಿ ಮುನಿಶಾರ್ದೂಲ ಸತ್ಯಂ ಸತ್ಯಂ ನ ಸಂಶಯಃ ॥ ೧೭ ॥

ದೇವಾಗ್ನಿಗುರುವಿಪ್ರೇಭ್ಯಶ್ಚಾನಿವೇದ್ಯ ಪ್ರಭುಂಜತೇ ।
ಲೋಹಕೀಲಶತೈಸ್ತಪ್ತೈಸ್ತಜ್ಜಿಹ್ವಾಸ್ಯಂ ಚ ಪೂರ್ಯತೇ ॥ ೧೮ ॥

೧೪-೧೫. ತಂದೆತಾಯಿಗಳ ಮಾತುಗಳಿಗೆ ಪ್ರತಿಹೇಳುತ್ತಾ ಹುಬ್ಬುಗಂಟನ್ನು ಹಾಕಿಕೊಂಡು ಕಣ್ಣನ್ನು ತಿರುಗಿಸುತ್ತಾ ಕೈಯಿಂದ ಹೊಡೆಯಲು ಸಿದ್ಧರಾದವರ ಮುಖಗಳಿಗೆ ಬಲವಾದ ಗೂಟಗಳನ್ನು ಪೆಟ್ಟುವರು. ಯಾವ ಯಾವ ಇಂದ್ರಿಯಗಳಿಂದ ಇನ್ನೊಬ್ಬರ ಹೆಂಡತಿಯರನ್ನು ವಿಕಾರಮಾಡಿ ಕೆಡಿಸುವವರಿಗೆ ಆಯಾಯ ಇಂದ್ರಿಯಗಳಿಗೆ ವಿಕಾರವುಂಟಾಗುವ ಶಿಕ್ಷೆಯನ್ನು ಯಮದೂತರು ಮಾಡುವರು.

೧೬-೧೭. ಇನ್ನೊಬ್ಬರ ಹೆಂಡತಿಯನ್ನು ಕಾಮಾಸಕ್ತರಾಗಿ ನೆಟ್ಟದೃಷ್ಟಿಯಿಂದ ನೋಡುವವರ ಕಣ್ಣುಗಳನ್ನು ಬೆಂಕಿಯಿಂದ ಕಾಯಿಸಿದ ಸೂಜಿಗಳಿಂದ ಚುಚ್ಚುವರು. ಅನಂತರ ಕಾದಿರುವ ಉಪ್ಪನ್ನು ತುಂಬುವರು. ಇವೇ ಮೊದಲಾದ ಎಲ್ಲಾ ವಿಧವಾದ ಯಮಯಾತನೆಗಳೂ ಈ ನರಕಗಳಲ್ಲಿ ಉಂಟಾಗುವುವು. ಎಲೈ ಋಷಿಶ್ರೇಷ್ಠನಾದ ವ್ಯಾಸಋಷಿಯೇ, ಕೇಳು. ಈ ವಿಷಯದಲ್ಲಿ ಕೊಂಚವೂ ಸಂಶಯವನ್ನು ಪಡಬೇಕಾದ್ದಿಲ್ಲ ಇದು ಸತ್ಯವಾದದ್ದು.

೧೮. ದೇವತೆಗಳು, ಅಗ್ನಿ, ಗುರು, ಬ್ರಾಹ್ಮಣ ಇವರುಗಳಿಗೆ ನಿವೇದನವನ್ನು ಮಾಡದೇ ಊಟಮಾಡುವವರ ನಾಲಿಗೆಗೆ ಲೋಹದ ಮಳೆಗಳನ್ನು ಕಾಯಿಸಿ ಬಡಿಯುವರು. ಇವನ ಬಾಯಿತುಂಬ ಕಾದಿರುವ ಲೋಹವನ್ನು ಸುರಿಯುವರು.

ಯೇ ದೇವಾರಾಮಪುಷ್ಪಾಣಿ ಲೋಭಾತ್ಸಂಗೃಹ್ಯ ಪಾಣಿನಾ ।
ಜಿಘ್ರಂತಿ ಚ ನರಾ ಭೂಯಃ ಶಿರಸಾ ಧಾರಯಂತಿ ಚ ॥ ೧೯ ॥

ಆಪೂರ್ಯಂತೇ ಶಿರಸ್ತೇಷಾಂ ತಪ್ತೈರ್ಲೋಹಸ್ಯ ಶಂಕುಭಿಃ ।
ನಾಸಿಕಾ ಚಾತಿಬಹುಲೈಸ್ತತಃ ಕ್ಷಾರಾದಿಭಿರ್ಭೃಶಂ ॥ ೨೦ ॥

ಯೇ ನಿಂದಂತಿ ಮಹಾತ್ಮಾನಂ ವಾಚಕಂ ಧರ್ಮದೇಶಿಕಂ ।
ದೇವಾಗ್ನಿಗುರುಭಕ್ತಾಂಶ್ಚ ಧರ್ಮಶಾಸ್ತ್ರಂ ಚ ಶಾಶ್ವತಂ ॥ ೨೧ ॥

ತೇಷಾಮುರಸಿ ಕಂಠೇ ಚ ಜಿಹ್ವಾಯಾಂ ದಂತಸಂಧಿಷು ।
ತಾಲುನ್ಯೋಷ್ಠೇ ನಾಸಿಕಾಯಾಂ ಮೂರ್ಧ್ನಿ ಸರ್ವಾಂಗಸಂಧಿಷು ॥ ೨೨ ॥

ಅಗ್ನಿವರ್ಣಾಸ್ತು ತಪ್ತಾಶ್ಚ ತ್ರಿಶಾಖಾ ಲೋಹಶಂಕವಃ ।
ಆಖಿಂದ್ಯತೇ ಚ ಬಹುಶಃ ಸ್ಥಾನೇಷ್ವೇತೇಷು ಮುದ್ಗರೈಃ ॥ ೨೩ ॥

ತತಃ ಕ್ಷಾರೇಣ ದೀಪ್ತೇನ ಪೂರ್ಯತೇ ಹಿ ಸಮಂತತಃ ।
ಯಾತನಾಶ್ಚ ಮಹತ್ಯೋ ವೈ ಶರೀರಸ್ಯಾತಿ ಸರ್ವತಃ ॥ ೨೪ ॥

---

೧೯-೨೦. ದೇವಸ್ಥಾನದ ಉದ್ಯಾನವನದ ಹೂಗಳನ್ನು ಆಸೆಯಿಂದ ಕಿತ್ತು ಮೂಸಿನೋಡಿ ಅದನ್ನು ಹೆಚ್ಚಾಗಿ ತಲೆಯಲ್ಲಿ ಧರಿಸುವವರ ತಲೆಯನ್ನು ಚೆನ್ನಾಗಿ ಕಾದಿರುವ ಲೋಹದ ಗೂಟಗಳಿಂದ ಪೆಟ್ಟಿ ಹಿಂಸೆಮಾಡುವರು. ಅವರ ಮೂಗಿಗೆ ಕಾದಿರುವ ಉಪ್ಪನ್ನು ಸುರಿಯುವುದೇ ಮೊದಲಾದ ಶಿಕ್ಷೆಯನ್ನು ಮಾಡುವರು.

೨೧-೨೪. ಧರ್ಮವನ್ನು ತಿಳಿದುಕೊಂಡು ಉಪದೇಶಮಾಡುವ ಮಹಾತ್ಮನನ್ನು ನಿಂದೆ ಮಾಡುವವರೂ, ದೇವತೆಗಳು, ಗುರು, ಅಗ್ನಿ ಇವರುಗಳ ಭಕ್ತರನ್ನೂ, ಯಾವಾಗಲೂ ಲೋಕೋಪಕಾರಕ್ಕಾಗಿ ಇರುವ ಧರ್ಮಶಾಸ್ತ್ರವನ್ನೂ ನಿಂದಿಸುವವರೂ, ಇವರುಗಳ ಎದೆ, ಕುತ್ತಿಗೆ ನಾಲಿಗೆ ಹಲ್ಲಿನ ಸಂಧಿಗಳು, ಅಂಗಗಳು, ತುಟಿಗಳು, ಮೂಗು, ನೆತ್ತಿ ಮತ್ತು ಶರೀರದ ಎಲ್ಲಾ ಸಂಧಿಗಳು ಇವುಗಳಲ್ಲಿ ಬೆಂಕಿಯಂತೆ ಕಾದಿರುವ ಲೋಹದ ಮೊನೆಚಾದ ಮಳೆಗಳಿಂದ ಚುಚ್ಚಿ ಮುದ್ಗರಾಯುಧದಿಂದ ಬಲವಾಗಿ ಬಡಿದು ಕಾಯಿಸಿದ ಉಪ್ಪನ್ನು ತುಂಬುವರು. ಮತ್ತು ಇವರುಗಳಿಗೆ ಶರೀರದ ಎಲ್ಲಾ ಕಡೆಯಲ್ಲಿಯೂ ಬಹಳವಾದ ಯಾತನೆಗಳನ್ನು ಉಂಟುಮಾಡುವರು. ಇದೇ ರೀತಿ ಎಲ್ಲಾ ನರಕಗಳಲ್ಲಿಯೂ ಆಗುವುದು.

ಅಶೇಷನರಕೇಷ್ವೇವ ಕ್ರಮಂತಿ ಕ್ರಮಶಃ ಪುನಃ ।
ಯೇ ಗೃಹ್ಣಂತಿ ಪರದ್ರವ್ಯಂ ಪದ್ಭ್ಯಾಂ ವಿಪ್ರಂ ಸ್ಪೃಶಂತಿ ಚ ॥ ೨೫ ॥

ಶಿವೋಪಕರಣಂ ಗಾಂ ಚ ಜ್ಞಾನಾದಿಲಿಖಿತಂ ಚ ಯತ್ ।
ಹಸ್ತಪಾದಾದಿಭಿಸ್ತೇಷಾಮಾಪೂರ್ಯಂತೇ ಸಮಂತತಃ ॥ ೨೬ ॥

ನರಕೇಷು ಚ ಸರ್ವೇಷು ವಿಚಿತ್ರಾ ಬಹುಯಾತನಾಃ ।
ಭವಂತಿ ಬಹುಶಃ ಕಷ್ಟಾಃ ಪಾಣಿಪಾದಸಮುದ್ಭವಾಃ ॥ ೨೭ ॥

ಶಿವಾಯತನಪರ್ಯಂತೇ ದೇವಾರಾಮೇಷು ಕುತ್ರಚಿತ್ ।
ಸಮುತ್ಸೃಜಂತಿ ಯೇ ಪಾಪಾಃ ಪುರೀಷಂ ಮೂತ್ರಮೇವ ಚ ॥ ೨೮ ॥

ತೇಷಾಂ ಶಿಶ್ನಂ ಸವೃಷಣಂ ಚೂರ್ಣ್ಯತೇ ಲೋಹಮುದ್ಗರೈಃ ।
ಸೂಚೀಭಿರಗ್ನಿವರ್ಣಾಭಿಸ್ತಥಾತ್ವಾಪೂರ್ಯತೇ ಪುನಃ ॥ ೨೯ ॥

ತತಃ ಕ್ಷಾರೇಣ ಮಹತಾ ತೀವ್ರೇಣ ಚ ಪುನಃ ಪುನಃ ।
ದ್ರುತೇನ ಪೂರ್ಯತೇ ಗಾಢಂ ಗುದೇ ಶಿಶ್ನೇ ಚ ದೇಹಿನಃ ॥ ೩೦ ॥

೨೫-೨೭. ಇತರರ ದ್ರವ್ಯವನ್ನು ಅಪಹರಿಸುವವರನ್ನೂ, ಬ್ರಾಹ್ಮಣನನ್ನು ಕಾಲಿನಿಂದ ಒದೆಯುವವರನ್ನೂ, ಶಿವಪೂಜಾಸಾಮಗ್ರಿಗಳನ್ನು ಕದ್ದುಕೊಂಡು ಹೋಗುವವರನ್ನೂ, ಹಸುವನ್ನು ಕದಿಯುವವರನ್ನೂ, ಜ್ಞಾನಬೋಧಕವಾದ ಕೈಯಿಂದ ಬರೆದ ಸಚ್ಛಾಸ್ತ್ರಗಳನ್ನು ಕದಿಯುವವರನ್ನೂ, ಯಮದೂತರು ಹಿಡಿದು ಕೊಂಡುಹೋಗಿ, ಅವರ ಕೈಕಾಲುಗಳಿಗೆ ನಾನಾವಿಧವಾಗಿ ಹಿಂಸೆಮಾಡುವರು. ಎಲ್ಲಾ ನರಕಗಳಲ್ಲಿಯೂ ಇದೇರೀತಿಯಾಗಿ ತೊಂದರೆಯನ್ನುಂಟುಮಾಡುವರು. ಪ್ರಾಯಿಕ ವಾಗಿ ಕೈಕಾಲುಗಳಿಗೆ ಬಾಧಕವು ಉಂಟಾದರೇ ಬಹಳ ಕಷ್ಟವಾಗುವುದು.

೨೮-೩೦. ಶಿವದೇವಸ್ಥಾನದ ಹತ್ತಿರದಲ್ಲಿಯೂ, ದೇವರ ಹೂವಿನ ತೋಟ ಗಳಲ್ಲಿ ಎಲ್ಲಿಯಾದರೂ ಮಲಮೂತ್ರ ವಿಸರ್ಜಿಸುವವರನ್ನು ಯಮದೂತರು ಹಿಡಿದು ಕೊಂಡು ಹೋಗಿ ಅವರ ಅಪಾಯ ಸ್ಥಳವನ್ನು ಮುದ್ಗರಾಯುಧದಿಂದ ಹೊಡೆದು ಚೂರುಮಾಡಿ ಬೆಂಕಿಯಿಂದ ಕಾಯಿಸಿದ ಸೂಜಿಗಳಿಂದ ಚುಚ್ಚುವರು. ಕಾಯಿಸಿದ ಉಪ್ಪಿನ ನೀರನ್ನು ತುಂಬಿ, ಅವರ ಮಲಮೂತ್ರವನ್ನು ಬಿಡುವ ಸ್ಥಳವನ್ನು ಕಾದ ಲೋಹದಿಂದ ತುಂಬಿ ಶಿಕ್ಷೆಮಾಡುವರು.

**ಮನಸ್ಸರ್ವೇಂದ್ರಿಯಾಣಾಂ ಚ ಯಸ್ಮಾದ್ದುಃಖಂ ಪ್ರಜಾಯತೇ ।**
**ಧನೇ ಲೋಭಾಚ್ಚ ಯೇ ದಾನಂ ನ ಪ್ರಯಚ್ಛಂತಿ ತೃಷ್ಣಯಾ　　॥ ೩೦ ॥**

**ಅತಿಥಿಂ ಚಾವಮನ್ಯಂತೇ ಕಾಲೇ ಪ್ರಾಪ್ತೇ ಗೃಹಾಶ್ರಮೇ ।**
**ತಸ್ಮಾತ್ತೇ ದುಷ್ಕೃತಂ ಪ್ರಾಪ್ಯ ಗಚ್ಛಂತಿ ನಿರಯೇಽಶುಚೌ　　॥ ೩೧ ॥**

**ಯೇಽನ್ನಂ ದತ್ವಾ ಹಿ ಭುಂಜಂತಿ ನ ಶ್ವಭ್ಯಸ್ಸಹ ವಾಯಸೈಃ ।**
**ತೇಷಾಂ ವಿವೃತಂ ವಕ್ತ್ರಂ ಕೀಲಕದ್ವಯತಾಡಿತಂ　　॥ ೩೩ ॥**

**ಕೃಮಿಭಿಃ ಪ್ರಾಣಿಭಿಶ್ಚೋಗ್ರೈರ್ಲೋಹತುಂಡೈಶ್ಚ ವಾಯಸೈಃ ।**
**ಉಪದ್ರವೈರ್ಬಹುವಿಧೈರುಗ್ರೈರಂತಃ ಪ್ರಪೀಡ್ಯತೇ　　॥ ೩೪ ॥**

**ಶ್ಯಾಮಶ್ಚ ಶಬಲಶ್ಚೈವ ಯಮಮಾರ್ಗಾನುರೋಧಕೌ ।**
**ಯೌ ಸ್ತಸ್ತಾಭ್ಯಾಂ ಪ್ರಯಚ್ಛಾಮಿ ತೌ ಗೃಹ್ಣೀತಾಮಿಮಂ ಬಲಿಂ　　॥ ೩೫ ॥**

೩೧-೩೨. ಮನಸ್ಸು ಎಲ್ಲಾ ಇಂದ್ರಿಯಗಳಿಗೂ ಮುಖ್ಯವಾದದ್ದಾಗಿರುವುದು. ಈ ಮನಸ್ಸಿನಿಂದಲೇ ದುಃಖಕ್ಕೆ ಕಾರಣಉಂಟಾಗಿ ದುಃಖವು ಹೆಚ್ಚುವುದು. ದ್ರವ್ಯದಲ್ಲಿ ಆಸೆಯಿಂದ ಧನವನ್ನು ದಾನಮಾಡದೇ ಇರುವವರೂ, ಗೃಹಸ್ಥರಾಗಿದ್ದುಕೊಂಡು ಸರಿಯಾದ ಕಾಲದಲ್ಲಿ ಮನೆಗೆ ಬಂದ ಅತಿಥಿಯನ್ನು ಉಪಚರಿಸದೆ ಅವಮಾನಮಾಡುವವರೂ ಪಾತಕವನ್ನು ಹೊಂದಿ ಅಶುದ್ಧವಾದ ನರಕವನ್ನು ಹೊಂದುವರು.

೩೩-೩೪. ವೈಶ್ವದೇವ ಯಜ್ಞವನ್ನು ಮಾಡದೇ ಊಟಮಾಡುವವರ ಬಾಯನ್ನು ಎರಡು ಅಡ್ಡಗಡ್ಡಿಗಳಿಂದ ವಿಸ್ತಾರಮಾಡಿ ಕ್ರಿಮಿಗಳನ್ನೂ ಪ್ರಾಣಿಗಳನ್ನೂ ಲೋಹದ ಕೊಕ್ಕುಗಳುಳ್ಳ ಕಾಗೆಗಳನ್ನೂ ನುಗ್ಗಿಸಿ ಅವುಗಳಿಂದ ಹಿಂಸೆಯುಂಟಾಗುವಂತೆ ಮಾಡುವರು. ಮತ್ತು ಇನ್ನೂ ಅನೇಕ ವಿಧವಾದ ಭಯಂಕರವಾದ ಹಿಂಸೆಗಳನ್ನು ಮಾಡುವರು.

೩೫-೩೬. ಆದುದರಿಂದ ನಾಯಿಗಳಿಗೂ ಕಾಗೆಗಳಿಗೂ ಬಲಿಹರಣವನ್ನು ಮಾಡಬೇಕು. ಕಪ್ಪಗಿರುವ ಚಿತ್ರ ಬಣ್ಣದಿಂದ ಇರುವ ಎರಡು ನಾಯಿಗಳು ಯಮನ ನಗರದ ಮಾರ್ಗವನ್ನು ಅನುಸರಿಸಿ ಬರುವುವು. ಅವುಗಳಿಗೋಸ್ಕರ ಬಲಿಹರಣವನ್ನು ಮಾಡುತ್ತೇನೆ. ವರುಣ, ವಾಯು, ಯಮ, ನಿರುರುತಿ ಈ ದೇವತೆಗಳ ದಿಕ್ಕುಗಳ

ಯೇ ವಾ ವರುಣವಾಯವ್ಯಾ ಯಾಮ್ಯಾ ನೈರ್ಋತ್ಯವಾಯಸಾಃ ।
ವಾಯಸಾಃ ಪುಣ್ಯಕರ್ಮಾಣಸ್ತೇ ಪ್ರಗೃಹ್ಣಂತು ಮೇ ಬಲಿಂ ॥ ೩೬ ॥

ಶಿವಮಭ್ಯರ್ಚ್ಯ ಯತ್ನೇನ ಹುತ್ವಾಗ್ನೌ ವಿಧಿಪೂರ್ವಕಂ ।
ಶೈವೈರ್ಮಂತ್ರೈರ್ಬಲಿಂ ಯೇ ಚ ದದತೇ ನ ಚ ತೇ ಯಮಂ ॥ ೩೭ ॥

ಪಶ್ಯಂತಿ ತ್ರಿದಿವಂ ಯಾಂತಿ ತಸ್ಮಾದ್ದದ್ಯಾದ್ದಿನೇದಿನೇ ।
ಮಂಡಲಂ ಚತುರಸ್ರಂ ತು ಕೃತ್ವಾ ಗಂಧಾದಿವಾಸಿತಂ ॥ ೩೮ ॥

ಧನ್ವಂತರ್ಯರ್ಥಮೀಶಾನ್ಯಾಂ ಪ್ರಾಚ್ಯಾಮಿಂದ್ರಾಯ ನಿಃಕ್ಷಿಪೇತ್ ।
ಯಾಮ್ಯಾಂ ಯಮಾಯ ವಾರುಣ್ಯಾಂ ಸುದಕ್ಷೋಮಾಯ ದಕ್ಷಿಣೇ ॥ ೩೯ ॥

ಪಿತೃಭ್ಯಸ್ತು ವಿನಿಃಕ್ಷಿಪ್ಯ ಪ್ರಾಚ್ಯಾಮರ್ಯಮಣಂ ತತಃ ।
ಧಾತುಶ್ಚೈವ ವಿಧಾತುಶ್ಚ ದ್ವಾರದೇಶೇ ವಿನಿಕ್ಷಿಪೇತ್ ॥ ೪೦ ॥

ಲ್ಲಿರುವ ಪುಣ್ಯಕರವಾದ ಕೆಲಸಗಳನ್ನು ಮಾಡಿರುವ ಕಾಗೆಗಳು ಈ ಬಲಿಯನ್ನು ಸ್ವೀಕರಿಸಲಿ ಎಂದು ಕಾಗೆಗಳಿಗೆ ಬಲಿಯನ್ನು ಹಾಕಿ ಬಲಿಯ ರೂಪದಿಂದ ಅನ್ನವನ್ನು ಭೂಮಿಯಲ್ಲಿ ಹಾಕಬೇಕು.

೩೭-೪೦. ಶಿವನನ್ನು ಪ್ರಯತ್ನಪೂರ್ವಕವಾಗಿ ಪೂಜಿಸಿ, ಶಾಸ್ತ್ರಕ್ರಮದಿಂದ ಅಗ್ನಿಯಲ್ಲಿ ಹೋಮವನ್ನು ಮಾಡಿ, ಶಿವಸಂಬಂಧವಾದ ಯಂತ್ರಗಳಿಂದ ಬಲಿಯ ಅನ್ನವನ್ನು ಹಾಕುವವರು ಯಮನ ದರ್ಶನವನ್ನು ಮಾಡುವುದಿಲ್ಲ. ಅವರು ನೇರವಾಗಿ ಸ್ವರ್ಗವನ್ನು ಹೊಂದುವರು. ಆದುದರಿಂದ ಪ್ರತಿದಿನದಲ್ಲಿಯೂ ಗೃಹಸ್ಥನಾದವನು ವೈಶ್ವದೇವ ಬಲಿಹರಣವನ್ನು ಮಾಡಬೇಕು. ಚೌಕವಾಗಿರುವ ಮಂಡಲವನ್ನು ಮಾಡಿ ಗಂಧವೇ ಮೊದಲಾದವುಗಳಿಂದ ಪೂಜಿಸಿ ಈಶಾನ್ಯದಿಕ್ಕಿನಲ್ಲಿ ಧನ್ವಂತರಿ ದೇವತೆಗೂ ಪೂರ್ವದಿಕ್ಕಿನಲ್ಲಿ ಇಂದ್ರನಿಗೂ ದಕ್ಷಿಣದಿಕ್ಕಿನಲ್ಲಿ ಯಮನಿಗೂ ಪಶ್ಚಿಮದಿಕ್ಕಿನಲ್ಲಿ ವರುಣನಿಗೂ ದಕ್ಷಿಣದಲ್ಲಿ ಪಿತೃಗಳಿಗೂ ಅನ್ನವನ್ನು ಇಟ್ಟು, ಪೂರ್ವದಿಕ್ಕಿನಲ್ಲಿ ಅರ್ಯಮನೆಂಬ ದೇವತೆಗೂ ದ್ವಾರದೇಶದಲ್ಲಿ ಧಾತಾ, ವಿಧಾತಾ ಎಂಬ ದೇವತೆಗಳಿಗೂ ಅನ್ನವನ್ನು ಬಲಿಯರೂಪದಿಂದ ಇರಿಸಬೇಕು.

ಶ್ವಭ್ಯಶ್ಚ ಶ್ವಪತಿಭ್ಯಶ್ಚ ವಯೋಭ್ಯೋ ವಿಕ್ಷಿಪೇದ್ಭುವಿ ।
ದೇವೈಃ ಪಿತೃಮನುಷ್ಯೈಶ್ಚ ಪ್ರೇತೈರ್ಭೂತೈಃ ಸಗುಹ್ಯಕೈಃ ॥ ೪೧ ॥

ವಯೋಭಿಃ ಕೃಮಿಕೀಟೈಶ್ಚ ಗೃಹಸ್ಥಶ್ಚೋಪಜೀವ್ಯತೇ ।
ಸ್ವಾಹಾಕಾರಃ ಸ್ವಧಾಕಾರೋ ವಷಟ್ಕಾರಸ್ತೃತೀಯಕಃ ॥ ೪೨ ॥

ಹಂತಕಾರಸ್ತಥೈವಾನ್ಯೋ ಧೇನ್ವಾಸ್ತನಚತುಷ್ಟಯಂ ।
ಸ್ವಾಹಾಕಾರಂ ಸ್ತನೇ ದೇವಾಸ್ಸ್ವಧಾಂ ಚ ಪಿತರಸ್ತಥಾ ॥ ೪೩ ॥

ವಷಟ್ಕಾರಂ ತಥೈವಾನ್ಯೇ ದೇವಾ ಭೂತೇಶ್ವರಾಸ್ತಥಾ ।
ಹಂತಕಾರಂ ಮನುಷ್ಯಾಶ್ಚ ಪಿಬಂತಿ ಸತತಂ ಸ್ತನಂ ॥ ೪೪ ॥

ಯಸ್ತ್ವೇತಾಂ ಮಾನವೋ ಧೇನುಂ ಶ್ರದ್ಧಯಾ ಹ್ಯನುಪೂರ್ವಿಕಾಂ ।
ಕರೋತಿ ಸತತಂ ಕಾಲೇ ಸಾಗ್ನಿತ್ವಾಯೋಪಕಲ್ಪ್ಯತೇ ॥ ೪೫ ॥

೪೧-೪೫. ನಾಯಿಗಳಿಗೂ, ನಾಯಿಗಳಿಗೆ ಅಧಿಪತಿಯಾದ ದೇವತೆಗಳಿಗೂ, ಪಕ್ಷಿಗಳಿಗೂ ಬಲಿಯು ಅನ್ನವನ್ನು ಭೂಮಿಯಲ್ಲಿ ಇಡಬೇಕು. ಗೃಹಸ್ಥನಾದವನು ದೇವತೆಗಳಿಂದಲೂ ಪಿತೃರೂಪವನ್ನು ಹೊಂದಿರುವ ಮನುಷ್ಯರಿಂದಲೂ ಪ್ರೇತಗಳಿಂದಲೂ ಭೂತಗಳಿಂದಲೂ ಗುಹ್ಯಕರಿಂದಲೂ ಹಕ್ಕಿಗಳಿಂದಲೂ ಕ್ರಿಮಿಕೀಟಗಳಿಂದಲೂ ಆಶ್ರಯವನ್ನು ಹೊಂದಿ ಜೀವಿಸುವನು. ಧರ್ಮವು ಧೇನುವಿನ ಆಕಾರದಿಂದ ಇರುವುದು. ಈ ಧೇನುವಿಗೆ ಸ್ವಾಹಾಕಾರ, ಸ್ವಧಾಕಾರ ವಷಟ್ಕಾರ, ಹಂತಕಾರ ಎಂಬ ನಾಲ್ಕು ಮೊಲೆಗಳಿರುವುವು. ದೇವತೆಗಳು ಸ್ವಾಹಾಕಾರದಿಂದಲೂ, ಪಿತೃಗಳು ಸ್ವಧಾಕಾರದಿಂದಲೂ, ಭೂತೇಶ್ವರರುಗಳೂ ಇತರ ದೇವತೆಗಳೂ ವಷಟ್ಕಾರದಿಂದಲೂ, ಮನುಷ್ಯರು (ಹಂತಕಾರೆ) ಪ್ರಯತ್ನದಿಂದಲೂ ಜೀವಿಸುತ್ತಿರುವರು. ಆದುದರಿಂದ ದೇವತೆಗಳು ಪಿತೃಗಳು ಮನುಷ್ಯರು ಭೂತಪ್ರೇತಗಳು ಇವರೆಲ್ಲರಿಗೂ ಆಶ್ರಯವಾಗಿರುವ ಈ ಧರ್ಮಧೇನುವಿನ ಮಾರ್ಗವನ್ನು ಆದರದಿಂದ ಅನುಸರಿಸಿ ನಡೆಯುವವನಿಗೆ ಎಂದರೆ ಆಯಾಯ ಕಾಲಕ್ಕೆ ಸರಿಯಾಗಿ ವಿಹಿತವಾಗಿರುವ ಧರ್ಮಕಾರ್ಯಗಳನ್ನು ಮಾಡುವವನಿಗೆ ಅಗ್ನಿಯ ರೂಪವು ಬರುವುದು. ಆದುದರಿಂದ ಅವನು ಸಿದ್ಧಿಯನ್ನು ಹೊಂದಿ ಪುಣ್ಯವಂತನಾಗುವನು.

ಯಸ್ತ್ವಾಂ ಜಹಾತಿ ವಾ ಸ್ವಸ್ಥಸ್ತಾಮಿಸ್ರೇ ಸ ತು ಮಜ್ಜತಿ ।
ತಸ್ಮಾದ್ದತ್ವಾ ಬಲಿಂ ತೇಭ್ಯೋ ದ್ವಾರಸ್ಥಶ್ಚಿಂತಯೇತ್ಕ್ಷಣಂ ॥ ೪೬ ॥

ಕ್ಷುಧಾರ್ತಮತಿಥಿಂ ಸಮ್ಯಗೇಕಗ್ರಾಮನಿವಾಸಿನಂ ।
ಭೋಜಯೇತ್ತಂ ಶುಭಾನ್ನೇನ ಯಥಾಶಕ್ತ್ಯಾತ್ಮಭೋಜನಾತ್ ॥ ೪೭ ॥

ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ಪ್ರತಿನಿವರ್ತತೇ ।
ಸ ತಸ್ಮೈ ದುಷ್ಕೃತಂ ದತ್ವಾ ಪುಣ್ಯಮಾದಾಯ ಗಚ್ಛತಿ ॥ ೪೮ ॥

ತತೋಽನ್ನಂ ಪ್ರಿಯಮೇವಾಶ್ನನ್ನರಃ ಶೃಂಖಲವಾನ್ಸ್ವನಃ ।
ಜಿಹ್ವಾವೇಗೇನ ವಿದ್ಧೋಽತ್ರ ಚಿರಂ ಕಾಲಂ ಸ ತಿಷ್ಠತಿ ॥ ೪೯ ॥

೪೬–೪೭. ಲೋಕಸಂಬಂಧವಾದ ಸುಖದಲ್ಲಿ ಆಸೆಯನ್ನು ಇಟ್ಟುಕೊಂಡು ಈ ಧರ್ಮದ ಕೆಲಸವನ್ನು ಮಾಡದೇ ಈ ಧರ್ಮಧೇನುವನ್ನು ಅಸಡ್ಡೆಮಾಡುವವನು ತಾಮಿಸ್ರವೆಂಬ ನರಕದಲ್ಲಿ ಮುಳುಗುವನು. ಆದುದರಿಂದ ಹಿಂದೆ ಹೇಳಿದ ಪ್ರಕಾರದಿಂದ ವೈಶ್ವದೇವ ಯಜ್ಞಕ್ರಮವನ್ನು ಅನುಸರಿಸಿ ಅನ್ನರೂಪದಿಂದ ಭೂಮಿಯಲ್ಲಿ ಬಲಿಯನ್ನು ಇರಿಸಿದನಂತರ ಮನೆಯ ಬಾಗಿಲಿನಲ್ಲಿ ಒಂದು ಕ್ಷಣದವರುವಿಗೂ ಅತಿಥಿಯನ್ನು ನಿರೀಕ್ಷಿಸುತ್ತಾ ಇರಬೇಕು. ಅನಂತರ ಒಂದೇ ಊರಿನವನಾದರೂ ಎಂದರೆ ಆ ಗ್ರಾಮದಲ್ಲಿಯೇ ವಾಸಮಾಡುವವನಾದರೂ ಕ್ಷುಧಾರ್ತನಾಗಿರುವ ಒಬ್ಬ ಅತಿಥಿಯನ್ನು ಕರೆದುಕೊಂಡು ಬಂದು ತನ್ನ ಶಕ್ತಿಗೆ ಅನುಸಾರವಾಗಿ ಉತ್ತಮವಾದ ಪರಿಕರಗಳಿಂದ ಕೂಡಿದ ಅನ್ನವನ್ನು ಅವನಿಗೆ ಊಟಮಾಡಿಸಿ ತಾನೂ ಊಟಮಾಡಬೇಕು.

೪೮. ಅತಿಥಿಯಾದವನು ಯಾವನ ಮನೆಗೆ ಬಂದು ನಿರಾಶನಾಗಿ ಹಿಂತಿರಿಗಿ ಹೋಗುವನೋ ಆಗ ಅವನು ತಾನು ಮಾಡಿದ ದುಷ್ಕರ್ಮಗಳನ್ನು ಆ ಮನೆಯ ಯಜಮಾನನಿಗೆ ಕೊಟ್ಟು ಅವನ ಪುಣ್ಯಫಲವೆಲ್ಲವನ್ನೂ ತಾನು ತೆಗೆದುಕೊಂಡು ಹೋಗುವುದರಿಂದ ಗೃಹಸ್ಥನಾದವನು ಅತಿಥಿಯನ್ನು ಆಹಾರರಹಿತನಾಗಿ ಹಿಂದಕ್ಕೆ ಕಳುಹಿಸಬಾರದು. ಮತ್ತು ಅತಿಥಿಯು ನಿರಾಶನಾಗಿ ಹೋದನಂತರ ರುಚಿಕರವಾದ ಅನ್ನವನ್ನು ತಾನು ಊಟಮಾಡಿದ ಗೃಹಸ್ಥನಿಗೆ ಯಮದೂತರು ಸರಪಣಿಯನ್ನು ಹಾಕಿ ಕಟ್ಟುವರು.

೪೯-೫೧. ಅನಂತರ ಅವನ ನಾಲಿಗೆಯನ್ನು ಬಲವಾಗಿ ಕಟ್ಟಿ ನಿಲ್ಲಿಸುವರು. ಅವನ ಮಾಂಸವನ್ನು ಕಿತ್ತು ಎಳ್ಳಿನಕಾಳಿನ ಪ್ರಮಾಣದಷ್ಟು ಚೂರು ಚೂರು ಮಾಡಿ

**ಯತಸ್ತಂ ಮಾಂಸಮುದ್ಧೃತ್ಯ ತಿಲಮಾತ್ರಪ್ರಮಾಣತಃ ।**
**ಖಾದಿತುಂ ದೀಯತೇ ತೇಷಾಂ ಭಿತ್ವಾ ಚೈವ ತು ಶೋಣಿತಂ　　॥ ೫೦ ॥**

**ನಿಶ್ಶೇಷತಃ ಕಶಾಭಿಸ್ತು ಪೀಡ್ಯತೇ ಕ್ರಮಶಃ ಪುನಃ ।**
**ಬುಭುಕ್ಷಯಾತಿಕಷ್ಟಂ ಹಿ ತಥಾ ಚಾತಿಪಿಪಾಸಯಾ　　॥ ೫೧ ॥**

**ಏವಮಾದ್ಯಾ ಮಹಾಘೋರಾ ಯಾತನಾಃ ಪಾಪಕರ್ಮಣಾಂ ।**
**ಅಂತೇ ಯತ್ಪ್ರತಿಪನ್ನಂ ಹಿ ತತ್ಸಂಕ್ಷೇಪೇಣ ಸಂಶೃಣು　　॥ ೫೨ ॥**

**ಯಃ ಕರೋತಿ ಮಹಾಪಾಪಂ ಧರ್ಮಂ ಚರತಿ ವೈ ಲಘು ।**
**ಧರ್ಮಂ ಗುರುತರಂ ವಾಪಿ ತಥಾವಸ್ಥೇ ತಯೋಃ ಶೃಣು　　॥ ೫೩ ॥**

**ಸುಕೃತಸ್ಯ ಫಲಂ ನೋಕ್ತಂ ಗುರುಪಾಪಪ್ರಭಾವತಃ ।**
**ನ ವಿನೋತಿ ಸುಖಂ ತತ್ರ ಭೋಗೈರ್ಬಹುಭಿರನ್ವಿತಃ　　॥ ೫೪ ॥**

ಚಾವಟಿಗಳಿಂದ ಹೊಡೆದು ಕ್ರಮನಾಗಿ ನರಕ ಶಿಕ್ಷೆಗಳಿಗೆ ಗುರಿಪಡಿಸುವರು. ಹಸಿವೆಯಿಂದಲೂ ಬಾಯಾರಿಕೆಯಿಂದಲೂ ಬಂದವರಿಗೆ ಅನ್ನಪಾನಗಳನ್ನು ಅವಶ್ಯವಾಗಿ ದಾನಮಾಡದಿದ್ದರೆ ಈ ಕ್ರಮದಿಂದ ಕಷ್ಟಗಳು ಉಂಟಾಗುವುವು.

೫೨. ಪಾಪಗಳನ್ನು ಮಾಡಿದವರಿಗೆ ಹಿಂದೆ ಹೇಳಿದ ಪ್ರಕಾರದಿಂದ ಬಹಳ ಭಯಂಕರವಾದ ಶಿಕ್ಷೆಗಳು ಉಂಟಾಗುವುವು. ಅವುಗಳನ್ನು ಅನುಭವಿಸಿದನಂತರ ಅವರಿಗೆ ಸಂಭವಿಸುವುದನ್ನು ಸಂಕ್ಷೇಪವಾಗಿ ಹೇಳುವೆನು ಕೇಳು. ಹೆಚ್ಚಾಗಿ ಕೆಟ್ಟ ಕೆಲಸಗಳನ್ನು ಮಾಡಿ ಕೊಂಚಮಟ್ಟಿನ ಧರ್ಮಕೆಲಸವನ್ನು ಮಾಡಿದವನು, ಮತ್ತು ಬಹಳ ಧರ್ಮಕೆಲಸವನ್ನು ಮಾಡಿ ಕೊಂಚಮಟ್ಟಿನ ಕೆಟ್ಟ ಕೆಲಸವನ್ನು ಮಾಡಿದವನು ಎಂಬ ಎರಡು ವಿಧವಾದ ಜನರಿಗೆ ಉಂಟಾಗುವ ಫಲವನ್ನು ತಿಳಿಸುವೆನು.

೫೩-೫೬. ಹೆಚ್ಚಾಗಿ ಕೆಟ್ಟ ಕೆಲಸಗಳನ್ನು ಮಾಡಿ ಕೊಂಚ ಧರ್ಮಕೆಲಸವನ್ನು ಮಾಡಿದವನಿಗೆ ಪಾಪದ ಸಂಬಂಧವು ಹೆಚ್ಚಾಗಿ ಇರುವ ಕಾರಣ ಪುಣ್ಯಫಲವು ಗೊತ್ತಾಗುವುದಿಲ್ಲ ಎಂದರೆ ಭೋಗಪಡುವ ಸಾಮಗ್ರಿಗಳು ದೊರತಾಗ್ಯೂ ಸುಖವು ಹೆಚ್ಚಾಗಿ ಉಂಟಾಗುವುದಿಲ್ಲ. ಪಾಪದಫಲವು ಹೆಚ್ಚಾಗಿ ಅದರ ಸಂಕಟಗಳಿಂದ ಸುಖವನ್ನು ತಿಳಿಯುವುದಕ್ಕೇ ಆಗುವುದಿಲ್ಲ. ಅವನ ಆಯುಸ್ಸಿನ ಕಾಲವೆಲ್ಲವೂ ಹೀಗೆಯೇ

ತಥೋದ್ವಿಗ್ನೋಽತಿ ಸಂತಪ್ತೋ ನ ಭಕ್ಷ್ಯೈರ್ಮನ್ಯತೇ ಸುಖಂ ।
ಅಭಾವಾದಗ್ರತೋಽನ್ಯಸ್ಯ ಪ್ರತಿಕಲ್ಯಂ ದಿನೇ ದಿನೇ ॥ ೫೫ ॥

ಪುಮಾನ್ಯೋ ಗುರುಧರ್ಮಾಽಪಿ ಸೋಪವಾಸೋ ಯಥಾ ಗೃಹೀ ।
ವಿತ್ತವಾನ್ನ ವಿಜಾನಾತಿ ಪೀಡಾಂ ನಿಯಮಸಂಸ್ಥಿತಃ ॥ ೫೬ ॥

ತಾನಿ ಪಾಪಾನಿ ಘೋರಾಣಿ ಸಂತಿ ಯೈಶ್ಚ ನರೋ ಭುವಿ ।
ಶತಧಾ ಭೇದಮಾಪ್ನೋತಿ ಗಿರಿರ್ವಜ್ರಹತೋ ಯಥಾ ॥ ೫೭ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ನರಕಗತಿಭೋಗವರ್ಣನಂ ನಾಮ ದಶಮೋಽಧ್ಯಾಯಃ



ಮುಗಿಯುವುದರಿಂದ ತೊಂದರೆಗಳೇ ಅವನಿಗೆ ಹೆಚ್ಚಾಗಿರುವುವು. ಬಹಳ ಧರ್ಮ ಕೆಲಸವನ್ನು ಮಾಡಿ ಕೊಂಚ ಕೆಟ್ಟ ಕೆಲಸವನ್ನು ಮಾಡಿದವನು, ಗೃಹಸ್ಥನಾದವನು ಉಪವಾಸಮಾಡುವಂತೆಯೂ ನಿಯಮದಿಂದ ವ್ರತಾದಿಗಳನ್ನು ಆಚರಿಸುವವನ ಹಾಗೆಯೂ, ಸ್ವಲ್ಪಮಾತ್ರ ಒದಗುವ ತೊಂದರೆಗಳನ್ನು ಪುಣ್ಯಫಲದ ಬಲದಿಂದ ಗಣನೆಗೆ ತರದೇ ಸುಖದಿಂದ ಬಾಳುವನು.

೫೭. ವಜ್ರಾಯುಧದಿಂದ ಬೆಟ್ಟಗಳು ಚೂರುಚೂರಾಗುವಂತೆ ಮನುಷ್ಯನು ಭೂಮಿಯಲ್ಲಿ ಮಾಡಿದ ಪಾಪಗಳು ಅನೇಕ ಪ್ರಕಾರವಾಗಿ ರೂಪುಗೊಂಡು ಆಯಾಯ ಕರ್ಮಗಳಿಗೆ ತಕ್ಕ ಫಲಗಳನ್ನು ಕೊಡುವವು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ನರಕಗತಿಯನ್ನೂ ಅವುಗಳಲ್ಲಿ ಉಂಟಾಗುವ ಶಿಕ್ಷಾಕ್ರಮವನ್ನೂ ವರ್ಣಿಸುವ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಏಕಾದಶೋಽಧ್ಯಾಯಃ

॥ ವ್ಯಾಸ ಉವಾಚ ॥

ಕೃತಪಾಪಾ ನರಾ ಯಾಂತಿ ದುಃಖೇನ ಮಹತಾನ್ವಿತಾಃ ।
ಯಮಮಾರ್ಗೇ ಸುಖಂ ಯೈಶ್ಚ ತಾನ್ಧರ್ಮಾನ್ವದ ಮೇ ಪ್ರಭೋ ॥ ೧ ॥

॥ ಸನತ್ಕುಮಾರ ಉವಾಚ ॥

ಅವಶ್ಯಂ ಹಿ ಕೃತಂ ಕರ್ಮ ಭೋಕ್ತವ್ಯಮವಿಚಾರತಃ ।
ಶುಭಾಶುಭಮಯೋ ವಕ್ಷ್ಯೇ ತಾನ್ಧರ್ಮಾನ್ಸುಖದಾಯಕಾನ್ ॥ ೨ ॥

---

## ಎಂಟನೆಯ ಅಧ್ಯಾಯವು

೧. ವ್ಯಾಸಋಷಿಯು ಪ್ರಶ್ನೆಮಾಡುತ್ತಾನೆ:—ಎಲೈ ಮಹಾಮಹಿಮನಾದ ಸನತ್ಕುಮಾರನೇ, ಪಾಪ ಕೆಲಸಗಳನ್ನು ಮಾಡಿದವರು ಯಮನ ಪಟ್ಟಣದ ದಾರಿಯಲ್ಲಿ ಬಹಳ ದುಃಖದಿಂದ ವ್ಯಸನಪಡುತ್ತಾ ಪ್ರಯಾಣಮಾಡುವರಷ್ಟೆ. ಯಮನ ಪಟ್ಟಣಕ್ಕೆ ಸುಖವಾಗಿ ಪ್ರಯಾಣಮಾಡಬೇಕಾದರೆ ಯಾವ ಯಾವ ಧರ್ಮಕಾರ್ಯಗಳನ್ನು ಮಾಡಬೇಕು? ಅದರ ವಿವರವನ್ನು ತಿಳಿಸು ಎನ್ನಲು,

೨. ಸನತ್ಕುಮಾರನಿಂತೆಂದನು:—ಎಲೈ ವ್ಯಾಸನೇ ಕೇಳು, ಯಾವ ಪ್ರಾಣಿಯೇ ಆದಾಗ್ಯೂ ತಾನು ಮಾಡಿದ ಕರ್ಮದ ಫಲವನ್ನು ಒಳ್ಳೆಯದೇ ಆಗಲಿ ಕೆಟ್ಟದ್ದೇ ಆಗಲಿ ಅನುಭವಿಸಲೇ ಬೇಕಾಗಿರುವುದು. ಈ ವಿಷಯದಲ್ಲಿ ವಿಚಾರಕ್ಕೆ ಅವಕಾಶವಿಲ್ಲ. ಆದ್ದರಿಂದ ಅವುಗಳಲ್ಲಿ ಸುಖವನ್ನುಂಟುಮಾಡಿ ಕೊಡುವ ಧರ್ಮಗಳನ್ನು ನಾನು ಹೇಳುವೆನು.

ಅತ್ರ ಯೇ ಶುಭಕರ್ಮಾಣಃ ಸೌಮ್ಯಚಿತ್ತಾ ದಯಾನ್ವಿತಾಃ ।
ಸುಖೇನ ತೇ ನರಾ ಯಾಂತಿ ಯಮಮಾರ್ಗಂ ಭಯಾವಹಂ ॥ ೩ ॥

ಯಃ ಪ್ರದದ್ಯಾದ್ದ್ವಿಜೇಂದ್ರಾಣಾಮುಪಾನತ್ಕಾಷ್ಠಪಾದುಕೇ ।
ಸ ನರೋಽಶ್ವೇನ ಮಹತಾ ಸುಖಂ ಯಾತಿ ಯಮಾಲಯಂ ॥ ೪ ॥

ಛತ್ರದಾನೇನ ಗಚ್ಛಂತಿ ಯಥಾ ಛತ್ರೇಣ ದೇಹಿನಃ ।
ಶಿಬಿಕಾಯಾಃ ಪ್ರದಾನೇನ ತದ್ರಥೇನ ಸುಖಂ ವ್ರಜೇತ್ ॥ ೫ ॥

ಶಯ್ಯಾಸನಪ್ರದಾನೇನ ಸುಖಂ ಯಾತಿ ಸುವಿಶ್ರಮಂ ।
ಆರಾಮಚ್ಛಾಯಾಕರ್ತಾರೋ ಮಾರ್ಗೇ ವಾ ವೃಕ್ಷರೋಪಕಾಃ ॥
ವ್ರಜಂತಿ ಯಮಲೋಕಂ ತ ಆತಪೇಽತಿಗತಕ್ಲಮಾಃ ॥ ೬ ॥

ಯಾಂತಿ ಪುಷ್ಪಕಯಾನೇನ ಪುಷ್ಪಾರಾಮಕರಾ ನರಾಃ ।
ದೇವಾಯತನಕರ್ತಾರಃ ಕ್ರೀಡಂತಿ ಚ ಗೃಹೋದರೇ ॥ ೭ ॥

---

೩. ಒಳ್ಳೆಯ ಕೆಲಸವನ್ನು ಮಾಡಿದವರು ಮೃದುವಾದ ಮನಸ್ಸುಳ್ಳವರಾಗಿ ದಯೆಯಿಂದ ಕೂಡಿ, ಭಯವನ್ನುಂಟುಮಾಡುವ ಯಮನ ಪಟ್ಟಣದ ದಾರಿಯನ್ನು ಸುಖದಿಂದ ದಾಟುವರು.

೪. ಬ್ರಾಹ್ಮಣರಿಗೆ ಪಾದರಕ್ಷೆ ಮತ್ತು ಮರದಿಂದ ಮಾಡಿರುವ ಪಾದುಕೆ ಇವುಗಳನ್ನು ದಾನಮಾಡುವವನು ದೊಡ್ಡದಾದ ಕುದುರೆಯನ್ನು ಹತ್ತಿಕೊಂಡು ಅದರ ಮೇಲೆ ಯಮನ ನಗರದ ದಾರಿಯನ್ನು ಸುಖದಿಂದ ಕಳೆಯುವನು.

೫-೬. ಛತ್ರಿಯನ್ನು ದಾನಮಾಡಿದವನು ಛತ್ರಿಯನ್ನು ಹಿಡಿದುಕೊಂಡೂ ಮೇನಾ, ಪಲ್ಲಕ್ಕಿ ಮುಂತಾದ್ದನ್ನು ದಾನಮಾಡಿದವನು ರಥದಿಂದಲೂ ಸುಖವಾಗಿ ಪ್ರಯಾಣಮಾಡುವರು. ಹಾಸಿಗೆ ಪೀಠ ಇವುಗಳ ದಾನದಿಂದ ಸುಖವಾಗಿ ಅಲ್ಲಲ್ಲಿ ವಿಶ್ರಾಂತಿಯನ್ನು ಹೊಂದುವರು. ದಾರಿಯಲ್ಲಿ ಹೂವ್ವಿನ ತೋಟಗಳನ್ನು ಮಾಡಿಸು ವವರೂ, ನೆರಳಿರುವ ಹಾಗೆ ಮರಗಳನ್ನು ಬೆಳೆಯಿಸುವವರೂ, ಬಿಸಿಲು ಇದ್ದಾಗ್ಯೂ ಆಯಾಸವಿಲ್ಲದಂತೆ ಯಮನ ಲೋಕವನ್ನು ಸೇರುವರು.

೭. ಹೂವ್ವಿನ ತೋಟಗಳನ್ನು ಮಾಡಿಸುವ ಜನರು, ಪುಷ್ಪಕ ವಿಮಾನದಿಂದ ಯಮನ ಲೋಕವನ್ನು ತಲಪುವರು. ದೇವಸ್ಥಾನಗಳನ್ನು ಕಟ್ಟಿಸುವವರು ಉತ್ತಮ ವಾದ ಉಪ್ಪರಿಗೆಯ ಮನೆಯಲ್ಲಿ ವಿಹರಿಸುವರು.

**ಕರ್ತಾರಶ್ಚ ತಥಾ ಯೇ ಚ ಯತೀನಾಮಾಶ್ರಮಸ್ಯ ಚ ।**
**ಅನಾಥಮಂಡಪಾನಾಂ ತು ಕ್ರೀಡಂತಿ ಚ ಗೃಹೇಗೃಹೇ ॥ ೮ ॥**

**ದೇವಾಗ್ನಿಗುರುವಿಪ್ರಾಣಾಂ ಮಾತಾಪಿತ್ರೋಶ್ಚ ಪೂಜಕಾಃ ।**
**ಪೂಜ್ಯಮಾನಾ ನರಾ ಯಾಂತಿ ಕಾಮುಕೇನ ಯಥಾಸುಖಂ ॥ ೯ ॥**

**ದ್ಯೋತಯಂತೋ ದಿಶಸ್ಸರ್ವಾ ಯಾಂತಿ ದೀಪಪ್ರದಾಯಿನಃ ।**
**ಪ್ರತಿಶ್ರಯಪ್ರದಾನೇನ ಸುಖಂ ಯಾಂತಿ ನಿರಾಮಯಾಃ ॥ ೧೦ ॥**

**ವಿಶ್ರಾಮ್ಯಮಾಣಾ ಗಚ್ಛಂತಿ ಗುರುಶುಶ್ರೂಷಕಾ ನರಾಃ ।**
**ಆತೋದ್ಯವಿಪ್ರದಾತಾರಸ್ಸುಖಂ ಯಾಂತಿ ಸ್ವಕೇ ಗೃಹೇ ॥ ೧೧ ॥**

**ಸರ್ವಕಾಮಸಮೃದ್ಧೇನ ಯಥಾ ಗಚ್ಛಂತಿ ಗೋಪ್ರದಾಃ ।**
**ಅತ್ರ ದತ್ತಾನ್ನಪಾನಾನಿ ತಾನ್ಯಾಪ್ನೋತಿ ನರಃ ಪಥಿ ॥ ೧೨ ॥**

೮. ಯತಿಗಳಿಗೆ ಆಶ್ರಮಗಳನ್ನು ಮಾಡಿಕೊಡುವವರೂ, ದಿಕ್ಕಿಲ್ಲದೇ ಇರುವವರಿಗೆ ವಾಸಸ್ಥಾನಗಳನ್ನು ಕಲ್ಪಿಸಿಕೊಡುವವರೂ ಯಮಲೋಕದ ಉತ್ತಮವಾದ ಮನೆಗಳಲ್ಲಿ ವಾಸಮಾಡುವರು.

೯-೧೦. ದೇವತೆಗಳು, ಅಗ್ನಿ, ಗುರು, ಬ್ರಾಹ್ಮಣರುಗಳು, ತಾಯಿತಂದೆಗಳು ಇವರನ್ನು ಪೂಜಿಸುವವರು ತಮ್ಮ ತಮ್ಮ ಇಚ್ಛಾನುಸಾರವಾದ ಮರ್ಯಾದೆಗಳಿಂದಲೂ ಪೂಜೆಯಿಂದಲೂ ಗೌರವಿಸಲ್ಪಡುತ್ತಾ ಸುಖವಾಗಿ ಯಮಲೋಕವನ್ನು ಹೊಂದುವರು. ದೀಪವನ್ನು ದಾನಮಾಡಿದವರು ಎಲ್ಲಾ ದಿಕ್ಕುಗಳನ್ನೂ ಪ್ರಕಾಶಿಸುವಂತಿರುವ ಬೆಳಕಿನಲ್ಲಿ ಪ್ರಯಾಣಮಾಡುವರು. ಇತರರಿಗೆ ಆಶ್ರಯವನ್ನು ಕೊಟ್ಟವರು ಯಾವ ರೋಗವೂ, ಇಲ್ಲದವರಾಗಿ ಸುಖವಾಗಿ ಪ್ರಯಾಣವನ್ನು ಮಾಡುವರು.

೧೧-೧೨. ಗುರುಗಳನ್ನು ಸೇವೆಮಾಡುವವರು ವಿಶ್ರಾಂತಿಯನ್ನು ಹೊಂದುತ್ತಾ ಪ್ರಯಾಣಮಾಡುವರು. ಸಂಗೀತಕ್ಕೆ ಸಂಬಂಧಪಟ್ಟ ವಾದ್ಯಗಳನ್ನು ದಾನಮಾಡುವವರು ತಮ್ಮ ಮನೆಯಲ್ಲಿ ಸುಖವಾಗಿ ವಾಸಮಾಡುವರು. ಗೋದಾನ ಮಾಡಿದವರು ಎಲ್ಲಾ ವಿಧವಾದ ವಸ್ತುಗಳಿಂದ ತುಂಬಿರುವ ದಾರಿಯಿಂದ ಪ್ರಯಾಣಮಾಡುವರು. ಈ ಲೋಕದಲ್ಲಿ ಅನ್ನಪಾನಗಳನ್ನು ದಾನಮಾಡಿದವನು ಯಮಲೋಕದ ದಾರಿಯಲ್ಲಿ ಅನ್ನಪಾನಗಳನ್ನು ಹೊಂದುವನು. ಈ ಲೋಕದಲ್ಲಿ ಏನೇನನ್ನು ದಾನ ಮಾಡುವನೋ ಅವುಗಳನ್ನೆಲ್ಲಾ ಅಲ್ಲಿ ಪಡೆಯುವನು.

**ಪಾದಶೌಚಪ್ರದಾನೇನ ಸಜಲೇನ ಪಥಾ ವ್ರಜೇತ್ ।**
**ಪಾದಾಭ್ಯಂಗಂ ಚ ಯಃ ಕುರ್ಯಾದಶ್ವಪೃಷ್ಠೇನ ಗಚ್ಛತಿ ॥ ೧೩ ॥**

**ಪಾದಶೌಚಂ ತಥಾಭ್ಯಂಗಂ ದೀಪಮನ್ನಂ ಪ್ರತಿಶ್ರಯಂ ।**
**ಯೋ ದದಾತಿ ಸದಾ ವ್ಯಾಸ ನೋಪಸರ್ಪತಿ ತಂ ಯಮಃ ॥ ೧೪ ॥**

**ಹೇಮರತ್ನಪ್ರದಾನೇನ ಯಾತಿ ದುರ್ಗಾಣಿ ನಿಸ್ತರನ್ ।**
**ರೌಪ್ಯಾನಡುತ್ಪ್ರದಾನೇನ ಯಮಲೋಕಂ ಸುಖೇನ ಸಃ ॥ ೧೫ ॥**

**ಇತ್ಯೇವಮಾದಿಭಿರ್ದಾನೈಸ್ಸುಖಂ ಯಾಂತಿ ಯಮಾಲಯಂ ।**
**ಸ್ವರ್ಗೇ ತು ವಿವಿಧಾನ್ಭೋಗಾನ್ಪ್ರಾಪ್ನುವಂತಿ ಸದಾ ನರಾಃ ॥ ೧೬ ॥**

**ಸರ್ವೇಷಾಮೇವ ದಾನಾನಾಮನ್ನದಾನಂ ಪರಂ ಸ್ಮೃತಂ ।**
**ಸದ್ಯಃ ಪ್ರೀತಿಕರಂ ಹೃದ್ಯಂ ಬಾಲಬುದ್ಧಿವಿವರ್ಧನಂ ॥ ೧೭ ॥**

---

೧೩-೧೪. ಕಾಲುಗಳನ್ನು ತೊಳೆದುಕೊಳ್ಳಲು ತಣ್ಣಗಿರುವ ನೀರನ್ನು ಕೊಡುವವನು ಯಮನ ಪಟ್ಟಣಕ್ಕೆ ನೀರು ನೆರಳುಗಳಿಂದ ಕೂಡಿದ ದಾರಿಯಲ್ಲಿ ಪ್ರಯಾಣ ಮಾಡುವನು. ಅಭ್ಯಂಜನಮಾಡಿಸುವವನು ಕುದುರೆಯ ಮೇಲೆ ಕುಳಿತು ಸುಖವಾಗಿ ಪ್ರಯಾಣಮಾಡುವನು. ತಣ್ಣಗಿರುವ ನೀರನ್ನೂ, ಪಾದಾಭ್ಯಂಜನವನ್ನೂ, ದೀಪವನ್ನೂ, ಅನ್ನವನ್ನೂ, ವಾಸಸ್ಥಾನವನ್ನೂ ದಾನಮಾಡುವವರ ಸಮೀಪಕ್ಕೆ ಯಮನು ಹೋಗುವುದಿಲ್ಲ.

೧೫-೧೬. ಚಿನ್ನ, ರತ್ನ, ಇವುಗಳನ್ನು ದಾನಮಾಡುವವರು ತಮ್ಮ ತಮ್ಮ ಕಷ್ಟಗಳನ್ನು ಕಳೆದುಕೊಂಡು ಪ್ರಯಾಣಮಾಡುವರು. ಬೆಳ್ಳಿಯಿಂದ ಅಲಂಕರಿಸಿದ ಗೋದಾನದಿಂದ ಸುಖವಾಗಿ ಯಮನ ಲೋಕವನ್ನು ಹೊಂದುವರು. ಇವೇ ಮೊದಲಾದ ದಾನಗಳಿಂದ ಯಮನ ಮನೆಯನ್ನು ಸುಖವಾಗಿ ತಲಪುವರು. ಮನುಷ್ಯರು ಯಾವಾಗಲೂ ಸ್ವರ್ಗದಲ್ಲಿ ಅನೇಕ ವಿಧವಾದ ಸೌಖ್ಯಗಳನ್ನು ಹೊಂದುತ್ತಿರುವರು.

೧೭-೧೯. ಎಲ್ಲಾ ದಾನಗಳಿಗಿಂತಲೂ ಅನ್ನದಾನವು ಉತ್ತಮವಾದದ್ದು. ಇದು ಹಸಿದವನಿಗೆ ಆಕ್ಷಣದಲ್ಲಿಯೇ ಸಂತೋಷವನ್ನುಂಟುಮಾಡಿ ಶಕ್ತಿ ಮತ್ತು ಬುದ್ಧಿಗಳನ್ನು ಹೆಚ್ಚಿಸುವುದು. ಎಲೈ ಋಷಿಶ್ರೇಷ್ಠನೇ, ಕೇಳು. ಅನ್ನದಾನಕ್ಕೆ ಸಮನಾದ

**ನಾನ್ನದಾನಸಮಂ ದಾನಂ ವಿದ್ಯತೇ ಮುನಿಸತ್ತಮ ।**
**ಅನ್ನಾದ್ಭವಂತಿ ಭೂತಾನಿ ತದಭಾವೇ ಮ್ರಿಯಂತಿ ಚ ॥ ೧೮ ॥**

**ರಕ್ತಂ ಮಾಂಸಂ ವಸಾ ಶುಕ್ರಂ ಕ್ರಮಾದನ್ನಾತ್ಪ್ರವರ್ಧತೇ ।**
**ಶುಕ್ರಾದ್ಭವಂತಿ ಭೂತಾನಿ ತಸ್ಮಾದನ್ನಮಯಂ ಜಗತ್ ॥ ೧೯ ॥**

**ಹೇಮರತ್ನಾಶ್ವನಾಗೇಂದ್ರೈರ್ನಾರೀಸ್ರಕ್ಚಂದನಾದಿಭಿಃ ।**
**ಸಮಸ್ತೈರಪಿ ಸಂಪ್ರಾಪ್ತೈರ್ನ ರಮಂತಿ ಬುಭುಕ್ಷಿತಾಃ ॥ ೨೦ ॥**

**ಗರ್ಭಸ್ಥಾ ಜಾಯಮಾನಾಶ್ಚ ಬಾಲವೃದ್ಧಾಶ್ಚ ಮಧ್ಯಮಾಃ ।**
**ಆಹಾರಮಭಿಕಾಂಕ್ಷಂತಿ ದೇವದಾನವರಾಕ್ಷಸಾಃ ॥ ೨೧ ॥**

**ಕ್ಷುಧಾ ನಿಶ್ಶೇಷರೋಗಾಣಾಂ ವ್ಯಾಧಿಃ ಶ್ರೇಷ್ಠತಮಃ ಸ್ಮೃತಃ ।**
**ಸ ಚಾನ್ನೌಷಧಿಲೇಪೇನ ನಶ್ಯತೀಹ ನ ಸಂಶಯಃ ॥ ೨೨ ॥**

ದಾನವು ಮತ್ತೊಂದಿಲ್ಲ. ಪ್ರಾಣಿಗಳು ಅನ್ನದಿಂದ ವೃದ್ಧಿಯನ್ನು ಹೊಂದುವವು. ಅನ್ನವಿಲ್ಲದಿದ್ದರೆ ಸಾಯುವವು. ಅನ್ನದಿಂದ ರಕ್ತ, ಮಾಂಸ, ವಸಾ, ಶುಕ್ರ ಇವೆಲ್ಲವೂ ವೃದ್ಧಿಯನ್ನು ಹೊಂದುವವು. ಧಾತು (ವೀರ್ಯ) ವಿನಿಂದ ಪ್ರಾಣಿಗಳು ಹುಟ್ಟುವವು. ಆದುದರಿಂದ ಈ ಪ್ರಪಂಚವು ಅನ್ನದಿಂದಲೇ ನಿಂತಿರುವುದು.

೨೦-೨೧. ಹಸಿವೆಯುಳ್ಳವರಿಗೆ ಚಿನ್ನ, ಬೆಳ್ಳಿ, ರತ್ನ, ಕುದುರೆ, ಆನೆ, ಹೆಂಗಸರು, ಹೂವು, ಗಂಧ ಇವುಗಳು ಯಾವುದನ್ನು ಕೊಟ್ಟರೂ ಅವರ ಹಸಿವೆಯು ಅಡಗುವುದಿಲ್ಲ. ಸಂತೋಷವೂ, ಮನಸ್ಸಿಗೆ ಹಿತವೂ ಉಂಟಾಗುವುದಿಲ್ಲ. ದೇವತೆಗಳು, ದಾನವರು, ರಾಕ್ಷಸರು ಇವರುಗಳೂ, ಗರ್ಭದಲ್ಲಿರುವವರೂ, ಹುಟ್ಟುವವರೂ, ಹುಡುಗರೂ, ಮುದುಕರೂ, ಮಧ್ಯವಯಸ್ಸಿನವರೂ, ಎಲ್ಲರೂ ಕೂಡ ಅನ್ನವನ್ನು ಅಪೇಕ್ಷಿಸುತ್ತಿರುವರು.

೨೨-೨೩. ಯಾವ ವಿಧವಾದ ರೋಗವೂ ಇಲ್ಲದವರಿಗೆ ಹಸಿವೆ ಎಂಬುವುದೇ ಒಂದು ದೊಡ್ಡ ರೋಗದಂತಿರುವುದು. ಆ ರೋಗವು ಅನ್ನವೆಂಬ ಔಷಧಿಯಿಂದ ಚೆನ್ನಾಗಿ ಗುಣವಾಗುವುದು. ಇದರಲ್ಲಿ ಸಂಶಯವಿಲ್ಲ. ಪ್ರಾಣಿಗಳಿಗೆ ಹಸಿವೆಗೆ ಸಮನಾದ ದುಃಖವೂ, ರೋಗವೂ, ಯಾವುದೂ ಇರುವುದಿಲ್ಲ. ಹಾಗೆಯೇ ಆರೋಗ್ಯಕ್ಕೆ ಸಮನಾದ ಸೌಖ್ಯವೂ, ಕೋಪಕ್ಕೆ ಸಮನಾದ ಶತ್ರುವೂ ಯಾವುದೂ ಇರುವುದಿಲ್ಲ.

ನಾಸ್ತಿ ಕ್ಷುಧಾ ಸಮಂ ದುಃಖಂ ನಾಸ್ತಿ ರೋಗಃ ಕ್ಷುಧಾ ಸಮಃ ।
ನಾಸ್ತ್ಯರೋಗಸಮಂ ಸೌಖ್ಯಂ ನಾಸ್ತಿ ಕ್ರೋಧಸಮೋ ರಿಪುಃ ॥ ೨೩ ॥

ಅತ ಏವ ಮಹತ್ಪುಣ್ಯಮನ್ನದಾನೇ ಪ್ರಕೀರ್ತಿತಂ ।
ತಥಾ ಕ್ಷುಧಾಗ್ನಿನಾ ತಪ್ತಾ ಮ್ರಿಯಂತೇ ಸರ್ವದೇಹಿನಃ ॥ ೨೪ ॥

ಅನ್ನದಃ ಪ್ರಾಣದಃ ಪ್ರೋಕ್ತಃ ಪ್ರಾಣದಶ್ಚಾಪಿ ಸರ್ವದಃ ।
ತಸ್ಮಾದನ್ನಪ್ರದಾನೇನ ಸರ್ವದಾನಫಲಂ ಲಭೇತ್ ॥ ೨೫ ॥

ಯಸ್ಯಾನ್ನಪಾನಪುಷ್ಟಾಂಗಃ ಕುರುತೇ ಪುಣ್ಯಸಂಚಯಂ ।
ಅನ್ನಪ್ರದಾತುಸ್ತಸ್ಯಾರ್ಧಂ ಕರ್ತುಶ್ಚಾರ್ಧಂ ನ ಸಂಶಯಃ ॥ ೨೬ ॥

ತ್ರೈಲೋಕ್ಯೇ ಯಾನಿ ರತ್ನಾನಿ ಭೋಗಸ್ತ್ರೀವಾಹನಾನಿ ಚ ।
ಅನ್ನದಾನಪ್ರದಸ್ಸರ್ವಮಿಹಾಮುತ್ರ ಚ ತಲ್ಲಭೇತ್ ॥ ೨೭ ॥

ಈ ಕಾರಣದಿಂದ ಅನ್ನದಾನಮಾಡುವುದರಿಂದ ಬಹಳ ಪುಣ್ಯವುಂಟೆಂದು ಹೇಳುವರು. ಹಸಿವೆಯಿಂದುಂಟಾದ ಅಗ್ನಿಯಿಂದ ಪ್ರಾಣಿಗಳು ಸಾಯುವವು. ಅಂತಹ ಹಸಿವೆಯು ಅನ್ನದಿಂದ ಶಮನವಾಗುವುದು. ಆದುದರಿಂದ ಅನ್ನವನ್ನು ದಾನಮಾಡುವವನು ಪ್ರಾಣವನ್ನು ಕೊಡುವವನೆನ್ನಿಸಿಕೊಳ್ಳುವನು. ಪ್ರಾಣದಾನಮಾಡಿದವನಿಗೆ ಸಮನಾದ ಪುಣ್ಯವಂತನಿರುವುದಿಲ್ಲ. ಪ್ರಾಣದಾನಮಾಡಿದವನು ಎಲ್ಲವನ್ನೂ ದಾನಮಾಡಿದವನೆನಿಸಿಕೊಳ್ಳುವ ಕಾರಣ ಅನ್ನದಾನಮಾಡಿದ್ದರಿಂದ ಎಲ್ಲವನ್ನೂ ದಾನಮಾಡಿದ ಫಲವು ಬರುವುದು.

೨೬. ಅನ್ನದಾನಮಾಡಿದವನ ಅನ್ನದಿಂದ ಶರೀರವನ್ನು ರಕ್ಷಿಸಿಕೊಂಡವನು ಮುಂದೆ ಪುಣ್ಯದ ರಾಶಿಯನ್ನು ಸಂಪಾದಿಸುವವನಾದ್ದರಿಂದ ಅನ್ನದಾನಮಾಡಿದವನಿಗೆ ಆ ಪುಣ್ಯದಲ್ಲಿ ಅರ್ಧವೂ, ಅನ್ನವನ್ನು ಭುಜಿಸಿದವನಿಗೆ ಅರ್ಧವೂ ಬರುವುದು.

೨೭. ಮೂರುಲೋಕದಲ್ಲಿಯೂ, ಇರುವ ರತ್ನಗಳು, ಸಕಲಭೋಗಗಳು, ಸ್ತ್ರೀಯರು, ವಾಹನಗಳು ಇವೆಲ್ಲವನ್ನೂ ಅನ್ನದಾನಮಾಡುವವನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಹೊಂದುವನು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಸಂಪಾದಿಸುವುದಕ್ಕೆ ಶರೀರವು ಮುಖ್ಯವಾದ ಸಾಧನವಾಗಿರುವುದರಿಂದ ಅನ್ನಪಾನಗಳಿಂದ ಶರೀರದ ಪೋಷಣೆಯನ್ನು ಚೆನ್ನಾಗಿ ಮಾಡಿಕೊಳ್ಳಬೇಕು.

**ಧರ್ಮಾರ್ಥಕಾಮಮೋಕ್ಷಾಣಾಂ ದೇಹಃ ಪರಮಸಾಧನಂ ।**
**ತಸ್ಮಾದನ್ನೇನ ಪಾನೇನ ಪಾಲಯೇದ್ದೇಹಮಾತ್ಮನಃ　　　　॥ ೨೮ ॥**

**ಅನ್ನಮೇವ ಪ್ರಶಂಸಂತಿ ಸರ್ವಮೇವ ಪ್ರತಿಷ್ಠಿತಂ ।**
**ಅನ್ನೇನ ಸದೃಶಂ ದಾನಂ ನ ಭೂತಂ ನ ಭವಿಷ್ಯತಿ　　　　॥ ೨೯ ॥**

**ಅನ್ನೇನ ಧಾರ್ಯತೇ ಸರ್ವಂ ವಿಶ್ವಂ ಜಗದಿದಂ ಮುನೇ ।**
**ಅನ್ನಮೂರ್ಜಸ್ಕರಂ ಲೋಕೇ ಪ್ರಾಣಾ ಹ್ಯನ್ನೇ ಪ್ರತಿಷ್ಠಿತಾಃ　　　　॥ ೩೦ ॥**

**ದಾತವ್ಯಂ ಭಿಕ್ಷವೇ ಚಾನ್ನಂ ಬ್ರಾಹ್ಮಣಾಯ ಮಹಾತ್ಮನೇ ।**
**ಕುಟುಂಬಂ ಪೀಡಯಿತ್ವಾಪಿ ಹ್ಯಾತ್ಮನೋ ಭೂತಿಮಿಚ್ಛತಾ　　　　॥ ೩೧ ॥**

**ವಿದಧಾತಿ ನಿಧಿಶ್ರೇಷ್ಠಂ ಯೋ ದದ್ಯಾದನ್ನಮರ್ಥಿನೇ ।**
**ಬ್ರಾಹ್ಮಣಾಯಾರ್ತರೂಪಾಯ ಪಾರಲೌಕಿಕಮಾತ್ಮನಃ　　　　॥ ೩೨ ॥**

೨೮-೩೧. ಅನ್ನವನ್ನು ಎಲ್ಲಕ್ಕಿಂತಲೂ ಉತ್ತಮವೆಂತಲೂ ಅನ್ನದಿಂದ ಎಲ್ಲವೂ ಉಂಟಾಗುವುದೆಂತಲೂ ಅನ್ನವನ್ನು ಹೊಗಳುವರು. ಅನ್ನದಾನಕ್ಕೆ ಸಮನಾದ ದಾನವು ಹಿಂದೆ ಹುಟ್ಟಲಿಲ್ಲ. ಮುಂದೆ ಹುಟ್ಟುವುದಿಲ್ಲ. ಅನ್ನದಿಂದಲೇ ಪ್ರಪಂಚವು ನಿಂತಿರುವುದು. ಎಲೈ ಋಷಿಯೇ, ಕೇಳು. ಅನ್ನಾದ್ಭೂತಾನಿ ಜಾಯಂತೇ । ಜಾತಾನ್ಯನ್ನೇನ ವರ್ಧಂತೇ । ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ ॥ ಎಂದು ಶ್ರುತಿಯು ಇರುವುದು. ಅನ್ನವು ಪ್ರಾಣಿಗಳಿಗೆ ಬಲವನ್ನುಂಟುಮಾಡುವುದು. ಪ್ರಾಣಿಗಳೂ ಅನ್ನದಿಂದ ಬಲವಾಗುವವು. ತನಗೆ ಹಿತವನ್ನು ಕೋರುವವನು ಭಿಕ್ಷಾರ್ಥಿಯಾಗಿ ಬರುವ ಬ್ರಾಹ್ಮಣನಿಗೆ ಅನ್ನವನ್ನು ದಾನಮಾಡಬೇಕು. ಹೀಗೆ ಮಾಡುವುದರಲ್ಲಿ ತನ್ನ ಪೋಷ್ಯವರ್ಗದವರಿಗೆ ತೊಂದರೆಯುಂಟಾದರೂ ಅದನ್ನು ಗಮನಿಸದೆ ದಾನಮಾಡತಕ್ಕದ್ದು.

೩೨-೩೪. ಅನ್ನವನ್ನು ಬೇಡುವವನಿಗೆ ಅದನ್ನು ದಾನಮಾಡಿದರೆ ನಿಧಿಯನ್ನು ಸಂಪಾದಿಸಿದಂತಾಗುವುದು. ಈ ನಿಧಿಯು ತನಗೆ ಪರಲೋಕದಲ್ಲಿ ಸುಖವನ್ನುಂಟು ಮಾಡುವುದು. ಆಯಾಯ ಕಾಲಕ್ಕನುಗುಣವಾಗಿ ಐಶ್ವರ್ಯವನ್ನು ಅಪೇಕ್ಷಿಸುವವನು, ಭೋಜನಾರ್ಥಿಯಾಗಿ ಬಂದವನನ್ನೂ, ದಾರಿಯಲ್ಲಿ ನಡೆದು ಬಳಲಿದವನನ್ನೂ, ಜೀವನಕ್ಕಾಗಿ ಅನ್ನವನ್ನು ಕೇಳುವವನನ್ನೂ ಮರ್ಯಾದೆಯಿಂದ ಕಾಣ

ಅರ್ಚಯೇದ್ಭೂತಿಮನ್ವಿಚ್ಛನ್ಕಾಲೇ ದ್ವಿಜಮುಪಸ್ಥಿತಂ ।
ಶ್ರಾಂತಮಧ್ವನಿ ವೃತ್ತ್ಯರ್ಥಂ ಗೃಹಸ್ಥೋ ಗೃಹಮಾಗತಂ ॥ ೩೩ ॥

ಅನ್ನದಃ ಪೂಜಯೇದ್ವ್ಯಾಸ ಸುಶೀಲಸ್ತು ವಿಮತ್ಸರಃ ।
ಕ್ರೋಧಮುತ್ಪತಿತಂ ಹಿತ್ವಾ ದಿವಿ ಚೇಹ ಮಹತ್ಸುಖಂ ॥ ೩೪ ॥

ನಾಭಿನಿಂದೇದಧಿಗತಂ ನ ಪ್ರಣುದ್ಯಾತ್ಕಥಂಚನ ।
ಅಪಿ ಶ್ವಪಾಕೇ ಶುನಿ ವಾ ನಾನ್ನದಾನಂ ಪ್ರಣಶ್ಯತಿ ॥ ೩೫ ॥

ಶ್ರಾಂತಾಯಾದೃಷ್ಟಪೂರ್ವಾಯ ಹ್ಯನ್ನಮಧ್ವನಿ ವರ್ತತೇ ।
ಯೋ ದದ್ಯಾದಪರಿಕ್ಲಿಷ್ಟಃ ಸ ಸಮೃದ್ಧಿಮವಾಪ್ನುಯಾತ್ ॥ ೩೬ ॥

ಪಿತ್ರೂನ್ದೇವಾಂಸ್ತಥಾ ವಿಪ್ರಾನತಿಥೀಂಶ್ಚ ಮಹಾಮುನೇ ।
ಯೋ ನರಃ ಪ್ರೀಣಯತ್ಯನ್ನೈಸ್ತಸ್ಯ ಪುಣ್ಯಫಲಂ ಮಹತ್ ॥ ೩೭ ॥

ಬೇಕು. ಎಲೈ ವ್ಯಾಸಋಷಿಯೇ, ಅನ್ನದಾನಮಾಡುವವನು ದ್ವೇಷಬುದ್ಧಿಯಿಲ್ಲದವನಾಗಿಯೂ, ಒಳ್ಳೆಯ ಸ್ವಭಾವವುಳ್ಳವನಾಗಿಯೂ ಇರಬೇಕು. ತನ್ನ ಕೋಪವನ್ನು ನಿಗ್ರಹಮಾಡಿಕೊಳ್ಳುವವನು ಇಲ್ಲಿಯೂ ಪರಲೋಕದಲ್ಲಿಯೂ ಬಹಳ ಸುಖವನ್ನು ಹೊಂದುವನು.

೩೫. ಗೃಹಸ್ಥನಾದವನು ತನ್ನ ಮನೆಗೆ ಬಂದ ಅತಿಥಿಯನ್ನು ನಿಂದೆಮಾಡಬಾರದು. ಯಾವ ವಿಧವಾಗಿಯೂ ಅವನ ಮನಸ್ಸಿಗೆ ಬೇಸರವಾಗುವಂತೆ ತೊಂದರೆಯನ್ನು ಉಂಟುಮಾಡಬಾರದು. ಅಂತ್ಯಜನಿಗಾದರೂ ನಾಯಿಗಾದರೂ ಮಾಡಿದ ಅನ್ನದಾನವು ಸಹ ಯಾವಾಗಲೂ ಪುಣ್ಯವನ್ನು ಉಂಟುಮಾಡುವುದೇ ಹೊರತು ಅದು ನಾಶವಾಗುವುದಿಲ್ಲ.

೩೬-೩೭. ಆಯಾಸಪಟ್ಟಿರುವವನಿಗೂ, ಗುರುತುಪರಿಚಯವಿಲ್ಲದವನಿಗೂ, ದಾರಿಯಲ್ಲಿ ನಡೆಯುವವನಿಗೂ ಸಂತೋಷಮನಸ್ಸಿನಿಂದ ಅನ್ನದಾನಮಾಡುವವನು ಬಹಳ ಐಶ್ವರ್ಯವನ್ನು ಹೊಂದುವನು. ಎಲೈ ಮಹಾಮುನಿಯೇ ಕೇಳು, ಪಿತೃಗಳು, ದೇವತೆಗಳು, ಬ್ರಾಹ್ಮಣರು, ಅತಿಥಿಗಳು ಇವರುಗಳನ್ನು ಅನ್ನದಾನದಿಂದ ಸಂತೋಷಪಡಿಸುವವನು ಬಹಳ ಪುಣ್ಯವನ್ನು ಹೊಂದುವನು.

ಅನ್ನಂ ಪಾನಂ ಚ ಶೂದ್ರೇऽಪಿ ಬ್ರಾಹ್ಮಣೇ ಚ ವಿಶಿಷ್ಯತೇ ।
ನ ಪೃಚ್ಛೇದ್ಗೋತ್ರಚರಣಂ ಸ್ವಾಧ್ಯಾಯಂ ದೇಶಮೇವ ಚ ॥ ೩೮ ॥

ಭಿಕ್ಷಿತೋ ಬ್ರಾಹ್ಮಣೇನೇಹ ದದ್ಯಾದನ್ನಂ ಚ ಯಃ ಪುಮಾನ್ ।
ಸ ಯಾತಿ ಪರಮಂ ಸ್ವರ್ಗಂ ಯಾವದಾಭೂತಸಂಪ್ಲವಂ ॥ ೩೯ ॥

ಅನ್ನದಸ್ಯ ಚ ವೃಕ್ಷಾಶ್ಚ ಸರ್ವಕಾಮಫಲಾನ್ವಿತಾಃ ।
ಭವಂತೀಹ ಯಥಾ ವಿಪ್ರಾ ಹರ್ಷಯುಕ್ತಾಸ್ತ್ರಿವಿಷ್ಟಪೇ ॥ ೪೦ ॥

ಅನ್ನದಾನೇನ ಯೇ ಲೋಕಾಸ್ಸ್ವರ್ಗೇ ವಿರಚಿತಾ ಮುನೇ ।
ಅನ್ನದಾತುರ್ಮಹಾದಿವ್ಯಾಸ್ತಾಞ್ಛೃಣುಷ್ವ ಮಹಾಮುನೇ ॥ ೪೧ ॥

ಭವನಾನಿ ಪ್ರಕಾಶಂತೇ ದಿವಿ ತೇಷಾಂ ಮಹಾತ್ಮನಾಂ ।
ನಾನಾಸಂಸ್ಥಾನರೂಪಾಣಿ ನಾನಾಕಾಮಾನ್ವಿತಾನಿ ಚ ॥ ೪೨ ॥

೩೮. ಅನ್ನದಾನಕ್ಕೆ ಶೂದ್ರನೆಂದೂ ಬ್ರಾಹ್ಮಣನೆಂದೂ ತಾರತಮ್ಯವಿಲ್ಲ. ಫಲದಲ್ಲಿಯೂ ತಾರತಮ್ಯವಿಲ್ಲ. ಅನ್ನವನ್ನು ದಾನಮಾಡುವಾಗ ಗೋತ್ರ, ವಿದ್ಯೆ, ಅವನ ವಾಸಸ್ಥಳ, ಮುಂತಾದವುಗಳನ್ನು ಕೇಳಬಾರದು.

೩೯-೪೦. ಬ್ರಾಹ್ಮಣನು ಅನ್ನವನ್ನು ಕೇಳಿದಾಗ ಅವನಿಗೆ ಅನ್ನವನ್ನು ಹಾಕುವವನು ಪಂಚಭೂತಗಳು ಪ್ರಳಯವಾಗುವವರಿಗೂ ಉತ್ತಮವಾದ ಸ್ವರ್ಗವನ್ನು ಹೊಂದುವನು. ಅನ್ನದಾನಮಾಡುವವನಿಗೆ ಸ್ವರ್ಗದಲ್ಲಿ ವೃಕ್ಷಗಳು ಕೂಡ ಎಲ್ಲಾ ವಿಧವಾದ-ಅವನ ಇಷ್ಟಗಳನ್ನು ನಡಿಸಿಕೊಡುವುವು. ಇಲ್ಲಿ ಅನ್ನವನ್ನು ಊಟ ಮಾಡಿದವರು ಸಂತೋಷಪಡುವ ಹಾಗೆ ಅಲ್ಲಿ ಅವನಿಗೂ ಸಂತೋಷವುಂಟಾಗುವುದು.

೪೧. ಎಲೈ ಋಷಿಯೇ ಕೇಳು, ಅನ್ನದಾನದಿಂದ ಉತ್ತಮವಾದ ಸ್ವರ್ಗಲೋಕಾದಿಗಳು ಉಂಟಾಗತಕ್ಕ ಕ್ರಮವನ್ನು ವಿವರಿಸಿ ಹೇಳುವೆನು ಕೇಳು.

೪೨-೪೫. ಅನ್ನದಾನಮಾಡಿದ ಮಹಾತ್ಮರಾದವರ ಮನೆಗಳು ಸ್ವರ್ಗದಲ್ಲಿ ಅನೇಕವಿಧವಾದ ಆಕಾರವುಳ್ಳವುಗಳಾಗಿ ನಾನಾವಿಧವಾದ ಇಷ್ಟಗಳನ್ನು ನಡೆಸಿಕೊಡಲು

ಸರ್ವಕಾಮಫಲಾಶ್ಚಾಪಿ ವೃಕ್ಷಾ ಭವನಸಂಸ್ಥಿತಾಃ ।
ಹೇಮವಾಪ್ಯಃ ಶುಭಾಃ ಕೂಪಾ ದೀರ್ಘಿಕಾಶ್ಚೈವ ಸರ್ವಶಃ ॥ ೪೩ ॥

ಘೋಷಯಂತಿ ಚ ಪಾನಾನಿ. ಶುಭಾನ್ಯಥ ಸಹಸ್ರಶಃ ।
ಭಕ್ಷ್ಯಭೋಜ್ಯಮಯಾಶ್ಶೈಲಾ ವಾಸಾಂಸ್ಯಾಭರಣಾನಿ ಚ ॥ ೪೪ ॥

ಕ್ಷೀರಂ ಸ್ರವಂತ್ಯಸ್ಸರಿತಸ್ತಥೈವಾಜ್ಯಸ್ಯ ಪರ್ವತಾಃ ।
ಪ್ರಾಸಾದಾಃ ಪಾಂಡುರಾಭಾಸಾಶ್ಶಯ್ಯಾಶ್ಚ ಕನಕೋಜ್ಜ್ವಲಾಃ ॥ ೪೫ ||

ತಾನನ್ನದಾಶ್ಚ ಗಚ್ಛಂತಿ ತಸ್ಮಾದನ್ನಪ್ರದೋ ಭವೇತ್ ।
ಯದೀಚ್ಛೇದಾತ್ಮನೋ ಭವ್ಯಮಿಹ ಲೋಕೇ ಪರತ್ರ ಚ ॥ ೪೬ ॥

ಏತೇ ಲೋಕಾಃ ಪುಣ್ಯಕೃತಾಮನ್ನದಾನಾಂ ಮಹಾಪ್ರಭಾಃ ।
ತಸ್ಮಾದನ್ನಂ ವಿಶೇಷೇಣ ದಾತವ್ಯಂ ಮಾನವೈರ್ಧ್ರುವಂ ॥ ೪೭ ॥

ಸಮರ್ಥವಾಗಿರುವವು. ಆ ಮನೆಗಳಲ್ಲಿರುವ ಉದ್ಯಾನ ವೃಕ್ಷಗಳೂ ಎಲ್ಲ ವಿಧವಾದ ಇಷ್ಟವನ್ನು ಪೂರೈಸಿಕೊಡಬಲ್ಲವು. ಅಲ್ಲಿರುವ ಉತ್ತಮವಾದ ಚಿನ್ನದ ಭಾವಿಗಳೂ, ಸರೋವರಗಳೂ ಎಲ್ಲಾ ಕಡೆಯಲ್ಲಿಯೂ ಸುಖಕರವಾದ ಪಾನೀಯವನ್ನು ಕೊಡುವವು. ಮತ್ತು ಅನ್ನದಾನಮಾಡಿದವನಿಗೆ ಸ್ವರ್ಗಲೋಕದಲ್ಲಿ ಬೆಟ್ಟಗಳ ಹಾಗೆ ಇರುವ ಭಕ್ಷ್ಯಗಳೂ, ತಿಂಡಿಗಳೂ, ಬಟ್ಟೆಗಳೂ, ಆಭರಣಗಳೂ ದೊರೆಯುವವು. ಹಾಲಿನ ಹೊಳೆಗಳೇ ಅಲ್ಲಿರುವವು. ತುಪ್ಪಕ್ಕೂ ಕೊರತೆಯಿಲ್ಲ. ಚಿನ್ನ, ಬೆಳ್ಳಿ, ರತ್ನಗಳು ಮೊದಲಾದ ಉತ್ತಮವಸ್ತುಗಳಿಂದ ನಿರ್ಮಿತವಾದ ಮಹಡಿಮನೆಗಳಿರುವವು. ಅವುಗಳಲ್ಲಿ ಸುವರ್ಣರತ್ನಾಭರಣಗಳೂ, ಮೆತ್ತನೆಯ ಹಾಸಿಗೆಗಳೂ ಇನ್ನೂ ಅನೇಕ ಪರಿಕರಗಳೂ ತುಂಬಿರುವವು.

೪೬-೪೭. ಇಲ್ಲಿಯೂ ಪರಲೋಕದಲ್ಲಿಯೂ, ತನಗೆ ಶ್ರೇಯಸ್ಸನ್ನು ಬಯಸಿ ಅನ್ನದಾನಮಾಡಿದವನು ಇವೆಲ್ಲವನ್ನೂ ಹೊಂದುವ ಕಾರಣ ಅನ್ನದಾನವನ್ನು ಅವಶ್ಯಕವಾಗಿ ಮಾಡಬೇಕು. ಅನ್ನದಾನಮಾಡುವವರಿಗೆ ಬಹಳ ಪುಣ್ಯವಂತರು ಪಡೆಯುವ ಇಂತಹ ಲೋಕಗಳು ಉಂಟಾಗುವುದರಿಂದ ಅನ್ನವನ್ನು ಹೆಚ್ಚಾಗಿಯೂ ಅವಶ್ಯಕವಾಗಿಯೂ ದಾನಮಾಡಬೇಕು.

**ಅನ್ನಂ ಪ್ರಜಾಪತಿಸ್ಸಾಕ್ಷಾದನ್ನಂ ವಿಷ್ಣುಸ್ಸ್ವಯಂ ಹರಃ ।**
**ತಸ್ಮಾದನ್ನಸಮಂ ದಾನಂ ನ ಭೂತಂ ನ ಭವಿಷ್ಯತಿ　　　　॥ ೪೮ ॥**

**ಕೃತ್ವಾಪಿ ಸುಮಹತ್ಪಾಪಂ ಯಃ ಪಶ್ಚಾದನ್ನದೋ ಭವೇತ್ ।**
**ವಿಮುಕ್ತಸ್ಸರ್ವಪಾಪೇಭ್ಯಸ್ಸ್ವರ್ಗಲೋಕಂ ಸ ಗಚ್ಛತಿ　　　　॥ ೪೯ ॥**

**ಅನ್ನಪಾನಾಶ್ವಗೋವಸ್ತ್ರಶಯ್ಯಾಚ್ಛತ್ರಾಸನಾನಿ ಚ ।**
**ಪ್ರೇತಲೋಕೇ ಪ್ರಶಸ್ತಾನಿ ದಾನಾನ್ಯಷ್ಟೌ ವಿಶೇಷತಃ　　　　॥ ೫೦ ॥**

**ಏವಂ ದಾನವಿಶೇಷೇಣ ಧರ್ಮರಾಜಪುರಂ ನರಃ ।**
**ಯಸ್ಮಾದ್ಯಾತಿ ವಿಮಾನೇನ ತಸ್ಮಾದ್ದಾನಂ ಸಮಾಚರೇತ್　　　　॥ ೫೧ ॥**

**ಏತದಾಖ್ಯಾನಮನಘಮನ್ನದಾನಪ್ರಭಾವತಃ ।**
**ಯಃ ಪಠೇತ್ಪಾಠಯೇದನ್ಯಾನ್ಸ ಸಮೃದ್ಧಃ ಪ್ರಜಾಯತೇ　　　　॥ ೫೨ ॥**

೪೮. ಅನ್ನವೇ ಸಾಕ್ಷಾತ್ತಾಗಿ ಬ್ರಹ್ಮರೂಪದಿಂದಲೂ, ವಿಷ್ಣುವಿನ ರೂಪದಿಂದಲೂ, ಈಶ್ವರನ ರೂಪದಿಂದಲೂ ಇರುವುದು. ಅನ್ನಂ ಬ್ರಹ್ಮೇತಿ ವ್ಯಜಾನಾತ್ ಎಂದು ಶ್ರುತಿಯು ಇರುವುದು. ಆದ್ದರಿಂದ ಅನ್ನದಾನಕ್ಕೆ ಸಮನಾದ ದಾನವು ಹಿಂದೆ ಹುಟ್ಟಿರಲಿಲ್ಲ. ಮುಂದೆ ಹುಟ್ಟುವುದೂ ಇಲ್ಲ.

೪೯-೫೦. ಬಹಳ ಪಾಪವನ್ನು ಮಾಡಿದವರೂ ಸಹ ಅನ್ನದಾನಮಾಡಿದರೆ ಅಂತವರು ತಮ್ಮ ಪಾಪಗಳನ್ನು ಕಳೆದುಕೊಂಡು ಸ್ವರ್ಗವನ್ನು ಹೊಂದುವರು. ಅನ್ನದಾನ, ಪಾನೀಯದಾನ, ಅಶ್ವದಾನ, ಗೋದಾನ, ವಸ್ತ್ರದಾನ, ಶಯ್ಯಾದಾನ, ಛತ್ರದಾನ, ಆಸನದಾನ ಇವುಗಳು ಪರಲೋಕಕ್ಕೆ ಮುಖ್ಯವಾಗಿ ಉಪಕಾರಕಗಳಾಗಿರುವುದರಿಂದ ಈ ಎಂಟು ದಾನಗಳನ್ನು ಅವಶ್ಯಕವಾಗಿ ಮಾಡಬೇಕು.

೫೧-೫೨. ಈ ಪ್ರಕಾರವಾಗಿ ಹೇಳಿರುವ ದಾನಗಳು ಹೆಚ್ಚಾದ ಫಲಗಳನ್ನು ಕೊಡುವವು. ಈ ದಾನಗಳನ್ನು ಮಾಡುವುದರಿಂದ ಮನುಷ್ಯರು ವಿಮಾನದಿಂದ ಯಮನ ನಗರವನ್ನು ಹೊಂದುವರು. ಆದುದರಿಂದ ಸುಖಕರವಾದ ಈ ದಾನಗಳನ್ನು ಅವಶ್ಯಕವಾಗಿ ಮಾಡಬೇಕು. ಅನ್ನದಾನಮಾಡಿದ ಮಹಿಮೆಯನ್ನು ವಿಸ್ತರಿಸಿ ಹೇಳುವ ಉಪಖ್ಯಾನವನ್ನು ಓದುವವನೂ, ಓದಿಸುವವನೂ ಕೂಡ ಐಶ್ವರ್ಯವನ್ನು ಹೊಂದುವನು.

ಶೃಣುಯಾಚ್ಛ್ರಾವಯೇಚ್ಛ್ರಾದ್ಧೇ ಬ್ರಾಹಣಾನ್ವ್ಯೇಮಹಾಮುನೇ ।
ಅಕ್ಷಯ್ಯಮನ್ನದಾನಂ ಚ ಪಿತೄಣಾಮುಪತಿಷ್ಠತಿ ॥ ೫೩ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಅನ್ನದಾನಮಾಹಾತ್ಮ್ಯವರ್ಣನಂ ನಾಮೈಕಾದಶೋಽಧ್ಯಾಯಃ



---

೫೩. ಇತರರು ಕೇಳುವಂತೆ ಓದಿ ಹೇಳುವವನೂ, ಶ್ರಾದ್ಧಕಾಲದಲ್ಲಿ ಪಠನ ಮಾಡುವವನೂ ಕೂಡ ಅನ್ನದಾನಮಾಡಿದ ಫಲವನ್ನು ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಅನ್ನದಾನ ಮಹಿಮವರ್ಣನ
ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

# ದ್ವಾದಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

**ಪಾನೀಯದಾನಂ ಪರಮಂ ದಾನಾನಾಮುತ್ತಮಂ ಸದಾ ।**
**ಸರ್ವೇಷಾಂ ಜೀವಪುಂಜಾನಾಂ ತರ್ಪಣಂ ಜೀವನಂ ಸ್ಮೃತಂ ॥ ೧ ॥**

**ಪ್ರಪಾದಾನಮತಃ ಕುರ್ಯಾತ್ಸುಸ್ನೇಹಾದನಿವಾರಿತಂ ।**
**ಜಲಾಶ್ರಯವಿನಿರ್ಮಾಣಂ ಮಹಾನಂದಕರಂ ಭವೇತ್ ॥ ೨ ॥**

## ಹನ್ನೆರಡನೆಯ ಅಧ್ಯಾಯವು

೧-೨. ಸನತ್ಕುಮಾರನಿಂತೆಂದನು :—ಎಲ್ಲಾ ಪ್ರಾಣಿಗಳಿಗೂ ನೀರು ಬಹಳ ಸಂತೋಷವನ್ನುಂಟುಮಾಡುವುದು. ಆದುದರಿಂದ ಎಲ್ಲಾ ದಾನಗಳಿಗಿಂತಲೂ ಪಾನೀಯದಾನವು ಉತ್ತಮವಾದದ್ದು. ಆದ್ದರಿಂದ ಬಹಳ ಸಂತೋಷದಿಂದ ಯಾರಿಗೂ ತಡೆಯಿಲ್ಲದ, ಯಾರು ಬೇಕಾದರೂ ಬಂದು ಕುಡಿಯುವಹಾಗೆ ಅರವಟ್ಟಿಗೆಯನ್ನು ಇರಿಸಿ, ನೀರು ಮೊದಲಾದ (ಕುಡಿಯಲು ಯೋಗ್ಯವಾದ) ಪಾನೀಯಗಳನ್ನು ದಾನಮಾಡುವುದು ಅತ್ಯಂತ ಉಪಕಾರಕರವಾದ ಕೆಲಸವಾಗಿರುವುದು. ಕೆರೆ ಕೊಳ ಇವೇ ಮೊದಲಾದ ನೀರಿನ ಆಸರೆಯುಳ್ಳ ಸ್ಥಳಗಳನ್ನು ಸಿದ್ಧಪಡಿಸುವುದು, ಎಲ್ಲರಿಗೂ ಸಂತೋಷವನ್ನುಂಟುಮಾಡುವ ಕೆಲಸವಾಗಿರುತ್ತದೆ. ಇದರಿಂದ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವು ಉಂಟಾಗುವುದರಲ್ಲಿ ಯಾವ ವಿಧವಾದ ಸಂಶಯವೂ

ಇಹ ಲೋಕೇ ಪರೇ ವಾಪಿ ಸತ್ಯಂ ಸತ್ಯಂ ನ ಸಂಶಯಃ ।
ತಸ್ಮಾದ್ವಾಪೀಶ್ಚ ಕೂಪಾಶ್ಚ ತಡಾಗಾನ್ಕಾರಯೇನ್ನರಃ ॥ ೩ ॥

ಅರ್ಧಂ ಪಾಪಸ್ಯ ಹರತಿ ಪುರುಷಸ್ಯ ವಿಕರ್ಮಣಃ ।
ಕೂಪಃ ಪ್ರವೃತ್ತಪಾನೀಯಃ ಸಂಪ್ರವೃತ್ತಸ್ಯ ನಿತ್ಯಶಃ ॥ ೪ ॥

ಸರ್ವಂ ತಾರಯತೇ ವಂಶಂ ಯಸ್ಯ ಖಾತೇ ಜಲಾಶಯೇ ।
ಗಾವಃ ಪಿಬಂತಿ ವಿಪ್ರಾಶ್ಚ ಸಾಧವಶ್ಚ ನರಾಸ್ಸದಾ ॥ ೫ ॥

ನಿದಾಘಕಾಲೇ ಪಾನೀಯಂ ಯಸ್ಯ ತಿಷ್ಠತ್ಯವಾರಿತಂ ।
ಸುದುರ್ಗಂ ವಿಷಮಂ ಕೃಚ್ಛ್ರಂ ನ ಕದಾಚಿದವಾಪ್ಯತೇ ॥ ೬ ॥

ತಡಾಗಾನಾಂ ಚ ವಕ್ಷ್ಯಾಮಿ ಕೃತಾನಾಂ ಯೇ ಗುಣಾಃ ಸ್ಮೃತಾಃ ।
ತ್ರಿಷು ಲೋಕೇಷು ಸರ್ವತ್ರ ಪೂಜಿತೋ ಯಸ್ತಡಾಗವಾನ್ ॥ ೭ ॥

ಇರುವುದಿಲ್ಲ. ಆದುದರಿಂದ ಮನುಷ್ಯನು ಭಾವಿಗಳನ್ನೂ ಕೆರೆಗಳನ್ನೂ ಕೊಳಗಳನ್ನೂ ಮಾಡಿಸಬೇಕು.

೪-೬. ಭಾವಿಯನ್ನು ತೋಡಿಸಿ ಅದರ ನೀರನ್ನು ಎಲ್ಲರಿಗೂ ಪ್ರತಿದಿನವೂ ಉಪಯೋಗಿಸುವ ಹಾಗಿದ್ದಲ್ಲಿ ಆ ಭಾವಿಯನ್ನು ಅಗಿಸಿದವನ ಪಾಪದ ಅರ್ಧಭಾಗವು ಅವನು ಕೆಟ್ಟ ಕೆಲಸವನ್ನು ಮಾಡುವವನಾಗಿದ್ದಾಗ್ಯೂ ನಾಶವನ್ನು ಹೊಂದುವುದು. ಕೊಳವನ್ನು ತೋಡಿಸಿದವನ ವಂಶವು ಪಾಪರಹಿತವಾಗಿ ಪವಿತ್ರವಾಗುವುದು. ಹಸುಗಳೂ, ಬ್ರಾಹ್ಮಣರೂ, ಸತ್ಪುರುಷರೂ ಕೂಡ ಇದರ ನೀರನ್ನು ಉಪಯೋಗಿಸುವುದೇ ಇದಕ್ಕೆ ಕಾರಣವಾಗಿರುವುದು. ಬೇಸಿಗೆಯ ಕಾಲದಲ್ಲಿ ಈ ಕೊಳದ ನೀರನ್ನು ಕುಡಿಯಲು ಯಾರಿಗೂ ಅಡ್ಡಿಮಾಡಬಾರದು. ಹೀಗೆ ಜನಗಳಿಗೂ ಇತರ ಪ್ರಾಣಿಗಳಿಗೂ ಉಪಯೋಗವಾಗುವಂತೆ ಮಾಡಿದ ಕೊಳವನ್ನು ತೋಡಿಸಿದವನು ಸುಖದಿಂದ ಇರುವನು. ಅವನಿಗೆ ಕಷ್ಟಗಳೂ, ಸಂಕಟಗಳೂ ಬರುವುದಿಲ್ಲ.

೭-೯. ಕೆರೆಗಳನ್ನು ನಿರ್ಮಿಸಿದವರ ಗುಣಗಳನ್ನು ಹೇಳುವೆನು. ಕೆರೆಗಳನ್ನು ತೋಡಿಸಿದವನು ಮೂರು ಲೋಕಗಳಲ್ಲಿಯೂ ಮರ್ಯಾದೆಯನ್ನು ಹೊಂದುವನು.

**ಅಥವಾ ಮಿತ್ರಸದನೇ ಮೈತ್ರಂ ಮಿತ್ರಾರ್ತಿವರ್ಜಿತಂ ।**
**ಕೀರ್ತಿಸಂಜನನಂ ಶ್ರೇಷ್ಠಂ ತಡಾಗಾನಾಂ ನಿವೇಶನಂ ॥ ೮ ॥**

**ಧರ್ಮಸ್ಯಾರ್ಥಸ್ಯ ಕಾಮಸ್ಯ ಫಲಮಾಹುರ್ಮನೀಷಿಣಃ ।**
**ತಡಾಗಃ ಸುಕೃತೋ ಯೇನ ತಸ್ಯ ಪುಣ್ಯಮನಂತಕಂ ॥ ೯ ॥**

**ಚತುರ್ವಿಧಾನಾಂ ಭೂತಾನಾಂ ತಡಾಗಃ ಪರಮಾಶ್ರಯಃ ।**
**ತಡಾಗಾದೀನಿ ಸರ್ವಾಣಿ ದಿಶಂತಿ ಶ್ರಿಯಮುತ್ತಮಾಂ ॥ ೧೦ ॥**

**ದೇವಾ ಮನುಷ್ಯಾ ಗಂಧರ್ವಾಃ ಪಿತರೋ ನಾಗರಾಕ್ಷಸಾಃ ।**
**ಸ್ಥಾವರಾಣಿ ಚ ಭೂತಾನಿ ಸಂಶ್ರಯಂತಿ ಜಲಾಶಯಂ ॥ ೧೧ ॥**

**ಪ್ರಾವೃಡೃತೌ ತಡಾಗೇ ತು ಸಲಿಲಂ ಯಸ್ಯ ತಿಷ್ಠತಿ ।**
**ಅಗ್ನಿಹೋತ್ರಫಲಂ ತಸ್ಯ ಭವತೀತ್ಯಾಹ ಚಾತ್ಮಭೂಃ ॥ ೧೨ ॥**

ಹಾಗಿಲ್ಲದಿದ್ದರೆ ಮಿತ್ರನೆಂಬ ಸೂರ್ಯನ ದೆಸೆಯಿಂದ ಉಂಟಾಗುವ ಸಂಕಟದಿಂದ ಪಾರಾಗಿ ಸುಖವನ್ನು ಹೊಂದುವನು. ಆದುದರಿಂದ ಕೆರೆಯನ್ನು ಕಟ್ಟಿಸುವುದು ಉತ್ತಮವಾದ ಕೀರ್ತಿಯನ್ನುಂಟುಮಾಡುವುದಲ್ಲದೆ, ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ಪುರುಷಾರ್ಥಗಳಿಗೂ ಕಾರಣಭೂತವೆಂದು ಬುದ್ಧಿವಂತರು ಹೇಳುವರು. ಕೆರೆಯನ್ನು ಸರಿಯಾಗಿ ಮಾಡಿಸಿದವನ ಪುಣ್ಯವು ಅತಿಶಯವಾದುದು, ಏಕೆಂದರೆ,

೧೦-೧೧. ನಾಲ್ಕು ವಿಧವಾದ ಪ್ರಾಣಿಗಳಿಗೂ ಕೆರೆಯು ಆಶ್ರಯವಾಗಿರುವುದು. ಕೆರೆಯೇ ಮೊದಲಾದುವುಗಳು ಉತ್ತಮವಾದ ಐಶ್ವರ್ಯವನ್ನು ಉಂಟುಮಾಡುವವು. ದೇವತೆಗಳು, ಮನುಷ್ಯರು, ಗಂಧರ್ವರು, ಪಿತೃದೇವತೆಗಳು, ಹಾವುಗಳು, ರಾಕ್ಷಸರು, ಸ್ಥಿರವಾದ ಮರವೇ ಮುಂತಾದುವುಗಳೂ ಭೂತಗಳೂ ಕೂಡ ತಟಾಕವನ್ನು ಆಶ್ರಯಿಸಿಕೊಂಡು ಜೀವನಮಾಡುವುವು.

೧೨-೧೪. ವರ್ಷಋತುವಿನಲ್ಲಿ ಯಾವ ಕೊಳದಲ್ಲಿ ನೀರು ಇರುವುದೋ ಆ ಕೊಳವನ್ನು ಕಟ್ಟಿಸಿದವನಿಗೆ ಅಗ್ನಿಹೋತ್ರ ಮಾಡಿದ ಫಲವು ಉಂಟಾಗುವುದೆಂದು ಬ್ರಹ್ಮನು ಹೇಳಿರುವನು. ಶರತ್ಕಾಲದಲ್ಲಿ ನೀರಿನಿಂದ ತುಂಬಿರುವ ಕೊಳವನ್ನು ಕಟ್ಟಿಸಿದವನಿಗೆ ಸಾವಿರ ಗೋವುಗಳನ್ನು ದಾನಮಾಡಿದ ಫಲವು ಉಂಟಾಗುವುದರಲ್ಲಿ

ಶರತ್ಕಾಲೇ ತು ಸಲಿಲಂ ತಡಾಗೇ ಯಸ್ಯ ತಿಷ್ಠತಿ ।
ಗೋಸಹಸ್ರಫಲಂ ತಸ್ಯ ಭವೇನ್ನೈವಾತ್ರ ಸಂಶಯಃ ॥ ೧೩ ॥

ಹೇಮಂತೇ ಶಿಶಿರೇ ಚೈವ ಸಲಿಲಂ ಯಸ್ಯ ತಿಷ್ಠತಿ ।
ಸ ವೈ ಬಹುಸುವರ್ಣಸ್ಯ ಯಜ್ಞಸ್ಯ ಲಭತೇ ಫಲಂ ॥ ೧೪ ॥

ವಸಂತೇ ಚ ತಥಾ ಗ್ರೀಷ್ಮೇ ಸಲಿಲಂ ಯಸ್ಯ ತಿಷ್ಠತಿ ।
ಅತಿರಾತ್ರಾಶ್ವಮೇಧಾನಾಂ ಫಲಮಾಹುರ್ಮನೀಷಿಣಃ ॥ ೧೫ ॥

ಮುನೇ ವ್ಯಾಸಾಥ ವೃಕ್ಷಾಣಾಂ ರೋಪಣೇ ಚ ಗುಣಾಂಶ್ಶೃಣು ।
ಪ್ರೋಕ್ತಂ ಜಲಾಶಯಫಲಂ ಜೀವಪ್ರೀಣನಮುತ್ತಮಂ ॥ ೧೬ ॥

ಅತೀತಾನಾಗತಾನ್ಸರ್ವಾನ್ಪಿತೃವಂಶಾಂಸ್ತು ತಾರಯೇತ್ ।
ಕಾಂತಾರೇ ವೃಕ್ಷರೋಪೀ ಯಸ್ತಸ್ಮಾದ್ವೃಕ್ಷಾಂಸ್ತು ರೋಪಯೇತ್
॥ ೧೭ ॥

ಸಂಶಯವಿಲ್ಲ. ಹೇಮಂತಋತುವಿನಲ್ಲಿಯೂ ಶಿಶಿರಋತುವಿನಲ್ಲಿಯೂ ನೀರಿದ್ದರೆ ಆ ಕೊಳವನ್ನು ನಿರ್ಮಿಸಿದವನಿಗೆ ಬಹಳ ಸುವರ್ಣವನ್ನು ದಾನಮಾಡಿದ ಫಲವೂ, ಯಜ್ಞವನ್ನು ಮಾಡಿದ ಫಲವೂ ಉಂಟಾಗುವುದು.

೧೫-೧೬. ವಸಂತಋತುವಿನಲ್ಲಿಯೂ ಗ್ರೀಷ್ಮಋತುವಿನಲ್ಲಿಯೂ ನೀರು ಇರುವ ಕೊಳವನ್ನು ಕಟ್ಟಿಸಿದವನು ಅತಿರಾತ್ರ, ಅಶ್ವಮೇಧವೆಂಬ ಯಜ್ಞಗಳನ್ನು ಮಾಡಿದ ಫಲವನ್ನು ಹೊಂದುವನು ಎಂದು ಬುದ್ಧಿವಂತರು ಹೇಳುವರು.

೧೭-೧೮. ಎಲೈ ವ್ಯಾಸಋಷಿಯೇ ಕೇಳು, ಇನ್ನು ಮುಂದೆ ವೃಕ್ಷಗಳನ್ನೂ ಮರಗಳನ್ನೂ ಬೆಳೆಸುವುದರಿಂದುಂಟಾಗುವ ಫಲಗಳನ್ನು ಹೇಳುವೆನು. ಪ್ರಾಣಿಗಳು ಬದುಕುವುದಕ್ಕೆ ಉತ್ತಮವಾದ ಕೊಳ ಕೆರೆ ಇವುಗಳ ನಿರ್ಮಾಣ ಮಾಡಿದವರಿಗೆ ಉಂಟಾಗುವ ಫಲಗಳನ್ನು ಹೇಳಿರುವೆನು. ಅದರಂತೆಯೇ ಮರಗಳನ್ನು ಹುಟ್ಟಿಹಾಕಿ ಬೆಳೆಸುವವನು ತನ್ನ ವಂಶದಲ್ಲಿ ಹಿಂದೆ ಆಗಿಹೋದ ಮತ್ತು ಮುಂದೆ ಹುಟ್ಟುವ ಪಿತೃಗಳನ್ನು ಉದ್ಧರಿಸುವನು. ತನ್ನ ವಂಶವನ್ನೇ ಪವಿತ್ರವನ್ನಾಗಿ ಮಾಡುವನು. ಆ ವಂಶಗಳಲ್ಲಿ ಈ ವೃಕ್ಷಗಳೇ ಇವನಿಗೆ ಮಕ್ಕಳಾಗಿ ಹುಟ್ಟುವರು. ಅವನೂ ಕೂಡ

ತತ್ರ ಪುತ್ರಾ ಭವಂತ್ಯೇತೇ ಪಾದಪಾ ನಾತ್ರ ಸಂಶಯಃ ।
ಪರಂ ಲೋಕಂ ಗತಸ್ಸೋಽಪಿ ಲೋಕಾನಾಪ್ನೋತಿ ಚಾಕ್ಷಯಾನ್ ॥ ೧೮ ॥

ಪುಷ್ಪೈಸ್ಸುರಗಣಾನ್ಸರ್ವಾನ್ಫಲೈಶ್ಚಾಪಿ ತಥಾ ಪಿತೄನ್ ।
ಛಾಯಯಾ ಚಾತಿಥೀನ್ಸರ್ವಾನ್ಪೂಜಯಂತಿ ಮಹೀರುಹಾಃ ॥ ೧೯ ॥

ಕಿನ್ನರೋರಗರಕ್ಷಾಂಸಿ ದೇವಗಂಧರ್ವಮಾನವಾಃ ।
ತಥೈವರ್ಷಿಗಣಾಶ್ಚೈವ ಸಂಶ್ರಯಂತಿ ಮಹೀರುಹಾನ್ ॥ ೨೦ ॥

ಪುಷ್ಪಿತಾಃ ಫಲವಂತಶ್ಚ ತರ್ಪಯಂತೀಹ ಮಾನವಾನ್ ।
ಇಹ ಲೋಕೇ ಪರೇ ಚೈವ ಪುತ್ರಾಸ್ತೇ ಧರ್ಮತಃ ಸ್ಮೃತಾಃ ॥ ೨೧ ॥

ತಡಾಗಕೃದ್ವೃಕ್ಷರೋಪೀ ಚೇಷ್ಟಯಜ್ಞಶ್ಚ ಯೋ ದ್ವಿಜಃ ।
ಏತೇ ಸ್ವರ್ಗಾನ್ನ ಹೀಯಂತೇ ಯೇ ಚಾನ್ಯೇ ಸತ್ಯವಾದಿನಃ ॥ ೨೨ ॥

ಪರಲೋಕವನ್ನು ಹೊಂದುವಾಗ ನಾಶವಿಲ್ಲದಿರುವ ಉತ್ತಮವಾದ ಲೋಕಗಳನ್ನು ಹೊಂದುವನು.

೧೯-೨೦ ಮರಗಳು ಯಾವಾಗಲೂ ಹೂವುಗಳಿಂದ ದೇವತೆಗಳನ್ನೂ, ಹಣ್ಣುಗಳಿಂದ ಪಿತೃಗಳನ್ನೂ, ನೆರಳಿನಿಂದ ಅತಿಥಿಗಳೆಲ್ಲರನ್ನೂ, ಸಂತೋಷಪಡಿಸುವವು. ಕಿನ್ನರರು, ಸರ್ಪಗಳು, ರಾಕ್ಷಸರು ದೇವತೆಗಳು, ಗಂಧರ್ವರು, ಮನುಷ್ಯರು ಋಷಿಗಳೂ ಕೂಡ ಮರಗಳನ್ನು ಆಶ್ರಯಿಸಿಕೊಂಡೇ ಇರುವರು.

೨೧-೨೨. ಫಲಪುಷ್ಪಭರಿತಗಳಾದ ಮರಗಳು ಈ ಲೋಕದಲ್ಲಿ ಮನುಷ್ಯರನ್ನು ಸಂತೋಷಪಡಿಸುತ್ತವೆ. ಪರಲೋಕದಲ್ಲಿ ಧರ್ಮದಿಂದ ಕಾಪಾಡುವುದರಿಂದ ಅವುಗಳನ್ನು ಪುತ್ರರಿಗೆ ಸಮನೆಂದು ತಿಳಿದವರು ಹೇಳುವರು. ಕೆರೆಯನ್ನು ಕಟ್ಟಿಸಿದವರು, ತೋಪುಗಳನ್ನು ಹಾಕಿಸಿದವರು, ಯಜ್ಞಮಾಡುವುದರಲ್ಲಿ ಶ್ರದ್ಧೆಯುಳ್ಳವರು ಮತ್ತು ಯಾವಾಗಲೂ ಸತ್ಯವನ್ನೇ ನುಡಿಯುವವರೂ ಸಹ ಯಾವಾಗಲೂ ಸ್ವರ್ಗದಲ್ಲಿಯೇ ವಾಸಮಾಡುವರು. ಅವರಿಗೆ ಅಲ್ಲಿಂದ ಚ್ಯುತಿಯೇ ಇಲ್ಲ. "ಸತ್ಯಂ ಪರಂ ಪರಗ್ಂ ಸತ್ಯಂ ಸತ್ಯೇನ ನಸುವರ್ಗಾಲ್ಲೋಕಾಚ್ಚ್ಯವಂತೆ" ಎಂದು ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿರುವುದು.

ಸತ್ಯಮೇವ ಪರಂ ಬ್ರಹ್ಮ ಸತ್ಯಮೇವ ಪರಂ ತಪಃ ।
ಸತ್ಯಮೇವ ಪರೋ ಯಜ್ಞಸ್ಸತ್ಯಮೇವ ಪರಂ ಶ್ರುತಂ ॥ ೨೩ ॥

ಸತ್ಯಂ ಸುಪ್ತೇಷು ಜಾಗರ್ತಿ ಸತ್ಯಂ ಚ ಪರಮಂ ಪದಂ ।
ಸತ್ಯೇನೈವ ಧೃತಾ ಪೃಥ್ವೀ ಸತ್ಯೇ ಸರ್ವಂ ಪ್ರತಿಷ್ಠಿತಂ ॥ ೨೪ ॥

ತಪೋ ಯಜ್ಞಶ್ಚ ಪುಣ್ಯಂ ಚ ದೇವರ್ಷಿಪಿತೃಪೂಜನೇ ।
ಆಪೋ ವಿದ್ಯಾ ಚ ತೇ ಸರ್ವೇ ಸರ್ವಂ ಸತ್ಯೇ ಪ್ರತಿಷ್ಠಿತಂ ॥ ೨೫ ॥

ಸತ್ಯಂ ಯಜ್ಞಸ್ತಪೋ ದಾನಂ ಮಂತ್ರಾ ಸೇವೀ ಸರಸ್ವತೀ ।
ಬ್ರಹ್ಮಚರ್ಯಂ ತಥಾ ಸತ್ಯಮೋಂಕಾರಸ್ಸತ್ಯಮೇವ ಚ ॥ ೨೬ ॥

ಸತ್ಯೇನ ವಾಯುರಭ್ಯೇತಿ ಸತ್ಯೇನ ತಪತೇ ರವಿಃ ।
ಸತ್ಯೇನಾಗ್ನಿರ್ನಿರ್ದಹತಿ ಸ್ವರ್ಗಸ್ಸತ್ಯೇನ ತಿಷ್ಠತಿ ॥ ೨೭ ॥

ಪಾಲನಂ ಸರ್ವವೇದಾನಾಂ ಸರ್ವತೀರ್ಥಾವಗಾಹನಂ ।
ಸತ್ಯೇನ ವಹತೇ ಲೋಕೇ ಸರ್ವಮಾಪ್ನೋತ್ಯಸಂಶಯಂ ॥ ೨೮ ॥

---

೨೩-೨೬. ಸತ್ಯವೆಂಬುದು ಪರಬ್ರಹ್ಮನ ಸ್ವರೂಪವಾಗಿರುವುದು. ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂದು ಶೃತಿಯು ಸಾರುತ್ತಿರುವುದು. ಸತ್ಯವೇ ಉತ್ತಮವಾದ ತಪಸ್ಸು, ಸತ್ಯವೇ ಶ್ರೇಷ್ಠವಾದ ಯಜ್ಞವು, ಸತ್ಯಕ್ಕಿಂತ ಉತ್ತಮವಾದುದು ಮತ್ತೊಂದಿಲ್ಲ. ಸತ್ಯವು ನಿದ್ರಿಸುತ್ತಿರುವವರಲ್ಲಿ ಎಚ್ಚರದಿಂದಿರುವುದು. ಸತ್ಯವೇ ಪರಮಪದವು. ಈ ಭೂಮಿಯು ನಿಂತಿರುವುದೂ ಸತ್ಯದಿಂದಲೇ. ಸತ್ಯವನ್ನು ಬಿಟ್ಟು ಬೇರೊಂದಿಲ್ಲ. ಎಲ್ಲವೂ ಸತ್ಯದಲ್ಲಿಯೇ ಅಡಗಿರುವುದು. ತಪಸ್ಸು, ಯಜ್ಞ, ಪುಣ್ಯ, ದೇವರ್ಷಿ ಪಿತೃಪೂಜನ, ಸರ್ವಪ್ರಾಣಿಗಳಿಗೂ ಆಧಾರವಾದ ನೀರು, ವಿದ್ಯಾ ದಾನ, ಮಂತ್ರ, ಸರಸ್ವತೀ, ಬ್ರಹ್ಮಚರ್ಯ, ಹೆಚ್ಚೇನು? ಬ್ರಹ್ಮಸ್ವರೂಪವಾದ ಓಂಕಾರವೆಂಬ ಪ್ರಣವ ಇವೆಲ್ಲವೂ ಸತ್ಯದಲ್ಲಿಯೇ ಅಡಗಿರುವುವು.

೨೭-೨೮. ಸತ್ಯದಿಂದಲೇ ವಾಯುವು ಬೀಸುವುದು. ಸತ್ಯದಿಂದಲೇ ಸೂರ್ಯನು ಬೆಳಗುತ್ತಿರುವನು. ಸತ್ಯದಿಂದಲೇ ಅಗ್ನಿಯು ತನ್ನ ಕೆಲಸವನ್ನು ಮಾಡುವನು. ಸತ್ಯದಿಂದಲೇ ಸ್ವರ್ಗಲೋಕವೂ ನಿಂತಿರುವುದು. ಸತ್ಯದಿಂದಲೇ ಎಲ್ಲಾ ವೇದಗಳ ರಕ್ಷಣೆಯೂ ಎಲ್ಲಾ ತೀರ್ಥಗಳ ಪರಿಶುದ್ಧತೆಯೂ ಉಂಟಾಗಿರುವುದು. ಇದರಲ್ಲಿ ಸಂಶಯ

**ಅಶ್ವಮೇಧಸಹಸ್ರಂ ಚ ಸತ್ಯಂ ಚ ತುಲಯಾ ಧೃತಂ ।**
**ಲಕ್ಷಾಣಿ ಕ್ರತವಶ್ಚೈವ ಸತ್ಯಮೇವ ವಿಶಿಷ್ಯತೇ ॥ ೨೯ ॥**

**ಸತ್ಯೇನ ದೇವಾ ಇತರೋ ಮಾನವೋರಗರಾಕ್ಷಸಾಃ ।**
**ಪ್ರೀಯಂತೇ ಸತ್ಯತಸ್ಸರ್ವೇ ಲೋಕಾಶ್ಚ ಸಚರಾಚರಾಃ ॥ ೩೦ ॥**

**ಸತ್ಯಮಾಹುಃ ಪರಂ ಧರ್ಮಂ ಸತ್ಯಮಾಹುಃ ಪರಂ ಪದಂ ।**
**ಸತ್ಯಮಾಹುಃ ಪಂ ಬ್ರಹ್ಮ ತಸ್ಮಾತ್ಸತ್ಯಂ ಸದಾ ವದೇತ್ ॥ ೩೧ ॥**

**ಮುನಯಸ್ಸತ್ಯನಿರತಾಸ್ತಪಸ್ತಪ್ತ್ವಾ ಸುದುಶ್ಚರಂ ।**
**ಸತ್ಯಧರ್ಮರತಾಸ್ಸಿದ್ಧಾಸ್ತತಸ್ಸ್ವರ್ಗಂ ಚ ತೇ ಗತಾಃ ॥ ೩೨ ॥**

**ಅಪ್ಸರೋಗಣಸಂವಿಷ್ಟೈರ್ವಿಮಾನೈಃ ಪರಿಮಾತೃಭಿಃ ।**
**ವಕ್ತವ್ಯಂ ಚ ಸದಾ ಸತ್ಯಂ ನ ಸತ್ಯಾದ್ವಿದ್ಯತೇ ಪರಂ ॥ ೩೩ ॥**

ವಿಲ್ಲ. ಸಾವಿರ ಅಶ್ವಮೇಧಯಜ್ಞಗಳೂ ಸತ್ಯವೂ ಇವೆರಡೂ ಒಂದು ಸಮನಾಗಿರು ವವು. ಲಕ್ಷ ಯಜ್ಞಕ್ಕಿಂತಲೂ ಸತ್ಯದ ಉತ್ಕರ್ಷವೇ ಹೆಚ್ಚಾಗಿರುವುದು

೩೦-೩೨. ಪಿತೃಗಳೂ, ದೇವತೆಗಳೂ, ಮನುಷ್ಯರೂ, ಸರ್ಪಗಳೂ, ರಾಕ್ಷಸರೂ, ಸ್ಥಿರಚರಪ್ರಾಣಿಗಳೆಲ್ಲರೂ ಸತ್ಯದಿಂದ ಸಂತೋಷವನ್ನು ಹೊಂದುವರು. ಸತ್ಯವನ್ನು ಉತ್ತಮವಾದ ಧರ್ಮವನ್ನಾಗಿಯೂ ಉತ್ತಮವಾದ ಸ್ಥಾನವನ್ನಾಗಿಯೂ ಹೇಳುವರು. ಸತ್ಯವನ್ನು ಪರಬ್ರಹ್ಮನೆಂದೇ ಹೇಳುವವರಾದಕಾರಣ ಯಾವಾಗಲೂ ಸುಳ್ಳನ್ನು ಹೇಳದೇ ನಿಜವನ್ನು ಹೇಳಬೇಕು. ಋಷಿಗಳು ಸತ್ಯವನ್ನು ಹೇಳುವುದರಲ್ಲಿಯೇ ಆಸಕ್ತರಾಗಿ, ಅಸಾಧ್ಯವಾದ ತಪಸ್ಸನ್ನು ಮಾಡಿ ಸತ್ಯದಿಂದೊಡಗೂಡಿದ ಧರ್ಮಾಚರಣೆಯಿಂದ ಸಿದ್ಧರಾಗಿ ಸ್ವರ್ಗವನ್ನು ಹೊಂದಿರುವರು.

೩೩-೩೪. ಸತ್ಯವನ್ನೇ ನುಡಿಯುವ ಸಿದ್ಧರೂ, ಋಷಿಗಳೂ ಅಪ್ಸರಸ್ತ್ರೀಯರಿಂದ ಕೂಡಿರುವ ವಿಮಾನಗಳಲ್ಲಿ ಸಂಚರಿಸುತ್ತಾ ವಿಹರಿಸುವರು. ಸತ್ಯಕ್ಕಿಂತ ಶ್ರೇಷ್ಠವಾದ ವಸ್ತುವು ಮತ್ತೊಂದಿಲ್ಲ. ಅಗಾಧವಾಗಿಯೂ, ಆಳವಾಗಿಯೂ ಇರುವ ಸತ್ಯವೆಂಬ ಉತ್ತಮವಾದ ತೀರ್ಥದಲ್ಲಿ ಮನಃಪೂರ್ವಕವಾಗಿ ಸ್ನಾನಮಾಡಿದವನು

**ಅಗಾಧೇ ವಿಪುಲೇ ಸಿದ್ಧೇ ಸತ್ಯತೀರ್ಥೇ ಶುಚಿಹ್ರದೇ ।**
**ಸ್ನಾತವ್ಯಂ ಮನಸಾ ಯುಕ್ತಂ ಸ್ಥಾನಂ ತತ್ಪರಮಂ ಸ್ಮೃತಂ ॥ ೩೪ ॥**

**ಆತ್ಮಾರ್ಥೇ ವಾ ಪರಾರ್ಥೇ ವಾ ಪುತ್ರಾರ್ಥೇ ವಾಪಿ ಮಾನವಾಃ ।**
**ಅನೃತಂ ಯೇ ನ ಭಾಷಂತೇ ತೇ ನರಾಸ್ಸ್ವರ್ಗಗಾಮಿನಃ ॥ ೩೫ ॥**

**ವೇದಾ ಯಜ್ಞಾಸ್ತಥಾ ಮಂತ್ರಾಸ್ಸಂತಿ ವಿಪ್ರೇಷು ನಿತ್ಯಶಃ ।**
**ನೋ ಭಾಂತ್ಯಪಿ ಹ್ಯಸತ್ಯೇಷು ತಸ್ಮಾತ್ಸತ್ಯಂ ಸಮಾಚರೇತ್ ॥ ೩೬ ॥**

**॥ ವ್ಯಾಸ ಉವಾಚ ॥**

**ತಪಸೋ ಮೇ ಫಲಂ ಬ್ರೂಹಿ ಪುನರೇವ ವಿಶೇಷತಃ ।**
**ಸರ್ವೇಷಾಂ ಚೈವ ವರ್ಣಾನಾಂ ಬ್ರಾಹ್ಮಣಾನಾಂ ತಪೋಧನ ॥ ೩೭ ॥**

**॥ ಸನತ್ಕುಮಾರ ಉವಾಚ ॥**

**ಪ್ರವಕ್ಷ್ಯಾಮಿ ತಪೋಽಧ್ಯಾಯಂ ಸರ್ವಕಾಮಾರ್ಥಸಾಧಕಂ ।**
**ಸುದುಶ್ಚರಂ ದ್ವಿಜಾತೀನಾಂ ತನ್ಮೇ ನಿಗದತಃ ಶೃಣು ॥ ೩೮ ॥**

---

ಎಂದರೆ ಯಾವಾಗಲೂ ಸತ್ಯವನ್ನೇ ನುಡಿಯುವವನು ಉತ್ತಮವಾದ ಗತಿಯನ್ನು ಹೊಂದುವನು.

೩೫-೩೬. ಮನುಷ್ಯರಾದವರು ತಮ್ಮ ವಿಷಯಕ್ಕಾಗಲೀ ಮಕ್ಕಳ ವಿಷಯಕ್ಕಾಗಲೀ ಸುಳ್ಳನ್ನು ಹೇಳದೆ ಸತ್ಯವನ್ನೇ ನುಡಿಯುವವರು ಸ್ವರ್ಗವನ್ನು ಹೊಂದುವರು. ವೇದಗಳು, ಯಜ್ಞಗಳು, ಮಂತ್ರಗಳು ಇವುಗಳೆಲ್ಲವೂ ಬ್ರಾಹ್ಮಣನಲ್ಲಿ ನೆಲೆಸಿದ್ದರೂ ಆ ಪುರುಷನು ಸುಳ್ಳನ್ನು ಹೇಳುವವನಾದರೆ ಅವುಗಳೊಂದೂ ಪ್ರಕಾಶಿಸುವುದಿಲ್ಲ ಎಂದರೆ ಸುಳ್ಳಾಡುವ ಮನುಷ್ಯನು ವೇದಯಜ್ಞಮಂತ್ರಾದಿಗಳಲ್ಲಿ ನಿಷ್ಣಾತನಾಗಿದ್ದರೂ ಶೋಭಿಸುವುದಿಲ್ಲ. ಆದುದರಿಂದ ಯಾವಾಗಲೂ ಸತ್ಯವನ್ನೇ ನುಡಿಯುತ್ತಿರಬೇಕು.

೩೭. ವ್ಯಾಸನು ತಪಸ್ವಿಯಾದ ಸನತ್ಕುಮಾರನನ್ನು ಕುರಿತು :—ಓ ಮಹಾಪ್ರಾಜ್ಞನೇ, ಸತ್ಯದ ಮಹಿಮೆಯನ್ನು ಈಗ ನೀನು ಹೇಳಿದೆಯಷ್ಟೆ? ಈಗ ಬ್ರಾಹ್ಮಣನೇ ಮೊದಲಾದವರು ತಪಸ್ಸಿನಿಂದ ಪಡೆಯಬಹುದಾದ ಫಲವನ್ನೂ ತಪಸ್ಸಿನ ಮಹಿಮೆಯನ್ನೂ ದಯವಿಟ್ಟು ತಿಳಿಸು ಎನ್ನಲು,

೩೮-೪೧. ಸನತ್ಕುಮಾರನಿಂತೆಂದನು :—ಎಲೈ ವ್ಯಾಸನೇ ಕೇಳು, ತಪಸ್ಸಿನ ವಿಷಯವನ್ನು ಹೇಳುವೆನು. ಈ ತಪಸ್ಸಿನಿಂದ ಸಮಸ್ತ ಇಷ್ಟಾರ್ಥಗಳನ್ನೂ ಸಾಧಿಸ

**ತಪೋ ಹಿ ಪರಮಂ ಪ್ರೋಕ್ತಂ ತಪಸಾ ವಿದ್ಯತೇ ಫಲಂ ।**
**ತಪೋರತಾ ಹಿ ಯೇ ನಿತ್ಯಂ ಮೋದಂತೇ ಸಹ ದೈವತೈಃ ॥ ೩೯ ॥**

**ತಪಸಾ ಪ್ರಾಪ್ಯತೇ ಸ್ವರ್ಗಸ್ತಪಸಾ ಪ್ರಾಪ್ಯತೇ ಯಶಃ ।**
**ತಪಸಾ ಪ್ರಾಪ್ಯತೇ ಕಾಮಸ್ತಪಸ್ಸರ್ವಾರ್ಥಸಾಧನಂ ॥ ೪೦ ॥**

**ತಪಸಾ ಮೋಕ್ಷಮಾಪ್ನೋತಿ ತಪಸಾ ವಿಂದತೇ ಮಹತ್ ।**
**ಜ್ಞಾನವಿಜ್ಞಾನಸಂಪತ್ತಿಃ ಸೌಭಾಗ್ಯಂ ರೂಪಮೇವ ಚ ॥ ೪೧ ॥**

**ನಾನಾವಿಧಾನಿ ವಸ್ತೂನಿ ತಪಸಾ ಲಭತೇ ನರಃ ।**
**ತಪಸಾ ಲಭತೇ ಸರ್ವಂ ಮನಸಾ ಯದ್ಯದಿಚ್ಛತಿ ॥ ೪೨ ॥**

**ನಾತಪ್ತತಪಸೋ ಯಾಂತಿ ಬ್ರಹ್ಮಲೋಕಂ ಕದಾಚನ ।**
**ನಾತಪ್ತತಪಸಾಂ ಪ್ರಾಪ್ಯಶ್ಶಂಕರಃ ಪರಮೇಶ್ವರಃ ॥ ೪೩ ॥**

ಬಹುದು. ನಿಯಮಯುಕ್ತರಾದ ಬ್ರಾಹ್ಮಣರೂ ಸಹ ಈ ತಪಸ್ಸನ್ನು ಮಾಡಬೇಕಾದರೆ ತುಂಬಾ ಶ್ರಮಪಡಬೇಕಾಗುವುದು. ಆದರೆ ಅದರ ಫಲವು ಅತ್ಯಧಿಕವಾಗಿರುವುದು. ಅಂತಹ ತಪಸ್ಸಿನ ಮಹಿಮೆಯನ್ನು ಹೇಳುವೆನು ಕೇಳು, ತಪಸ್ಸೆಂಬುವುದು ಉತ್ತಮವಾದದ್ದು. ತಪಸ್ಸಿಗೆ ಶ್ರೇಷ್ಠವಾದ ಫಲವು ಇರುವುದು. ತಪಸ್ಸಿನಲ್ಲಿ ಆಸಕ್ತರಾದವರು ದೇವತೆಗಳೊಡನೆ ಯಾವಾಗಲೂ ಸಂತೋಷದಿಂದ ವಿಹರಿಸುವರು. ತಪಸ್ಸಿನಿಂದ ಸ್ವರ್ಗವೂ, ಕೀರ್ತಿಯೂ, ಕಾಮವೂ ಉಂಟಾಗುವುದರಿಂದ ತಪಸ್ಸು ಎಲ್ಲವನ್ನೂ ಉಂಟುಮಾಡಿಕೊಡುವುದು. ತಪಸ್ಸಿನಿಂದಲೇ ಮೋಕ್ಷವೂ ಉಂಟಾಗುವುದು. ತಪಸ್ಸು ಮರ್ಯಾದೆಗೆ ಆಶ್ರಯವಾದದ್ದು. ಜ್ಞಾನ, ವಿಜ್ಞಾನ ಇವುಗಳ ಅತಿಶಯವನ್ನೂ, ಐಶ್ವರ್ಯ, ಅದೃಷ್ಟ, ಸೌಂದರ್ಯಗಳನ್ನೂ ಅನೇಕವಿಧವಾದ ಇಷ್ಟಾರ್ಥಗಳನ್ನೂ ಮನುಷ್ಯನು ತಪಸ್ಸಿನಿಂದಲೇ ಹೊಂದುವನು.

೪೨-೪೩. ತಪಸ್ಸಿನಿಂದಲೇ ಮನುಷ್ಯನು ತನ್ನ ಇಚ್ಛೆಗಳೆಲ್ಲವನ್ನೂ ಸಾಧಿಸಿಕೊಳ್ಳುವನು. ತಪಸ್ಸನ್ನು ಮಾಡದೇ ಇರುವವನು ಬ್ರಹ್ಮಲೋಕವನ್ನು ಯಾವಾಗಲೂ ಹೊಂದಲಾರನು. ತಪಸ್ಸನ್ನು ಮಾಡದೇ ಇರುವವನಿಗೆ ಸುಖವನ್ನು ಕೊಡುವ ಪರಮೇಶ್ವರನೂ ಕೂಡ ಪ್ರತ್ಯಕ್ಷನಾಗುವುದಿಲ್ಲ.

ಯತ್ಕಾರ್ಯಂ ಕಿಂಚಿದಾಸ್ಥಾಯ ಪುರುಷಸ್ತಪತೇ ತಪಃ ।
ತತ್ಸರ್ವಂ ಸಮವಾಪ್ನೋತಿ ಪರತ್ರೇಹ ಚ ಮಾನವಃ ॥ ೪೪ ॥

ಸುರಾಪಃ ಪರದಾರೀ ಚ ಬ್ರಹ್ಮಹಾ ಗುರುತಲ್ಪಗಃ ।
ತಪಸಾ ತರತೇ ಸರ್ವಂ ಸರ್ವತಶ್ಚ ವಿಮುಂಚತಿ ॥ ೪೫ ॥

ಅಪಿ ಸರ್ವೇಶ್ವರಃ ಸ್ಥಾಣುರ್ವಿಷ್ಣುಶ್ಚೈವ ಸನಾತನಃ ।
ಬ್ರಹ್ಮಾ ಹುತಾಶನಃ ಶಕ್ರೋ ಯೇ ಚಾನ್ಯೇ ತಪಸಾನ್ವಿತಾಃ ॥ ೪೬ ॥

ಅಷ್ಟಾಶೀತಿಸಹಸ್ರಾಣಿ ಮುನೀನಾಮೂರ್ಧ್ವರೇತಸಾಂ ।
ತಪಸಾ ದಿವಿ ಮೋದಂತೇ ಸಮೇತಾ ದೈವತೈಸ್ಸಹ ॥ ೪೭ ॥

ತಪಸಾ ಲಭ್ಯತೇ ರಾಜ್ಯಂ ಸ ಚ ಶಕ್ರಸ್ಸುರೇಶ್ವರಃ ।
ತಪಸಾ್ಯಪಾಲಯತ್ಸರ್ವಮಹನ್ಯಹನಿ ವೃತ್ರಹಾ ॥ ೪೮ ॥

೪೪-೪೫. ಮನುಷ್ಯನು ಯಾವದಾದರೊಂದು ಕೆಲಸವನ್ನು ಉದ್ದೇಶಮಾಡಿಕೊಂಡು ತಪಸ್ಸನ್ನು ಮಾಡಿದರೆ ಆ ಉದ್ದೇಶವು ಇಲ್ಲಿಯಾಗಲೀ ಪರಲೋಕದಲ್ಲಿಯಾಗಲೀ ಸಿದ್ಧಿಯನ್ನು ಹೊಂದುವುದು. ಮದ್ಯಪಾನ, ಪರಸ್ತ್ರೀಗಮನ, ಬ್ರಹ್ಮಹತ್ಯೆ, ಗುರುಪತ್ನೀಸಂಗ ಮುಂತಾದ ಮಹಾಪಾಪಗಳನ್ನು ಮಾಡಿದ್ದರೂ ತಪಸ್ಸನ್ನು ಮಾಡಿ ಅದರಿಂದ ಅಂತಹ ಮಹಾಪಾಪಗಳನ್ನು ನಾಶಮಾಡಿಕೊಳ್ಳಬಹುದು.

೪೬-೪೭. ಸರ್ವೇಶ್ವರನಾದ ಶಿವ, ಸನಾತನನಾದ ವಿಷ್ಣು, ಚತುರ್ಮುಖ ಬ್ರಹ್ಮ, ಅಗ್ನಿ, ಇಂದ್ರ, ಮೊದಲಾದ ಎಂಭತ್ತೆಂಟುಸಾವಿರ ಜಿತೇಂದ್ರಿಯರಾದ ತಪಸ್ವಿಗಳು ಇವರೆಲ್ಲರೂ ತಾವು ಮಾಡಿದ ತಪಸ್ಸಿನ ಮಹಿಮೆಯಿಂದಲೇ ಸ್ವರ್ಗದಲ್ಲಿ ದೇವತೆಗಳೊಡನೆ ಸುಖದಿಂದಿರುವರು.

೪೮-೫೦. ದೇವತೆಗಳಿಗೆ ದೊರೆಯಾದ ಇಂದ್ರನು ತಪಸ್ಸಿನಿಂದಲೇ ದೇವಲೋಕದ ರಾಜ್ಯವನ್ನು ಅನುಭವಿಸುತ್ತಿರುವನು. ತಪಸ್ಸಿನ ಬಲದಿಂದಲೇ ವೃತ್ರಾಸುರನನ್ನು ಸಂಹಾರಮಾಡಿ ಪ್ರತಿದಿನವೂ ಎಲ್ಲವನ್ನೂ ರಕ್ಷಿಸುತ್ತಿರುವನು. ತಪೋಬಲ

ಸೂರ್ಯಾಚಂದ್ರಮಸೌ ದೇವೌ ಸರ್ವಲೋಕಹಿತೇ ರತೌ ।
ತಪಸೈವ ಪ್ರಕಾಶಂತೇ ನಕ್ಷತ್ರಾಣಿ ಗ್ರಹಾಸ್ತಥಾ ॥ ೪೯ ॥

ನ ಚಾಸ್ತಿ ತತ್ಸುಖಂ ಲೋಕೇ ಯದ್ವಿನಾ ತಪಸಾ ಕಿಲ ।
ತಪಸೈವ ಸುಖಂ ಸರ್ವಮಿತಿ ವೇದವಿದೋ ವಿದುಃ ॥ ೫೦ ॥

ಜ್ಞಾನಂ ವಿಜ್ಞಾನಮಾರೋಗ್ಯಂ ರೂಪವತ್ತ್ವಂ ತಥೈವ ಚ ।
ಸೌಭಾಗ್ಯಂ ಚೈವ ತಪಸಾ ಪ್ರಾಪ್ಯತೇ ಸರ್ವದಾ ಸುಖಂ ॥ ೫೧ ॥

ತಪಸಾ ಸೃಜ್ಯತೇ ವಿಶ್ವಂ ಬ್ರಹ್ಮಾ ವಿಶ್ವಂ ವಿನಾ ಶ್ರಮಂ ।
ಪಾತಿ ವಿಷ್ಣುರ್ಹರೋಽಪ್ಯೇತಿ ಧತ್ತೇ ಶೇಷೋಽಖಿಲಾಂ ಮಹೀಂ ॥ ೫೨ ॥

ವಿಶ್ವಾಮಿತ್ರೋ ಗಾಧಿಸುತಸ್ತಪಸೈವ ಮಹಾಮುನೇ ।
ಕ್ಷತ್ರಿಯೋಽಥಾಭವದ್ವಿಪ್ರಃ ಪ್ರಸಿದ್ಧಂ ತ್ರಿಭವೇ ತ್ವಿದಂ ॥ ೫೩ ॥

ದಿಂದಲೇ ಸೂರ್ಯನೂ ಮತ್ತು ಚಂದ್ರನೂ ಸಮಸ್ತ ಪ್ರಾಣಿಗಳ ಹಿತಕ್ಕಾಗಿಯೇ ಬೆಳಗುತ್ತಿರುವರು. ನಕ್ಷತ್ರಗಳೂ ಗ್ರಹಗಳೂ ಇವೆಲ್ಲವೂ ತಪಸ್ಸಿನಿಂದಲೇ ಪ್ರಕಾಶಿಸುತ್ತಿರುವುದು. ತಪಸ್ಸಿನ ಸಹಾಯವಿಲ್ಲದೇ ಲೋಕದಲ್ಲಿ ಯಾವ ವಿಧವಾದ ಸುಖವೂ ಇರುವುದಿಲ್ಲ. ಆದ್ದರಿಂದ ಎಲ್ಲಾ ವಿಧವಾದ ಸುಖವೂ ತಪಸ್ಸಿನಿಂದಲೇ ಉಂಟಾಗುವುದೆಂದು ವೇದಗಳನ್ನು ತಿಳಿದವರು ಹೇಳುವರು.

೫೧. ಜ್ಞಾನ, ವಿಜ್ಞಾನಗಳು, ಆರೋಗ್ಯ, ಸೌಂದರ್ಯ. ಐಶ್ವರ್ಯ ಎಲ್ಲವೂ ತಪಸ್ಸಿನಿಂದಲೇ ಉಂಟಾಗಿ ಯಾವಾಗಲೂ ಸುಖವನ್ನುಂಟುಮಾಡುವವು. ಬ್ರಹ್ಮನು ಅನಾಯಾಸದಿಂದಲೇ ತನ್ನ ತಪಸ್ಸಿನಿಂದ ಪ್ರಪಂಚವನ್ನು ಸೃಷ್ಟಿಮಾಡಿರುವನು.

೫೨. ವಿಷ್ಣುವು ತನ್ನ ತಪಸ್ಸಿನ ಬಲದಿಂದಲೇ ಅನಾಯಾಸವಾಗಿ ಪ್ರಪಂಚವನ್ನು ರಕ್ಷಿಸುತ್ತಿರುವನು. ತಪಸ್ಸಿನ ಬಲದಿಂದಲೇ ಶಿವನು ನಾಶಮಾಡುತ್ತಿರುವನು. ಆದಿಶೇಷನು ಪ್ರಪಂಚವೆಲ್ಲವನ್ನು ತಪಸ್ಸಿನ ಬಲದಿಂದಲೇ ಹೊತ್ತಿರುವನು.

೫೩-೫೪. ಎಲೈ ಮಹಾಋಷಿಯಾದ ವ್ಯಾಸನೇ ಕೇಳು, ಗಾಧಿರಾಜನ ಮಗನಾದ ವಿಶ್ವಾಮಿತ್ರನು ತನ್ನ ತಪಸ್ಸಿನಿಂದ ಬ್ರಾಹ್ಮಣನಾದನು. ಈ ವಿಷಯವು ಪ್ರಸಿದ್ಧವಾಗಿರುವುದು. ಎಲೈ ಬಹಳ ಜ್ಞಾನಿಯಾದ ವ್ಯಾಸಮುನಿಯೇ ಕೇಳು,

ಇತ್ಯುಕ್ತಂ ತೇ ಮಹಾಪ್ರಾಜ್ಞ ತಪೋಮಾಹಾತ್ಮ್ಯಮುತ್ತಮಂ ।
ಶೃಣ್ವಧ್ವಯನಮಾಹಾತ್ಮ್ಯಂ ತಪಸೋಽಧಿಕಮುತ್ತಮಂ ॥ ೫೪ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ತಪೋಮಾಹಾತ್ಮ್ಯವರ್ಣನಂ ನಾಮ ದ್ವಾದಶೋಽಧ್ಯಾಯಃ



ಉತ್ತಮವಾದ ತಪಸ್ಸಿನ ಮಹಿಮೆಯನ್ನು ನಾನು ಸಂಗ್ರಹವಾಗಿ ಹೇಳಿರುವೆನು. ಇನ್ನು ತಪಸ್ಸಿನ ಮಹಿಮೆಗಿಂತಲೂ ಹೆಚ್ಚಾದ ಮಹಿಮೆಯನ್ನೊಳಗೊಂಡಿರುವ ವೇದಾಧ್ಯಯನದ ಮಹಿಮೆಯನ್ನು ವರ್ಣಿಸುವೆನು ಕೇಳು, ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ತಪೋಮಾಹಾತ್ಮ್ಯ
ವರ್ಣನವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

# ತ್ರಯೋದಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ತಪಸ್ತಪತಿ ಯೋಽರಣ್ಯೇ ವನ್ಯಮೂಲಫಲಾಶನಃ ।
ಯೋಽಧೀತೇ ಋಚಮೇಕಾಂ ಹಿ ಫಲಂ ಸ್ಯಾತ್ತತ್ಸಮಂ ಮುನೇ ॥ ೧ ॥

ಶ್ರುತೇರಧ್ಯಯನಾತ್ಪುಣ್ಯಂ ಯದಾಪ್ನೋತಿ ದ್ವಿಜೋತ್ತಮಃ ।
ತದಧ್ಯಾಪನತಶ್ಚಾಪಿ ದ್ವಿಗುಣಂ ಫಲಮಶ್ನುತೇ ॥ ೨ ॥

ಜಗದ್ಯಥಾ ನಿರಾಲೋಕಂ ಜಾಯತೇಽಶಶಿಭಾಸ್ಕರಂ ।
ವಿನಾ ತಥಾ ಪುರಾಣಂ ಹ್ಯಧ್ಯೇಯಮಸ್ಮಾನ್ಮುನೇ ಸದಾ ॥ ೩ ॥

## ಹದಿಮೂರನೆಯ ಅಧ್ಯಾಯವು

೧-೨. ಸನತ್ಕುಮಾರನಿಂತೆಂದನು:—ಕಾಡಿನಲ್ಲಿ ಹುಟ್ಟಿ ಬೆಳೆದಿರುವ ಗೆಡ್ಡೆಗಳನ್ನೂ ಹಣ್ಣುಗಳನ್ನೂ ತಿಂದುಕೊಂಡು ತಪಸ್ಸನ್ನು ಮಾಡುವವನಿಗೆ ಬರುವ ಪುಣ್ಯವು ವೇದದ ಒಂದು ಋಕ್ಕನ್ನು ಅಧ್ಯಯನಮಾಡುವುದರಿಂದಲೇ ಬರುವುದು. ಇವರಿಬ್ಬರ ಪುಣ್ಯದ ಫಲವು ಒಂದೇ ಸಮನಾಗಿರುವುದು. ಬ್ರಾಹ್ಮಣನು ಎಲ್ಲರಿಗಿಂತಲೂ ಶ್ರೇಷ್ಠನಾಗಿ ವೇದವನ್ನು ಅಭ್ಯಾಸಮಾಡುವುದರಿಂದ ಉಂಟಾಗುವ ಪುಣ್ಯದ ಎರಡರಷ್ಟನ್ನು, ವೇದವನ್ನು ಇತರರಿಗೆ ಹೇಳಿಕೊಡುವುದರಿಂದ ಹೊಂದುವನು.

೩-೪ ಸೂರ್ಯ ಚಂದ್ರರಿಲ್ಲದೇ ಇದ್ದರೇ ಲೋಕವೆಲ್ಲವೂ ಬೆಳಕಿಲ್ಲದಿರುವಂತೆ ಪುರಾಣವಿಲ್ಲದೇ ಇದ್ದರೆ ವೇದವು ಪ್ರಕಾಶವನ್ನು ಹೊಂದುವುದಿಲ್ಲ. ಆದುದರಿಂದ

ತಸ್ಯಮಾನಂ ಸದಾಜ್ಞಾನಾನ್ನಿರಯೇ ಯೋಽಪಿ ಶಾಸ್ತ್ರತಃ ।
ಸಂಬೋಧಯತಿ ಲೋಕಂ ತಂ ತಸ್ಮಾತ್ಪೂಜ್ಯಃ ಪುರಾಣಗಃ ॥ ೪ ॥

ಸರ್ವೇಷಾಂ ಚೈವ ಪಾತ್ರಾಣಾಂ ಮಧ್ಯೇ ಶ್ರೇಷಃ ಪುರಾಣವಿತ್ ।
ಪತನಾತ್ತ್ರಾಯತೇ ಯಸ್ಮಾತ್ತಸ್ಮಾತ್ಪಾತ್ರಮುದಾಹೃತಂ ॥ ೫ ॥

ಮರ್ತ್ಯಬುದ್ಧಿರ್ನ ಕರ್ತವ್ಯಾ ಪುರಾಣಜ್ಞೇ ಕದಾಚನ ।
ಪುರಾಣಜ್ಞಸ್ಸರ್ವವೇತ್ತಾ ಬ್ರಹ್ಮಾ ವಿಷ್ಣುರ್ಹರೋ ಗುರುಃ ॥ ೬ ॥

ಧನಂ ಧಾನ್ಯಂ ಹಿರಣ್ಯಂ ಚ ವಾಸಾಂಸಿ ವಿವಿಧಾನಿ ಚ ।
ದೇಯಂ ಪುರಾಣವಿಜ್ಞಾಯ ಪರತ್ರೇಹ ಚ ಶರ್ಮಣೇ ॥ ೭ ॥

ಪುರಾಣವನ್ನು ಅತ್ಯವಶ್ಯಕವಾಗಿ ಅಭ್ಯಾಸಮಾಡಬೇಕು. ಎಲೈ ಋಷಿಯೇ, ಕೇಳು ನರಕದಲ್ಲಿ ಯಾವಾಗಲೂ ತಿಳಿವಳಿಕೆಯಿಲ್ಲದೇ ಸಂಕಟವನ್ನು ಅನುಭವಿಸುವವನಿಗೆ ಪುರಾಣಜ್ಞನು ಶಾಸ್ತ್ರಗಳನ್ನು ಹೇಳಿ ಜ್ಞಾನವನ್ನುಂಟುಮಾಡಿಕೊಡುವ ಕಾರಣ ಅಂತಹ ಪುರಾಣಜ್ಞನನ್ನು ಪೂಜಿಸಬೇಕು.

೫. ಸರಿಯಾದ ತಿಳುವಳಿಕೆಯಿಲ್ಲದೆ ಕೆಟ್ಟ ಮಾರ್ಗದಲ್ಲಿ ಬಿದ್ದಿರುವವನನ್ನು ರಕ್ಷಿಸುವವನು ಎಂದು ಪಾತ್ರಶಬ್ದಕ್ಕೆ ಅರ್ಥವು. ಆದುದರಿಂದ ಶಾಸ್ತ್ರಜ್ಞರಿಗೆ ಪಾತ್ರರೆಂದು ಹೇಳಬಹುದು. ಈ ಪ್ರಕಾರದಿಂದ ಇರುವ ಪಾತ್ರಗಳ ಮಧ್ಯದಲ್ಲಿ ಪುರಾಣಗಳನ್ನು ತಿಳಿದವನು ಉತ್ತಮನಾದ ಪಾತ್ರವೆನಿಸಿಕೊಳ್ಳುವನು.

೬-೭. ಪುರಾಣಗಳನ್ನೂ ಅವುಗಳ ಅರ್ಥವನ್ನೂ ತಿಳಿದವನ ವಿಷಯದಲ್ಲಿ ಅವನನ್ನು ಮನುಷ್ಯಮಾತ್ರನೆಂದು ಭಾವಿಸಬಾರದು. ಪುರಾಣಗಳನ್ನು ತಿಳಿದವನು ಯಾವಾಗಲೂ ಬ್ರಹ್ಮ ವಿಷ್ಣು ಶಿವ ಎಂಬ ತ್ರಿಮೂರ್ತಿಗಳ ರೂಪದಿಂದ ಇರುವನು ಮತ್ತು ಅವನು ಎಲ್ಲವನ್ನೂ ತಿಳಿದವನಾದುದರಿಂದ ಗುರುವಿನ ರೂಪದಿಂದಲೂ ಇರುವನು. ಪುರಾಣವನ್ನು ತಿಳಿದವನಿಗೆ ಧನ, ಧಾನ್ಯ, ಚಿನ್ನ, ಬಟ್ಟೆಗಳು ಇನ್ನೂ ಅನೇಕ ವಿಧವಾದ ಪದಾರ್ಥಗಳು ಇವುಗಳನ್ನೆಲ್ಲಾ ದಾನಮಾಡಬೇಕು. ಹಾಗೆ ದಾನಮಾಡುವುದರಿಂದ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖವುಂಟಾಗುವುದು.

ಯೋ ದದಾತಿ ಮಹಾಪ್ರೀತ್ಯಾ ಪುರಾಣಜ್ಞಾಯ ಸಜ್ಜನಃ ।
ಪಾತ್ರಾಯ ಶುಭವಸ್ತೂನಿ ಸ ಯಾತಿ ಪರಮಾಂ ಗತಿಂ ॥ ೮ ॥

ಮಹೀಂ ಗಾಂ ಸ್ಯಂದನಾಂಶ್ಚ ಗಜಾನಶ್ವಾಂಶ್ಚ ಶೋಭನಾನ್
ಯಃ ಪ್ರಯಚ್ಛತಿ ಪಾತ್ರಾಯ ತಸ್ಯ ಪುಣ್ಯಫಲಂ ಶೃಣು ॥ ೯ ॥

ಅಕ್ಷಯಾನ್ಸರ್ವಕಾಮಾಂಶ್ಚ ಪರತ್ರೇಹ ಚ ಜನ್ಮನಿ ।
ಅಶ್ವಮೇಧಫಲಂ ಚಾಪಿ ಸ ಫಲಂ ಲಭತೇ ಪುಮಾನ್ ॥ ೧೦ ॥

ಮಹೀಂ ದದಾತಿ ಯಸ್ತಸ್ಮೈ ಕೃಷ್ಟಾಂ ಫಲವತೀಂ ಶುಭಾಂ ।
ಸ ತಾರಯತಿ ವೈ ವಂಶ್ಯಾನ್ದಶ ಪೂರ್ವಾನ್ದಶಾಪರಾನ್ ॥ ೧೧ ॥

ಇಹ ಭುಕ್ತ್ವಾಖಿಲಾನ್ಕಾಮಾನಂತೇ ದಿವ್ಯಶರೀರವಾನ್ ।
ವಿಮಾನೇನ ಚ ದಿವ್ಯೇನ ಶಿವಲೋಕಂ ಸ ಗಚ್ಛತಿ ॥ ೧೨ ॥

೮. ಸತ್ಪುರುಷನಾದವನು ಪುರಾಣಜ್ಞನಿಗೆ ಪ್ರೀತಿಯಿಂದ ದಾನಾದಿಗಳನ್ನು ಕೊಟ್ಟಲ್ಲಿ, ಉತ್ತಮವಾದ ಗತಿಯನ್ನು ಹೊಂದುವನು.

೯-೧೦. ಭೂಮಿ, ಹಸುಗಳು, ರಥಗಳು, ಆನೆ, ಕುದುರೆ ಉತ್ತಮವಾದ ಇತರ ವಸ್ತುಗಳು ಇವುಗಳಲ್ಲಿ ಯಾವದನ್ನಾದರೂ ಸರಿಯಾದ ಪಾತ್ರನಲ್ಲಿ ದಾನಮಾಡುವವನ ಪುಣ್ಯಫಲವನ್ನು ಹೇಳುವೆನು ಕೇಳು. ಈ ಲೋಕದಲ್ಲಿ ತನ್ನ ಇಷ್ಟಾರ್ಥಗಳೆಲ್ಲವನ್ನೂ ಅನಂತವಾಗಿ ಅನುಭವಿಸಿ, ಪರಲೋಕದಲ್ಲಿ ಅಶ್ವಮೇಧಯಜ್ಞದ ಫಲವನ್ನು ಹೊಂದುವನು.

೧೧-೧೨. ಚೆನ್ನಾಗಿ ಉತ್ತು ಬೆಳೆಯನ್ನು ಬೆಳೆದಿರುವ ಭೂಮಿಯನ್ನು ದಾನ ಮಾಡಿದವನ ವಂಶದವರು ಹಿಂದೆ ಹತ್ತು ತಲೆಯವರಿಗೂ ಮುಂದೆ ಹತ್ತು ತಲೆಯವರಿವಿಗೂ ಪರಿಶುದ್ಧರಾಗಿ ಸದ್ಗತಿಯನ್ನು ಪಡೆಯುವರು. ಮತ್ತು ಅವನು ಈ ಲೋಕದಲ್ಲಿ ಬೇಕುಬೇಕಾದ ಭೋಗಗಳನ್ನು ಅನುಭವಿಸಿ ಕೊನೆಗೆ ದಿವ್ಯಶರೀರಯುಕ್ತನಾಗಿ ಉತ್ತಮವಾದ ವಿಮಾನದಲ್ಲಿ ಕುಳಿತು ಶಿವಲೋಕಕ್ಕೆ ಹೋಗುವನು.

ನ ಯಜ್ಞೈಸ್ತುಷ್ಟಿಮಾಯಾಂತಿ ದೇವಾಃ ಪ್ರೋಕ್ಷಣಕೈರಪಿ ।
ಬಲಿಭಿಃ ಪುಷ್ಪಪೂಜಾಭಿರ್ಯಥಾ ಪುಸ್ತಕವಾಚನೈಃ ॥ ೧೩ ॥

ಶಂಭೋರಾಯತನೇ ಯಸ್ತು ಕಾರಯೇದ್ಧರ್ಮಪುಸ್ತಕಂ ।
ವಿಷ್ಣೋರರ್ಕಸ್ಯ ಕಸ್ಯಾಪಿ ಶೃಣು ತಸ್ಯಾಪಿ ತತ್ಫಲಂ ॥ ೧೪ ॥

ರಾಜಸೂಯಾಶ್ವಮೇಧಾನಾಂ ಫಲಮಾಪ್ನೋತಿ ಮಾನವಃ ।
ಸೂರ್ಯಲೋಕಂ ಚ ಭಿತ್ವಾಶು ಬ್ರಹ್ಮಲೋಕಂ ಸ ಗಚ್ಛತಿ ॥ ೧೫ ॥

ಸ್ಥಿತ್ವಾ ಕಲ್ಪಶತಾನ್ಯತ್ರ ರಾಜಾ ಭವತಿ ಭೂತಲೇ ।
ಭುಂಕ್ತೇ ನಿಷ್ಕಂಟಕಂ ಭೋಗಾನ್ನಾತ್ರ ಕಾರ್ಯಾ ವಿಚಾರಣಾ ॥ ೧೬ ॥

ಅಶ್ವಮೇಧಸಹಸ್ರಸ್ಯ ಯತ್ಫಲಂ ಸಮುದಾಹೃತಂ ।
ತತ್ಫಲಂ ಸಮವಾಪ್ನೋತಿ ದೇವಾಗ್ರೇ ಯೋ ಜಪಂ ಚರೇತ್ ॥ ೧೭ ॥

---

೧೩. ದೇವತೆಗಳಿಗೆ ಪುಸ್ತಕ (ಪುರಾಣ) ವಾಚನದಿಂದ ಆಗುವಷ್ಟು ಸಂತೋಷವು ಯಜ್ಞಗಳಿಂದಲೂ, ಪ್ರೋಕ್ಷಣೆಗಳಿಂದಲೂ, ಬಲಿಯನ್ನು ಕೊಡುವುದರಿಂದಲೂ, ಪುಷ್ಪಗಳಿಂದ ಪೂಜೆಯನ್ನು ಮಾಡುವುದರಿಂದಲೂ ಆಗುವುದಿಲ್ಲ.

೧೪-೧೬. ಶಿವ, ವಿಷ್ಣು, ಸೂರ್ಯ ಅಥವಾ ಇತರ ದೇವತೆಗಳ ದೇವಸ್ಥಾನಗಳಲ್ಲಿ ಧರ್ಮಕ್ಕಾಗಿ ಪುರಾಣಗಳ ಪುಸ್ತಕಗಳನ್ನು ಸಿದ್ಧಪಡಿಸಿಡುವವನು ಹೊಂದುವ ಪುಣ್ಯದ ಫಲವನ್ನು ಹೇಳುವೆನು ಕೇಳು. ಅವನು ರಾಜಸೂಯ, ಅಶ್ವಮೇಧ ಎಂಬ ಯಜ್ಞಗಳ ಫಲವನ್ನು ಹೊಂದಿ ಸೂರ್ಯದೇವನ ಲೋಕವನ್ನು ಭೇದಿಸಿಕೊಂಡು ಬ್ರಹ್ಮಲೋಕವನ್ನು ಹೊಂದುವನು. ಅಲ್ಲಿ ಒಂದುನೂರು ಕಲ್ಪಗಳವರಿವಿಗೂ ಸುಖದಿಂದ ಇದ್ದು ನಂತರ ಭೂಮಿಯಲ್ಲಿ ರಾಜನಾಗಿ, ಹುಟ್ಟಿ ಯಾವ ವಿಧವಾದ ತೊಂದರೆಯೂ ಇಲ್ಲದೆ ಬೇಕಾದ ಸುಖಗಳನ್ನು ಅನುಭವಿಸುವನು. ಈ ವಿಷಯದಲ್ಲಿ ಕೊಂಚವೂ ಸಂಶಯವಿಲ್ಲ.

೧೭-೧೯. ದೇವಸ್ಥಾನದಲ್ಲಿ ದೇವರ ಎದುರಿಗೆ ಜಪವನ್ನು ಮಾಡುವವನು ಒಂದು ಸಾವಿರ ಅಶ್ವಮೇಧ ಯಜ್ಞಗಳ ಫಲವನ್ನು ಹೊಂದುವನು. ಶಿವನ ಮಂಗಳಕರವಾದ ದೇವಸ್ಥಾನದಲ್ಲಿಯೂ, ಇತರ ದೇವಸ್ಥಾನಗಳಲ್ಲಿಯೂ ಇತಿಹಾಸ ಪುರಾಣ

ಇತಿಹಾಸಪುರಾಣಾಭ್ಯಾಂ ಶಂಭೋರಾಯತನೇ ಶುಭೇ ।
ನಾನ್ಯತ್ಪ್ರೀತಿಕರಂ ಶಂಭೋಸ್ತಥಾನ್ಯೇಷಾಂ ದಿವೌಕಸಾಂ ॥ ೧೮ ॥

ತಸ್ಮಾತ್ಸರ್ವಪ್ರಯತ್ನೇನ ಕಾರ್ಯಂ ಪುಸ್ತಕವಾಚನಂ ।
ತಥಾಸ್ಯ ಶ್ರವಣಂ ಪ್ರೇಮ್ಣಾ ಸರ್ವಕಾಮಫಲಪ್ರದಂ ॥ ೧೯ ॥

ಪುರಾಣಶ್ರವಣಾಚ್ಛಂಭೋರ್ನಿಷ್ಪಾಪೋ ಜಾಯತೇ ನರಃ ।
ಭುಕ್ತ್ವಾ ಭೋಗಾನ್ಸುವಿಪುಲಾಂಚ್ಛಿವಲೋಕಮವಾಪ್ನುಯಾತ್ ॥ ೨೦ ॥

ರಾಜಸೂಯೇನ ಯತ್ಪುಣ್ಯಮಗ್ನಿಷ್ಟೋಮಶತೇನ ಚ ।
ಯತ್ಪುಣ್ಯಂ ಲಭತೇ ಶಂಭೋಃ ಕಥಾಶ್ರವಣಮಾತ್ರತಃ ॥ ೨೧ ॥

ಸರ್ವತೀರ್ಥವಗಾಹೇನ ಗವಾಂ ಕೋಟಿಪ್ರದಾನತಃ ।
ತತ್ಫಲಂ ಲಭತೇ ಶಂಭೋಃ ಕಥಾಶ್ರವಣತೋ ಮುನೇ ॥ ೨೨ ॥

ಗಳನ್ನು ಶೇಖರಿಸಿಡುವುದರಿಂದ ಶಂಭುವೇ ಮೊದಲಾದ ದೇವತೆಗಳಿಗೆ ಆಗುವಷ್ಟು ಪ್ರೀತಿಯು ಮತ್ತಾವಕಾರ್ಯದಿಂದಲೂ ಆಗುವುದಿಲ್ಲ. ಆದುದರಿಂದ ವಿಶೇಷ ಪ್ರಯತ್ನಪಟ್ಟಾದರೂ ಪುರಾಣಾದಿ ಸದ್ಗ್ರಂಥಗಳ ವಾಚನಶ್ರವಣಾದಿಗಳನ್ನು ಮಾಡ ಬೇಕು. ಅದರಿಂದ ಸಮಸ್ತ ಇಷ್ಟಾರ್ಥಗಳೂ ಕೈಗೂಡುವವು.

೨೦-೨೧. ಶಿವಕಥಾಶ್ರವಣದಿಂದ ಮನುಷ್ಯನು ಯಾವ ವಿಧವಾದ ಪಾಪ ಗಳೂ ಇಲ್ಲದವನಾಗುತ್ತಾನೆ. ಬಹಳ ಭೋಗಗಳನ್ನು ಅನುಭವಿಸಿ ಶಿವಲೋಕವನ್ನು ಹೊಂದುವನು. ನೂರು ರಾಜಸೂಯಯಾಗಗಳಿಂದಲೂ ನೂರು ಅಗ್ನಿಷ್ಟೋಮ ಗಳಿಂದಲೂ ಉಂಟಾಗುವ ಪುಣ್ಯವು ಶಿವಕಥಾಶ್ರವಣಮಾತ್ರದಿಂದಲೇ ಉಂಟಾಗು ವುದು.

೨೨-೨೩. ಎಲೈ ಋಷಿಯೇ ಕೇಳು, ಎಲ್ಲಾ ತೀರ್ಥಗಳಲ್ಲಿ ಸ್ನಾನಮಾಡು ವುದರಿಂದ ಲಭಿಸುವ ಪುಣ್ಯವೂ, ಕೋಟಿ ಗೋದಾನಗಳಿಂದ ದೊರಕುವ ಪುಣ್ಯವೂ ಶಿವಕಥಾಶ್ರವಣಮಾತ್ರದಿಂದಲೇ ಉಂಟಾಗುವುದು. ಜಗತ್ತಿನಲ್ಲಿ ಶಿವನ ಪವಿತ್ರಕರ

ಯೇ ಶೃಣ್ವಂತಿ ಕಥಾಂ ಶಂಭೋಸ್ಸದಾ ಭುವನಪಾವನೀಂ ।
ತೇ ಮನುಷ್ಯಾ ನ ಮಂತವ್ಯಾ ರುದ್ರಾ ಏವ ನ ಸಂಶಯಃ ॥ ೨೩ ॥

ಶೃಣ್ವತಾಂ ಶಿವಸತ್ಕೀರ್ತಿಂ ಸತಾಂ ಕೀರ್ತಯತಾಂ ಚ ತಾಂ ।
ಪದಾಂಬುಜರಜಾಂಸ್ಯೇವ ತೀರ್ಥಾನಿ ಮುನಯೋ ವಿದುಃ ॥ ೨೪ ॥

ಗಂತುಂ ನಿಃಶ್ರೇಯಸಂ ಸ್ಥಾನಂ ಯೇಽಭಿವಾಂಛಂತಿ ದೇಹಿನಃ ।
ಕಥಾಂ ಪೌರಾಣಿಕೀಂ ಶೈವೀಂ ಭಕ್ತ್ಯಾ ಶೃಣ್ವಂತು ತೇ ಸದಾ ॥ ೨೫ ॥

ಕಥಾ ಪೌರಾಣಿಕೀಂ ಶ್ರೋತುಂ ಯದ್ಯಶಕ್ತಸ್ಸದಾ ಭವೇತ್ ।
ನಿಯತಾತ್ಮಾ ಪ್ರತಿದಿನಂ ಶೃಣುಯಾದ್ವಾ ಮುಹೂರ್ತಕಂ ॥ ೨೬ ॥

ಯದಿ ಪ್ರತಿದಿನಂ ಶ್ರೋತುಮಶಕ್ತೋ ಮಾನವೋ ಭವೇತ್ ।
ಪುಣ್ಯಮಾಸಾದಿಷು ಮುನೇ ಶೃಣುಯಾಚ್ಛಾಂಕರೀಂ ಕಥಾಂ ॥ ೨೭ ॥

ಶೈವೀಂ ಕಥಾಂ ಹಿ ಶೃಣ್ವಾನಃ ಪುರುಷೋ ಹಿ ಮುನೀಶ್ವರ ।
ಸ ನಿಸ್ತರತಿ ಸಂಸಾರಂ ದಗ್ಧ್ವಾ ಕರ್ಮಮಹಾಟವೀಂ ॥ ೨೮ ॥

ವಾದ ಕಥೆಗಳನ್ನು ಯಾವಾಗಲೂ ಕೇಳುವವರು ಸಾಕ್ಷಾದ್ರುದ್ರಸ್ವರೂಪರೇ ಎಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ.

೨೪–೨೬. ಶಿವನ ಉತ್ತಮವಾದ ಕೀರ್ತಿಯನ್ನು ಕೊಂಡಾಡುತ್ತಿರುವ ಸತ್ಪುರುಷರ ಪಾದಕಮಲಗಳ ರೇಣುಗಳೇ ಪರಮ ಪಾವನಗಳಾದ ತೀರ್ಥಗಳೆಂದು ಋಷಿಗಳು ಹೇಳುವರು. ಪರಮಪದವಾದ ಮೋಕ್ಷವನ್ನು ಅಪೇಕ್ಷಿಸುವವರು ಯಾವಾಗಲೂ ಭಕ್ತಿಯಿಂದ ಶಿವಕಥಾಶ್ರವಣವನ್ನು ಮಾಡುತ್ತಿರಬೇಕು. ಶಿವಪುರಾಣದ ಕಥೆಯನ್ನು ಯಾವಾಗಲೂ ಕೇಳುವುದಕ್ಕೆ ಆಗದಿದ್ದಲ್ಲಿ ನಿಯಮದಿಂದ ಒಂದು ಮುಹೂರ್ತವಾದರೂ ಪ್ರತಿದಿನದಲ್ಲಿಯೂ ಶಿವನ ಕಥೆಯನ್ನು ಕೇಳಬೇಕು.

೨೭-೨೯. ಶಿವನ ಉತ್ತಮವಾದ ಕಥೆಯನ್ನು ಕೇಳುವುದಕ್ಕೆ ಪ್ರತಿದಿನವೂ ಆಗದಿದ್ದರೆ ಪುಣ್ಯಕರವಾದ ಕೆಲವು ಮಾಸಗಳಲ್ಲಿಯಾದರೂ ಕೇಳುವುದು ಒಳ್ಳೆಯದು. ಶಿವನ ಕಥೆಯನ್ನು ಕೇಳುವವನು ಕರ್ಮಗಳ ದೊಡ್ಡ ಕಾಡಿನಂತಿರುವ ಸಂಸಾರವನ್ನು ದಾಟುವನು. ಶಿವನ ಕಥೆಯನ್ನು ಒಂದು ಮುಹೂರ್ತವಾಗಲೀ ಅದರ ಅರ್ಧ

**ಕಥಾಂ ಶೈವೀಂ ಮುಹೂರ್ತಂ ವಾ ತದರ್ಧಂ ವಾ ಕ್ಷಣಂ ಚ ವಾ ।**
**ಯೇ ಶೃಣ್ವಂತಿ ನರಾ ಭಕ್ತ್ಯಾ ನ ತೇಷಾಂ ದುರ್ಗತಿರ್ಭವೇತ್ ॥ ೨೯ ॥**

**ಯತ್ಪುಣ್ಯಂ ಸರ್ವದಾನೇಷು ಸರ್ವಯಜ್ಞೇಷು ವಾ ಮುನೇ ।**
**ಶಂಭೋಃ ಪುರಾಣಶ್ರವಣಾತ್ತತ್ಫಲಂ ನಿಶ್ಚಲಂ ಭವೇತ್ ॥ ೩೦ ॥**

**ವಿಶೇಷತಃ ಕಲೌ ವ್ಯಾಸ ಪುರಾಣಶ್ರವಣಾದೃತೇ ।**
**ಪರೋ ಧರ್ಮೋ ನ ಪುಂಸಾಂ ಹಿ ಮುಕ್ತಿಧ್ಯಾನಪರಃ ಸ್ಮೃತಃ ॥ ೩೧ ॥**

**ಪುರಾಣಶ್ರವಣಂ ಶಂಭೋರ್ನಾಮಸಂಕೀರ್ತನಂ ತಥಾ ।**
**ಕಲ್ಪದ್ರುಮಫಲಂ ರಮ್ಯೋ ಮನುಷ್ಯಾಣಾಂ ನ ಸಂಶಯಃ ॥ ೩೨ ॥**

**ಕಲೌ ದುರ್ಮೇಧಸಾಂ ಪುಂಸಾಂ ಧರ್ಮಾಚಾರೋಜ್ಝಿತಾತ್ಮನಾಂ ।**
**ಹಿತಾಯ ವಿಧದೇ ಶಂಭುಃ ಪುರಾಣಾಖ್ಯಸುಧಾರಸಂ ॥ ೩೩ ॥**

ಮುಹೂರ್ತವಾಗಲಿ ಒಂದು ಕ್ಷಣಕಾಲವೇ ಆಗಲಿ ಭಕ್ತಿಯಿಂದ ಕೇಳುವವನು ಯಾವ ವಿಧವಾದ ದುರ್ಗತಿಯನ್ನೂ ಹೊಂದುವುದಿಲ್ಲ.

೩೦-೩೧. ಪ್ರಪಂಚದಲ್ಲಿರುವ ಸಮಸ್ತ ವಸ್ತುಗಳನ್ನೂ ದಾನಮಾಡುವುದರಿಂದ ಬರುವ ಪುಣ್ಯವೂ, ಎಲ್ಲಾ ಯಜ್ಞಗಳನ್ನೂ ಮಾಡುವುದರಿಂದ ಉಂಟಾಗುವ ಪುಣ್ಯವೂ, ಶಿವಕಥೆಯನ್ನು ಭಕ್ತಿಯಿಂದಲೂ, ಏಕಾಗ್ರಮನಸ್ಸಿನಿಂದಲೂ ಕೇಳುವವನಿಗೆ ಉಂಟಾಗುವುದು. ಎಲೈ ವ್ಯಾಸಮುನಿಯೇ, ಕೇಳು. ಕಲಿಯುಗದಲ್ಲಿ ಪುರಾಣವನ್ನು ಕೇಳುವುದಕ್ಕಿಂತಲೂ ಉತ್ತಮವಾದ ಬೇರೊಂದು ಧರ್ಮವಿಲ್ಲ. ಅದು ಮುಕ್ತಿಯನ್ನೂ ಧ್ಯಾನವನ್ನೂ ಅತಿಶಯವಾಗಿ ಉಂಟುಮಾಡಿಕೊಡುವುದು.

೩೨. ಶಿವಪುರಾಣವನ್ನು ಕೇಳುವುದೂ, ಶಿವನ ನಾಮಗಳನ್ನು ಯಾವಾಗಲೂ ಕೀರ್ತನಮಾಡುವುದೂ ಇವೆರಡೂ ಮನುಷ್ಯರಿಗೆ ಮನೋಹರವಾದ ಕಲ್ಪವೃಕ್ಷದ ಫಲವನ್ನುಂಟುಮಾಡಿಕೊಡುವುವು. ಇದರಲ್ಲಿ ಸಂಶಯವಿಲ್ಲ.

೩೩. ಕಲಿಯುಗದಲ್ಲಿ ಬದ್ಧಿಯಿಲ್ಲದವರು, ಸ್ವಧರ್ಮಾಚಾರರಹಿತರು ಮೊದಲಾದ ಜನಗಳಿಗೆ ಹಿತವನ್ನುಂಟುಮಾಡುವುದಕ್ಕಾಗಿಯೇ ಶಿವನು ಶಿವಪುರಾಣವೆಂಬ ಅಮೃತವನ್ನು ನಿರ್ಮಿಸಿರುವನು ಅಮೃತವನ್ನು ಪಾನಮಾಡಿದವನು ಒಬ್ಬನು ಮಾತ್ರ ಜರಾಮರಣರಹಿತನಾಗುವನು. ಆದರೆ ಶಿವನ ಕಥೆಯೆಂಬ ಅಮೃತವನ್ನು ಪಾನಮಾಡಿದವನ ವಂಶವೆಲ್ಲವೂ ಜರಾಮರಣರಹಿತವಾದದ್ದಾಗುವುದು.

ಏಕೋಽಜರಾಮರಸ್ಸ್ಯಾದ್ವೈ ಪಿಬನ್ನೈವಾಮೃತಂ ಪುಮಾನ್ ।
ಶಂಭೋಃ ಕಥಾಮೃತಾಪಾನಾತ್ಕುಲಮೇವಾಜರಾಮರಂ ॥ ೩೪ ॥

ಯಾ ಗತಿಃ ಪುಣ್ಯಶೀಲಾನಾಂ ಯಜ್ವಿನಾಂ ಚ ತಪಸ್ವಿನಾಂ ।
ಸಾ ಗತಿಸ್ಸಹಸಾ ತಾತ ಪುರಾಣಶ್ರವಣಾತ್ಖಲು ॥ ೩೫ ॥

ಜ್ಞಾನಾವಾಪ್ತಿರ್ಯದಾ ನ ಸ್ಯಾದ್ಯೋಗಶಾಸ್ತ್ರಾಣಿ ಯತ್ನತಃ ।
ಅಧ್ಯೇತವ್ಯಾನಿ ಪೌರಾಣಂ ಶಾಸ್ತ್ರಂ ಶ್ರೋತವ್ಯಮೇವ ಚ ॥ ೩೬ ॥

ಪಾಪಃ ಸಂಕ್ಷೀಯತೇ ನಿತ್ಯಂ ಧರ್ಮಶ್ಚೈವ ವಿವರ್ಧತೇ ।
ಪುರಾಣಶ್ರವಣಾಜ್ಞಾನೀ ನ ಸಂಸಾರಂ ಪ್ರಪದ್ಯತೇ ॥ ೩೭ ॥

ಅತ ಏವ ಪುರಾಣಾನಿ ಶ್ರೋತವ್ಯಾನಿ ಪ್ರಯತ್ನತಃ ।
ಧರ್ಮಾರ್ಥಕಾಮಲಾಭಾಯ ಮೋಕ್ಷಮಾರ್ಗಾಪ್ತಯೇ ತಥಾ ॥ ೩೮ ॥

ಯಜ್ಞೈರ್ದಾನೈಸ್ತಪೋಭಿಸ್ತು ಯತ್ಫಲಂ ತೀರ್ಥಸೇವಯಾ ।
ತತ್ಫಲಂ ಸಮವಾಪ್ನೋತಿ ಪುರಾಣಶ್ರವಣಾನ್ನರಃ ॥ ೩೯ ॥

---

೩೪–೩೫. ಯಜ್ಞಾದಿಗಳನ್ನು ಮಾಡುವ ಪುಣ್ಯವಂತರಿಗೂ, ನಿಯಮದಿಂದ ತಪಸ್ಸನ್ನು ಮಾಡುವವರಿಗೂ ಯಾವ ಸದ್ಗತಿಯು ಉಂಟಾಗುವುದೋ ಅಂತಹ ಉತ್ತಮ ಗತಿಯು ಶಿವಪುರಾಣಶ್ರವಣಮಾಡುವವರಿಗೆ ಉಂಟಾಗುವುದು.

೩೬-೩೮. ಬ್ರಹ್ಮಜ್ಞಾನವು ಉದಯಿಸದಿದ್ದಲ್ಲಿ ಪುರುಷನು ಯೋಗಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸಮಾಡಿ ಪುರಾಣಾದಿ ಶಾಸ್ತ್ರಗಳನ್ನು ಶ್ರವಣಮಾಡಬೇಕು. ಹೀಗೆ ಮಾಡುವುದರಿಂದ ಪಾಪವು ನಾಶವಾಗಿ ಧರ್ಮವೃದ್ಧಿಯಾಗುವುದು. ಪುರಾಣಶ್ರವಣದಿಂದ ಜ್ಞಾನೋತ್ಪತ್ತಿಯಾಗಿ ಸಂಸಾರಬಂಧನವನ್ನು ಪುನಃ ಹೊಂದುವುದಿಲ್ಲ. ಆದುದರಿಂದ ಬಹು ಪ್ರಯತ್ನಪಟ್ಟಾದರೂ ಪುರಾಣಗಳನ್ನು ಶ್ರವಣಮಾಡಬೇಕು. ಪುರಾಣಶ್ರವಣದಿಂದ ಧರ್ಮ, ಅರ್ಥ, ಕಾಮಗಳೆಂಬ ಪುರುಷಾರ್ಥಗಳು ಲಭಿಸುವುದಲ್ಲದೆ ಕೊನೆಗೆ ಮೋಕ್ಷಪ್ರಾಪ್ತಿಯೂ ಆಗುವುದು.

೩೯-೪೦. ಯಜ್ಞವನ್ನು ಮಾಡುವುದರಿಂದಲೂ ದಾನವನ್ನು ಕೊಡುವುದರಿಂದಲೂ ತಪಸ್ಸನ್ನು ಮಾಡುವುದರಿಂದಲೂ ತೀರ್ಥಯಾತ್ರೆಗಳನ್ನು ಮಾಡುವುದರಿಂದಲೂ ಉಂಟಾಗುವ ಫಲಗಳೆಲ್ಲವೂ ಪುರಾಣವನ್ನು ಓದಿಸಿ ಕೇಳುವುದರಿಂದಲೇ

ನ ಭವೇಯುಃ ಪುರಾಣಾನಿ ಧರ್ಮಮಾರ್ಗೇಕ್ಷಣಾನಿ ತು ।
ಯದ್ಯತ್ರ ಯದ್ವ್ರತೀ ಸ್ಥಾತಾ ಚಾತ್ರ ಪಾರತ್ರಕೀಂ ಕಥಾಂ　　॥ ೪೦ ॥

ಷಡ್ವಿಂಶತಿಪುರಾಣಾನಾಂ ಮಧ್ಯೇಽಪ್ಯೇಕಂ ಶೃಣೋತಿ ಯಃ ।
ಪಠೇದ್ವಾ ಭಕ್ತಿಯುಕ್ತಸ್ತು ಸ ಮುಕ್ತೋ ನಾತ್ರ ಸಂಶಯಃ　　॥ ೪೧ ॥

ಅನ್ಯಾ ನ ದೃಷ್ಟಸ್ಸುಖದೋ ಹಿ ಮಾರ್ಗಃ-
ಪುರಾಣಮಾರ್ಗೋ ಹಿ ಸದಾ ವರಿಷ್ಠಃ ।
ಶಾಸ್ತ್ರಂ ವಿನಾ ಸರ್ವಮಿದಂ ನ ಭಾತಿ
ಸೂರ್ಯೇಣ ಹೀನಾ ಇವ ಜೀವಲೋಕಾಃ　　॥ ೪೨ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಪುರಾಣಮಾಹಾತ್ಮ್ಯವರ್ಣನಂ ನಾಮ ತ್ರಯೋದಶೋಽಧ್ಯಾಯಃ

---

ಉಂಟಾಗುವವು. ಪುರಾಣಗಳು ಧರ್ಮಮಾರ್ಗಗಳನ್ನು ತೋರಿಸಿಕೊಡುವುವು. ಯಾವುದಾದರೊಂದು ನಿಯಮವನ್ನು ಅವಲಂಬಿಸಿ ಅವನ್ನು ಸರಿಯಾಗಿ ನಡೆಸುವವನಿಗೆ ಪುರಾಣಶ್ರವಣವು ಪರಲೋಕದಲ್ಲಿ ಸದ್ಗತಿಯನ್ನುಂಟುಮಾಡುವುದು.

೪೧. ಇಪ್ಪತ್ತಾರು ಪುರಾಣಗಳಲ್ಲಿ ಯಾವುದಾದರೂ ಒಂದನ್ನು ಭಕ್ತಿಯಿಂದ ಕೇಳುವವನೂ, ಓದುವವನೂ, ಮುಕ್ತನಾಗುವುದರಲ್ಲಿ ಯಾವ ವಿಧವಾದ ಸಂಶಯವೂ ಇರುವುದಿಲ್ಲ.

೪೨. ಲೋಕದಲ್ಲಿ ಶ್ರೇಯಸ್ಸನ್ನುಂಟುಮಾಡುವುದರಲ್ಲಿ ಬೇರೆ ಮಾರ್ಗವು ಯಾವುದೂ ಸುಖಕರವಾಗಿರುವುದಿಲ್ಲ. ಪುರಾಣವನ್ನು ಓದುವುದು ಮತ್ತು ಕೇಳುವುದು ಎಂಬ ಮಾರ್ಗವೇ ಯಾವಾಗಲೂ ಬಹಳ ಶ್ರೇಷ್ಠವಾಗಿರುವುದು. ಸೂರ್ಯನು ಇಲ್ಲದಿರುವಾಗ ಪ್ರಾಣಿಗಳು ಪ್ರಕಾಶವನ್ನು ಹೊಂದದೇ ಇರುವಹಾಗೆ ಸರಿಯಾದ ಶಾಸ್ತ್ರಜ್ಞಾನವು ಇಲ್ಲದಿದ್ದರೆ ಯಾರಿಗೂ ಯಾವುದೂ ಸರಿಯಾಗಿ ತಿಳಿಯುವುದಿಲ್ಲ.

ಇಲ್ಲಿಗೆ ಶಿವಪುರಾಣದ ಉಮಾಸಂಹಿತೆಯಲ್ಲಿ ಪುರಾಣಮಾಹಾತ್ಮ್ಯವರ್ಣನವೆಂಬ
ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

# ಚತುರ್ದಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಶಸ್ತ್ರಾಣಿ ಘೋರದಾನಾನಿ ಮಹಾದಾನಾನಿ ನಿತ್ಯಶಃ ।
ಪಾತ್ರೇಭ್ಯಸ್ತು ಪ್ರದೇಯಾನಿ ಆತ್ಮಾನಂ ತಾರಯಂತಿ ಚ ॥ ೧ ॥

ಹಿರಣ್ಯದಾನಂ ಗೋದಾನಂ ಭೂಮಿದಾನಂ ದ್ವಿಜೋತ್ತಮ ।
ಗೃಹ್ಣಂತೋ ನೈ ಪವಿತ್ರಾಣಿ ತಾರಯಂತಿ ಸ್ವಮೇವ ತಂ ॥ ೨ ॥

ಸುವರ್ಣದಾನಂ ಗೋದಾನಂ ಪೃಥಿವೀದಾನಮೇವ ಚ ।
ಏತಾನಿ ಶ್ರೇಷ್ಠದಾನಾನಿ ಕೃತ್ವಾ ಪಾಪೈಃ ಪ್ರಮುಚ್ಯತೇ ॥ ೩ ॥

---

## ಹದಿನಾಲ್ಕನೆಯ ಅಧ್ಯಾಯವು

೧-೨. ಸನತ್ಕುಮಾರನಿಂತೆಂದನು :—ಶಾಸ್ತ್ರಗಳಲ್ಲಿ ಹೇಳಿರುವ ಮಹಾದಾನಗಳನ್ನು ಸರಿಯಾದ ಯೋಗ್ಯರಿಗೆ ದಾನಮಾಡಿದಲ್ಲಿ ಆ ದಾನಗಳು ದಾನಮಾಡಿದವನನ್ನು ವಿಪತ್ತುಗಳಿಗೆ ಸಿಕ್ಕದಂತೆ ರಕ್ಷಿಸುವವು. ಚಿನ್ನ, ಗೋವು, ಭೂಮಿ ಇವುಗಳನ್ನು ದಾನಮಾಡುವುದರಿಂದ ದಾನವನ್ನು ತೆಗೆದುಕೊಳ್ಳುವವರು ತಮ್ಮನ್ನು ರಕ್ಷಣೆಮಾಡಿಕೊಳ್ಳುವಂತೆ ದಾನಮಾಡಿದವನನ್ನೂ ಕಾಪಾಡುವರು.

೩. ಸುವರ್ಣದಾನ, ಗೋದಾನ, ಭೂದಾನ ಇವುಗಳು ಎಲ್ಲಕ್ಕಿಂತಲೂ ಶ್ರೇಷ್ಠವಾದವುಗಳು. ಈ ಉತ್ತಮವಾದ ದಾನಗಳನ್ನು ಮಾಡಿದವನು ಪಾಪಗಳಿಂದ ಬಿಡುಗಡೆಯನ್ನು ಹೊಂದುವನು.

**ತುಲಾದಾನಾನಿ ಶಸ್ತಾನಿ ಗಾವಃ ಪೃಥ್ವೀ ಸರಸ್ವತೀ ।**
**ದ್ವೇ ತು ತುಲ್ಯಬಲೇ ಶಸ್ತೇ ಹ್ಯಧಿಕಾ ಚ ಸರಸ್ವತೀ　　॥ ೪ ॥**

**ನಿತ್ಯಂ ಹ್ಯನಡುಹೋ ಗಾವಶ್ಛತ್ರಂ ವಸ್ತ್ರಮುಪಾನಹೌ ।**
**ದೇಯಾನಿ ಯಾಚಮಾನೇಭ್ಯಃ ಪಾನಮನ್ನಂ ತಥೈವ ಚ　　॥ ೫ ॥**

**ಸಂಕಲ್ಪವಿಹಿತೋ ಯೋಽರ್ಥೋ ಬ್ರಾಹ್ಮಣೇಭ್ಯಃ ಪ್ರದೀಯತೇ ।**
**ಅರ್ಥಿಭ್ಯೋಽಪೀಡಿತೇಭ್ಯಶ್ಚ ಮನಸ್ವೀ ತೇನ ಜಾಯತೇ　　॥ ೬ ॥**

**ಕನಕಂ ಚ ತಿಲಾ ನಾಗಾಃ ಕನ್ಯಾ ದಾಸೀ ಗೃಹಂ ರಥಃ ।**
**ಮಣಯಃ ಕಪಿಲಾ ಗಾವೋ ಮಹಾದಾನಾನಿ ವೈ ದಶ　　॥ ೭ ॥**

**ಗೃಹೀತ್ವೈತಾನಿ ಸರ್ವಾಣಿ ಬ್ರಾಹ್ಮಣೋ ಜ್ಞಾನವಿತ್ಸದಾ ।**
**ವದಾನ್ಯಾಂಸ್ತಾರಯೇತ್ಸದ್ಯೋ ಹ್ಯಾತ್ಮಾನಂ ಚ ನ ಸಂಶಯಃ　　॥ ೮ ॥**

೪. ತುಲಾದಾನವೂ (ತನ್ನ ತೂಕದಷ್ಟು ಚಿನ್ನವನ್ನು ದಾನಮಾಡುವುದು) ಉತ್ತಮವಾದದ್ದು. ಗೋದಾನವೂ ಇದರಂತೆಯೇ ಉತ್ತಮವಾದುದು. ಭೂದಾನ, ವಿದ್ಯೆಯನ್ನು ದಾನಮಾಡುವುದು ಇವೆರಡೂ ಸಮವೆಂದು ಹೇಳಲ್ಪಡುವುದು. ಆದರೆ ಇವೆರಡರಲ್ಲಿ ವಿದ್ಯಾದಾನವೇ ಅಧಿಕವಾದದ್ದು.

೫-೬. ಯಾಚನೆಮಾಡುವವರಿಗೆ ಎಂದರೆ ಸರಿಯಾದ ಪಾತ್ರನಿಗೆ ಪ್ರತಿದಿನದಲ್ಲಿಯೂ ಎತ್ತುಗಳು, ಹಸುಗಳು, ಛತ್ರಿ, ಬಟ್ಟೆ, ಪಾದರಕ್ಷೆ, ಅನ್ನಪಾನೀಯ ಪದಾರ್ಥಗಳು ಇವುಗಳನ್ನು ದಾನಮಾಡಬೇಕು. ದಾನಮಾಡುವವನು ಯಾವ ವಿಧವಾದ ಬಲಾತ್ಕಾರಕ್ಕೂ ಒಳಗಾಗದೆ ಯಾಚಕರಿಗೆ ದಾನಮಾಡುತ್ತೇನೆಂದು ಸಂಕಲ್ಪವನ್ನು ಮಾಡಿ ಅದನ್ನು ದಾನಮಾಡುವುದರಿಂದ ಉತ್ತಮವಾದ ಫಲವನ್ನು ಹೊಂದುವನು.

೭,೮. ಚಿನ್ನ, ಎಳ್ಳು, ಆನೆಗಳು, ಕನ್ಯಾ, ದಾಸೀ, ಮನೆ, ರಥ, ರತ್ನಗಳು, ಕಪಿಲಾಧೇನು, ಹಸುಗಳು ಎಂಬ ಈ ಹತ್ತು ಪದಾರ್ಥಗಳನ್ನು ದಾನಮಾಡುವುದು ಮಹಾದಾನವೆನಿಸಿಕೊಳ್ಳುವುದು. ಜ್ಞಾನವಂತನಾದ ಬ್ರಾಹ್ಮಣನು ಉತ್ತಮವಾದ ಪದಾರ್ಥಗಳನ್ನು ಪರಿಗ್ರಹಿಸಿದಲ್ಲಿ ಆ ಕ್ಷಣದಲ್ಲಿಯೇ ದಾನಮಾಡಿದವನನ್ನೂ ತನ್ನನ್ನೂ ಪಾಪಗಳಿಂದ ಪಾರುಮಾಡುವನು. ಇದರಲ್ಲಿ ಸಂಶಯವಿಲ್ಲ.

ಸುವರ್ಣಂ ಯೇ ಪ್ರಯಚ್ಛಂತಿ ನರಾಶ್ಶುದ್ಧೇನ ಚೇತಸಾ ।
ದೇವತಾಸ್ತಂ ಪ್ರಯಚ್ಛಂತಿ ಸಮಂತಾದಿತಿ ಮೇ ಶ್ರುತಂ ॥ ೯ ॥

ಅಗ್ನಿರ್ಹಿದೇವತಾಸ್ಸರ್ವಾಃ ಸುವರ್ಣಂ ಚ ಹುತಾಶನಃ ।
ತಸ್ಮಾತ್ಸುವರ್ಣಂ ದತ್ವಾ ಚ ದತ್ತಾಃ ಸ್ಯುಸ್ಸರ್ವದೇವತಾಃ ॥ ೧೦ ॥

ಪೃಥ್ವೀದಾನಂ ಮಹಾಶ್ರೇಷ್ಠಂ ಸರ್ವಕಾಮಫಲಪ್ರದಂ ।
ಸೌವರ್ಣಂ ಚ ವಿಶೇಷೇಣ ಯತ್ಕೃತಂ ಪೃಥುನಾ ಪುರಾ ॥ ೧೧ ॥

ದೀಯಮಾನಾಂ ಪ್ರಪಶ್ಯಂತಿ ಪೃಥ್ವೀಂ ರುಕ್ಮಸಮನ್ವಿತಾಂ ।
ಸರ್ವಪಾಪವಿನಿರ್ಮುಕ್ತಾಸ್ತೇ ಯಾಂತಿ ಪರಮಾಂ ಗತಿಂ ॥ ೧೨ ॥

ಅಥಾನಚ್ಯ ಪ್ರವಕ್ಷ್ಯಾಮಿ ದಾನಂ ಸರ್ವೋತ್ತಮಂ ಮುನೇ ।
ಕಾಂತಾರಂ ಯನ್ನ ಪಶ್ಯಂತಿ ಯಮಸ್ಯ ಬಹುದುಃಖದಂ ॥ ೧೩ ॥

೯-೧೦. ಪರಿಶುದ್ಧವಾದ ಮನಸ್ಸಿನಿಂದ ಸುವರ್ಣವನ್ನು ದಾನಮಾಡುವವರಿಗೆ ದೇವತೆಗಳು ಅನೇಕ ವಿಧವಾದ ಸಂಪತ್ತನ್ನು ಕೊಡುವರೆಂದು ನನಗೆ ತಿಳಿದಿರುವುದು. ಅಗ್ನಿಯು ಎಲ್ಲಾ ದೇವತೆಗಳ ರೂಪದಿಂದ ಇರುವನು. ಚಿನ್ನವು ಅಗ್ನಿಯ ರೂಪಾಂತರವಾಗಿರುವುದು. ಆದುದರಿಂದ ಚಿನ್ನವನ್ನು ದಾನಮಾಡಿದರೆ ಎಲ್ಲಾ ದೇವತೆಗಳ ಪ್ರೀತಿಯನ್ನು ಸಂಪಾದಿಸಿದಂತಾಗುವುದು. ಭೂದಾನವು ಬಹಳ ಶ್ರೇಷ್ಠವಾದದ್ದು. ಎಲ್ಲಾ ವಿಧವಾದ ಇಷ್ಟಗಳನ್ನೂ ಉಂಟುಮಾಡಿಕೊಡುವುದು.

೧೧-೧೨. ಚಿನ್ನದ ಜೊತೆಯಲ್ಲಿ ಭೂಮಿಯನ್ನು ದಾನಮಾಡಿದರೆ ಬಹಳ ಹೆಚ್ಚಾದ ಫಲವನ್ನು ಕೊಡುವುದು. ಈ ದಾನವನ್ನು ಹಿಂದೆ ಪೃಥುವೆಂಬ ಚಕ್ರವರ್ತಿಯು ಮಾಡಿರುವನು. ಸುವರ್ಣಸಹಿತವಾದ ಭೂದಾನವನ್ನು ಮಾಡುವವರು ಎಲ್ಲಾ ವಿಧವಾದ ಪಾತಕಗಳಿಂದಲೂ ಬಿಡುಗಡೆಯನ್ನು ಹೊಂದಿ ಉತ್ತಮವಾದ ಗತಿಯನ್ನು ಹೊಂದುವರು.

೧೩-೧೪. ಎಲೈ ಋಷಿಯೇ, ಕೇಳು. ಬಹಳ ದುಃಖವನ್ನು ಕೊಡುವ ಯಮನ ನರಕಗಳನ್ನು ನೋಡದೇ ಇರುವಂತೆ ಮಾಡುವ, ಬಹಳ ಉತ್ತಮವಾದ ಇನ್ನೂ ಬೇರೆ ದಾನಗಳನ್ನು ಹೇಳುವೆನು ಶುದ್ಧವಾದ ಮನಸ್ಸುಳ್ಳವನಾಗಿ ಶಾಸ್ತ್ರದಲ್ಲಿ

ಕುರ್ಯಾತ್ಕಾಂತಾರದಾನಂ ಹಿ ವಿಧಿನಾ ಶುದ್ಧಮಾನಸಃ ।
ನ್ಯಾಯಾರ್ಜಿತೇನ ದ್ರವ್ಯೇಣ ವಿತ್ತಶಾಠ್ಯವಿವರ್ಜಿತಃ ॥ ೧೪ ॥

ತಿಲಪ್ರಸ್ಥಮಯೀಂ ಕೃತ್ವಾ ಧೇನುಂ ಸರ್ವಗುಣಾನ್ವಿತಾಂ ।
ಧೇನುವತ್ಸಂ ಸುವರ್ಣಂ ಚ ಸುದಿವ್ಯಂ ಸರ್ವಲಕ್ಷಣಂ ॥ ೧೫ ॥

ಪದ್ಮಮಷ್ಟದಲಂ ಕೃತ್ವಾ ಕುಂಕುಮಾಕ್ತಾಕ್ಷತೈಶ್ಶುಭೈಃ ।
ಪೂಜಯೇತ್ತತ್ರ ರುದ್ರಾದೀನ್ಸರ್ವಾನ್ದೇವಾನ್ಸುಭಕ್ತಿತಃ ॥ ೧೬ ॥

ಏವಂ ಸಂಪೂಜ್ಯ ತಾಂ ದದ್ಯಾದ್ಬ್ರಾಹ್ಮಣಾಯ ಸ್ವಶಕ್ತಿತಃ ।
ಸರತ್ನಾಂ ಸಹಿರಣ್ಯಾಂ ಚ ಸರ್ವಾಭರಣಭೂಷಿತಾಂ ॥ ೧೭ ॥

ತತೋ ನಕ್ತಂ ಸಮಶ್ನೀಯಾದ್ದೀಪಾನ್ದದಾತ್ತು ವಿಸ್ತರಾತ್ ।
ಕಾರ್ತಿಕ್ಯಾಮಿತಿ ಕರ್ತವ್ಯಂ ಪೂರ್ಣಿಮಾಯಾಂ ಪ್ರಯತ್ನತಃ ॥ ೧೮ ॥

ಏವಂ ಯಃ ಕುರುತೇ ಸಮ್ಯಗ್ವಿಧಾನೇನ ಸ್ವಶಕ್ತಿತಃ ।
ಯಮಮಾರ್ಗಭಯಂ ಘೋರಂ ನರಕಂ ಚ ನ ಪಶ್ಯತಿ ॥ ೧೯ ॥

---

ಹೇಳಿರುವ ಕ್ರಮದಿಂದ ಅರಣ್ಯವನ್ನು (ತೋಪನ್ನು) ಬೆಳೆಸಿ ದಾನವನ್ನು ಮಾಡಬೇಕು. ಇದರ ಜೊತೆಯಲ್ಲಿ ನ್ಯಾಯದಿಂದ ತಾನು ಸಂಪಾದಿಸಿದ ಧನವನ್ನು ದಕ್ಷಿಣೆಯನ್ನಾಗಿ ಕೊಡಬೇಕು. ಜಿಪುಣತನವನ್ನು ಮಾಡಬಾರದು.

೧೫-೧೯. ಒಂದು ಬಳ್ಳ (೨ ಸೇರು) ಎಳ್ಳನ್ನು ತಂದು ಅದರ ಹಿಟ್ಟಿನಿಂದ ಉತ್ತಮವಾದ ಲಕ್ಷಣಗಳಿಂದ ಕೂಡಿರುವಹಾಗೆ ಹಸುವನ್ನೂ ಕರುವನ್ನೂ ಮಾಡಿ ಎಂಟುದಳವುಳ್ಳ ಪದ್ಮವನ್ನು ಬರೆದು ಅದರಲ್ಲಿ ಕೆಂಪಿನ ಅಕ್ಷತೆಗಳಿಂದ ರುದ್ರನೇ ಮೊದಲಾದ ದೇವತೆಗಳನ್ನು ಭಕ್ತಿಯಿಂದ ಪೂಜಿಸಿದನಂತರ ಆ ಹಸುವನ್ನೂ ಕರುವನ್ನೂ ಕೂಡ ತನ್ನ ಶಕ್ತಿಗೆ ಅನುಸಾರವಾದ ದಕ್ಷಿಣೆಯೊಡನೆ ಬ್ರಾಹ್ಮಣನಿಗೆ ದಾನವನ್ನು ಮಾಡಬೇಕು. ದಾನಮಾಡುವ ಕಾಲದಲ್ಲಿ ರತ್ನಗಳನ್ನೂ, ಆಭರಣಗಳನ್ನೂ, ಕೂಡ ಆ ಹಸುವಿನೊಡನೆ ದಾನಮಾಡಬೇಕು. ದಾನಮಾಡಿದ ದಿವಸ ರಾತ್ರಿ ಕಾಲದಲ್ಲಿ ಭೋಜನವನ್ನು ಮಾಡಬೇಕು. ಕಾರ್ತೀಕಮಾಸದ ಪೂರ್ಣಿಮಾದಿನದಲ್ಲಿ ಹೆಚ್ಚಾಗಿ ದೀಪಗಳನ್ನೂ ದಾನಮಾಡಬೇಕು. ಹೀಗೆ ಶಾಸ್ತ್ರಕ್ಕನುಸಾರವಾಗಿಯೂ ತನ್ನ ಶಕ್ತಿಗೆ ಅನುರೂಪವಾಗಿಯೂ ದಾನವನ್ನು ಮಾಡುವವನು ಭಯಂಕರವಾದ ಯಮಲೋಕದ ಮಾರ್ಗವನ್ನೂ ನರಕಗಳನ್ನೂ ನೋಡಲಾರನು.

ಕೃತ್ವಾ ಪಾಪಾನ್ಯಶೇಷಾಣಿ ಸಬಂಧುಸ್ಸಸುಹೃಜ್ಜನಃ ।
ದಿವಿ ಸಂಕ್ರೀಡತೇ ವ್ಯಾಸ ಯಾವದಿಂದ್ರಾಶ್ಚತುರ್ದಶ ॥ ೨೦॥

ವಿಧಿತೋ ಗೋಶ್ಚ ದಾನಂ ವೈ ಸರ್ವೋತ್ತಮಮಿಹ ಸ್ಮೃತಂ ।
ನ ತೇನ ಸದೃಶಂ ವ್ಯಾಸ ಪರಂ ದಾನಂ ಪ್ರಕೀರ್ತಿತಂ ॥ ೨೧ ॥

ಪ್ರಯಚ್ಛತೇ ಯಃ ಕಪಿಲಾಂ ಸವತ್ಸಾಂ ಸ್ವರ್ಣಶೃಂಗಿಕಾಂ ।
ಕಾಂಸ್ಯಪಾತ್ರಾಂ ರೌಪ್ಯಖುರಾಂ ಸರ್ವಲಕ್ಷಣಲಕ್ಷಿತಾಂ . ॥ ೨೨ ॥

ತೈಸ್ತೈರ್ಗುಣೈಃ ಕಾಮದುಘಾ ಭೂತ್ವಾ ಸಾ ಗೌರುಪೈತಿ ತಂ ।
ಪ್ರದಾತಾರಂ ನರಂ ವ್ಯಾಸ ಪರತ್ರೇಹ ಚ ಜನ್ಮನಿ ॥ ೨೩ ॥

ಯದ್ಯದಿಷ್ಟತಮಂ ಲೋಕೇ ಯದಸ್ತಿ ದಯಿತಂ ಗೃಹೇ ।
ತತ್ತದ್ಗುಣವತೇ ದೇಯಂ ತದೇವಾಕ್ಷಯಮಿಚ್ಛತಾ ॥ ೨೪ ॥

---

೨೦-೨೧. ಈ ಪ್ರಕಾರದಿಂದ ದಾನವನ್ನು ಮಾಡುವವನು ತನ್ನ ಬಂಧುಗಳು ಸ್ನೇಹಿತರು ಮೊದಲಾದವರೊಡನೆ ಹದಿನಾಲ್ಕುಜನ ಇಂದ್ರರು ಇರುವವರೆಗೂ ಸ್ವರ್ಗದಲ್ಲಿ ಸುಖವನ್ನು ಅನುಭವಿಸುವನು. ಎಲೈ ವ್ಯಾಸಮುಷಿಯೇ, ಕೇಳು. ಶಾಸ್ತ್ರೋಕ್ತನು ಸಾರವಾಗಿ ಗೋದಾನವನ್ನು ಮಾಡುವುದಕ್ಕೆ ಸಮನಾದ ದಾನವು ಮತ್ತೊಂದಿಲ್ಲ. ಆದುದರಿಂದ ಗೋದಾನವು ಎಲ್ಲಕ್ಕಿಂತಲೂ ಉತ್ತಮವಾದ ದಾನವು.

೨೨-೨೩. ಕಪಿಲಾಗೋವಿಗೆ ಚಿನ್ನದಿಂದ ಕೊಂಬುಗಳನ್ನೂ, ಬೆಳ್ಳಿಯಿಂದ ಗೊರಸುಗಳನ್ನೂ ಮಾಡಿಸಿ ಅದರ ಹಾಲು ಕರೆಯುವುದಕ್ಕೆ ಕಂಚಿನ ಪಾತ್ರೆಸಹಿತ ಎಲ್ಲಾ ಲಕ್ಷಣಗಳಿಂದ ಕೂಡಿದ ಆ ಹಸುವನ್ನು ಅದರ ಕರುವಿನೊಡನೆ ದಾನವನ್ನು ಮಾಡಿದವನಿಗೆ, ಆ ದಾನಮಾಡಿದ ಹಸುವು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಕಾಮಧೇನುವಿನ ಹಾಗೆ ಆಯಾಯ ಪ್ರಕಾರವಾದ ಉತ್ತಮವಾದ ವಸ್ತುಗಳನ್ನು ದೊರಕಿಸಿಕೊಡುವುದು.

೨೪. ಈ ಲೋಕದಲ್ಲಿ ತನಗೆ ಪ್ರೀತಿಕರವಾದ ಪದಾರ್ಥವು ಯಾವುದುಂಟೋ, ತನ್ನ ಮನೆಯಲ್ಲಿ ಉತ್ತಮವಾದ ಯಾವ ವಸ್ತುವಿರುವುದೋ ಅದನ್ನು ಸತ್ಪಾತ್ರರಾದವರಿಗೆ ದಾನಮಾಡಬೇಕು. ಅದರಿಂದ ಆ ದಾನದ ಫಲವು ಅಕ್ಷಯವಾಗಿ ಅನಂತ ಫಲಗಳನ್ನು ಕೊಡುವುದು.

ತುಲಾಪುರುಷದಾನಂ ಹಿ ದಾನಾನಾಂ ದಾನಮುತ್ತಮಂ ।
ತುಲಾಸಂರೋಹಣಂ ಕಾರ್ಯಂ ಯದೀಚ್ಛೇಚ್ಛ್ರೇಯ ಆತ್ಮನಃ ॥ ೨೫ ॥

ಯತ್ಕೃತ್ವಾ ಮುಚ್ಯತೇ ಪಾಪೈರ್ವಧಬಂಧಕೃತೋದ್ಭವೈಃ ।
ತುಲಾದಾನಂ ಮಹತ್ಪುಣ್ಯಂ ಸರ್ವಪಾಪಕ್ಷಯಂಕರಂ ॥ ೨೬ ॥

ಕೃತ್ವಾ ಪಾಪಾನ್ಯಶೇಷಾಣಿ ತುಲಾದಾನಂ ಕರೋತಿ ಯಃ ।
ಸರ್ವೈಸ್ತು ಪಾತಕೈರ್ಮುಕ್ತಃ ಸ ದಿವಂ ಯಾತ್ಯಸಂಶಯಂ ॥ ೨೭ ॥

ಪಾಪಂ ಕೃತಂ ಯದ್ದಿವಸೇ ನಿಶಾಯಾಂ
ದ್ವಿಸಂಧ್ಯಯೋರ್ಮಧ್ಯದಿನೇ ನಿಶಾಂತೇ ।
ಕಾಲತ್ರಯೇ ಕಾಯಮನೋವಚೋಭಿ-
ಸ್ತುಲಾ ಪುಮಾನ್ಸ್ವೈ ತದಪಾಕರೋತಿ ॥ ೨೮ ॥

೨೫-೨೬. ತುಲಾಪುರುಷದಾನವೆಂಬುವುದು ಎಲ್ಲಾ ದಾನಗಳಿಗಿಂತಲೂ ಉತ್ತಮವಾದದ್ದು. ಆದ್ದರಿಂದ ತನಗೆ ಹಿತವನ್ನು ಕೋರುವ ಮನುಷ್ಯನು ತಕ್ಕಡಿಯಲ್ಲಿ ತಾನು ತೂಗಿಸಿಕೊಂಡು ಅದಕ್ಕೆ ಸಮನಾಗಿ ಚಿನ್ನವನ್ನು ದಾನಮಾಡಬೇಕು. ಈ ತುಲಾದಾನವನ್ನು ಮಾಡುವವನು, ಇನ್ನೊಬ್ಬನನ್ನು ಕೊಲ್ಲಿಸುವುದು ಅಥವಾ ನಿರ್ಬಂಧದಲ್ಲಿ ಇಡುವುದು, ಇವೇ ಮೊದಲಾದ ಪಾಪಗಳಿಂದುಂಟಾದ ಹಿಂಸೆಗಳಿಂದ ಬಿಡುಗಡೆಯನ್ನು ಹೊಂದುವನು. ತುಲಾದಾನವೆಂಬುದು ಯಾವಾಗಲೂ ಎಲ್ಲಾ ವಿಧವಾದ ಪಾಪಗಳನ್ನು ನಾಶಮಾಡುವುದರಲ್ಲಿ ಮೊದಲನೆಯದಾಗಿರುವುದು.

೨೭. ಎಷ್ಟೇ ಪಾಪಗಳನ್ನೂ ಮಾಡಿದ್ದರೂ ತುಲಾದಾನವನ್ನು ಮಾಡಿದರೆ ಎಲ್ಲಾ ವಿಧವಾದ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ಸ್ವರ್ಗವನ್ನು ಹೊಂದುವುದರಲ್ಲಿ ಯಾವ ವಿಧವಾದ ಸಂಶಯವೂ ಇಲ್ಲ.

೨೮. ಹಗಲು, ರಾತ್ರಿ, ಎರಡು ಸಂಧ್ಯಾಕಾಲಗಳು, ಮಧ್ಯಾಹ್ನಕಾಲ ರಾತ್ರಿಯ ಕೊನೆಯಭಾಗ, ಭೂತ, ವರ್ತಮಾನ, ಭವಿಷ್ಯತ್ತೆಂಬ ಮೂರು ಕಾಲಗಳು, ಇವುಗಳಲ್ಲಿ ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದ ಮಾಡಿದ ಪಾತಕಗಳನ್ನು ತುಲಾದಾನವು ನಾಶಗೊಳಿಸುವುದು.

ಬಾಲೇನ ವೃದ್ಧೇನ ಮಯಾ ಹಿ ಯೂನಾ
ವಿಜಾಗ್ರತಾ ಜ್ಞಾನಪರೇಣ ಪಾಪಂ ॥
ತತ್ಸರ್ವಮೇವಾಶು ಕೃತಂ ಮದೀಯಂ
ತುಲಾಪುಮಾನ್ಸ್ವೈ ಹರತು ಸ್ಮರಾರಿಃ ॥ ೨೯ ॥

ಪಾತ್ರೇ ಪ್ರಯುಕ್ತಂ ದ್ರವಿಣಂ ಮಯಾದ್ಯ
ಪ್ರಮಾಣಪೂರ್ಣಂ ನಿಹಿತಂ ತುಲಾಯಾಂ ।
ತೇನೈವ ಸಾರ್ಧಂ ತು ಮಮಾವಶೇಷಂ
ಕೃತಾಕೃತಂ ಯತ್ಸುಕೃತಂ ಸಮೇತು ॥ ೩೦ ॥

॥ ಸನತ್ಕುಮಾರ ಉವಾಚ ॥

ಏವಮುಚ್ಚಾರ್ಯ ತಂ ದದ್ಯಾದ್ದ್ವಿಜೇಭ್ಯಃ ಸರ್ವದಾ ಹಿತಃ ।
ನೈಕಸ್ಯಾಪಿ ಪ್ರದಾತವ್ಯಂ ನ ನಿಸ್ತಾರಸ್ತತೋ ಭವೇತ್ ॥ ೩೧ ॥

೨೯-೩೦. ತುಲಾಪುರುಷದಾನಮಾಡುವ ಕಾಲದಲ್ಲಿ ಈ ಅರ್ಥವನ್ನು ಕೊಡುವ ಈ ಶ್ಲೋಕಗಳನ್ನು ಹೇಳಬೇಕು. ಬಾಲ್ಯದಲ್ಲಿಯೂ, ಯೌವನಕಾಲದಲ್ಲಿಯೂ, ವಾರ್ಧಿಕ್ಯದಲ್ಲಿಯೂ, ತಿಳಿದು ಅಥವಾ ತಿಳಿಯದೆ ನಾನು ಮಾಡಿದ ಪಾಪಗಳೆಲ್ಲವನ್ನೂ ಮನ್ಮಥನಿಗೆ ಶತ್ರುವಾಗಿರುವ ತುಲಾಪುರುಷನು ನಾಶಮಾಡಲಿ. ಈಗ ನಾನು ತಕ್ಕಡಿಯಲ್ಲಿ ನನ್ನ ತೂಕಕ್ಕೆ ಸಮನಾಗಿ ತೂಕಮಾಡಿದ ದ್ರವ್ಯವನ್ನು ಸತ್ಪಾತ್ರರಲ್ಲಿ ದಾನ ಮಾಡಿರುವೆನು. ಈ ದಾನದಿಂದ ನಾನು ಮಾಡಿದ ಅಥವಾ ಮಾಡದೇ ಇರುವ ಎಲ್ಲಾ ವಿಧವಾದ ಪಾಪಗಳೂ ನಾಶವಾಗಿ ಪುಣ್ಯವು ಲಭಿಸಲಿ ಎಂದು ಹೇಳಬೇಕು.

೩೧. ಸನತ್ಕುಮಾರನು ಹೇಳಿದನು :—ತುಲಾಪುರುಷದಾನಮಾಡುವವನು ಹೀಗೆಂದು ಹೇಳಿ ಆ ದಾನವನ್ನು ಸರಿಯಾದ ಪಾತ್ರರಾದ ಬ್ರಾಹ್ಮಣರಿಗೆಲ್ಲ ಒಳ್ಳೆಯ ಮನಸ್ಸಿನಿಂದ ಭಾಗಮಾಡಿಕೊಡಬೇಕು. ಒಬ್ಬನಿಗೇ ಎಲ್ಲವನ್ನೂ ಕೊಡಬಾರದು. ಏಕೆಂದರೆ ಒಬ್ಬನಿಗೇ ಕೊಡುವುದರಿಂದ ಪಾಪವು ನಾಶವಾಗುವುದಿಲ್ಲವಾದ್ದರಿಂದ ಒಬ್ಬನಿಗೇ ಕೊಡಬಾರದು.

**ದದಾತ್ಯೇವಂ ತು ಯೋ ವ್ಯಾಸ ತುಲಾಪುರುಷಮುತ್ತಮಂ ।**
**ಹತ್ವಾ ಪಾಪಂ ದಿವಂ ತಿಷ್ಠೇದ್ಯಾವದಿಂದ್ರಾಶ್ಚತುರ್ದಶ ॥ ೩೨ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಸಾಮಾನ್ಯದಾನವರ್ಣನಂ ನಾಮ ಚತುರ್ದಶೋಽಧ್ಯಾಯಃ**



೩೨. ಎಲೈ ವ್ಯಾಸಮಹರ್ಷಿಯೇ ಕೇಳು. ಈ ಪ್ರಕಾರದಿಂದ ಉತ್ತಮವಾದ ತುಲಾಪುರುಷದಾನವನ್ನು ಮಾಡುವವನು ತನ್ನ ಪಾಪಗಳನ್ನು ಕಳೆದುಕೊಂಡು ಹದಿನಾಲ್ಕುಜನ ಇಂದ್ರರು ಇರುವವರಿಗೂ ಸ್ವರ್ಗದಲ್ಲಿ ಸುಖದಿಂದಿರುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಸಾಮಾನ್ಯದಾನವರ್ಣನ ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

# ಪಂಚದಶೋಽಧ್ಯಾಯಃ

॥ ವ್ಯಾಸ ಉವಾಚ ॥

**ಯೇನೈಕೇನ ಹಿ ದತ್ತೇನ ಸರ್ವೇಷಾಂ ಪ್ರಾಪ್ಯತೇ ಫಲಂ ।**
**ದಾನಾನಾಂ ತನ್ಮಮಾಖ್ಯಾಹಿ ಮಾನುಷಾಣಾಂ ಹಿತಾರ್ಥತಃ ॥ ೧ ॥**

॥ ಸನತ್ಕುಮಾರ ಉವಾಚ ॥

**ಶೃಣು ಕಾಲೇ ಪ್ರದತ್ತಾದ್ಯೈ ಫಲಂ ವಿಂದಂತಿ ಮಾನವಾಃ ।**
**ಏಕಸ್ಮಾದಪಿ ಸರ್ವೇಷಾಂ ದಾನಾನಾಂ ತದ್ವದಾಮಿ ತೇ ॥ ೨ ॥**

## ಹದಿನೈದನೆಯ ಅಧ್ಯಾಯವು

೧. ವ್ಯಾಸನು ಪ್ರಶ್ನೆಮಾಡುವನು :—ಎಲೈ ಸನತ್ಕುಮಾರಮುನಿಯೇ, ಯಾವ ದಾನವನ್ನು ಮಾಡಿದರೆ ಸಮಸ್ತದಾನಗಳ ಫಲವು ಲಭಿಸುವುದು ? ಇದನ್ನು ನಾನು ಲೋಕಕಲ್ಯಾಣಕ್ಕಾಗಿ ಕೇಳುತ್ತಿರುವೆನು. ಆದುದರಿಂದ ಅಂತಹ ಶ್ರೇಷ್ಠವಾದ ದಾನದ ಮಹಿಮೆಯನ್ನು ವಿವರಿಸಿ ಹೇಳು ಎನ್ನಲು,

೨. ಸನತ್ಕುಮಾರನಿಂತೆಂದನು :—ಎಲೈ ವ್ಯಾಸನೇ, ಕೇಳು. ಅಂತಹ ದಾನವೊಂದಿರುವುದು. ಅದನ್ನು ನಿರ್ದಿಷ್ಟಕಾಲದಲ್ಲಿ ವಿಧಿಪೂರ್ವಕವಾಗಿ ಮಾಡಿದರೆ ಮಾನವರು ಸಮಸ್ತ ದಾನಗಳ ಫಲಗಳನ್ನೂ ಆ ಒಂದು ದಾನದಿಂದಲೇ ಹೊಂದುವರು.

ದಾನಾನಾಮುತ್ತಮಂ ದಾನಂ ಬ್ರಹ್ಮಾಂಡಂ ಖಲು ಮಾನವೈಃ ।
ದಾತವ್ಯಂ ಮುಕ್ತಿಕಾಮೈಸ್ತು ಸಂಸಾರೋತ್ತಾರಣಾಯ ವೈ ॥ ೩ ॥

ಬ್ರಂಹ್ಮಾಂಡೇ ಸಕಲೇ ದತ್ತೇ ಯತ್ಫಲಂ ಲಭತೇ ನರಃ ।
ತದೇಕಭಾವಾದಾಪ್ನೋತಿ ಸಪ್ತಲೋಕಾಧಿಪೋ ಭವೇತ್ ॥ ೪ ॥

ಯಾವಚ್ಚಂದ್ರದಿವಾಕರೌ ನಭಸಿ ವೈ ಯಾವತ್ಸ್ಥಿರಾ ಮೇದಿನೀ
ತಾವತ್ಸೋऽಪಿ ನರಃ ಸ್ವಭಾಂಧವಯುತಸ್ಸ್ವರ್ಗೌಕಸಾಮೋಕಸಿ ।
ಸರ್ವೇಷ್ವೇವ ಮನೋನುಗೇಷು ಕಕುಭಿಬ್ರಹ್ಮಾಂಡದಃ ಕ್ರೀಡತೇ
ಪಶ್ಚಾದ್ಯಾತಿ ಪದಂ ಸುದುರ್ಲಭತರಂ ದೇವೈರ್ಮುರ್ದೇ ಮಾಧವಂ ॥ ೫ ॥

॥ ವ್ಯಾಸ ಉವಾಚ ॥

ಭಗವನ್ಬ್ರೂಹಿ ಬ್ರಹ್ಮಾಂಡಂ ಯತ್ಪ್ರಮಾಣಂ ಯದಾತ್ಮಕಂ ।
ಯದಾಗಾರಂ ಯಥಾಭೂತಂ ಯೇನ ಮೇ ಪ್ರತ್ಯಯೋ ಭವೇತ್ ॥ ೬ ॥

೩. ಬ್ರಹ್ಮಾಂಡದಾನವೆಂಬುದು ಎಲ್ಲಾ ವಿಧವಾದ ದಾನಗಳಿಗಿಂತಲೂ ಉತ್ತಮವಾದದ್ದು. ಸಂಸಾರದಿಂದ ಬಿಡುಗಡೆಯನ್ನು ಹೊಂದಲು ಇಚ್ಛೆಯುಳ್ಳವರೂ, ಮೋಕ್ಷವನ್ನು ಹೊಂದಲು ಅಪೇಕ್ಷಿಸುವವರೂ, ಸಹ ಈ ಬ್ರಹ್ಮಾಂಡದಾನವನ್ನು ಮಾಡಬೇಕು.

೪, ಸಂಪೂರ್ಣವಾದ ಬ್ರಹ್ಮಾಂಡವನ್ನು ದಾನಮಾಡಿದವನು ಅದಕ್ಕೆ ಫಲವಾಗಿರುವ ಸಪ್ತಲೋಕಗಳನ್ನೂ ದಾನಮಾಡಿದ ಕಾರಣ ಏಳು ಲೋಕಗಳಿಗೂ ಅಧಿಪತಿಯಾಗುವನು.

೫. ಸೂರ್ಯಚಂದ್ರರು ಅಂತರಿಕ್ಷದಲ್ಲಿ ಬೆಳಗುತ್ತಿರುವವರಿಗೂ ಮತ್ತು ಭೂಮಿಯು ಸ್ಥಿರವಾಗಿ ಇರುವವರಿಗೂ ಬ್ರಹ್ಮಾಂಡದಾನವನ್ನು ಮಾಡಿದವನು ತನ್ನ ಬಂಧುಗಳೊಡನೆ ದೇವಲೋಕದಲ್ಲಿ ವಾಸಮಾಡುವನು. ಮನೋವೇಗದಿಂದ ಕೂಡಿರುವ ಮತ್ತು ಮನಸ್ಸಿಗೆ ಹಿತವಾಗಿರುವ ವಿಮಾನಗಳಲ್ಲಿ ಕುಳಿತು ಎಲ್ಲಾ ದಿಕ್ಕುಗಳಲ್ಲಿಯೂ ವಿಹರಿಸುವನು. ಯಾರೂ ಹೊಂದಲಾಗದಿರುವ ವಿಷ್ಣುವಿನ ಸ್ಥಾನವನ್ನೂ ಸಹ ಹೊಂದುವನು.

೬. ವ್ಯಾಸನು ಮತ್ತೆ ಕೇಳಿದನು :— ಓ ಸನತ್ಕುಮಾರನೇ, ಬ್ರಹ್ಮಾಂಡವು ಯಾವ ಪ್ರಮಾಣದಲ್ಲಿರುವುದು? ಯಾವ ರೂಪದಿಂದಿರುವುದು ? ಈ ಬ್ರಹ್ಮಾಂಡಕ್ಕೆ

॥ ಸನತ್ಕುಮಾರ ಉವಾಚ ॥

ಮುನೇ ಶೃಣು ಪ್ರವಕ್ಷ್ಯಾಮಿ ಯದುತ್ಸೇಧಂತು ವಿಸ್ತರಂ ।
ಬ್ರಹ್ಮಾಂಡಂ ತತ್ತು ಸಂಕ್ಷೇಪಾಚ್ಛೃತ್ವಾ ಪಾಪಾತ್ಪ್ರಮುಚ್ಯತೇ ॥ ೭ ॥

ಯತ್ತತ್ಕಾರಣಮವ್ಯಕ್ತಂ ವ್ಯಕ್ತಂ ಶಿವಮನಾಮಯಂ ।
ತಸ್ಮಾತ್ಸಂಜಾಯತೇ ಬ್ರಹ್ಮಾ ದ್ವಿಧಾಭೂತಾದ್ಧಿ ಕಾಲತಃ ॥ ೮ ॥

ಬ್ರಹ್ಮಾಂಡಂ ಸೃಜತಿ ಬ್ರಹ್ಮಾ ಚತುರ್ದಶಭವಾತ್ಮಕಂ ।
ತದ್ವಚ್ಮಿ ಕ್ರಮತಸ್ತಾತ ಸಮಾಸಾಚ್ಛೃಣು ಯತ್ನತಃ ॥ ೯ ॥

ಪಾತಾಲಾನಿ ತು ಸಪ್ತೈವ ಭುವನಾನಿ ತಥೋರ್ದ್ಧ್ವತಃ ।
ಉಚ್ಛ್ರಾಯೋ ದ್ವಿಗುಣಸ್ತಸ್ಯ ಜಲಮಧ್ಯೇ ಸ್ಥಿತಸ್ಯ ಚ ॥ ೧೦ ॥

ಆಧಾರವು ಯಾವದು? ಇದು ಯಾವುದರಿಂದ ಹುಟ್ಟಿರುವುದು? ಇದನ್ನು ನನಗೆ ತಿಳಿಯುವಂತೆ ಹೇಳು. ಆದರಿಂದ ನನಗೆ ನಂಬಿಕೆಯುಂಟಾಗುವುದು ಎನ್ನಲು,

೭. ಸನತ್ಕುಮಾರನು ಹೇಳಿದನು :—ಎಲೈ ವ್ಯಾಸಋಷಿಯೆ, ಕೇಳು ಬ್ರಹ್ಮಾಂಡದ ವಿಸ್ತಾರವನ್ನೂ ಅದರ ಎತ್ತರ ಮೊದಲಾದ ಪ್ರಮಾಣಗಳನ್ನೂ ಸಂಕ್ಷೇಪವಾಗಿ ಹೇಳುವೆನು. ಇದನ್ನು ಕೇಳುವುದರಿಂದ ಮನುಷ್ಯನು ಪಾಪಗಳಿಂದ ಬಿಡುಗಡೆಯನ್ನು ಹೊಂದುವನು.

೮ ಸೃಷ್ಟಿಗೆ ಪೂರ್ವದಲ್ಲಿ ಸಮಸ್ತ ವಿಶ್ವವನ್ನೂ ವ್ಯಾಪಿಸಿಕೊಂಡು ಪರಬ್ರಹ್ಮವೊಂದೇ ಇರುವುದು. ಅದು ಅವ್ಯಕ್ತರೂಪವಾಗಿರುವುದು. ಎಂದರೆ ನಾಮರೂಪಭೇದಗಳೊಂದೂ ಇಲ್ಲದೆ ಇರುವುದು. ಸ್ಥೂಲಸೂಕ್ಷ್ಮಾದಿಭೇದಗಳೂ ಅದಕ್ಕೆ ಇರುವುದಿಲ್ಲ. ಅಂತಹ ಪರಬ್ರಹ್ಮವು ಕೆಲವುಕಾಲದಮೇಲೆ ವ್ಯಕ್ತರೂಪವನ್ನು ತಾಳುವುದು. ಆಗ ಅದಕ್ಕೆ ಶಿವನೆಂದು ಹೆಸರು. ಆ ಶಿವಸ್ವರೂಪವು ನಾಶರಹಿತವಾಗಿಯೂ ಸರ್ವಸಮರ್ಥವಾಗಿಯೂ ಇರುವುದು. ಆ ಶಿವಸ್ವರೂಪದಿಂದ ಬ್ರಹ್ಮನು ಉತ್ಪನ್ನನಾಗುವನು.

೯-೧೦. ಈ ಬ್ರಹ್ಮನು ಹದಿನಾಲ್ಕು ಲೋಕಗಳ ರೂಪದಿಂದ ಇರುವ ಈ ಬ್ರಹ್ಮಾಂಡವನ್ನು ಸೃಷ್ಟಿಮಾಡಿರುವ ಕ್ರಮವನ್ನು ಸಂಕ್ಷೇಪದಿಂದ ಹೇಳುವೆನು, ಕೇಳು. ಪಾತಾಳ ಲೋಕಗಳು ಏಳು ಇರುವವು. ಅವುಗಳು ಕ್ರಮವಾಗಿ ಮೇಲೆ ಮೇಲೆ

**ತಸ್ಯಾಧಾರಃ ಸ್ಥಿತೋ ನಾಗಸ್ಸ ಚ ವಿಷ್ಣುಃ ಪ್ರಕೀರ್ತಿತಃ ।**
**ಬ್ರಹ್ಮಣೋ ವಚಸೋ ಹೇತೋರ್ಬಿಭರ್ತಿ ಸಕಲಂ ತ್ವಿದಂ ॥ ೧೧ ॥**

**ಶೇಷಸ್ಯಾಸ್ಯ ಗುಣಾನ್ವಕ್ತುಂ ನ ಶಕ್ತಾ ದೇವದಾನವಾಃ ।**
**ಯೋಽನಂತಃ ಪಠ್ಯತೇ ಸಿದ್ಧೈರ್ದೇವರ್ಷಿಗಣಪೂಜಿತಃ ॥ ೧೨ ॥**

**ಶಿರಃ ಸಾಹಸ್ರಯುಕ್ತಸ್ಸ ಸರ್ವಾ ವಿದ್ಯೋತಯನ್ದಿಶಃ ।**
**ಫಣಾಮಣಿಸಹಸ್ರೇಣ ಸ್ವಸ್ತಿಕಾಮಲಭೂಷಣಃ ॥ ೧೩ ॥**

**ಮದಾಘೂರ್ಣಿತನೇತ್ರೋಽಸೌ ಸಾಗ್ನಿಶ್ಶ್ವೇತ ಇವಾಚಲಃ ।**
**ಸ್ರಗ್ವೀ ಕಿರೀಟೀ ಹ್ಯಾಭಾತಿ ಯಸ್ಸದೇವೈಕಕುಂಡಲಃ ॥ ೧೪ ॥**

**ಸಾಯಂ ಗಂಗಾಪ್ರವಾಹೇನ ಶ್ವೇತಶ್ಶೈಲೋಪಶೋಭಿತಃ ।**
**ನೀಲವಾಸಾ ಮದೋದ್ರಿಕ್ತಃ ಕೈಲಾಸಾದ್ರಿರಿವಾಪರಃ ॥ ೧೫ ॥**

ಹೋದ ಹಾಗೆಲ್ಲಾ ಪ್ರತಿಯೊಂದು ಎರಡರಷ್ಟು ಎತ್ತರವಾಗಿ ಇರುವವು. ಈ ಬ್ರಹ್ಮಾಂಡವು ನೀರಿನ ಮಧ್ಯದಲ್ಲಿ ಇರುವುದು.

೧೧-೧೪. ವಿಷ್ಣುವು ಸರ್ಪರೂಪದಿಂದ ಇದರ ಕೆಳಭಾಗದಲ್ಲಿ ಆಧಾರವಾಗಿದ್ದು ಕೊಂಡು ಬ್ರಹ್ಮನ ಇಷ್ಟದಂತೆ ಇದೆಲ್ಲವನ್ನೂ ಹೊತ್ತಿರುವನು. ಈ ಆದಿಶೇಷನ ಗುಣಗಳನ್ನು ಹೇಳಲು ದೇವತೆಗಳಿಗೂ ದಾನವರಿಗೂ ಸಹ ಆಗುವುದಿಲ್ಲ. ಈ ಅನಂತನನ್ನು ದೇವತೆಗಳೂ ಋಷಿಗಳೂ ಪೂಜಿಸುವರು. ಈ ಆದಿಶೇಷನನ್ನು ಅನಂತ ನೆಂದು ಕರೆಯುವರು. ಇವನು ಸಾವಿರ ಹೆಡೆಗಳಿಂದ ಕೂಡಿ ದಿಕ್ಕುಗಳೆಲ್ಲವನ್ನೂ ಬೆಳಗುತ್ತಿರುವನು. ಹೆಡೆಗಳಲ್ಲಿರುವ ಸಾವಿರ ರತ್ನಗಳ ಕಾಂತಿಯಿಂದ ಪ್ರಕಾಶಿಸು ತ್ತಿರುವನು. ನಿರ್ಮಲವಾದ ಸ್ವಸ್ತಿಕಾಕಾರದಿಂದ ಇರುವ ಆಭರಣಗಳನ್ನು ಧರಿಸಿರು ವನು. ಮದದಿಂದ ಇವನ ಕಣ್ಣುಗಳು ಆಲುತ್ತಿರುವವು. ಈ ಆದಿಶೇಷನು ಅಗ್ನಿ ಯಿಂದ ಕೂಡಿರುವ ಬಿಳಿಯ ಬೆಟ್ಟದ ಹಾಗೆ ಪ್ರಕಾಶಿಸುತ್ತಿರುವನು. ಹಾರ, ಕಿರೀಟ, ಕುಂಡಲ ಮೊದಲಾದ ಆಭರಣಗಳನ್ನು ಧರಿಸಿ ಬೆಳಗುತ್ತಿರುವನು.

೧೫-೧೬. ಈ ಆದಿಶೇಷನು ಸಾಯಂಕಾಲದಲ್ಲಿ ಗಂಗಾನದಿಯ ಪ್ರವಾಹದಿಂದ ಕೂಡಿರುವ ಬಿಳಿಯ ಬೆಟ್ಟದಂತೆ ಹೊಳೆಯುತ್ತಿರುವನು. ಕರಿಯ ಬಣ್ಣದ ಬಟ್ಟೆ ಯನ್ನು ಧರಿಸಿಕೊಂಡಿರುವನು. ಮದದಿಂದ ಮತ್ತನಾಗಿರುವನು ಎರಡನೆಯ

ಲಾಂಗಲಾಸಕ್ತಹಸ್ತಾಗ್ರೋ ಬಿಭ್ರನ್ಮುಸಲಮುತ್ತಮಂ ।
ಯೋऽರ್ಚ್ಯಂತೇ ನಾಗಕನ್ಯಾಭಿಸ್ಸ್ವರ್ಣವರ್ಣಾಭಿರಾದರಾತ್ ॥ ೧೬ ॥

ಸಂಕರ್ಷಣಾತ್ಮಕೋ ರುದ್ರೋ ವಿಷಾನಲಶಿಖೋಜ್ಜ್ವಲಃ ।
ಕಲ್ಪಾಂತೇ ನಿಷ್ಕ್ರಮಂತೇ ಯದ್ವಕ್ತ್ರೇಭ್ಯೋऽಗ್ನಿಶಿಖಾ ಮುಹುಃ ।
ದಗ್ಧ್ವಾ ಜಗತ್ರಯಂ ಶಾಂತಾ ಭವಂತೀತ್ಯನುಶುಶ್ರುಮಃ ॥ ೧೭ ॥

ಆಸ್ತೇ ಪಾತಾಲಮೂಲಸ್ಥಸ್ಸ ಶೇಷಃ ಕ್ಷಿತಿಮಂಡಲಂ ।
ಬಿಭ್ರತ್ಸ್ವಪೃಷ್ಠೇ ಭೂತೇಶಶ್ಯೇಷೋऽಶೇಷಗುಣಾರ್ಚಿತಃ ॥ ೧೮ ॥

ತಸ್ಯ ವೀರ್ಯಪ್ರಭಾವಶ್ಚ ಸಾಕಾಂಕ್ಷೈಸ್ತ್ರಿದಶೈರಪಿ ।
ನ ಹಿ ವರ್ಣಯಿತುಂ ಶಕ್ಯಃ ಸ್ವರೂಪಂ ಜ್ಞಾತುಮೇವ ವಾ ॥ ೧೯ ॥

ಆಸ್ತೇ ಕುಸುಮಮಾಲೇವ ಫಣಾಮಣಿಶಿಲಾರುಣಾ ।
ಯಸ್ಯೈಷಾ ಸಕಲಾ ಪೃಥ್ವೀ ಕಸ್ತದ್ವೀರ್ಯ ವದಿಷ್ಯತಿ ॥ ೨೦ ॥

---

ಕೈಲಾಸಪರ್ವತದಂತೆ ಇರುವನು. ಒಂದು ಕೈಯಿನಲ್ಲಿ ನೇಗಿಲನ್ನೂ ಇನ್ನೊಂದು ಕೈಯಿನಲ್ಲಿ ವನಕೆಯನ್ನು ಹಿಡಿದುಕೊಂಡಿರುವನು. ಸುವರ್ಣದ ಶರೀರಕಾಂತಿಯಿಂದ ಕೂಡಿರುವ ನಾಗಕನ್ನಿಕೆಯರು ಆದರದಿಂದ ಇವನನ್ನು ಪೂಜಿಸುತ್ತಿರುವರು.

೧೭. ಇವನು ಪ್ರಳಯಕಾಲದಲ್ಲಿ ಸಂಕರ್ಷಣನೆಂದು ಹೆಸರುಳ್ಳ ರುದ್ರಮೂರ್ತಿಯ ಆಕಾರವನ್ನು ಹೊಂದಿ ವಿಷದಿಂದ ಕೂಡಿರುವ ಬೆಂಕಿಯ ಜ್ವಾಲೆಗಳಿಂದ ಕೂಡಿದವನಾಗಿರುವನು. ಮತ್ತು ಪ್ರಳಯಕಾಲದಲ್ಲಿ ಇವನ ಮುಖಗಳಿಂದ ಅಗ್ನಿಯ ಜ್ವಾಲೆಗಳು ಹೊರಹೊರಟು ಜಗತ್ತೆಲ್ಲವನ್ನೂ ಸುಟ್ಟು ನಾಶಮಾಡಿ ಬಳಿಕ ಶಾಂತವಾಗುವವು ಎಂದು ನಾನು ಕೇಳಿರುವೆನು.

೧೮-೨೦. ಎಲ್ಲಾ ವಿಧವಾದ ಗುಣಗಳಿಂದಲೂ ಕೂಡಿ ಈ ಪ್ರಕಾರದಿಂದ ಪೂಜೆಯನ್ನು ಹೊಂದುತ್ತಿರುವ ಆದಿಶೇಷನು ಪಾತಾಳಲೋಕದ ಬುಡದಲ್ಲಿದ್ದುಕೊಂಡು ಎಲ್ಲಾ ಪ್ರಾಣಿಗಳಿಗಿಂತಲೂ ಹೆಚ್ಚಾದ ಶಕ್ತಿಯುಳ್ಳವನಾಗಿ ಭೂಮಿಯನ್ನು ತನ್ನ ತಲೆಯಲ್ಲಿ ಹೊತ್ತಿರುವನು. ಈ ಆದಿಶೇಷನ ಶಕ್ತಿಯ ಮಹಿಮೆಯನ್ನು ಹೊಗಳಲು ದೇವತೆಗಳಿಂದಲೂ ಸಾಧ್ಯವಿಲ್ಲ. ಅವನ ರೂಪವನ್ನು ಸರಿಯಾಗಿ ತಿಳಿಯದೇ ಇರುವರು. ಈ ಆದಿಶೇಷನು ತಲೆಯಮೇಲೆ ಹೊತ್ತಿರುವ ಸಮಸ್ತವಾದ ಭೂಮಂಡಲವು ಅವನ ಹೆಡೆಗಳ ರತ್ನಗಳಿಂದ ಕೆಂಪುಕಾಂತಿಯುಳ್ಳದ್ದಾಗಿ ಹೂವಿನ ಹಾರದಂತೆ ಕಾಣುತ್ತಿರುವುದು. ಇಂತಹ ಈ ಆದಿಶೇಷನ ಶಕ್ತಿಯನ್ನು ಯಾವನೂ ವರ್ಣಿಸಲಾರನು.

**ಯದಾ ವಿಜೃಂಭತೇಽನಂತೋ ಮದಾಘೂರ್ಣಿತಲೋಚನಃ ।**
**ತದಾ ಚಲತಿ ಭೂರೇಷಾ ಸಾದ್ರಿತೋಯಾಧಿಕಾನನಾ　　॥ ೨೧ ॥**

**ದಶಸಾಹಸ್ರಮೇಕೈಕಂ ಪಾತಾಲಂ ಮುನಿಸತ್ತಮ ।**
**ಅತಲಂ ವಿತಲಂ ಚೈವ ಸುತಲಂ ಚ ರಸಾತಲಂ　　॥ ೨೨ ॥**

**ತಲಂ ತಲಾತಲಂ ಚಾಗ್ರ್ಯಂ ಪಾತಾಲಂ ಸಪ್ತಮಂ ಮತಂ ।**
**ಭೂಮೇರಧಸ್ಸಪ್ತ ಲೋಕಾ ಇಮೇ ಜ್ಞೇಯಾ ವಿಚಕ್ಷಣೈಃ　　॥ ೨೩ ॥**

**ಉಚ್ಛ್ರಾಯೋ ದ್ವಿಗುಣಶ್ಚೈಷಾಂ ಸರ್ವೇಷಾಂ ರತ್ನಭೂಮಯಃ ।**
**ರತ್ನವಂತೋಽಥ ಪ್ರಾಸಾದಾ ಭೂಮಯೋ ಹೇಮಸಂಭವಾಃ　　॥ ೨೪ ॥**

**ತೇಷು ದಾನವದೈತೇಯಾ ನಾಗಾನಾಂ ಜಾತಯಸ್ತಥಾ ।**
**ನಿವಸಂತಿ ಮಹಾನಾಗಾ ರಾಕ್ಷಸಾ ದೈತ್ಯಸಂಭವಾಃ　　॥ ೨೫ ॥**

**ಪ್ರಾಹ ಸ್ವರ್ಗಸದೋಮಧ್ಯೇ ಪಾತಾಲಾನೀತಿ ನಾರದಃ ।**
**ಸ್ವರ್ಲೋಕಾದತಿರಮ್ಯಾಣಿ ತೇಭ್ಯೋಽಸಾವಾಗತೋ ದಿವಿ　　॥ ೨೬ ॥**

೨೧-೨೫. ಈ ಅನಂತನ ಕಣ್ಣುಗಳು ಮದದಿಂದ ಆಲುತ್ತಿರುವವು. ಇವನು ಆಕಳಿಸುವ ಕಾಲದಲ್ಲಿ ಬೆಟ್ಟ ನೀರು ಕಾಡು ಇವುಗಳಿಂದ ಕೂಡಿರುವ ಈ ಭೂಮಿಯೆಲ್ಲವೂ ಅಲುಗಾಡುವುದು. ಎಲೈ ವ್ಯಾಸಋಷಿಯೇ, ಕೇಳು ಒಂದೊಂದು ಪಾತಾಳವೂ ಹತ್ತುಸಾವಿರ ವಿಭಾಗವಾಗಿರುವುದು. ಅತಲ, ವಿತಲ, ಸುತಲ, ರಸಾತಲ, ತಲ, ತಲಾತಲ, ಪಾತಾಳ ಎಂದು ಹೆಸರುಳ್ಳ ಈ ಏಳು ಲೋಕಗಳು ಭೂಮಿಯ ಕೆಳಭಾಗದಲ್ಲಿರುವವು ಎಂದು ತಿಳಿಯಬೇಕು. ಇವುಗಳಲ್ಲಿ ಕೆಳಗಿನ ಲೋಕಕ್ಕಿಂತ ಮೇಲಿನ ಲೋಕವು ಪ್ರತಿಯೊಂದೂ ಎರಡರಷ್ಟು ಎತ್ತರವಾಗಿರುವುದು. ಇವುಗಳೆಲ್ಲವೂ ರತ್ನಮಯವಾದ ಭೂಮಿಯಿಂದಲೂ ಸುವರ್ಣ ಪ್ರಾಸಾದಗಳಿಂದಲೂ ಶೋಭಿಸುತ್ತಿರುವವು. ಆ ಲೋಕಗಳಲ್ಲಿ ದಾನವರೂ, ದೈತ್ಯರೂ, ನಾಗರೂ, ಮಹಾನಾಗರೂ, ದೈತ್ಯರಿಂದ ಹುಟ್ಟಿರುವ ಇತರ ರಾಕ್ಷಸರೂ ವಾಸಮಾಡುತ್ತಿರುವರು.

೨೬. ಒಮ್ಮೆ ನಾರದಋಷಿಯು ಪಾತಾಳಲೋಕದಿಂದ ಬಂದು ಈ ಲೋಕಗಳು ಸ್ವರ್ಗಲೋಕಕ್ಕಿಂತಲೂ ಮನೋಹರವಾಗಿರುವವು. ಎಂದು ಸ್ವರ್ಗಲೋಕದ ಸಭೆಯ ಮಧ್ಯದಲ್ಲಿ ನಿಂತು ಅವುಗಳನ್ನು ವರ್ಣಿಸಿರುವನು.

ನಾನಾಭೂಷಣಭೂಷಾಸು ಮಣಯೋ ಯತ್ರ ಸುಪ್ರಭಾಃ ॥
ಆಹ್ಲಾದಕಾನಿ ಶುಭ್ರಾಣಿ ಪಾತಾಲಂ ಕೇನ ತತ್ಸಮಂ ॥ ೨೭ ॥

ಪಾತಾಲೇ ಕಸ್ಯ ನ ಪ್ರೀತಿರಿತಶ್ಚೇತಶ್ಚ ಶೋಭಿತಂ ।
ದೇವದಾನವಕನ್ಯಾಭಿರ್ವಿಮುಕ್ತಸ್ಯಾಭಿಜಾಯತೇ ॥ ೨೮ ॥

ದಿವಾರ್ಕರಶ್ಮಯೋ ಯತ್ರ ನ ಭವಂತಿ ವಿಧೋರ್ನಿಶಿ ।
ನ ಶೀತಮಾತಪೋ ಯತ್ರ ಮಣಿತೇಜೋಽತ್ರ ಕೇವಲಂ ॥ ೨೯ ॥

ಭಕ್ಷ್ಯಭೋಜ್ಯಾನ್ನಪಾನಾನಿ ಭುಜ್ಯಂತೇ ಮುದಿತೈರ್ಭೃಶಂ ।
ಯತ್ರ ನ ಜ್ಞಾಯತೇ ಕಾಲೋ ಗತೋಽಪಿ ಮುನಿಸತ್ತಮ ॥ ೩೦ ॥

ಪುಂಸ್ಕೋಕಿಲರುತಂ ಯತ್ರ ಪದ್ಮಾನಿ ಕಮಲಾಕರಾಃ ।
ನದ್ಯಸ್ಸರಾಂಸಿ ರಮ್ಯಾಣಿ ಹ್ಯನ್ಯೋನ್ಯವಿಚರಾಣಿ ಚ ॥ ೩೧ ॥

೨೭. ಈ ಲೋಕಗಳು ಸ್ವರ್ಗಲೋಕಕ್ಕಿಂತಲೂ ಬಹಳ ಸುಂದರವಾಗಿರುವವು. ಈ ಲೋಕಗಳಲ್ಲಿ ಎಲ್ಲಿನೋಡಿದರೂ ಅನೇಕ ವಿಧವಾದ ಆಭರಣಗಳ ಕಾಂತಿಗಳೂ ಉತ್ತಮವಾದ ರತ್ನಗಳೂ ಮನಸ್ಸಿಗೆ ಬಹಳ ಸಂತೋಷವನ್ನುಂಟುಮಾಡುತ್ತಿರುವವು. ಆದ್ದರಿಂದ ಈ ಲೋಕಗಳಿಗೆ ಸಮನಾದ ಲೋಕಗಳು ಯಾವವೂ ಇಲ್ಲ.

೨೮-೨೯. ಅಲ್ಲಲ್ಲಿ ದೇವದಾನವಕನ್ಯೆಯರು ಸರ್ವಾಭರಣಭೂಷಿತರಾಗಿ ವಿಹರಿಸುತ್ತಿರುವರು. ಇಂತಹ ಪಾತಾಳಲೋಕದಲ್ಲಿ ಯಾರಿಗೆ ತಾನೆ ಪ್ರೀತಿಯುಂಟಾಗುವುದಿಲ್ಲ? ಅಲ್ಲಿ ಹಗಲಿನಲ್ಲಿ ಸೂರ್ಯನ ಕಿರಣಗಳೂ ರಾತ್ರಿಯಲ್ಲಿ ಚಂದ್ರನ ಬೆಳದಿಂಗಳೂ ಇಲ್ಲ. ಛಳಿಯೂ ಸೆಕೆಯೂ ಯಾವುದೂ ಇಲ್ಲದೆ ರತ್ನಗಳ ಕಾಂತಿಯು ಮಾತ್ರವೇ ಅಲ್ಲಿ ಇರುವುದರಿಂದ ಅದು ಅತಿ ಮನೋಹರವಾಗಿರುವುದು.

೩೦-೩೧. ಈ ಲೋಕದಲ್ಲಿರುವವರು ಸಂತೋಷದಿಂದ ಉತ್ತಮವಾದ ಭಕ್ಷ್ಯಗಳನ್ನೂ ಇತರ ವಿಧವಾದ ಆಹಾರಗಳನ್ನೂ ಭುಜಿಸುವರು. ದಿವ್ಯವಾದ ಪಾನೀಯಗಳನ್ನು ಸೇವಿಸುತ್ತಾ ಯಾವಾಗಲೂ ಸಂತೋಷವುಳ್ಳವರಾಗಿರುವರು. ಎಲೈ ಮುನಿಶ್ರೇಷ್ಠನೇ ಕೇಳು, ಆ ಲೋಕದಲ್ಲಿ ಕಾಲವು ಕಳೆದದ್ದು ಇಷ್ಟೆಂದು ತಿಳಿಯುವುದೇ ಇಲ್ಲ. ಆ ಲೋಕಗಳಲ್ಲಿ ಕೋಗಿಲೆಯ ಧ್ವನಿಗಳು ಎಲ್ಲಾಕಡೆಯಲ್ಲೂ ಕೇಳಿಬರುವವು. ಕೊಳಗಳಲ್ಲಿ ಕಮಲಗಳು ತುಂಬಿರುವವು. ನದಿಗಳೂ ಸರೋವರಗಳೂ

ಭೂಷಣಾನ್ಯತಿಶುಭ್ರಾಣಿ ಗಂಧಾಢ್ಯಂ ಚಾನುಲೇಪನಂ ।
ವೀಣಾವೇಣುಮೃದಂಗಾನಾಂ ಸ್ವನಾ ಗೇಯಾನಿ ಚ ದ್ವಿಜ ॥ ೩೨ ॥

ದೈತ್ಯೋರಗೈಶ್ಚ ಭುಜ್ಯಂತೇ ಪಾತಾಲೇ ವೈ ಸುಖಾನಿ ಚ ।
ತಪಸಾ ಸಮವಾಪ್ನೋತಿ ದಾನವೈಸಿದ್ಧಮಾನವೈಃ ॥ ೩೩ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಬಹ್ಮಾಂಡಕಥನೇ ಪಾತಾಲವರ್ಣನಂ ನಾಮ ಪಂಚದಶೋऽಧ್ಯಾಯಃ



ಎಲ್ಲರಿಗೂ ಅನುಕೂಲವಾಗಿರುವವು. ಆಭರಣಗಳು ನಿರ್ಮಲವಾಗಿರುವವು. ಗಂಧವೇ ಮೊದಲಾದುವುಗಳು ಬಹಳ ವಾಸನೆಯುಳ್ಳವುಗಳಾಗಿರುವವು. ವೀಣೆ, ಕೊಳಲು, ಮದ್ದಲೆ ಇವೇ ಮೊದಲಾದ ವಾದ್ಯದ ಧ್ವನಿಯೂ ಸಂಗೀತಗಳೂ ತುಂಬಿರುವವು.

೩೩. ರಾಕ್ಷಸರೂ ಮತ್ತು ನಾಗಗಳೂ ಈ ಪಾತಾಳಲೋಕದಲ್ಲಿ ಅನೇಕ ವಿಧವಾದ ಸುಖವನ್ನು ಅನುಭವಿಸುತ್ತಿರುವರು. ಈ ಲೋಕವನ್ನು ಸಿದ್ಧರಾದ ಮನುಷ್ಯರೂ ದಾನವರೂ ಸಹ ತಪಸ್ಸನ್ನು ಮಾಡಿ ಹೊಂದುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಬ್ರಹ್ಮಾಂಡವಿವರಣೆಯಲ್ಲಿ ಪಾತಾಳಲೋಕದ ವರ್ಣನವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಷೋಡಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ತೇಷಾಂ ಮೂರ್ಧೋರ್ಽಪರಿಷ್ಟಾದ್ವೈ ನರಕಾಂಸ್ತಾಂಚ್ಛೃಣುಷ್ವ ಚ ।
ಮತ್ತೋ ಮುನಿವರಶ್ರೇಷ್ಠ ಪಚ್ಯಂತೇ ಯತ್ರ ಪಾಪಿನಃ ॥ ೧ ॥

ರೌರವಶ್ಶೂಕರೋ ರಾಧಸ್ತಾಲೋ ವಿವಸನಸ್ತಥಾ ।
ಮಹಾಜ್ವಾಲಸ್ತಪ್ತಕುಂಭೋ ಲವಣೋಽಪಿ ವಿಲೋಹಿತಃ ॥ ೨ ॥

ವೈತರಣೀ ಪೂಯವಹಾ ಕೃಮಿಣಃ ಕೃಭೋಜನಃ ।
ಅಸಿಪತ್ರವನಂ ಘೋರಂ ಲಾಲಾಭಕ್ಷಶ್ಚ ದಾರುಣಃ ॥ ೩ ॥

---

### ಹದಿನಾರನೆಯ ಅಧ್ಯಾಯವು

೧. ಸನತ್ಕುಮಾರನಿಂತೆಂದನು:—ಈ ಲೋಕಗಳ ಮೇಲುಭಾಗದಲ್ಲಿ ಪಾಪಿಗಳಾದ ಜನರನ್ನು ಪರಿಶುದ್ಧಿಮಾಡುವ ನರಕಗಳು ಇರುವವು. ಅವುಗಳನ್ನು ಹೇಳುವೆನು, ಕೇಳು.

೨-೬. ರೌರವ, ಶೂಕರ, ತಾಲ, ವಿವಸನ, ಮಹಾಜ್ವಾಲ, ತಪ್ತಕುಂಭ, ಲವಣ, ವಿಲೋಹಿತ ಎಂಬ ನರಕಗಳೂ, ದುರ್ಗಂಧ ಪದಾರ್ಥಗಳಿಂದ ಕೂಡಿರುವ ವೈತರಣೀನದಿ, ಕ್ರಿಮಿಗಳಿಂದ ಕೂಡಿರುವ ನರಕಗಳು, ಕ್ರಿಮಿಗಳನ್ನು ತಿನ್ನುವಂತೆ ಮಾಡಿರುವ ನರಕಗಳು, ಭಯಂಕರವಾದ ಅಸಿಪತ್ರವನವೂ, ಕ್ರೂರವಾದ ಲಾಲಾಭಕ್ಷ

ತಥಾ ಪೂಯವಹಃ ಪ್ರಾಯೋ ಬಹಿರ್ಜ್ವಾಲೋ ಹ್ಯಧಶ್ಶಿರಾಃ ।
ಸಂದಂಶಃ ಕಾಲಸೂತ್ರಶ್ಚ ತಮಶ್ಚಾವೀಚಿರೋಧನಃ ॥ ೪ ॥

ಶ್ವಭೋಜನೋಽಥ ರುಷ್ಟಶ್ಚ ಮಹಾರೌರವಶಾಲ್ಮಲೀ ।
ಇತ್ಯಾದ್ಯಾ ಬಹವಸ್ತತ್ರ ನರಕಾ ದುಃಖದಾಯಕಾಃ ॥ ೫ ॥

ಪಚ್ಯಂತೇ ತೇಷು ಪುರುಷಾಃ ಪಾಪಕರ್ಮರತಾಸ್ತು ಯೇ ।
ಕ್ರಮಾದ್ವಕ್ಷ್ಯೇ ತು ತಾನ್ವ್ಯಾಸ ಸಾವಧಾನತಯಾ ಶೃಣು ॥ ೬ ॥

ಕೂಟಸಾಕ್ಷ್ಯಂ ತು ಯೋ ವಕ್ತಿ ವಿನಾ ವಿಪ್ರಾನ್ಸುರಾಂಶ್ಚ ಗಾಃ ।
ಸದಾಽನೃತಂ ವದೇದ್ಯಸ್ತು ಸ ನರೋ ಯಾತಿ ರೌರವಂ ॥ ೭ ॥

ಭ್ರೂಣಹಾ ಸ್ವರ್ಣಹರ್ತಾ ಚ ಗೋರೋಧೀ ವಿಶ್ವಘಾತಕಃ ।
ಸುರಾಪೋ ಬ್ರಹ್ಮಹಂತಾ ಚ ಪರದ್ರವ್ಯಾಪಹಾರಕಃ ॥ ೮ ॥

ವೆಂಬ ನರಕವೂ, ಬಹಳ ಕೀವನ್ನೂ ದುರ್ಗಂಧವಾದ ವಸ್ತುಗಳನ್ನೂ ವಹಿಸಿರುವ ನರಕವು, ಬೆಂಕಿಯ ಜ್ವಾಲೆಯಲ್ಲಿ ತಲೆಕೆಳಕಾಗಿ ನೇತುಹಾಕುವ ನರಕವೂ, ಕಾಲಸೂತ್ರವೆಂಬ ಯಾವಾಗಲೂ ಕಗ್ಗತ್ತಲೆಯ ಕವಿದು ಮೇಲೆಮೇಲೆ ಹಿಂಸೆಯನ್ನು ಕೊಡುವ ನರಕವೂ, ಶ್ವಭೋಜನ, ಮಹಾರೌರವ ಶಾಲ್ಮಲೀ ಇವೇ ಮೊದಲಾದ ಅನೇಕ ನರಕಗಳು ಅಲ್ಲಿ ಪಾಪಿಗಳಿಗೆ ಬಹಳ ದುಃಖವನ್ನುಂಟುಮಾಡುತ್ತಿರುವವು. ಈ ನರಕಗಳಲ್ಲಿ ಪಾಪಿಗಳನ್ನು ಯಾವಾಗಲೂ ಶಿಕ್ಷೆಮಾಡುತ್ತಿರುವರು. ಆ ಪಾಪಿಗಳಿಗೆ ಉಂಟಾಗುವ ಶಿಕ್ಷೆಯನ್ನೂ ಅವರು ಮಾಡಿದ ಪಾಪದ ವಿವರವನ್ನೂ ಹೇಳುವೆನು, ಕೇಳು.

೭. ಬ್ರಾಹ್ಮಣರು, ದೇವತೆಗಳು, ಗೋವುಗಳು ಇವರ ವಿಷಯಗಳಲ್ಲಿಯೂ ಇತರ ವಿಷಯಗಳಲ್ಲಿಯೂ ಸುಳ್ಳು ಸಾಕ್ಷಿಯನ್ನು ಹೇಳುವವನೂ ಯಾವಾಗಲೂ ಸುಳ್ಳನ್ನು ಹೇಳುವ ಮನುಷ್ಯನೂ ರೌರವವೆಂಬ ನರಕವನ್ನು ಹೊಂದುವನು.

೮. ಭ್ರೂಣಹತ್ಯೆಯನ್ನು ಮಾಡುವವನು, ಚಿನ್ನವನ್ನು ಕದಿಯುವವನು, ಹಸುವನ್ನು ತಡದು ಹಿಂಸೆಯನ್ನು ಮಾಡುವವನು, ಎಲ್ಲರಿಗೂ ತೊಂದರೆಯನ್ನು ಮಾಡುವವನು, ಮದ್ಯಪಾನಮಾಡುವವನು, ಬ್ರಹ್ಮಹತ್ಯೆಯನ್ನು ಮಾಡುವವನು, ಇನ್ನೊಬ್ಬರ ದ್ರವ್ಯವನ್ನು ಕದಿಯುವವನು, ಇವರುಗಳ ಸಹವಾಸವನ್ನು ಮಾಡಿ

ಯಸ್ತತ್ಸಂಗೀ ಸ ವೈ ಯಾತಿ ಮೃತೋ ವ್ಯಾಸ ಗುರೋರ್ವಧಾತ್ ।
ತತಃ ಕುಂಭೇ ಸ್ವಸುರ್ಮಾತುರ್ಗೋಶ್ಚೈವ ದುಹಿತುಸ್ತಥಾ ॥ ೯ ॥

ಸಾಧ್ವ್ಯಾಃ ವಿಕ್ರಯಕೃಚ್ಚಾಥ ವಾರ್ಧಕೀ ಕೇಶವಿಕ್ರಯೀ ।
ತಪ್ತಲೋಹೇಷು ಪಚ್ಯಂತೇ ಯಶ್ಚ ಭಕ್ತಂ ಪರಿತ್ಯಜೇತ್ ॥ ೧೦ ॥

ಅವಮಂತಾ ಗುರೂಣಾಂ ಯಃ ಪಶ್ಚಾದ್ಭೋಕ್ತಾ ನರಾಧಮಃ ।
ದೇವದೂಷಯಿತಾ ಚೈವ ದೇವವಿಕ್ರಯಿಕಶ್ಚ ಯಃ ॥ ೧೧ ॥

ಅಗಮ್ಯಗಾಮೀ ಯಶ್ಚಾಂತೇ ಯಾತಿ ಸಪ್ತಬಲಂ ದ್ವಿಜ ।
ಚೌರೋ ಗೋಘ್ನೋ ಹಿ ಪತಿತೋ ಮರ್ಯಾದಾದೂಷಕಸ್ತಥಾ ॥ ೧೨ ॥

ದೇವದ್ವಿಜಪಿತೃದ್ವೇಷ್ಟಾ ರತ್ನದೂಷಯಿತಾ ಚ ಯಃ ।
ಸ ಯಾತಿ ಕೃಮಿಭಕ್ಷಂ ವೈ ಕೃಮೀನತ್ತಿ ದುರಿಷ್ಟಕೃತ್ ॥ ೧೩ ॥

ಕೊಂಡಿರುವವನು, ಗುರುವನ್ನು ಕೊಂದವನು ಇವರೆಲ್ಲರೂ ಪರಲೋಕದಲ್ಲಿ ರೌರವ ನರಕವನ್ನು ಹೊಂದುವರು.

೯-೧೦. ತನ್ನ ತಂಗಿ, ತಾಯಿ, ಮಗಳು, ಪತಿವ್ರತೆಯಾದ ಹೆಂಗಸು ಇವರನ್ನು ಮಾರುವವನು, ಯಾವಾಗಲೂ ಅನ್ಯೋನ್ಯವಾಗಿರುವ ಪ್ರೀತಿಯನ್ನು ಹಾಳು ಮಾಡುವವನು, ಕೂದಲುಗಳನ್ನು ಮಾರುವವನು, ತನ್ನನ್ನು ಆಶ್ರಯಮಾಡಿಕೊಂಡು ಇರುವವನನ್ನು ಬಿಡುವವನು ಇವರೆಲ್ಲರೂ ಕುಂಭವೆಂಬ ನರಕದಲ್ಲಿ ಸುಡುತ್ತಿರುವ ಲೋಹಗಳಲ್ಲಿ ಬೆಂದುಹೋಗುವ ಶಿಕ್ಷೆಯನ್ನು ಅನುಭವಿಸುವರು.

೧೧-೧೩. ಗುರುಗಳನ್ನು ಅವಮಾನಮಾಡುವವನು, ಎಲ್ಲರನ್ನೂ ಬಿಟ್ಟು ಮುಂಚಿತವಾಗಿ ಊಟಮಾಡುವ ನೀಚನಾದ ಮನುಷ್ಯನು, ದೇವರನ್ನು ನಿಂದೆಮಾಡುವವನು, ದೇವತಾ ವಿಗ್ರಹಗಳನ್ನು ಮಾರುವವನು, ತನಗೆ ಪೂಜ್ಯರಾದ ಮತ್ತು ನಿಂದ್ಯರಾದ ಸ್ತ್ರೀಯರ ಸಂಭೋಗವನ್ನು ಮಾಡುವವನು ಇವರೆಲ್ಲರೂ ಸಪ್ತಬಲವೆಂಬ ನರಕವನ್ನು ಹೊಂದುವರು. ಕಳ್ಳನಾದವನು, ಹಸುಗಳನ್ನು ಕೊಲ್ಲುವವನು ಪತಿತನಾದವನು, ಮರ್ಯಾದೆಯನ್ನು ಹಾಳುಮಾಡುವವನು, ದೇವಪಿತೃಬ್ರಾಹ್ಮಣರನ್ನು ದ್ವೇಷಮಾಡುವವನು, ರತ್ನಗಳನ್ನು ಕೆಡಿಸುವವನು, ಇವರೆಲ್ಲರೂ ಕ್ರಿಮಿಭಕ್ಷವೆಂಬ ನರಕವನ್ನು ಹೊಂದಿ ಅಲ್ಲಿ ತಾವು ಮಾಡಿರುವ ಪಾಪಗಳಿಗೆ ಅನುಸಾರವಾಗಿ ಕ್ರಿಮಿಗಳನ್ನು ತಿನ್ನುವರು.

ಪಿತೃದೇವಸುರಾನ್ಯಸ್ತು ಪರ್ಯಶ್ನಾತಿ ನರಾಧಮಃ ।
ಲಾಲಾಭಕ್ಷಂ ಸ ಯಾತ್ಯಜ್ಞೋ ಯಶ್ಚಾಸ್ತ್ರಕೂಟಕೃನ್ನರಃ ॥ ೧೪ ॥

ಯಶ್ಚಾಂತ್ಯಜೇನ ಸಂಸೇವ್ಯೋ ಹ್ಯಸದ್ಗ್ರಾಹೀ ತು ಯೋ ದ್ವಿಜಃ ।
ಅಯಾಜ್ಯಯಾಜಕಶ್ಚೈವ ತಥೈವಾಭಕ್ಷ್ಯಭಕ್ಷಕಃ ॥ ೧೫ ॥

ರುಧಿರೌಘೇ ಪತಂತ್ಯೇತೇ ಸೋಮವಿಕ್ರಯಿಣಶ್ಚ ಯೇ ।
ಮಧುಹಾ ಗ್ರಾಮಹಾ ಯಾತಿ ಕ್ರೂರಾಂ ವೈತರಣೀಂ ನದೀಂ ॥ ೧೬ ॥

ನವಯೌವನಮತ್ತಾಶ್ಚ ಮರ್ಯಾದಾಭೇದಿನಶ್ಚ ಯೇ ।
ತೇ ಕೃತ್ಯಂ ಯಾಂತ್ಯಶೌಚಾಶ್ಚ ಕುಲಕಾಜೀವಿನಶ್ಚ ಯೇ ॥ ೧೭ ॥

ಅಸಿಪತ್ರವನಂ ಯಾತಿ ವೃಕ್ಷಚ್ಛೇದೀ ವೃಥೈವ ಯಃ ।
ಕ್ಷುರಭ್ರಕಾ ಮೃಗವ್ಯಾಧಾ ವಹ್ನಿಜ್ವಾಲೇ ಪತಂತಿ ತೇ ॥ ೧೮ ॥

---

೧೪-೧೬. ಪಿತೃಗಳು, ದೇವತೆಗಳು, ಮತ್ತು ಪೂಜೆಗೆ ಯೋಗ್ಯರಾದವರು ಇವರುಗಳನ್ನು ಹಿಂಸೆಗೆಗುರಿಮಾಡಿ ತನ್ನ ಜೀವನವನ್ನು ನಡೆಯಿಸುವವನು, ಶಾಸ್ತ್ರಗಳನ್ನು ಓದಿ ಮೋಸವನ್ನು ಮಾಡುವವನು, ಇವರೆಲ್ಲರೂ ಲಾಲಾಭಕ್ಷವೆಂಬ ನರಕವನ್ನು ಹೊಂದುವರು. ಹೊಲಯನಿಂದ ಸೇವೆಯನ್ನು ತೆಗೆದುಕೊಳ್ಳುವವನು, ಸರಿಯಾದ ದಾರಿಯನ್ನು ಹೇಳದೇ ಕೆಟ್ಟ ಮಾತುಗಳನ್ನು ಹೇಳುವವನು, ಯಜ್ಞವನ್ನು ಮಾಡಲು ಯೋಗ್ಯರಲ್ಲದವರಿಗೆ ಯಜ್ಞವನ್ನು ಮಾಡಿಸುವವನು, ಶಾಸ್ತ್ರದಲ್ಲಿ ತಿನ್ನಬಾರದೆಂದು ಹೇಳಿರುವ ಪದಾರ್ಥಗಳನ್ನು ತಿನ್ನುವವನು, ಸೋಮಲತೆಯನ್ನು ವಿಕ್ರಯ ಮಾಡುವವನು, ಇವರೆಲ್ಲರೂ ರುಧಿರೌಘವೆಂಬ (ರಕ್ತಪ್ರವಾಹ) ನರಕದಲ್ಲಿ ಬೀಳುವರು. ಮದ್ಯವನ್ನು ಹಾಳುಮಾಡುವವನೂ ಗ್ರಾಮಗಳನ್ನು ನಾಶಮಾಡುವವನೂ ಇವರುಗಳು ವೈತರಣೀ ನದಿಯನ್ನು ಹೊಂದುವರು.

೧೭-೨೦. ನವಯೌವನದಿಂದ ಮದಿಸಿ ಯುಕ್ತಾಯುಕ್ತವಿವೇಚನೆಯಿಲ್ಲದೆ ಸನಾತನ ಸಂಪ್ರದಾಯಗಳನ್ನು ಹಾಳುಮಾಡುವವರೂ, ಶೌಚವನ್ನು ಮಾಡಿಕೊಳ್ಳದೇ ಇರುವವರೂ, ನಿಂದ್ಯವಾದ ಅಥವಾ ಕೆಟ್ಟರೀತಿಯಿಂದ ಜೀವನಮಾಡುವವರೂ, ಸುಮ್ಮನೆ ಮರವನ್ನು ಕಡಿಯುವವರೂ ಇವರೆಲ್ಲರೂ ಅಸಿಪತ್ರವನವೆಂಬ ನರಕವನ್ನು ಹೊಂದುವರು. ಕತ್ತಿಗಳನ್ನು ನಿರ್ಮಾಣಮಾಡುವವರೂ, ಮೃಗಗಳನ್ನು ಕೊಲ್ಲುವ

ಭ್ರಷ್ಟಾಚಾರೋ ಹಿ ಯೋ ವಿಪ್ರಃ ಕ್ಷತ್ರಿಯೋ ವೈಶ್ಯ ಏವ ಚ ।
ಯಾತ್ಯಂತೇ ದ್ವಿಜ ತತ್ರೈವ ಯಃ ಶ್ವಪಾಕೇಷು ವಹ್ನಿದಃ ॥ ೧೯ ॥

ವ್ರತಸ್ಯ ಲೋಪಕಾ ಯೇ ಚ ಸ್ವಾಶ್ರಮಾದ್ವಿಚ್ಯುತಾಶ್ಚ ಯೇ ।
ಸಂದಂಶಯಾತನಾಮಧ್ಯೇ ಪತಂತಿ ಭೃಶದಾರುಣೇ ॥ ೨೦ ॥

ವೀರ್ಯಂ ಸ್ವಪ್ನೇಷು ಸ್ಕಂದೇಯುರ್ಯೇ ನರಾ ಬ್ರಹ್ಮಚಾರಿಣಃ ।
ಪುತ್ರಾ ನಾಧ್ಯಾಪಿತಾ ಯೈಶ್ಚ ತೇ ಪತಂತಿ ಶ್ವಭೋಜನೇ ॥ ೨೧ ॥

ಏತೇ ಚಾನ್ಯೇ ಚ ನರಕಾಃ ಶತಶೋಽಥ ಸಹಸ್ರಶಃ ।
ಯೇಷು ದುಷ್ಕೃತಕರ್ಮಾಣಃ ಪಚ್ಯಂತೇ ಯಾತನಾಗತಾಃ ॥ ೨೨ ॥

ತಥೈವ ಪಾಪಾನ್ಯೇತಾನಿ ತಥಾನ್ಯಾನಿ ಸಹಸ್ರಶಃ ।
ಭುಜ್ಯಂತೇ ಯಾನಿ ಪುರುಷೈರ್ನರಕಾಂತರಗೋಚರೈಃ ॥ ೨೩ ॥

ಬೇಡರೂ ಇವರುಗಳು ನರಕದ ಬೆಂಕಿಯ ಜ್ವಾಲೆಯಲ್ಲಿ ಬೀಳುವರು. ತಮ್ಮ ವರ್ಣಾಶ್ರಮಾಚಾರಗಳನ್ನು ಬಿಟ್ಟು ಅಪಾಮಾರ್ಗದಲ್ಲಿ ನಡೆಯುತ್ತಿರುವ ಬ್ರಾಹ್ಮಣ, ವೈಶ್ಯ ಕ್ಷತ್ರಿಯರು ಮುಂತಾದವರು ವಹ್ನಿಜ್ವಾಲೆಯೆಂಬ ನರಕದಲ್ಲಿ ಬೀಳುವರು. ವ್ರತಗಳನ್ನು ಕೆಡಿಸುವವರೂ, ಅವರವರ ಆಶ್ರಮಗಳಿಂದ ಎಂದರೆ ಬ್ರಹ್ಮಚರ್ಯ, ಗೃಹಸ್ಥ ವಾನಪ್ರಸ್ಥ, ಸನ್ಯಾಸವೆಂಬ ನಾಲ್ಕು ಆಶ್ರಮಗಳ ಕರ್ಮಗಳನ್ನು ತಪ್ಪಿ ನಡೆಯುವವರೂ, ಬಹಳ ಕ್ರೂರವಾದ ಸಂದಂಶವೆಂಬ ನರಕದಲ್ಲಿ ಹಿಂಸೆಯನ್ನು ಅನುಭವಿಸುವರು.

೨೧-೨೩. ಬ್ರಹ್ಮಚರ್ಯದಲ್ಲಿದ್ದರೂ, ಸ್ವಪ್ನದಲ್ಲಿ ವೀರ್ಯಸ್ಖಲನವನ್ನು ಮಾಡುವವರು, ತಮ್ಮ ಮಕ್ಕಳನ್ನು ಸರಿಯಾಗಿ ವಿದ್ಯಾಭ್ಯಾಸವನ್ನು ಮಾಡಿಸದೇ ಇರುವವರು, ಶ್ವಭೋಜನವೆಂಬ ನರಕವನ್ನು ಹೊಂದುವರು. ಈ ನರಕಗಳಲ್ಲದೆ ಇನ್ನೂ ಬೇರೆಯದಾದ ನೂರರಗಟ್ಟಲೆ ಅಥವಾ ಸಾವಿರಗಟ್ಟಲೆಯಾಗಿರುವ ನರಕಗಳು ಬಹಳವಾಗಿರುವವು. ಅವುಗಳಲ್ಲಿ ಪಾಪಿಗಳು ತಮ್ಮ ತಮ್ಮ ವಿಧಾಯಕವಾದ ಶಿಕ್ಷೆಗಳನ್ನು ಅನುಭವಿಸುತ್ತಿರುವರು. ಪಾಪಗಳು ಯಾವರೀತಿ ಅನೇಕವಾಗಿರುವವೋ ಅದರಂತೆ ಅವುಗಳ ಶಿಕ್ಷೆಯನ್ನು ಅನುಭವಿಸುವ ನರಕಗಳೂ ಸಾವಿರಗಟ್ಟಲೆಯಾಗಿರುವವು.

ವರ್ಣಾಶ್ರಮವಿರುದ್ಧಂ ಚ ಕರ್ಮ ಕುರ್ವಂತಿ ಯೇ ನರಾಃ ।
ಕರ್ಮಣಾ ಮನಸಾ ವಾಚಾ ನಿರಯೇ ತು ಪತಂತಿ ತೇ ॥ ೨೪ ॥

ಅಧಶ್ಶಿರೋಭಿರ್ದೃಶ್ಯಂತೇ ನಾರಕಾ ದಿವಿ ದೈವತೈಃ ।
ದೇವಾನಧೋಮುಖಾನ್ಸರ್ವಾನಧಃ ಪಶ್ಯಂತಿ ನಾರಕಾಃ ॥ ೨೫ ॥

ಸ್ಥಾವರಾಃ ಕ್ರಿಮಿಪಾಕಾಶ್ಚ ಪಕ್ಷಿಣಃ ಪಶವೋ ಮೃಗಾಃ ।
ಧಾರ್ಮಿಕಾಸ್ತ್ರಿದಶಾಸ್ತದ್ವನ್ಮೋಕ್ಷಿಣಶ್ಚ ಯಥಾಕ್ರಮಂ ॥ ೨೬ ॥

ಯಾವಂತೋ ಜಂತವಸ್ಸ್ವರ್ಗೇ ತಾವಂತೋ ನರಕೌಕಸಃ ।
ಪಾಪಕೃತ್ಯಾತಿ ನರಕಂ ಪ್ರಾಯಶ್ಚಿತ್ತಪರಾಙ್ಮುಖಃ ॥ ೨೭ ॥

ಗುರೂಣಿ ಗುರುಭಿಶ್ಚೈವ ಲಘೂನಿ ಲಘುಭಿಸ್ತಥಾ ।
ಪ್ರಾಯಶ್ಚಿತ್ತಾನಿ ಕಾಲೇಯ ಮನುಸ್ಸ್ವಾಯಂಭುವೋಽಬ್ರವೀತ್ ॥ ೨೮ ॥

೨೪. ಮನಸ್ಸು, ಮಾತುಗಳು, ಶರೀರ ಇವುಗಳಿಂದ ತಮ್ಮ ತಮ್ಮ ಜಾತಿ ಆಶ್ರಮ ಇವುಗಳಿಗೆ ಉಚಿತವಲ್ಲದ ಕೆಲಸಗಳನ್ನು ಮಾಡುವವರು ನರಕಗಳನ್ನು ಹೊಂದುವರು. ದೇವತೆಗಳಿಗೆ, ನರಕದಲ್ಲಿರುವವರೆಲ್ಲರೂ ತಲೆಕೆಳಕಾಗಿರುವಹಾಗೆ ಕಾಣುವರು. ಇದರ ಹಾಗೆಯೇ ನರಕಗಳಲ್ಲಿ ಇರುವವರಿಗೆ ದೇವತೆಗಳು ತಲೆಕೆಳ ಕಾಗಿರುವಂತೆ ಕಾಣುವರು.

೨೫-೨೮. ಸ್ಥಿರವಾದ ತರು, ಗುಲ್ಮಲತಾದಿಗಳು, ಸಣ್ಣ ಸಣ್ಣ ಕ್ರಿಮಿಗಳು, ಪಕ್ಷಿಗಳು, ಪಶುಗಳು, ಮೃಗಗಳು, ಧರ್ಮವನ್ನು ಮಾಡಿದವರು, ದೇವತೆಗಳು, ಮೋಕ್ಷ ವನ್ನು ಮುಂದೆ ಹೊಂದುವವರು, ಎಲ್ಲಾ ಪ್ರಾಣಿಗಳು, ಸ್ವರ್ಗದಲ್ಲಿ ವಾಸಮಾಡುತ್ತಿರು ವವರು ಇವರೆಲ್ಲರೂ ನರಕವನ್ನು ಹೊಂದುವರು, ಪಾಪವನ್ನು ಮಾಡಿದವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೇ ಇದ್ದರೆ ನರಕವನ್ನು ಹೊಂದುವನು. ದೊಡ್ಡ ಪಾತಕಗಳು ದೊಡ್ಡ ಪ್ರಾಯಶ್ಚಿತ್ತಗಳಿಂದಲೂ ಸಣ್ಣ ಪಾತಕಗಳು ಸಣ್ಣ ಸಣ್ಣ ಪ್ರಾಯ ಶ್ಚಿತ್ತಗಳಿಂದಲೂ ನಾಶವನ್ನು ಹೊಂದುವವೆಂದು ಸ್ವಯಂಭುಪುತ್ರನಾದ ಮನುವು ಹೇಳಿರುವನು.

ಯಾನಿ ತೇಷಾಮಶೇಷಾಣಾಂ ಕರ್ಮಾಣ್ಯುಕ್ತಾನಿ ತೇಷು ವೈ ।
ಪ್ರಾಯಶ್ಚಿತ್ತಮಶೇಷೇಣ ಹರಾನುಸ್ಮರಣಂ ಪರಂ ॥ ೨೯ ॥

ಪ್ರಾಯಶ್ಚಿತ್ತಂ ತು ಯಸ್ಯೈವಂ ಪಾಪಂ ಪುಂಸಃ ಪ್ರಜಾಯತೇ ।
ಕೃತೇ ಪಾಪೇಽನುತಾಪೋಽಪಿ ಶಿವಸಂಸ್ಮರಣಂ ಪರಂ ॥ ೩೦ ॥

ಮಾಹೇಶ್ವರಮವಾಪ್ನೋತಿ ಮಧ್ಯಾಹ್ನಾದಿಷು ಸಂಸ್ಮರನ್ ।
ಪ್ರಾತರ್ನಿಶಿ ಚ ಸಂಧ್ಯಾಯಾಂ ಕ್ಷೀಣಪಾಪೋ ಭವೇನ್ನರಃ ॥ ೩೧ ॥

ಮುಕ್ತಿಂ ಪ್ರಯಾತಿ ಸ್ವರ್ಗಂ ವಾ ಸಮಸ್ತಕ್ಲೇಶಸಂಕ್ಷಯಂ ।
ಶಿವಸ್ಯ ಸ್ಮರಣಾದೇವ ತಸ್ಯ ಶಂಭೋರುಮಾಪತೇಃ ॥ ೩೨ ॥

ಪಾಪಾಂತರಾಯೋ ವಿಪೇಂದ್ರ ಜಪಹೋಮಾರ್ಚನಾದಿ ಚ ।
ಭವತ್ಯೇವ ನ ಕುತ್ರಾಪಿ ತ್ರೈಲೋಕ್ಯೇ ಮುನಿಸತ್ತಮ ॥ ೩೩ ॥

೨೯-೩೧. ಆ ಪಾಪಗಳ ಪರಿಹಾರಕ್ಕಾಗಿ ಪ್ರಾಯಶ್ಚಿತ್ತ ಕ್ರಮದಲ್ಲಿ ಹೇಳಿರುವ ಕರ್ಮಗಳೆಲ್ಲಕ್ಕೂ ಶಿವನಾಮಸ್ಮರಣೆಯು ಪಾಪದೋಷಗಳನ್ನು ಪರಿಹರಿಸುವ ಉತ್ತಮವಾದ ಪ್ರಾಯಶ್ಚಿತ್ತರೂಪದಿಂದ ಇರುವುದು. ಈ ಪ್ರಕಾರದಿಂದ ಪ್ರಾಯಶ್ಚಿತ್ತವನ್ನು ಮಾಡಿ ಹೋಗಲಾಡಿಸಿಕೊಳ್ಳಬಹುದಾದ ಪಾಪವು ಯಾರಿಗೆ ಉಂಟಾಗುವುದೋ, ಪಾತಕವನ್ನು ಮಾಡಿದನಂತರದಲ್ಲಿಯೇ ಪಶ್ಚಾತ್ತಾಪವು ಯಾರಿಗೆ ಉಂಟಾಗುವುದೋ ಅವರೆಲ್ಲರೂ ಶಿವನಾಮಸ್ಮರಣವನ್ನು ಮಾಡುವುದು ಉತ್ತಮವಾದದ್ದು. ಹೀಗೆ ಮಾಡಿದವನು ಮಹೇಶ್ವರನ ಸಂಬಂಧವಾದ ಲೋಕವನ್ನು ಹೊಂದುವನು. ಮಧ್ಯಾಹ್ನ ಪ್ರಾತಃಕಾಲ ಕಾಲ ರಾತ್ರಿಯಹೊತ್ತು ಸಂಧ್ಯಾಕಾಲ ಇವುಗಳಲ್ಲಿ ಶಿವನಾಮಸ್ಮರಣೆಯನ್ನು ಮಾಡಿದವನು ತನ್ನ ಪಾಪಗಳನ್ನು ಕಳೆದುಕೊಂಡು ಎಲ್ಲಾ ವಿಧವಾದ ಸಂಕಟಗಳೂ ಪರಿಹಾರವಾಗಲು, ಸ್ವರ್ಗವನ್ನೂ ನಂತರ ಮುಕ್ತಿಯನ್ನೂ ಹೊಂದುವನು.

೩೨-೩೪. ಪಾರ್ವತೀಪತಿಯಾದ ಆ ಶಿವನ ನಾಮಸ್ಮರಣಮಾತ್ರದಿಂದಲೇ ಪಾಪಗಳನ್ನು ಮಾಡುವುದಕ್ಕೆ ವಿಘ್ನಗಳುಂಟಾಗಿ ಜಪ ಹೋಮ ಪೂಜಾದಿಗಳನ್ನು ಮಾಡಬೇಕೆಂಬ ಸದ್ಬುದ್ಧಿಯು ಮೂರುಲೋಕದಲ್ಲಿರುವವರಿಗೂ ಹುಟ್ಟುವುದು. ಎಲೈ ಮುನಿಶ್ರೇಷ್ಠನೇ ಕೇಳು. ಮಹೇಶ್ವರನಲ್ಲಿ ಬುದ್ಧಿಯನ್ನು ಇರಿಸಿ, ಜಪ ಹೋಮ

ಮಹೇಶ್ವರೇ ಮತಿರ್ಯಸ್ಯ ಜಪಹೋಮಾರ್ಚನಾದಿಷು ।
ಯತ್ಪುಣ್ಯಂ ತತ್ಕೃತಂ ತೇನ ದೇವೇಂದ್ರತ್ವಾದಿಕಂ ಫಲಂ ॥ ೩೪ ॥

ಪುಮಾನ್ನ ನರಕಂ ಯಾತಿ ಯಃ ಸ್ಮರೇದ್ಭಕ್ತಿತೋ ಮುನೇ ।
ಅಹರ್ನಿಶಂ ಶಿವಂ ತಸ್ಮಾತ್ಸ ಕ್ಷೀಣಾಶೇಷಪಾತಕಃ ॥ ೩೫ ॥

ನರಕಸ್ವರ್ಗಸಂಜ್ಞಾಯೈ ಪಾಪಪುಣ್ಯೇ ದ್ವಿಜೋತ್ತಮ ।
ಯಯೋಸ್ತ್ವೇಕಂ ತು ದುಃಖಾಯಾನ್ಯತ್ಸುಖಾಯೋದ್ಭವಾಯ ಚ ॥ ೩೬ ॥

ತದೇವ ಪ್ರೀತಯೇ ಭೂತ್ವಾ ಪುನರ್ದುಃಖಾಯ ಜಾಯತೇ ।
ತಸ್ಮಾದ್ದುಃಖಾತ್ಮಕಂ ನಾಸ್ತಿ ನ ಚ ಕಿಂಚಿತ್ಸುಖಾತ್ಮಕಂ ॥ ೩೭ ॥

ಮನಸಃ ಪರಿಣಾಮೋಽಯಂ ಸುಖದುಃಖೋಪಲಕ್ಷಣಃ ।
ಜ್ಞಾನಮೇವ ಪರಂ ಬ್ರಹ್ಮ ಜ್ಞಾನಂ ತತ್ತ್ವಾಯ ಕಲ್ಪತೇ ॥ ೩೮ ॥

ಪೂಜಾದಿಗಳನ್ನು ಮಾಡಿದವನಿಗೆ ಉಂಟಾಗುವ ಪುಣ್ಯವು ದೇವೇಂದ್ರನ ಪದವಿಯೇ ಮೊದಲಾದ ಫಲವನ್ನು ಕೊಡುವುದಾಗಿರುವುದು.

೩೫. ಭಕ್ತಿಯಿಲ್ಲದಿದ್ದಾಗ್ಯೂ ಶಿವನಾಮಸ್ಮರಣ ಮಾಡುವವನು ನರಕವನ್ನು ಹೊಂದುವುದಿಲ್ಲ. ಹಗಲೂ ರಾತ್ರಿಯೂ ಶಿವನಾಮಸ್ಮರಣ ಮಾಡುವವನಿಗೆ ಎಲ್ಲಾ ವಿಧವಾದ ಪಾಪಗಳೂ ನಾಶವನ್ನು ಹೊಂದುವವು.

೩೬-೩೮. ಎಲೈ ಬ್ರಾಹ್ಮಣಶ್ರೇಷ್ಠನೇ, ಕೇಳು. ಪುಣ್ಯವು ಸ್ವರ್ಗವನ್ನೂ ಪಾಪವು ನರಕವನ್ನೂ ಉಂಟುಮಾಡುವುದೆಂದು ಪ್ರಸಿದ್ಧವಾಗಿರುವುದು. ಅವುಗಳಲ್ಲಿ ಒಂದು ಮೊದಲು ಸಂತೋಷವನ್ನುಂಟುಮಾಡಿದನಂತರ ದುಃಖವನ್ನು ಉಂಟು ಮಾಡುವುದಾಗಿರುವುದು. ಇನ್ನೊಂದು ದುಃಖವನ್ನುಂಟುಮಾಡಿ ಸುಖವನ್ನುಂಟು ಮಾಡುವುದು. ಆದ್ದರಿಂದ ಯಾವ ಕಾರ್ಯವೂ ಕೇವಲ ದುಃಖವನ್ನೇ ಉಂಟು ಮಾಡುವುದಾಗಲೀ ಕೇವಲ ಸುಖವನ್ನೇ ಉಂಟುಮಾಡುವುದಾಗಲೀ ಇರುವುದಿಲ್ಲ. ಸುಖದುಃಖವೆಂದು ತಿಳಿಯುವುದು ಮನಸ್ಸಿನ ಜ್ಞಾನದ ಪರಿಣಾಮವಾಗಿರುವುದು. ಆದ್ದರಿಂದ ಜ್ಞಾನವೇ ಉತ್ತಮವಾದ ಬ್ರಹ್ಮರೂಪದಿಂದ ಇರುವುದು. ಜ್ಞಾನವೇ ತತ್ವಗಳ ರೂಪದಿಂದ ಇರುವುದು.

ಜ್ಞಾನಾತ್ಮಕಮಿದಂ ವಿಶ್ವಂ ಸಕಲಂ ಸಚರಾಚರಂ ।
ಪರವಿಜ್ಞಾನತಃ ಕಿಂಚಿದ್ವಿದ್ಯತೇ ನ ಪರಂ ಮುನೇ ॥ ೩೯ ॥

ಏವಮೇತನ್ಮಯಾಖ್ಯಾತಂ ಸರ್ವಂ ನರಕಮಂಡಲಂ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ಸಾಂಪ್ರತಂ ಮಂಡಲಂ ಭುವಃ ॥ ೪೦ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಬ್ರಹ್ಮಾಂಡವರ್ಣನೇ ನರಕೋದ್ಧಾರವರ್ಣನಂ ನಾಮ
ಷೋಡಶೋಽಧ್ಯಾಯಃ



೩೯. ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ಜ್ಞಾನದ ರೂಪದಿಂದಲೇ ಇರುವುದು. ಎಲೈ ವ್ಯಾಸಮುನಿಯೇ, ಕೇಳು. ಪರಬ್ರಹ್ಮನ ವಿಷಯವಾದ ಜ್ಞಾನಕ್ಕಿಂತಲೂ ಬೇರೆಯಾದ ಮತ್ತೊಂದು ಉತ್ತಮ ಜ್ಞಾನವಿಲ್ಲ.

೪೦. ನಾನು ಈ ಪ್ರಕಾರವಾಗಿ ನರಕಗಳ ಸನ್ನಿವೇಶ ಕ್ರಮವೆಲ್ಲವನ್ನೂ ವಿಸ್ತರಿಸಿ ಹೇಳಿರುವೆನು. ಈಗ ಇನ್ನು ಮುಂದೆ ಭೂಮಂಡಲಸ್ವರೂಪವನ್ನು ವಿವರಿಸಿ ಹೇಳುವೆನು, ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಬ್ರಹ್ಮಾಂಡವರ್ಣನೆಯಲ್ಲಿ
ನರಕೋದ್ಧಾರವರ್ಣನವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಸಪ್ತದಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

**ಪಾರಾಶರ್ಯ ಸುಸಂಪೇಕ್ಷಾಚ್ಛೃಣು ತ್ವಂ ವದತೋ ಮಮ।**
**ಮಂಡಲಂ ಚ ಭುವಸ್ಸಮ್ಯಕ್ಸಪ್ತದೀಪಾದಿಸಂಯುತಂ ॥ ೧ ॥**

**ಜಂಬೂಃ ಪ್ಲಕ್ಷಶ್ಶಾಲ್ಮಲಿಶ್ಚ ಕುಶಃ ಕ್ರೌಂಚಶ್ಚ ಶಾಕಕಃ ।**
**ಪುಷ್ಕರಸ್ಸಪ್ತಮಸ್ಸರ್ವೇ ಸಮುದ್ರೈಸ್ಸಪ್ತಭಿರ್ವೃತಾಃ ॥ ೨ ॥**

---

## ಹದಿನೇಳನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು:—ಎಲೈ ಪರಾಶರ ಪುತ್ರನಾದ ವ್ಯಾಸ ಮುನಿಯೇ, ಕೇಳು. ನಾನು ಸಪ್ತದ್ವೀಪಸಹಿತವಾದ ಭೂಮಂಡಲ ವಿಸ್ತಾರವನ್ನು ಸಂಕ್ಷೇಪವಾಗಿ ಹೇಳುವೆನು.

೨-೪. ಜಂಬೂದ್ವೀಪ, ಪ್ಲಕ್ಷದ್ವೀಪ, ಶಾಲ್ಮಲಿದ್ವೀಪ, ಕುಶದ್ವೀಪ, ಶಾಕದ್ವೀಪ, ಪುಷ್ಕರದ್ವೀಪ, ಎಂದು ಏಳು ದ್ವೀಪಗಳಿರುವವು. ಈ ಏಳು ದ್ವೀಪಗಳೂ ಏಳು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿರುವವು. ಉಪ್ಪುನೀರಿನ ಸಮುದ್ರ, ಕಬ್ಬಿನ ಹಾಲಿನ ಸಮುದ್ರ, ಮದ್ಯದ ಸಮುದ್ರ, ತುಪ್ಪದ ಸಮುದ್ರ, ಮೊಸರಿನ ಸಮುದ್ರ, ಹಾಲಿನ ಸಮುದ್ರ, ಸಿಹಿನೀರಿನ ಸಮುದ್ರ ಎಂದು ಈ ಸಪ್ತಸಮುದ್ರಗಳಿಗೆ ಹೆಸರು

ಲವಣೇಕ್ಷುರಸೌ ಸರ್ಪಿರ್ದಧಿದುಗ್ಧಜಲಾಶಯಾಃ ।
ಜಂಬೂದ್ವೀಪಸ್ಸಮಸ್ತಾನಾಮೇತೇಷಾಂ ಮಧ್ಯತಃ ಸ್ಥಿತಃ ॥ ೩ ॥

ತಸ್ಯಾಪಿ ಮೇರುಃ ಕಾಲೇಯ ಮಧ್ಯೇ ಕನಕಪರ್ವತಃ ।
ಪ್ರವಿಷ್ಟಃ ಷೋಡಶಾಧಸ್ತಾದ್ಯೋಜನೈಸ್ತಸ್ಯ ಚೋಚ್ಛ್ರಯಃ ॥ ೪ ॥

ಚತುರಶೀತಿಮಾನೈಸ್ತ್ರ್ಯದ್ವಾತ್ರಿಂಶನ್ಮೂರ್ಧ್ನಿ ವಿಸ್ತೃತಃ ।
ಭೂಮಿಪೃಷ್ಠಸ್ಥಶೈಲೋಽಯಂ ವಿಸ್ತರಸ್ತಸ್ಯ ಸರ್ವತಃ ॥ ೫ ॥

ಮೂಲೇ ಶೋಡಷಸಾಹಸ್ರಃ ಕರ್ಣಿಕಾಕಾರಸಂಸ್ಥಿತಃ ।
ಹಿಮವಾನ್ಹೇಮಕೂಟಶ್ಚ ನಿಷಧಶ್ಚಾಸ್ಯ ದಕ್ಷಿಣೇ ॥ ೬ ॥

ನೀಲಃ ಶ್ವೇತಶ್ಚ ಶೃಂಗೀ ಚ ಉತ್ತರೇ ವರ್ಷಪರ್ವತಾಃ ।
ದಶಸಾಹಸ್ರಿಕಾ ಹ್ಯೇತೇ ರತ್ನವಂತೋಽರುಣಪ್ರಭಾಃ ॥ ೭ ॥

---

ಗಳಿರುವವು. ಜಂಬೂದ್ವಿಪವು ಈ ಎಲ್ಲಾ ದ್ವೀಪಗಳಿಗಿಂತಲೂ ಮಧ್ಯದಲ್ಲಿರುವುದು. ಎಲೈ ವ್ಯಾಸಮುಷಿಯೇ, ಕೇಳು. ಆ ಜಂಬೂದ್ವೀಪದ ಮಧ್ಯದಲ್ಲಿ ಚಿನ್ನದ ಬೆಟ್ಟವಾದ ಮೇರುಪರ್ವತವಿರುವುದು. ಇದು ಕೆಳಭಾಗದಲ್ಲಿ ಹದಿನಾರು ಯೋಜನಗಳವರಿಗೂ ಭೂಮಿಯ ಕೆಳಗೆ ವ್ಯಾಪಿಸಿರುವುದು. ಭೂಮಿಯಮೇಲೆ ಎಂಭತ್ತನಾಲ್ಕು ಯೋಜನಗಳಷ್ಟು ಎತ್ತರವಾಗಿರುವುದು. ಈ ಪರ್ವತದ ನೆತ್ತಿಯಮೇಲೆ ಮೂವತ್ತೆರಡು ಯೋಜನಗಳಷ್ಟು ವಿಸ್ತಾರವಾಗಿರುವದು.

೫-೭. ಈ ಪರ್ವತವು ಭೂಮಿಯ ಕೆಳಭಾಗದಲ್ಲಿ ವಿಸ್ತಾರವಾಗಿ ಎಲ್ಲಾ ಕಡೆಯಲ್ಲಿಯೂ ಹರಡಿಕೊಂಡು ಇರುವುದು. ಬುಡದಲ್ಲಿ ಹದಿನಾರುಸಾವಿರ ಯೋಜನ ಅಗಲವುಳ್ಳದ್ದಾಗಿ ಪದ್ಮದ ಕರ್ಣಿಕಾರದಂತಿರುವುದು. ಹಿಮವತ್ಪರ್ವತ, ಹೇಮಕೂಟಪರ್ವತ, ನಿಷಧಪರ್ವತ, ಇವು ದಕ್ಷಿಣದಲ್ಲಿರುವವು. ನೀಲ, ಶ್ವೇತ, ಶೃಂಗೀ ಎಂಬ ಪರ್ವತಗಳು ಇದರ ಉತ್ತರದಲ್ಲಿ ವರ್ಷಗಳ ಮೇರೆಯಾಗಿ ಇರುವವು. ಇವುಗಳು ಹತ್ತುಸಾವಿರ ಯೋಜನ ವಿಸ್ತಾರವುಳ್ಳವುಗಳಾಗಿ ರತ್ನಗಳಿಂದ ತುಂಬಿರುವವು. ಮತ್ತು ಕೆಂಪಾಗಿರುವ ಬಣ್ಣದ ಕಾಂತಿಯಿಂದ ಕೂಡಿ ಸಾವಿರಯೋಜನ ಎತ್ತರವಾಗಿಯೂ ಅಷ್ಟೇ ವಿಸ್ತಾರವಾಗಿಯೂ ಇರುವವು.

ಸಹಸ್ರಯೋಜನೋಕ್ಷ್ಣೇಧಾಸ್ತಾವದ್ವಿಸ್ತಾರಿಣಶ್ಚ ತೇ ।
ಭಾರತಂ ಪ್ರಥಮಂ ವರ್ಷಂ ತತಃ ಕಿಂಪುರುಷಂ ಸ್ಮೃತಂ ॥ ೮ ॥

ಹರಿವರ್ಷಂ ತತೋಽನ್ಯದ್ವೈ ಮೇರೋರ್ದಕ್ಷಿಣತೋ ಮುನೇ ।
ರಮ್ಯಕಂ ಚೋತ್ತರೇ ಪಾರ್ಶ್ವೇ ತಸ್ಯಾಂಶೇ ತು ಹಿರಣ್ಮಯಂ ॥ ೯ ॥

ಉತ್ತರೇ ಕುರವಶ್ಚೈವ ಯಥಾ ವೈ ಭಾರತೇ ತಥಾ ।
ನವಸಾಹಸ್ರಮೇಕೈಕಮೇತೇಷಾಂ ಮುನಿಸ್ತತ್ತಮ ॥ ೧೦ ॥

ಇಲಾವೃತಂ ತು ತನ್ಮಧ್ಯೇ ತನ್ಮಧ್ಯೇ ಮೇರುರುಚ್ಛ್ರಿತಃ ।
ಮೇರೋಶ್ಚತುರ್ದಿಶಂ ತತ್ರ ನವಸಾಹಸ್ರಮುಚ್ಛ್ರಿತಂ ॥ ೧೧ ॥

ಇಲಾವೃತಮೃಷಿಶ್ರೇಷ್ಠ ಚತ್ವಾರಶ್ಚಾತ್ರ ಪರ್ವತಾಃ ।
ವಿಷ್ಕಂಭಾ ರಚಿತಾ ಮೇರೋರ್ಯೋಜಿತಾಃ ಪುನರುಚ್ಛ್ರಿತಾಃ ॥ ೧೨ ॥

೮-೧೧. ಭರತವರ್ಷವು ಮೊದಲನೆಯದು, ಎರಡನೆಯದು ಕಿಂಪುರುಷ ವರ್ಷವು. ಮೂರನೆಯದು ಹರಿವರ್ಷವು. ಇವೆಲ್ಲವೂ ಮೇರುವಿನ ದಕ್ಷಿಣದದಿಕ್ಕಿನಲ್ಲಿರುವುವು. ಎಲೈ ವ್ಯಾಸಮುನಿಯೇ, ಕೇಳು ರಮ್ಯಕವರ್ಷವು ಮೇರುವಿನ ಉತ್ತರ ಪಾರ್ಶ್ವದಲ್ಲಿರುವುದು. ಅದರ ಭಾಗವಾದ ಹಿರಣ್ಮಯ ವರ್ಷವು ಅಲ್ಲಿಯೇ ಇರುವುದು. ಮೇರುವಿನ ದಕ್ಷಿಣದಲ್ಲಿ ಭಾರತವರ್ಷವು ಹೇಗೆ ಇರುವುದೋ ಹಾಗೆಯೇ ಉತ್ತರದಲ್ಲಿ ಕುರುದೇಶಗಳು ಇರುವವು. ಇವು ಪ್ರತಿಯೊಂದೂ ಒಂಭತ್ತು ಸಾವಿರ ಯೋಜನಗಳು ವಿಸ್ತಾರವಾಗಿರುವವು. ಇವುಗಳೆಲ್ಲಕ್ಕೂ ಮಧ್ಯದಲ್ಲಿ ಇಲಾವೃತವರ್ಷವು ಇರುವುದು. ಅದರ ಮಧ್ಯದಲ್ಲಿ ಮೇರುಪರ್ವತವು ಎತ್ತರವಾಗಿರುವುದು. ಮೇರುವಿನ ನಾಲ್ಕು ದಿಕ್ಕಿನಲ್ಲಿಯೂ ಭೂಮಿಯು ಒಂಭತ್ತು ಸಾವಿರ ಯೋಜನ ಎತ್ತರವಾಗಿರುವುದು.

೧೨-೧೩. ಎಲೈ ಋಷಿಶ್ರೇಷ್ಠನೇ ಕೇಳು ಇಲಾವೃತ ವರ್ಷವನ್ನು ಹೇಳುವೆನು. ಈ ವರ್ಷದಲ್ಲಿ ನಾಲ್ಕು ಪರ್ವತಗಳು ಇರುವವು. ಇವುಗಳು ವಿಷ್ಕಂಭದ ಆಕಾರದಿಂದ ಮೇರುವಿಗೆ ಸೇರಿಕೊಂಡು ಎತ್ತರವಾಗಿ ಇರುವವು. ಪೂರ್ವದಿಕ್ಕಿನಲ್ಲಿ

ಪೂರ್ವೇ ಹಿ ಮಂದರೋ ನಾಮ ದಕ್ಷಿಣೇ ಗಂಧಮಾದನಃ ।
ವಿಪುಲಃ ಪಶ್ಚಿಮೇ ಭಾಗೇ ಸುಪಾರ್ಶ್ವಶ್ಚೋತ್ತರೇ ಸ್ಥಿತಃ ॥ ೧೩ ॥

ಕದಂಬೋ ಜಂಬುವೃಕ್ಷಶ್ಚ ಪಿಪ್ಪಲೋ ವಟ ಏವ ಚ ।
ಏಕಾದಶಶತಾಯಾಮಾಃ ಪಾದಪಾ ಗಿರಿಕೇತವಃ ॥ ೧೪ ॥

ಜಂಬೂದ್ವೀಪಸ್ಯ ನಾಮ್ನೋ ವೈ ಹೇತುಂ ಶೃಣು ಮಹಾಮುನೇ ।
ವಿರಾಜತೇ ಮಹಾವೃಕ್ಷಾಸ್ತತ್ಸ್ವಭಾವಂ ವದಾಮಿ ತೇ ॥ ೧೫ ॥

ಮಹಾಗಜಪ್ರಮಾಣಾನಿ ಜಂಬ್ವಾಸ್ತಸ್ಯಾಃ ಫಲಾನಿ ಚ ।
ಪತಂತಿ ಭೂಭೃತಃ ಪೃಷ್ಠೇ ಶೀರ್ಯಮಾಣಾನಿ ಸರ್ವತಃ ॥ ೧೬ ॥

ರಸೇನ ತೇಷಾಂ ವಿಖ್ಯಾತಾ ತತ್ರ ಜಂಬೂನದೀತಿ ವೈ ।
ಪರಿತೋ ವರ್ತತೇ ತತ್ರ ಪೀಯತೇ ತನ್ನಿವಾಸಿಭಿಃ ॥ ೧೭ ॥

ಮಂದರಪರ್ವತವೂ ದಕ್ಷಿಣ ದಿಕ್ಕಿನಲ್ಲಿ ಗಂಧಮಾದನ ಪರ್ವತವೂ ಪಶ್ಚಿಮದಲ್ಲಿ ವಿಪುಲವೆಂಬ ಪರ್ವತವೂ ಇರುವವು.

೧೪. ಈ ಇಲಾವೃತ ವರ್ಷದ ಪೂರ್ವಾದಿ ದಿಕ್ಕುಗಳಲ್ಲಿ ಕ್ರಮವಾಗಿ ಕದಂಬ, ಜಂಬೂ (ನೇರಳೆ) ಪಿಪ್ಪಲ, ವಟ (ಆಲದಮರ) ಎಂಬ ಮರಗಳು ಇರವವು. ಈ ಮರಗಳು ಒಂದು ಸಾವಿರದನೂರು ಯೋಜನ ಅಗಲವುಳ್ಳವುಗಳಾಗಿ ಈ ಪರ್ವತಗಳಿಗೆ ಬಾವುಟಗಳಂತೆ ಇರುವವು.

೧೫-೧೮. ಎಲೈ ಮಹಾಮುನಿಯೇ, ಕೇಳು. ಜಂಬೂದ್ವೀಪವೆಂದು ಹೆಸರು ಬರಲು ಕಾರಣವನ್ನು ಹೇಳುವೆನು. ಈ ಮರಗಳು ದೊಡ್ಡವುಗಳಾಗಿ ಪ್ರಕಾಶಿಸುತ್ತಿರುವವು. ಈ ಮರಗಳ ಸ್ವಭಾವಗಳನ್ನು ಹೇಳುವೆನು. ಈ ಜಂಬೂಮರದಿಂದ ದೊಡ್ಡ ಆನೆಯಷ್ಟು ದಪ್ಪನಾಗಿರುವ ಹಣ್ಣುಗಳು ಬೆಟ್ಟದಮೇಲೆ ಬೀಳುವವು. ಆ ಹಣ್ಣುಗಳು ಒಡೆದುಹೋಗಿ ಅದರ ರಸವು ಎಲ್ಲಾ ಕಡೆಯಲ್ಲಿಯೂ ಹರಿಯುವುದರಿಂದಲೇ ಜಂಬೂನದಿಯೆಂದು ಹೆಸರುಳ್ಳ ಒಂದು ನದಿಯು ಪ್ರಸಿದ್ಧವಾಗಿರುವುದು. ಈ ನದಿಯು ಬೆಟ್ಟದ ಸುತ್ತಲೂ ಹರಿಯುವುದು. ಅಲ್ಲಿ ವಾಸಮಾಡುವವರು ಅದರ ನೀರನ್ನು ಕುಡಿಯುವರು. ಇದರಿಂದ ಅವರಿಗೆ ಶರೀರದಲ್ಲಿ ಬೆವರು, ಕೆಟ್ಟವಾಸನೆ,

**ನ ಸ್ವೇದೋ ನ ಚ ದೌರ್ಗಂಧ್ಯಂ ನ ಜರಾ ಚೇಂದ್ರಿಯಗ್ರಹಃ ।**
**ತಸ್ಯಾಸ್ತಟೇ ಸ್ಥಿತಾನಾಂ ತು ಜನಾನಾಂ ತತ್ರ ಜಾಯತೇ ॥ ೧೮ ॥**

**ತೀರಮೃತ್ಸ್ನಾಂ ಚ ಸಂಪ್ರಾಪ್ಯ ಮುಖವಾಯುವಿಶೋಷಿತಾಂ ।**
**ಜಾಂಬೂನದಾಖ್ಯಂ ಭವತಿ ಸುವರ್ಣಂ ಸಿದ್ಧಭೂಷಣಂ ॥ ೧೯ ॥**

**ಭದ್ರಾಶ್ವಂ ಪೂರ್ವತೋ ಮೇರೋಃ ಕೇತುಮಾಲಂ ಚ ಪಶ್ಚಿಮೇ ।**
**ವರ್ಷೇ ದ್ವೇ ತು ಮುನಿಶ್ರೇಷ್ಠ ತಯೋರ್ಮಧ್ಯೇ ಇಲಾವೃತಂ ॥ ೨೦ ॥**

**ವನಂ ಚೈತ್ರರಥಂ ಪೂರ್ವೇ ದಕ್ಷಿಣೇ ಗಂಧಮಾದನಃ ।**
**ವಿಭ್ರಾಜಂ ಪಶ್ಚಿಮೇ ತದ್ವದುತ್ತರೇ ನಂದನಂ ಸ್ಮೃತಂ ॥ ೨೧ ॥**

**ಅರುಣೋದಂ ಮಹಾಭದ್ರಂ ಶೀತೋದಂ ಮಾನಸಂ ಸ್ಮೃತಂ ।**
**ಸರಾಂಸ್ಯೇತಾನಿ ಚತ್ವಾರಿ ದೇವಭೋಗ್ಯಾನಿ ಸರ್ವಶಃ ॥ ೨೨ ॥**

**ಶೀತಾಂಜನಃ ಕುರುಂಗಶ್ಚ ಕುರರೋ ಮಾಲ್ಯವಾಂಸ್ತಥಾ ।**
**ವಿಕ್ಕೈಕಪ್ರಮುಖಾ ಮೇರೋಃ ಪೂರ್ವತಃ ಕೇಸರಾಚಲಾಃ ॥ ೨೩ ॥**

ಮುಪ್ಪು ಇವುಗಳು ಉಂಟಾಗುವುದಿಲ್ಲ. ಇಂದ್ರಿಯ ಪಾಟವವು ಚೆನ್ನಾಗಿರುವುದು. ಆ ಜಂಬೂನದಿಯ ದಡದಲ್ಲಿರುವವರಿಗೆ ಈ ಪ್ರಕಾರವಾದ ಸ್ಥಿತಿಯು ಉಂಟಾಗಿರುವುದು.

೧೯-೨೨. ಆ ಹೊಳೆಯಮೇಲೆ ಬೀಸುವ ಗಾಳಿಯಿಂದ ಒಣಗಿರುವ ಆ ನದಿಯ ದಡದ ಮಣ್ಣು ಒಣಗಿ ಜಂಬೂನದವೆಂದು ಹೆಸರುಳ್ಳ ಚಿನ್ನವಾಗುವುದು. ಸಿದ್ಧರಾದವರು ಇದನ್ನು ಆಭರಣಕ್ಕಾಗಿ ಉಪಯೋಗಿಸುವರು. ಮೇರುಪರ್ವತದ ಪೂರ್ವದಲ್ಲಿ ಭದ್ರಾಶ್ವವೆಂಬ ವರ್ಷವೂ ಪಶ್ಚಿಮದಲ್ಲಿ ಕೇತುಮಾಲವೆಂಬ ವರ್ಷವೂ ಇರುವವು. ಈ ಎರಡು ವರ್ಷಗಳ ಮಧ್ಯದಲ್ಲಿ ಇಳಾವೃತವೆಂಬ ವರ್ಷವಿರುವುದು ಪೂರ್ವದಲ್ಲಿ ಚೈತ್ರರಥವನವೂ, ದಕ್ಷಿಣದಲ್ಲಿ ಗಂಧಮಾದನ ಪರ್ವತವೂ, ಪಶ್ಚಿಮದಲ್ಲಿ ವಿಭ್ರಾಜವೆಂಬ ವನವೂ, ಉತ್ತರದಲ್ಲಿ ನಂದನವನವೂ ಇರುವವು. ಇಲ್ಲಿ ಅರುಣೋದ, ಮಹಾಭದ್ರ, ಶೀತೋದ, ಮಾನಸ ಎಂಬ ನಾಲ್ಕು ಸರೋವರಗಳು ಯಾವಾಗಲೂ ದೇವತೆಗಳ ಭೋಗಕ್ಕೆ ಅನುಕೂಲವಾಗಿರುವವು.

೨೩-೨೬. ಶೀತಾಂಜನ, ಕುರಂಗ, ಕುರರ ಮಾಲ್ಯವಂತ ಎಂಬ ಈ ಪರ್ವತಗಳು ಮೇರುವಿನ ಪೂರ್ವದಿಕ್ಕಿನಲ್ಲಿ ಕೇಸರದಂತಿರುವವು. ತ್ರಿಕೂಟ, ಶ್ರಿಶಿರ, ಪತಂಗ,

ತ್ರಿಕೂಟಶ್ಶಿಶಿರಶ್ಚೈವ ಪತಂಗೋ ರುಚಕಸ್ತಥಾ ।
ನಿಷಧಃ ಕಪಿಲಾದ್ಯಾಶ್ಚ ದಕ್ಷಿಣೇ ಕೇಸರಾಚಲಾಃ ॥ ೨೪ ॥

ಸಿನೀವಾಸಃ ಕುಸುಂಭಶ್ಚ ಕಪಿಲೋ ನಾರದಸ್ತಥಾ ।
ನಾಗಾದಯಶ್ಚ ಗಿರಯಃ ಪಶ್ಚಿಮೇ ಕೇಸರಾಚಲಾಃ ॥ ೨೫ ॥

ಶಂಖಚೂಡೋಽಥ ಋಷಭೋ ಹಂಸೋ ನಾಮ ಮಹೀಧರಃ ।
ಕಾಲಂಜರಾದ್ಯಾಶ್ಚ ತಥಾ ಉತ್ತರೇ ಕೇಸರಾಚಲಾಃ ॥ ೨೬ ॥

ಮೇರೋರುಪರಿ ಮಧ್ಯೇ ಹಿ ಶಾತಕೌಂಭಂ ವಿಧೇಃ ಪುರಂ ।
ಚತುರ್ದಶಸಹಸ್ರಾಣಿ ಯೋಜನಾನಿ ಚ ಸಂಖ್ಯಯಾ ॥ ೨೭ ॥

ಅಷ್ಟಾನಾಂ ಲೋಕಪಾಲಾನಾಂ ಪರಿತಸ್ತಾಮನುಕ್ರಮಾತ್ ।
ಯಥಾದಿಶಂ ಯಥಾರೂಪಂ ಪುರೋಽಷ್ಟಾವುಪಕಲ್ಪಿತಾಃ ॥ ೨೮ ॥

ತಸ್ಯಾಂ ಚ ಬ್ರಹ್ಮಣಃ ಪುರ್ಯಾಂ ಪಾತಯಿತ್ವೇಂದುಮಂಡಲಂ ।
ವಿಷ್ಣುಪಾದಾವಿನಿಷ್ಕ್ರಾಂತಾ ಗಂಗಾ ಪತತಿ ವೈ ನದೀ ॥ ೨೯ ॥

ರುಚಕ ನಿಷಧ ಕಪಿಲ ಇವೇ ಮೊದಲಾದ ಪರ್ವತಗಳು ಮೇರುವಿನ ದಕ್ಷಿಣ ದಿಕ್ಕಿನಲ್ಲಿ ಕೇಸರಪರ್ವತಗಳಾಗಿರುವವು. ಸಿನೀವಾಸ, ಕುಸುಂಭ, ಕಪಿಲ, ನಾರದ, ನಾಗ ಇವೇ ಮೊದಲಾದ ಗಿರಿಗಳು ಮೇರುಪರ್ವತದ ಪಶ್ಚಿಮದಲ್ಲಿ ಕೇಸರ ಪರ್ವತಗಳಾಗಿರುವವು. ಶಂಖಚೂಡ, ಋಷಭ, ಹಂಸ, ಕಾಲಂಜರ ಇವೇ ಮೊದಲಾದ ಬೆಟ್ಟಗಳು ಮೇರು ಪರ್ವತದ ಉತ್ತರದಲ್ಲಿ ಕೇಸರಪರ್ವತಗಳಾಗಿರುವವು.

೨೭. ಮೇರುಪರ್ವತದ ಮೇಲುಗಡೆಯ ಮಧ್ಯಭಾಗದಲ್ಲಿ ಬ್ರಹ್ಮನ ನಗರವು ಚಿನ್ನದಿಂದ ನಿರ್ಮಿತವಾದದ್ದಾಗಿ ಹದಿನಾಲ್ಕುಸಾವಿರ ಯೋಜನಗಳ ವಿಸ್ತಾರವುಳ್ಳದ್ದಾಗಿ ಕಂಗೊಳಿಸುತ್ತಿರುವುದು.

೨೮-೩೦. ಈ ಮೇರುಪರ್ವತದ ಎಂಟು ದಿಕ್ಕಿನಲ್ಲಿ ಸುತ್ತಲೂ ಎಂಟು ಜನ ಲೋಕಪಾಲಕರ ಪಟ್ಟಣಗಳು ಆಯಾಯ ದಿಕ್ಕಿಗೆ ಅನುಸಾರವಾಗಿ ಅವರವರಿಗೆ ಅನುಕೂಲವಾದ ಸನ್ನಿವೇಶವುಳ್ಳದ್ದಾಗಿ ನಿರ್ಮಿತವಾಗಿರುವವು. ಬ್ರಹ್ಮನ ಆ ನಗರದಲ್ಲಿ ಗಂಗಾನದಿಯು ವಿಷ್ಣುಪಾದಗಳಿಂದ ಹೊರಹೊರಟು ಚಂದ್ರಮಂಡಲದ ಮೇಲೆ

**ಸೀತಾ ಚಾಲಕನಂದಾ ಚ ಚಕ್ಷುರ್ಭದ್ರಾ ಚ ವೈ ಕ್ರಮಾತ್ ।**
**ಸಾ ತತ್ರ ಪತಿತಾ ದಿಕ್ಷು ಚತುರ್ಧಾ ಪ್ರತ್ಯಪದ್ಯತ ॥ ೩೦ ॥**

**ಸೀತಾ ಪೂರ್ವೇಣ ಶೈಲಂ ಹಿ ನಂದಾ ಚೈವ ತು ದಕ್ಷಿಣೇ ।**
**ಸಾ ಚಕ್ಷುಃ ಪಶ್ಚಿಮೇ ಚೈವ ಭದ್ರಾ ಚೋತ್ತರತೋ ವ್ರಜೇತ್ ॥ ೩೧ ॥**

**ಗಿರೀನತೀತ್ಯ ಸಕಲಾಂಶ್ಚತುರ್ದಿಕ್ಷು ಮಹಾಂಬುಧಿಂ ।**
**ಸಾ ಯಯೌ ಪ್ರಯತಾ ಭೂತಾ ಗಂಗಾ ತ್ರಿಪಥಗಾಮಿನೀ ॥ ೩೨ ॥**

**ಸುನೀಲನಿಷಧೌ ಯೌ ತೌ ಮಾಲ್ಯವದ್ಗಂಧಮಾದನೌ ।**
**ತೇಷಾಂ ಮಧ್ಯಗತೋ ಮೇರುಃ ಕರ್ಣಿಕಾಕಾರಸಂಸ್ಥಿತಃ ॥ ೩೩ ॥**

**ಭಾರತಃ ಕೇತುಮಾಲಶ್ಚ ಭದ್ರಾಶ್ವಃ ಕುರುವಸ್ತಥಾ ।**
**ಪತ್ರಾಣಿ ಲೋಕಪದ್ಮಸ್ಯ ಮರ್ಯಾದಾಲೋಕಪರ್ವತಾಃ ॥ ೩೪ ॥**

ಬಿದ್ದು ಅಲ್ಲಿಂದ ಹರಿಯುತ್ತಿರುವುದು. ಆ ಗಂಗಾನದಿಯು ಸೀತಾ, ಅಲಕನಂದಾ, ಚಕ್ಷುಃ, ಭದ್ರಾ ಎಂದು ಹೆಸರಿನ ನಾಲ್ಕು ಭಾಗವಾಗಿ ನಾಲ್ಕು ದಿಕ್ಕುಗಳಲ್ಲಿಯೂ ಹರಿಯುತ್ತಿರುವುದು.

೩೧-೩೨. ಸೀತಾನದಿಯು ಬೆಟ್ಟದ ಪೂರ್ವದಿಕ್ಕಿನಲ್ಲಿಯೂ, ಅಲಕನಂದಾ ನದಿಯು ದಕ್ಷಿಣ ದಿಕ್ಕಿನಲ್ಲಿಯೂ, ಚಕ್ಷುಃ ಎಂಬ ನದಿಯು ಪಶ್ಚಿಮ ದಿಕ್ಕಿನಲ್ಲಿಯೂ ಭದ್ರಾ ಎಂಬ ನದಿಯು ಉತ್ತರ ದಿಕ್ಕಿನಲ್ಲಿಯೂ ಹರಿಯುವುವು. ನಾಲ್ಕು ದಿಕ್ಕುಗಳಲ್ಲಿಯೂ ಇರುವ ಎಲ್ಲಾ ಬೆಟ್ಟಗಳನ್ನೂ ದಾಟಿಕೊಂಡು ಪ್ರಯತ್ನಪೂರ್ವಕವಾಗಿ ಗಂಗಾನದಿಯು ಸಮುದ್ರವನ್ನು ಸೇರಿರುವ ಕಾರಣ ತ್ರಿಪಥಗಾಮಿನೀ (ಸ್ವರ್ಗ ಮರ್ತ್ಯ ಪಾತಾಳ ಎಂಬುವ ಮೂರು ಲೋಕಗಳಲ್ಲಿ ಇರುವುದರಿಂದ) ಎಂಬ ಹೆಸರನ್ನು ಹೊಂದಿರುವುದು.

೩೩-೩೪. ನೀಲಪರ್ವತ, ನಿಷಧಪರ್ವತ, ಮಾಲ್ಯವತ್ಪರ್ವತ, ಗಂಧಮಾದನ ಪರ್ವತ ಇವುಗಳ ಮಧ್ಯದಲ್ಲಿ ಮೇರುಪರ್ವತವು ಕರ್ಣಿಕೆಯಂತೆ ಇರುವುದು. ಭಾರತ ಕೇತುಮಾಲ, ಭದ್ರಾಶ್ವ, ಕುರು, ಎಂಬ ಪರ್ವತಗಳು ಲೋಕವೆಂಬ ಕಮಲಕ್ಕೆ ದಳಗಳಂತೆ ಇರುವುದಲ್ಲದೆ ಎಲ್ಲೆಯಾದ ಪರ್ವತಗಳಾಗಿಯೂ ಇರುವವು. ಗಂಧಮಾದನ ಮತ್ತು ಕೈಲಾಸಪರ್ವತಗಳು ದಕ್ಷಿಣೋತ್ತರವಾಗಿ ಹಬ್ಬಿ ಇರುವವು. ದೇವಕೂಟ

ಜಠರಂ ದೇವಕೂಟಶ್ಚ ಆಯಾಮ್ಯೌರ್ದಕ್ಷಿಣೋತ್ತರೇ ।
ಗಂಧಮಾದನಕೈಲಾಸೌ ಪೂರ್ವಪಶ್ಚಿಮತೋ ಗತೌ ॥ ೩೫ ॥

ಪೂರ್ವಪಶ್ಚಿಮತೋ ಮೇರೋರ್ನಿಷಧೋ ನೀಲಪರ್ವತಃ ।
ದಕ್ಷಿಣೋತ್ತರಮಾಯಾತೌ ಕರ್ಣಿಕಾಂತರ್ವ್ಯವಸ್ಥಿತೌ ॥ ೩೬ ॥

ಜಠರಾದ್ಯಾಃ ಸ್ಥಿತಾ ಮೇರೋರ್ಯೇಷಾಂ ದ್ವೌ ದ್ವೌ ವ್ಯವಸ್ಥಿತೌ ।
ಕೇಸರಾಃ ಪರ್ವತಾಃ ಏತೇ ಶ್ವೇತಾದ್ಯಾಃ ಸುಮನೋರಮಾಃ ॥ ೩೭ ॥

ಶೈಲಾನಾಮುತ್ತರೇ ದ್ರೋಣ್ಯಸ್ಸಿದ್ಧಚಾರಣಸೇವಿತಾಃ ।
ಸುರಮ್ಯಾಣಿ ತಥಾ ತಾಸು ಕಾನನಾನಿ ಪುರಾಣಿ ಚ ॥ ೩೮ ॥

ಸರ್ವೇಷಾಂ ಚೈವ ದೇವಾನಾಂ ಯಕ್ಷಗಂಧರ್ವರಕ್ಷಸಾಂ ।
ಕ್ರೀಡಂತಿ ದೇವದೈತೇಯಾಶ್ಶೈಲಪ್ರಾಯೇಷ್ವಹರ್ನಿಶಂ ॥ ೩೯ ॥

ಧರ್ಮಿಣಾಮಾಲಯಾ ಹ್ಯೇತೇ ಭೌಮಾಸ್ಸ್ವರ್ಗಾಃ ಪ್ರಕೀರ್ತಿತಾಃ ।
ನ ತೇಷು ಪಾಪಕರ್ತಾರೋ ಯಾಂತಿ ಪಶ್ಯಂತಿ ಕುತ್ರಚಿತ್ ॥ ೪೦ ॥

---

ಪರ್ವತವು ಮಧ್ಯದಲ್ಲಿರುವುದು. ಮೇರುಪರ್ವತದ ಪೂರ್ವಪಶ್ಚಿಮವಾಗಿ ಹಬ್ಬಿರುವ ನೀಲ ನಿಷಧಪರ್ವತಗಳು ದಕ್ಷಿಣದಿಂದ ಉತ್ತರಕ್ಕೆ ಅಡ್ಡಲಾಗಿ ಇದ್ದುಕೊಂಡು ಕರ್ಣಿಕೆಯ ಒಳಭಾಗದಲ್ಲಿರುವವು. ಮಧ್ಯದ ಭಾಗದಲ್ಲಿರುವ ಈ ಬೆಟ್ಟಗಳು ಮೇರು ಪರ್ವತದ ಜಠರದಂತೆ ಇರುವುವು, ಶ್ವೇತವೇ ಮೊದಲಾದ ಮನೋಹರವಾದ ಎರಡೆರಡು ಬೆಟ್ಟಗಳು ಇವುಗಳಿಗೆ ಕೇಸರ ಪರ್ವತಗಳಾಗಿರುವವು.

೩೮. ಈ ಬೆಟ್ಟಗಳಿಗೆ ಉತ್ತರದಲ್ಲಿರುವ ಪರ್ವತಗಳ ಮಧ್ಯಪ್ರದೇಶವು ದೋಣಿಯಂತೆ ಇರುವುದು. ಅವುಗಳಲ್ಲಿ ಸಿದ್ಧರೂ ಚಾರಣರೂ ವಾಸಮಾಡುತ್ತಿರುವರು. ಅಲ್ಲಿರುವ ವನಗಳೂ ನಗರಗಳೂ ಬಹಳ ಅಂದವಾಗಿರುವವು.

೩೯-೪೦. ಇವುಗಳು, ದೇವತೆಗಳು, ಯಕ್ಷರು, ಗಂಧರ್ವರು, ರಾಕ್ಷಸರು ಇವರುಗಳಿಗೆ ವಾಸಸ್ಥಾನವಾಗಿರುವುದಲ್ಲದೆ, ದೇವತೆಗಳೂ ರಾಕ್ಷಸರೂ ಕೂಡಿ ಅಲ್ಲಿ ಅಹೋರಾತ್ರಿಯಲ್ಲೂ ವಿಹಾರ ಮಾಡುತ್ತಿರುವರು. ಧರ್ಮಮಾಡಿದವರಿಗೆ ಈ ಪ್ರದೇಶವು ಭೂಮಿಗೆ ಸಂಬಂಧಿಸಿದ ಸ್ವರ್ಗವೆಂದು ಹೇಳುವರು. ಪಾಪಗಳನ್ನು ಮಾಡಿದವರು ಅಲ್ಲಿಗೆ ಯಾವಾಗಲೂ ಹೋಗುವುದಕ್ಕೆ ಆಗುವುದೇ ಇಲ್ಲ. ಈ ಪ್ರದೇಶಗಳನ್ನು ಅವರು ಯಾವಾಗಲೂ ನೋಡುವುದಕ್ಕೂ ಆಗುವುದಿಲ್ಲ.

ಯಾನಿ ಕಿಂಪುರುಷಾದೀನಿ ವರ್ಷಾಣ್ಯಷ್ಟೌ ಮಹಾಮುನೇ ।
ನ ತೇಷು ಶೋಕೋ ನಾಪತ್ಯೋ ನೋದ್ವೇಗಃ ಕ್ಷುದ್ಭಯಾದಿಕಂ ॥ ೪೧ ॥

ಸ್ವಸ್ಥಾಃ ಪ್ರಜಾ ನಿರಾತಂಕಾಸ್ಸರ್ವದುಃಖವಿವರ್ಜಿತಾಃ ।
ದಶದ್ವಾದಶವರ್ಷಾಣಾಂ ಸಹಸ್ರಾಣಿ ಸ್ಥಿರಾಯುಷಃ ॥ ೪೨ ॥

ಕೃತತ್ರೇತಾದಿಕಾಶ್ಚೈವ ಭೌಮಾನ್ಯಂಭಾಂಸಿ ಸರ್ವತಃ ।
ನ ತೇಷು ವರ್ಷತೇ ದೇವಸ್ತೇಷು ಸ್ಥಾನೇಷು ಕಲ್ಪನಾ ॥ ೪೩ ॥

ಸಪ್ತಸ್ವೇತೇಷು ನದ್ಯಶ್ಚ ಸುಜಾತಾಸ್ಸ್ವರ್ಣವಾಲುಕಾಃ ।
ಶತಶಸ್ಸಂತಿ ಕ್ಷುದ್ರಾಶ್ಚ ತಾಸು ಕ್ರೀಡೇಚ್ಛುಭೋ ಜನಃ ॥ ೪೪ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಬ್ರಹ್ಮಾಂಡಕಥನೇ ಜಂಬೂದ್ವೀಪವರ್ಷವರ್ಣನಂ ನಾಮ ಸಪ್ತದಶೋಽಧ್ಯಾಯಃ

೪೧-೪೩. ಎಲೈ ಮಹಾಮುನಿಯಾದ ವ್ಯಾಸಋಷಿಯೇ, ಕೇಳು ಕಿಂಪುರುಷ ಖಂಡವೇ ಮೊದಲಾದ ಎಂಟು ಖಂಡಗಳಲ್ಲಿಯೂ ದುಃಖವೂ, ವಿಪತ್ತುಗಳೂ, ಮನಸ್ಸಿಗೆ ಉದ್ವೇಗವೂ, ಹಸಿವೆಯೂ ಭಯವೂ ಮೊದಲಾದುವುಗಳು ಉಂಟಾಗುವುದಿಲ್ಲ. ಈ ಪ್ರದೇಶಗಳಲ್ಲಿ ಪ್ರಜೆಗಳು ಯಾವ ಈತಿಬಾಧೆಯೂ ಇಲ್ಲದವರಾಗಿ ದುಃಖವಿಲ್ಲದಿರುವ ಸುಖವನ್ನು ಅನುಭವಿಸುತ್ತಿರುವರು. ಇವರುಗಳಿಗೆ ಹತ್ತು ಹನ್ನೆರಡು ಸಾವಿರ ವರ್ಷಗಳ ಕಾಲವು ಆಯುಃಪ್ರಮಾಣವಾಗಿರುವುದು. ಕೃತ ತ್ರೇತಾ ಮೊದಲಾದ ಯುಗ ಭೇದಗಳೂ, ಭೂಮಿ ಸಂಬಂಧವಾದ ನೀರೂ ಇವರಿಗೆ ಇಲ್ಲ. ಈ ಪ್ರದೇಶಗಳಲ್ಲಿ ಮಳೆಯೂ ಬೀಳುವುದಿಲ್ಲವೆಂದು ಪ್ರತೀತಿ ಇರುವುದು.

೪೪. ಈ ಏಳು ಖಂಡಗಳಲ್ಲಿಯೂ ಹುಟ್ಟಿರುವ ಮತ್ತು ಹರಿಯುವ ನದಿಗಳಲ್ಲಿ ಚಿನ್ನದ ಮರಳು ಇರುವುದು. ಸಣ್ಣ ಮರಳುಗಳಿಂದ ಕೂಡಿದ ರಮ್ಯವಾದ ಮರಳು ದಿಣ್ಣೆಗಳು ಅಲ್ಲಿ ಬಹಳವಾಗಿರುವುವು. ಅವುಗಳಲ್ಲಿ ಪುಣ್ಯವಂತರಾದವರು ವಿಹಾರಮಾಡುವರು.

ಇಲ್ಲಿಗೆ ಶಿವಪುರಾಣದ ಉಮಾಸಂಹಿತೆಯಲ್ಲಿ ಬ್ರಹ್ಮಾಂಡವಿವರಣೆಯಲ್ಲಿ ಜಂಬೂದ್ವೀಪದ ವರ್ಣನವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಅಷ್ಟದಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ವಕ್ಷ್ಯೇಽಹಂ ಭಾರತಂ ವರ್ಷಂ ಹಿಮಾದ್ರೇಶ್ಚೈವ ದಕ್ಷಿಣೇ ।
ಉತ್ತರೇ ತು ಸಮುದ್ರಸ್ಯ ಭಾರತೀ ಯತ್ರ ಸಂಸ್ಕೃತಿಃ ॥ ೧ ॥

ನವಯೋಜನಸಾಹಸ್ರೋ ವಿಸ್ತಾರೋಽಸ್ಯ ಮಹಾಮುನೇ ।
ಸ್ವರ್ಗಾಪವರ್ಗಯೋಃ ಕರ್ಮಭೂಮಿರೇಷಾ ಸ್ಮೃತಾ ಬುಧೈಃ ॥ ೨ ॥

ಅತಃ ಸಂಪ್ರಾಪ್ಯತೇ ಪುಂಭಿಸ್ಸ್ವರ್ಗೋ ನರಕ ಏವ ಚ ।
ಭಾರತಸ್ಯಾಪಿ ವರ್ಷಸ್ಯ ನವ ಭೇದಾನ್ಬ್ರವೀಮಿ ತೇ ॥ ೩ ॥

## ಹದಿನೆಂಟನೆಯ ಅಧ್ಯಾಯವು

೧-೩. ಸನತ್ಕುಮಾರನು ಹೇಳಿದನು:—ಎಲೈ ವ್ಯಾಸನೇ, ಕೇಳು. ಇನ್ನು ಭಾರತ ವರ್ಷವನ್ನು ಹೇಳುವೆನು. ಇದು ಹಿಮವತ್ಪರ್ವತದ ದಕ್ಷಿಣದಲ್ಲಿರುವುದು. ಸಮುದ್ರಕ್ಕೆ ಉತ್ತರದಲ್ಲಿರುವುದು. ಒಂಭತ್ತುಸಾವಿರ ಯೋಜನಗಳು ವಿಸ್ತಾರವುಳ್ಳದ್ದಾಗಿರುವದು. ಸ್ವರ್ಗ ಮೋಕ್ಷಗಳನ್ನು ಸಾಧಿಸಿಕೊಳ್ಳುವವರಿಗೆ ಸಾಧನವಾದ ಕರ್ಮಭೂಮಿಯೆಂದು ವಿದ್ವಾಂಸರು ಹೇಳುವರು. ಇಲ್ಲಿ ಮಾಡಿದ ಕರ್ಮದಿಂದಲೇ ಸ್ವರ್ಗವೋ ನರಕವೋ ಯಾವುದೋ ಒಂದು ಉಂಟಾಗುವುದು. ಈ ಭಾರತವರ್ಷದಲ್ಲಿ ಒಂಭತ್ತು ವಿಭಾಗಗಳಿರುವವು. ಅವುಗಳನ್ನು ವಿವರಿಸುವೆನು.

ಇಂದ್ರದ್ಯುಮ್ನಃ ಕಸೇರುಶ್ಚ ತಾಮ್ರವರ್ಣೋ ಗಭಸ್ತಿಮಾನ್ ।
ನಗದ್ವೀಪಸ್ತಥಾ ಸೌಮ್ಯೋ ಗಂಧರ್ವಸ್ತ್ವಥ ವಾರುಣಃ ॥ ೪ ॥

ಅಯಂ ತು ನವಮಸ್ತೇಷಾಂ ದ್ವೀಪಸ್ಸಾಗರಸಂಭೃತಃ ।
ಯೋಜನಾನಾಂ ಸಹಸ್ರಂ ತು ದ್ವೀಪೋಽಯಂ ದಕ್ಷಿಣೋತ್ತರಃ ॥ ೫ ॥

ಪೂರ್ವೇ ಕಿರಾತಾ ಯಸ್ಯ ಸ್ಯುರ್ದಕ್ಷಿಣೇ ಯವನಾಃ ಸ್ಥಿತಾಃ ।
ಪಶ್ಚಿಮೇ ಚ ತಥಾ ಜ್ಞೇಯಾ ಉತ್ತರೇ ಹಿ ತಪಸ್ವಿನಃ ॥ ೬ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಮಧ್ಯೇ ಶೂದ್ರಾಶ್ಚ ಭೂಯಶಃ ।
ಈಜ್ಯಾಯುದ್ಧ ಪಣಾಸೇವಾ ವರ್ತಯಂತೋ ವ್ಯವಸ್ಥಿತಾಃ ॥ ೭ ॥

ಮಹೇಂದ್ರೋ ಮಲಯಸ್ಸಹ್ಯಃ ಸುದಾಮಾ ಚರ್ಕ್ಷಪರ್ವತಃ ।
ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತಾತ್ರ ಕುಲಪರ್ವತಾಃ ॥ ೮ ॥

ವೇದಸ್ಮೃತಿಪುರಾಣಾದ್ಯಾಃ ಪಾರಿಯಾತ್ರೋದ್ಭವಾ ಮುನೇ ।
ಸರ್ವಪಾಪಹರಾ ಜ್ಞೇಯಾ ದರ್ಶನಾತ್ಸ್ಪರ್ಶನಾದಪಿ ॥ ೯ ॥

೪-೭. ಇಂದ್ರದ್ಯುಮ್ನ, ಕಸೇರು, ತಾಮ್ರವರ್ಣ, ಗಭಸ್ತಿಮಾನ್, ನಾಗ ದ್ವೀಪ, ಸೌಮ್ಯ, ಗಂಧರ್ವ, ವಾರುಣ ಎಂಬ ಈ ಎಂಟು ಭಾಗಗಳ ಜೊತೆಗೆ ಈ ಭಾರತವರ್ಷವೂ ಸೇರಿ ಒಂಭತ್ತಾಗುವುದು. ಇದು ಸಾಗರದಿಂದ ಸುತ್ತುವರಿದ ದ್ವೀಪವಾಗಿರುವುದು. ಇದು ದಕ್ಷಿಣೋತ್ತರವಾಗಿ ಸಾವಿರ ಯೋಜನಗಳು ವಿಸ್ತಾರ ವಾಗಿರುವುದು. ಇದರ ಪೂರ್ವದಿಕ್ಕಿನಲ್ಲಿ ಕಿರಾತರೂ (ಬೇಡರೂ) ದಕ್ಷಿಣ ದಿಕ್ಕಿನ ಲ್ಲಿಯೂ ಪಶ್ಚಿಮದಲ್ಲಿಯೂ ಯವನರೂ, ಉತ್ತರ ಭಾಗದಲ್ಲಿ ತಪಸ್ವಿಗಳೂ ಇರುವರು. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮಧ್ಯದಲ್ಲಿ ಬಹಳ ಮಂದಿ ಶೂದ್ರರೂ ಇರುವರು. ಯಜ್ಞಯಾಗಾದಿಗಳನ್ನು ಮಾಡುವುದು, ಯುದ್ಧಮಾಡುವುದು, ವ್ಯಾಪಾರ ಮಾಡು ವುದು ಸೇವಾವೃತ್ತಿಯೂ ಕ್ರಮವಾಗಿ ಇವರಿಗೆ ಜೀವನವಾಗಿರುವುದು.

೮-೧೦. ಮಹೇಂದ್ರ, ಮಲಯ, ಸಹ್ಯ ಸುದಾಮಾ, ಋಕ್ಷಪರ್ವತ, ವಿಂಧ್ಯ, ಪಾರಿಯಾತ್ರ ಎಂಬ ಪರ್ವತಗಳು ಕುಲಪರ್ವತಗಳಾಗಿರುವವು. ಎಲೈ ಮುನಿಯೆ, ಕೇಳು ವೇದಗಳು, ಸ್ಮೃತಿಗಳು, ಪುರಾಣಗಳು, ಇವೇ ಮೊದಲಾದವು ಇಲ್ಲಿ ಇರುವವು.

ನರ್ಮದಾ ಸುರಸಾದ್ಯಾಶ್ಚ ಸಪ್ತಾನ್ಯಾಶ್ಚ ಸಹಸ್ರಶಃ ।
ವಿಂಧ್ಯೋದ್ಭವಾ ಮಹಾನದ್ಯಸ್ಸರ್ವಪಾಪಹರಾಶ್ಶುಭಾಃ ॥ ೧೦ ॥

ಗೋದಾವರೀಭೀಮರಥೀತಾಪೀಪ್ರಮುಖನಿಮ್ನಗಾಃ ।
ಗಿರೇರ್ವಿನಿರ್ಗತಾ ಋಕ್ಷಾತ್ಸದ್ಯಃ ಪಾಪಭಯಾಪಹಾಃ ॥ ೧೧ ॥

ಸಹ್ಯಪಾದೋದ್ಭವಾ ನದ್ಯಃ ಕೃಷ್ಣವೇಣ್ಯಾದಿಕಾಸ್ತಥಾ ।
ಕೃತಮಾಲಾತಾಮ್ರಪರ್ಣೀಪ್ರಮುಖಾ ಮಲಯೋದ್ಭವಾಃ ॥ ೧೨ ॥

ತ್ರಿಯಾಮಾ ಚಾರ್ಷಿಕುಲ್ಯಾದ್ಯಾ ಮಹೇಂದ್ರಪ್ರಭವಾಃ ಸ್ಮೃತಾಃ ।
ಋಷಿಕುಲ್ಯಾಕುಮಾರ್ಯಾದ್ಯಾಃ ಶುಕ್ತಿಮತ್ಪಾದಸಂಭವಾಃ ॥ ೧೩ ॥

ನಾನಾಜನಪದಾಸ್ತೇಷು ಮಂಡಲೇಷು ವಸಂತಿ ವೈ ।
ಆಸಾಂ ಪಿಬಂತಿ ಪಾನೀಯಂ ಸರಸ್ಸು ವಿವಿಧೇಷು ಚ ॥ ೧೪ ॥

ನರ್ಮದಾ, ಸುರಸಾ ಇವೇ ಮೊದಲಾದ ಏಳು ನದಿಗಳೂ, ವಿಂಧ್ಯಪರ್ವತದಲ್ಲಿ ಹುಟ್ಟಿದ ಸಾವಿರಾರು ಇತರ ನದಿಗಳು ಪವಿತ್ರಕರಗಳಾಗಿಯೂ, ಪಾಪಗಳನ್ನು ನಾಶಮಾಡುವವುಗಳಾಗಿಯೂ ಇರುವವು.

೧೧-೧೨. ಋಕ್ಷಪರ್ವತದಿಂದ ಹುಟ್ಟಿ ಹರಿಯುತ್ತಿರುವ ಗೋದಾವರೀ, ಭೀಮರಥೀ ತಾಪೀ ಮೊದಲಾದ ನದಿಗಳು ಪಾಪಗಳನ್ನು ನಾಶಮಾಡುತ್ತಿರುವವು. ಕೃಷ್ಣವೇಣಿಯೇ ಮೊದಲಾದವುಗಳು ಸಹ್ಯಪರ್ವತದಿಂದ ಹುಟ್ಟಿರುವವು. ಕೃತಮಾಲಾ ತಾಮ್ರಪರ್ಣೀ ಎಂಬ ನದಿಗಳು ಮಲಯಪರ್ವತದಿಂದ ಹುಟ್ಟಿರುವವು.

೧೩. ತ್ರಿಯಾಮಾ ಋಷಿಕುಲ್ಯಾ ಎಂಬ ಇವೇ ಮೊದಲಾದ ನದಿಗಳು ಮಹೇಂದ್ರಪರ್ವತದಿಂದ ಹುಟ್ಟಿ ಹರಿಯುವವು. ಋಷಿಕುಲ್ಯಾ ಕುಮಾರೀ ಇವೇ ಮೊದಲಾದವುಗಳು ಶುಕ್ತಿಮತ್ಪರ್ವತದಲ್ಲಿ ಹುಟ್ಟಿರುವವು.

೧೪-೧೭. ಈ ಪ್ರದೇಶದಲ್ಲಿ ಅನೇಕ ದೇಶಗಳು ಅಡಗಿರುವುವು. ಆ ದೇಶದ ಜನರೆಲ್ಲರೂ ಈ ನದಿಗಳ ನೀರನ್ನೂ ಮತ್ತು ಅನೇಕ ಪ್ರಕಾರದಿಂದ ಇರುವ ಕೊಳಗಳ ನೀರನ್ನೂ ಉಪಯೋಗಿಸುತ್ತಿರುವರು. ಎಲೈ ಮಹಾಮುನಿಯೇ, ಕೇಳು ಈ ಭಾರತ

ಚತ್ವಾರಿ ಭಾರತೇ ವರ್ಷೇ ಯುಗಾನ್ಯಾಸನ್ಮಹಾಮುನೇ ।
ಕೃತಾದೀನಿ ನ ಚಾನ್ಯೇಷು ದ್ವೀಪೇಷು ಪ್ರಭವಂತಿ ಹಿ ॥ ೧೫ ॥

ದಾನಾನಿ ಚಾತ್ರ ದೀಯಂತೇ ಸುಕೃತೈಶ್ಚಾತ್ರ ಯಾಜ್ಞಿಕೈಃ ।
ತಪಸ್ತಪಂತಿ ಯತಯಃ ಪರಲೋಕಾರ್ಥಮಾದರಾತ್ ॥ ೧೬ ॥

ಯತೋ ಹಿ ಕರ್ಮಭೂರೇಷಾ ಜಂಬೂದ್ವೀಪೇ ಮಹಾಮುನೇ ।
ಅತ್ರಾಪಿ ಭಾರತಂ ಶ್ರೇಷ್ಠಮತೋಽನ್ಯಾ ಭೋಗಭೂಮಯಃ ॥ ೧೭ ॥

ಕದಾಚಿಲ್ಲಭತೇ ಮರ್ತ್ಯಸ್ಸಹಸ್ರೈರ್ಮುನಿಸತ್ತಮ ।
ಅತ್ರ ಜನ್ಮಸಹಸ್ರಾಣಾಂ ಮಾನುಷ್ಯಂ ಪುಣ್ಯಸಂಚಯೈಃ ॥ ೧೮ ॥

ಸ್ವರ್ಗಾಪವರ್ಗಾಸ್ಪದಮಾರ್ಗಭೂತೇ
ಧನ್ಯಾಸ್ತು ತೇ ಭಾರತಭೂಮಿಭಾಗೇ ।
ಗಾಯಂತಿ ದೇವಾಃ ಕಿಲ ಗೀತಕಾನಿ
ಭವಂತಿ ಭೂಯಃ ಪುರುಷಾಸ್ಸುರಾಸ್ತೇ ॥ ೧೯ ॥

---

ವರ್ಷದಲ್ಲಿ ಮಾತ್ರವೇ ಕೃತ ಮೊದಲಾದ ನಾಲ್ಕು ಯುಗಗಳು ಒಂದಾಗುತ್ತಲೊಂದು ಬದಲಾಯಿಸಿಕೊಂಡು ಬರುತ್ತಿರುವವು. ಇವುಗಳು ಬೇರೆ ದ್ವೀಪಗಳಲ್ಲಿರುವುದಿಲ್ಲ. ಈ ಭಾರತವರ್ಷದಲ್ಲಿ ವಿಧ್ಯುಕ್ತವಾಗಿ ಯಜ್ಞವನ್ನು ಮಾಡುವವರು, ದಾನಗಳನ್ನು ಮಾಡುವವರು, ಯತಿಗಳು, ಪರಲೋಕದಲ್ಲಿ ಹಿತವನ್ನು ಹೊಂದುವುದಕ್ಕಾಗಿ ಆದರದಿಂದ ತಪಸ್ಸನ್ನು ಮಾಡುವರು. ಇವರೆಲ್ಲರೂ ಇರುವುದರಿಂದ ಈ ಪ್ರದೇಶವು ಕರ್ಮಭೂಮಿಯೆಂದೆನಿಸಿಕೊಂಡಿರುವುದು. ಇದರಲ್ಲಿಯೂ ಭರತಖಂಡವು ಶ್ರೇಷ್ಠವೆನಿಸಿಕೊಂಡಿರುವುದು. ಬೇರೆಯ ಪ್ರದೇಶಗಳು ಭೋಗವನ್ನು ಅನುಭವಿಸುವುದಕ್ಕೆ ತಕ್ಕ ಸ್ಥಾನಗಳಾಗಿರುವವು.

೧೮-೧೯. ಎಲೈ ಮುನಿಶ್ರೇಷ್ಠನೆ ಕೇಳು ಈ ಭರತವರ್ಷದಲ್ಲಿ ಲಕ್ಷ ಜನ್ಮಗಳಲ್ಲಿ ಮಾಡಿದ ಪುಣ್ಯರಾಶಿಯಿಂದ ಮನುಷ್ಯನ ಜನ್ಮವನ್ನು ಹೊಂದಬೇಕಾಗಿರುವುದು. ಭಾರತಭೂಮಿಯಲ್ಲಿರುವವರು ಸ್ವರ್ಗ ಮೋಕ್ಷಗಳಿಗೆ ಮಾರ್ಗವನ್ನು ಸಂಪಾದಿಸಲು ಅನುಕೂಲವಾದ ಪ್ರದೇಶದಲ್ಲಿರುವರಾದಕಾರಣ ಪುಣ್ಯವಂತರೆನಿಸಿಕೊಳ್ಳುವರು. ದೇವತೆಗಳೂ ಸಹ ಈ ಪುಣ್ಯಭೂಮಿಯನ್ನು ಗಾನಮಾಡಿ ಶ್ಲಾಘಿಸುತ್ತಿರುವರು. ಆ ದೇವತೆಗಳೂ ಈ ಭಾರತಭೂಮಿಯಲ್ಲಿ ಮನುಷ್ಯರಾಗಿದ್ದು ಪುನಃ ದೇವತೆಗಳಾಗುವರು.

ಅವಾಪ್ಯ ಮಾನುಷ್ಯಮಯಂ ಕದಾಚಿ-
ದ್ವಿಹೃತ್ಯ ಶಂಭೋಃ ಪರಮಾತ್ಮರೂಪೇ ।
ಫಲಾನಿ ಸರ್ವಾಣಿ ತು ಕರ್ಮಜಾನಿ-
ಯಾ ಪ್ಯಾಪ್ನ್ಯಹಂ ತತ್ತ್ವನುತಾಂ ಹಿ ತಸ್ಯ ॥ ೨೦ ॥

ಆಪ್ಸ್ಯಂತಿ ಧನ್ಯಾಃ ಖಲು ತೇ ಮನುಷ್ಯಾಃ
ಸುಖೈರ್ಯುತಾಃ ಕರ್ಮಣಿ ಸನ್ನಿವಿಷ್ಟಾಃ ।
ಜನುರ್ಹಿ ಯೇಷಾಂ ಖಲು ಭಾರತೇಽಸ್ತಿ
ತೇ ಸ್ವರ್ಗಮೋಕ್ಷೋಭಯಲಾಭವಂತಃ ॥ ೨೧ ॥

ಲಕ್ಷಯೋಜನವಿಸ್ತಾರಸ್ಸಮಸ್ತಪರಿಮಂಡಲಃ ।
ಜಂಬೂದ್ವೀಪೋ ಮಯಾ ಖ್ಯಾತಃ ಕ್ಷಾರೋದಧಿಸುಸಂವೃತಃ ॥ ೨೨ ॥

ಸಂವೇಷ್ಟ್ಯ ಕ್ಷಾರಮುದಧಿಂ ಶತಸಾಹಸ್ರಸಂಮಿತಂ ।
ತತೋ ಹಿ ದ್ವಿಗುಣೋ ಬ್ರಹ್ಮನ್ಪ್ಲಕ್ಷದ್ವೀಪಃ ಪ್ರಕೀರ್ತಿತಃ ॥ ೨೩ ॥

ಗೋಮತಶ್ಚೈವ ಚಂದ್ರಶ್ಚ ನಾರದೋ ದರ್ದುರಸ್ತಥಾ ।
ಸೋಮಕಸ್ಸುಮನಾಶ್ಚೈಲೋ ವೈಭ್ರಾಜಶ್ಚೈವ ಸತ್ತಮಃ ॥ ೨೪ ॥

---

೨೦-೨೧. ಪ್ರಾಣಿಯು ತನ್ನ ಪುಣ್ಯವಶದಿಂದ ಅಪರೂಪವಾಗಿ ಪ್ರಾಪ್ತವಾದ ಮನುಷ್ಯಜನ್ಮವನ್ನು ಹೊಂದಿ, ಶಿವನ ಪರಮಾತ್ಮರೂಪದಲ್ಲಿ ಕರ್ಮಫಲಗಳೆಲ್ಲವನ್ನೂ ಅನುಭವಿಸಿದನಂತರ ಆ ಶಿವನ ಆಕಾರವನ್ನು ಹೊಂದುವನು. ಒಳ್ಳೆಯ ಕರ್ಮಗಳಲ್ಲಿ ಮನಸ್ಸನ್ನು ನಿಶ್ಚಲವಾದ ರೀತಿಯಿಂದ ಇರಿಸಿರುವ ಮನುಷ್ಯರು ಸುಖಗಳಿಂದ ಕೂಡಿದವರಾಗಿ ಪುಣ್ಯವಂತರಾಗಿರುವರು. ಭಾರತಭೂಮಿಯಲ್ಲಿ ಜನ್ಮವನ್ನು ಪಡೆದಿರುವರು ಸ್ವರ್ಗ ಮತ್ತು ಮೋಕ್ಷಗಳೆಂಬ ಎರಡು ವಿಧವಾದ ಲಾಭವನ್ನೂ ಹೊಂದುವರು.

೨೨-೨೪. ಒಂದು ಲಕ್ಷ ಯೋಜನ ವಿಸ್ತೀರ್ಣವುಳ್ಳದ್ದಾಗಿರುವ ಜಂಬೂದ್ವೀಪವು ಉಪ್ಪಿನ ಸಮುದ್ರದಿಂದ ಸುತ್ತುವರಿದಿರುವುದು. ಇದನ್ನು ನಾನು ಹಿಂದೆಯೇ ಹೇಳಿರುವೆನು. ಈ ಪ್ರಕಾರವಾಗಿ ಒಂದುಲಕ್ಷ ಯೋಜನ ವಿಸ್ತೀರ್ಣದಿಂದ ಕೂಡಿರುವ ಉಪ್ಪಿನ ಸಮುದ್ರದಿಂದಾಚೆಗೆ ಎರಡುಲಕ್ಷ ಯೋಜನ ವಿಸ್ತಾರವುಳ್ಳ ಪ್ಲಕ್ಷದ್ವೀಪವು ಇರುವುದು. ಇಲ್ಲಿ ಗೋಮತ, ಚಂದ್ರ, ನಾರದ, ದರ್ದುರ ಸೋಮಕ ಸುಮನಾಃ ವೈಭ್ರಾಜ ಎಂಬ ಏಳು ಪರ್ವತಗಳಿರುವವು.

ವರ್ಷಾಚಲೇಷು ರಮ್ಯೇಷು ಸಹಿತಾಸ್ಸತತಂ ಪ್ರಜಾಃ ।
ವಸಂತಿ ದೇವಗಂಧರ್ವಾ ವರ್ಷೇಷ್ವೇತೇಷು ನಿತ್ಯಶಃ ॥ ೨೫ ॥

ನಾಧಯೋ ವ್ಯಾಧಯೋ ವಾಪಿ ಜನಾನಾಂ ತತ್ರ ಕುತ್ರಚಿತ್ ।
ದಶ ವರ್ಷಸಹಸ್ರಾಣಿ ತತ್ರ ಜೀವಂತಿ ಮಾನವಾಃ ॥ ೨೬ ॥

ಅನುತಪ್ತಾ ಶಿಖೀ ಚೈವ ಪಾಪಘ್ನೀ ತ್ರಿದಿವಾ ಕೃಪಾ ।
ಅಮೃತಾ ಸುಕೃತಾ ಚೈವ ಸಪ್ತೈವಾತ್ರ ಚ ನಿಮ್ನಗಾಃ ॥ ೨೭ ॥

ಕ್ಷುದ್ರನದ್ಯಸ್ತಥಾ ಶೈಲಾಸ್ತತ್ರ ಸಂತಿ ಸಹಸ್ರಶಃ ।
ತಾಃ ಪಿಬಂತಿ ಸುಸಂಹೃಷ್ಟಾ ನದೀರ್ಜನಪದಾಸ್ತು ತೇ ॥ ೨೮ ॥

ನ ತತ್ರಾಪಿ ಯುಗಾವಸ್ಥಾ ಯಥಾಸ್ಥಾನೇಷು ಸಪ್ತಸು ।
ತ್ರೇತಾಯುಗಸಮಃ ಕಾಲಸ್ಸರ್ವದೈವ ಮಹಾಮುನೇ ॥ ೨೯ ॥

ವಿಪ್ರಕ್ಷತ್ರಿಯವೈಶ್ಯಾಸ್ತೇ ಶೂದ್ರಾಶ್ಚ ಮುನಿಸತ್ತಮ ।
ಕಲ್ಪವೃಕ್ಷಸಮಾನಸ್ತು ತನ್ಮಧ್ಯೇ ಸುಮಹಾತರುಃ ॥ ೩೦ ॥

೨೫-೨೮. ಮನೋಹರವಾದ ಈ ಪರ್ವತಗಳಲ್ಲಿ ಯಾವಾಗಲೂ ದೇವತೆಗಳು ಮತ್ತು ಗಂಧರ್ವರು ವಾಸಮಾಡುತ್ತಿರುವರು. ಇಲ್ಲಿ ಪ್ರಜೆಗಳಿಗೆ ಆಧಿ ವ್ಯಾಧಿಗಳು ಯಾವದೂ ಇರುವುದಿಲ್ಲ. ಹತ್ತುಸಾವಿರ ವರ್ಷಗಳವರಿಗೂ ಜೀವಿಸುವರು. ಅನುತಪ್ತಾ, ಶಿಖೀ, ಪಾಪಘ್ನೀ, ತ್ರಿದಿವಾ, ಕೃಪಾ, ಅಮೃತಾ, ಸುಕೃತಾ ಎಂಬ ಏಳು ನದಿಗಳು ಅಲ್ಲಿ ಹರಿಯುತ್ತಿರುವವು. ಇವಲ್ಲದೆ ಸಣ್ಣ ಸಣ್ಣ ಹೊಳೆಗಳೂ ಮತ್ತು ಬೆಟ್ಟಗಳೂ ಅಲ್ಲಿ ಸಾವಿರಾರು ಇರುವವು. ಅಲ್ಲಿ ವಾಸಮಾಡುವವರು ಸಂತೋಷದಿಂದ ಆ ಹೊಳೆಗಳ ನೀರನ್ನು ಪಾನಮಾಡುವರು.

೨೯-೩೧. ಎಲೈ ಮಹರ್ಷಿಯೇ, ಕೇಳು. ಅಲ್ಲಿಯೂ ಸಹ ಯುಗಭೇದವು ಇರುವುದಿಲ್ಲ. ಯಾವಾಗಲೂ ತ್ರೇತಾಯುಗಕ್ಕೆ ಸಮನಾದ ಕಾಲವಿರುವುದು. ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರರೆಂಬ ನಾಲ್ಕು ವರ್ಣಗಳ ಜನರು ಅಲ್ಲಿಯೂ ಇರುವರು. ಆ ದೇಶದ ಮಧ್ಯದಲ್ಲಿ ಕಲ್ಪವೃಕ್ಷಕ್ಕೆ ಸಮನಾದ ಪ್ಲಕ್ಷವೆಂಬ ಒಂದು ದೊಡ್ಡ ಮರವು ಇರುವುದು. ಆ ಪ್ಲಕ್ಷವೆಂಬ ಮರವಿರುವುದರಿಂದ ಆ ದ್ವೀಪಕ್ಕೆ ಪ್ಲಕ್ಷದ್ವೀಪವೆಂದು ಹೆಸರು ಬಂದಿರುವುದು. ಅಲ್ಲಿರುವ ಜನರು ಲೋಕಗಳಿಗೆ ಹಿತ

ಪ್ಲಕ್ಷಸ್ತನ್ನಾಮಸಂಜ್ಞೋ ವೈ ಪ್ಲಕ್ಷದ್ವೀಪೋ ದ್ವಿಜೋತ್ತಮ ।
ಇಜ್ಯತೇ ತತ್ರ ಭಗವಾಞ್ಛಂಕರೋ ಲೋಕಶಂಕರಃ ॥ ೩೦ ॥

ಹರಿಶ್ಚ ಭಗವಾನ್ಬ್ರಹ್ಮಾ ಯಂತ್ರೈರ್ಮಂತ್ರೈಶ್ಚ ವೈದಿಕೈಃ ।
ಸಂಕ್ಷೇಪೇಣ ತಥಾ ಭೂಯಶ್ಶಾಲ್ಮಲಿಂ ತ್ವಂ ನಿಶಾಮಯ ॥ ೩೨ ॥

ಸಪ್ತವರ್ಷಾಣಿ ತತ್ರೈವ ತೇಷಾಂ ನಾಮಾನಿ ಮೇ ಶೃಣು ।
ಶ್ವೇತೋಽಥ ಹರಿತಶ್ಚೈವ ಜೀಮೂತೋ ರೋಹಿತಸ್ತಥಾ ॥ ೩೩ ॥

ವೈಕಲೋ ಮಾನಸಶ್ಚೈವ ಸುಪ್ರಭಸ್ಸಪ್ತಮೋ ಮುನೇ ।
ಶಾಲ್ಮಲೇನಂ ತು ವೃಕ್ಷೇಣ ದ್ವೀಪಃ ಶಾಲ್ಮಲಿಸಂಜ್ಞಕಃ ॥ ೩೪ ॥

ದ್ವಿಗುಣೇನ ಸಮುದ್ರೇಣ ಸತತಂ ಸಂವೃತಃ ಸ್ಥಿತಃ ।
ವರ್ಷಾಭಿವ್ಯಂಜಕಾ ನದ್ಯಸ್ತಾಸಾಂ ನಾಮಾನಿ ಮೇ ಶೃಣು ॥ ೩೫ ॥

ಶುಕ್ಲಾ ರಕ್ತಾ ಹಿರಣ್ಯಾ ಚ ಚಂದ್ರಾ ಶುಭ್ರಾ ವಿಮೋಚನಾ ।
ನಿವೃತ್ತಿಃ ಸಪ್ತಮೀ ತಾಸಾಂ ಪುಣ್ಯತೋಯಾಃ ಸುಶೀತಲಾಃ ॥ ೩೬ ॥

ವನ್ನುಂಟುಮಾಡುವ ಶಿವನನ್ನು ಯಾವಾಗಲೂ ಪೂಜಿಸುವರು. ವಿಷ್ಣುವನ್ನೂ ಬ್ರಹ್ಮನನ್ನೂ ವೈದಿಕಗಳಾದ ಯಂತ್ರ ಮಂತ್ರಗಳಿಂದ ಪೂಜಿಸುವರು. ಈ ರೀತಿಯಾಗಿ ಸಂಕ್ಷೇಪವಾಗಿ ಪ್ಲಕ್ಷದ್ವೀಪವನ್ನು ಹೇಳಿರುವೆನು. ಇನ್ನು ಶಾಲ್ಮಲಿದ್ವೀಪವನ್ನು ವಿವರದಿಂದ ಹೇಳುವೆನು ಕೇಳು.

೩೨-೩೬. ಆ ಶಾಲ್ಮಲಿ ದ್ವೀಪದಲ್ಲಿ ಏಳು ವರ್ಷಗಳು ಇರುವವು. ಶ್ವೇತ, ಹರಿತ, ಜೀಮೂತ, ರೋಹಿತ, ವೈಕಲ, ಮಾನಸ, ಸುಪ್ರಭ ಎಂಬಿವು ಆ ದೇಶಗಳ ಹೆಸರುಗಳು. ಅಲ್ಲಿ ಶಾಲ್ಮಲ ಎಂಬ ಮರವಿರುವುದರಿಂದ ಆ ದ್ವೀಪಕ್ಕೆ ಶಾಲ್ಮಲಿ ದ್ವೀಪವೆಂದು ಹೆಸರು ಬಂದಿರುವುದು. ಇದು ತನ್ನ ವಿಸ್ತೀರ್ಣಕ್ಕೆ ಎರಡರಷ್ಟಾದ ಸಮುದ್ರದಿಂದ ಯಾವಾಗಲೂ ಸುತ್ತುವರಿಯಲ್ಪಟ್ಟಿರುವುದು. ಈ ದ್ವೀಪದಲ್ಲಿ ಶುಕ್ಲಾ, ರಕ್ತಾ, ಹಿರಣ್ಯಾ, ಚಂದ್ರಾ, ವಿಮೋಚನಾ, ಶುಭ್ರಾ, ನಿವೃತ್ತಿ ಎಂಬ ಈ ಏಳು ಹೊಳೆಗಳು ಪುಣ್ಯಕರವಾಗಿಯೂ ತಣ್ಣಗೆ ಹಿತಕರವಾಗಿಯೂ ಇರುವ ನೀರಿನಿಂದ ಕೂಡಿ ಹರಿಯುತ್ತಿರುವವು.

ಸಪ್ತೈವ ತಾನಿ ವರ್ಷಾಣಿ ಚತುರ್ವರ್ಣಾಯುತಾನಿ ಚ ।
ಭಗವಂತಂ ಸದಾ ಶಂಭುಂ ಯಜತೇ ವಿವಿಧೈರ್ಮಖೈಃ ॥ ೩೭ ॥

ದೇವಾನಾಂ ತತ್ರ ಸಾನ್ನಿಧ್ಯಮತೀವ ಸುಮನೋರಮೇ ।
ಏಷ ದ್ವೀಪಸ್ಸಮುದ್ರೇಣ ಸುರೋದೇನ ಸಮಾವೃತಃ ॥ ೩೮ ॥

ದ್ವಿಗುಣೇನ ಕುಶದ್ವೀಪಃ ಸಮಂತಾದ್ಬಾಹ್ಯತಃ ಸ್ಥಿತಃ ।
ವಸಂತಿ ತತ್ರ ದೈತೇಯಾ ಮನುಜೈಸ್ಸಹ ದಾನವಾಃ ॥ ೩೯ ॥

ತಥೈವ ದೇವಗಂಧರ್ವಾ ಯಕ್ಷಾಃ ಕಿಂಪುರುಷಾದಯಃ ।
ವರ್ಣಾಸ್ತತ್ರೈವ ಚತ್ವಾರೋ ನಿಜಾನುಷ್ಠಾನತತ್ಪರಾಃ ॥ ೪೦ ॥

ತತ್ರೈವ ಚ ಕುಶದ್ವೀಪೇ ಬ್ರಹ್ಮಾಣಂ ಚ ಜನಾರ್ದನಂ ।
ಯಜಂತಿ ಚ ತಥೇಶಾನಂ ಸರ್ವಕಾಮಫಲಪ್ರದಂ ॥ ೪೧ ॥

ಕುಶೇಶಯೋ ಹರಿಶ್ಚೈವ ದ್ಯುತಿಮಾನ್ಪುಷ್ಪವಾಂಸ್ತಥಾ ।
ಮಣಿದ್ರುಮೋ ಹೇಮಶ್ಶೈಲಸ್ಸಪ್ತಮೋ ಮಂದರಾಚಲಃ ॥ ೪೨ ॥

೩೭-೩೮. ನಾಲ್ಕುವರ್ಣದ ಜನರಿಂದ ಕೂಡಿದ ಏಳು ದೇಶಗಳು ಇರುವವು. ಷಡ್ಗುಣೈಶ್ವರ್ಯ ಸಂಪನ್ನನಾದ ಶಿವನನ್ನು ಅನೇಕ ವಿಧವಾದ ಯಜ್ಞಗಳಿಂದ ಜನರು ಪೂಜಿಸುವರು. ಬಹಳ ಮನೋಹರವಾದ ಆ ಪ್ರದೇಶದಲ್ಲಿ ದೇವತೆಗಳ ಸಾನ್ನಿಧ್ಯವು ಬಹಳವಾಗಿ ಇರುವುದು. ಈ ದ್ವೀಪದ ಸುತ್ತಲೂ ಸುರಾಸಮುದ್ರವು ಇರುವುದು.

೩೯-೪೧. ಈ ಸಮುದ್ರದ ಹೊರಗಡೆಯಲ್ಲಿ ಸುತ್ತಲೂ ಎರಡರಷ್ಟು ವಿಸ್ತಾರವುಳ್ಳ ಕುಶದ್ವೀಪವು ಇರುವುದು. ಆ ದ್ವೀಪದಲ್ಲಿ ದೈತ್ಯರು, ದಾನವರು, ಮನುಷ್ಯರು, ದೇವತೆಗಳು, ಗಂಧರ್ವರು, ಯಕ್ಷರು, ಕಿಂಪುರುಷರು ಇವರೇ ಮೊದಲಾದವರು ಇರುವರು. ನಾಲ್ಕುವರ್ಣಾಶ್ರಮದವರೂ ತಮ್ಮ ತಮ್ಮ ಕರ್ಮಾನುಷ್ಠಾನದಲ್ಲಿ ಆಸಕ್ತರಾಗಿರುವರು. ಆ ಕುಶದ್ವೀಪದಲ್ಲಿ ಬ್ರಹ್ಮನನ್ನೂ ವಿಷ್ಣುವನ್ನೂ ಎಲ್ಲಾ ವಿಧವಾದ ಕರ್ಮಗಳ ಫಲವನ್ನು ಕೊಡುವ ಶಿವನನ್ನೂ ಪೂಜಿಸುವರು.

೪೨-೪೪. ಕುಶೇಶಯು, ಹರಿ, ದ್ಯುತಿಮಂತ, ಪುಷ್ಪವಂತ, ಮಣಿದ್ರುಮ, ಹೇಮಶ್ಶೈಲ, ಮಂದರಪರ್ವತ ಎಂಬ ಏಳು ಪರ್ವತಗಳು ಇರುವವು. ಧೂತಪಾಪಾ,

ನದ್ಯಶ್ಚ ಸಪ್ತ ತಾಸಾಂ ತು ನಾಮಾನಿ ಶೃಣು ತತ್ತ್ವತಃ ।
ಧೂತಪಾಪಾ ಶಿವಾ ಚೈವ ಪವಿತ್ರಾ ಸಂಮಿತಿಸ್ತಥಾ ॥ ೪೩ ॥

ವಿದ್ಯಾ ದಂಭಾ ಮಹೀ ಚಾನ್ಯಾ ಸರ್ವಪಾಪಹರಾಸ್ತ್ವಿಮಾಃ ।
ಅನ್ಯಾಸ್ಸಹಸ್ರಶಸ್ಸಂತಿ ಶುಭಾಪೋ ಹೇಮವಾಲುಕಾಃ ॥ ೪೪ ॥

ಕುಶದ್ವೀಪೇ ಕುಶಸ್ತಂಬೋ ಘೃತೋದೇನ ಸಮಾವೃತಃ ।
ಕ್ರೌಂಚದ್ವೀಪೋ ಮಹಾಭಾಗ ಶ್ರೂಯತಾಂ ಚಾಪರೋ ಮಹಾನ್ ॥ ೪೫ ॥

ದ್ವಿಗುಣೇನ ಸಮುದ್ರೇಣ ದಧಿಮಂಡೇನ ಚಾವೃತಃ ।
ವರ್ಷಾಚಲಾ ಮಹಾಬುದ್ಧೇ ತೇಷಾಂ ನಾಮಾನಿ ಮೇ ಶೃಣು ॥ ೪೬ ॥

ಕ್ರೌಂಚಶ್ಚ ವಾಮನಶ್ಚೈವ ತೃತೀಯಶ್ಚಾಂಧಕಾರಕಃ ।
ದಿವಾವೃತಿರ್ಮನಶ್ಚೈವ ಪುಂಡರೀಕಶ್ಚ ದುಂದುಭಿಃ ॥ ೪೭ ॥

ನಿವಸಂತಿ ನಿರಾತಂಕಾ ವರ್ಷಶೈಲೇಷು ತೇಷು ವೈ ।
ಸರ್ವಸೌವರ್ಣರಮ್ಯೇಷು ಸುಹೃದ್ದೇವಗಣೈಃ ಪ್ರಜಾಃ ॥ ೪೮ ॥

ಶಿವಾ, ಪವಿತ್ರಾ ಸಂಮಿತಿ ವಿದ್ಯಾ, ದಂಭಾ ಮಹೀ ಎಂಬ ಏಳು ನದಿಗಳು ಎಲ್ಲಾ ಪಾಪಗಳನ್ನೂ ನಾಶಮಾಡುತ್ತಾ ಅಲ್ಲಿ ಹರಿಯುತ್ತಿರುವವು. ಅಲ್ಲಿ ಚಿನ್ನದ ಮರಳಿನಿಂದ ಕೂಡಿರುವ ಬೇರೆ ಬೇರೆಯಾದ ನದಿಗಳು ಇನ್ನೂ ಬಹಳವಿರುವುವು. ಕುಶದ್ವೀಪದಲ್ಲಿ ದರ್ಭೆಯ ಸ್ತಂಭವು ತುಪ್ಪದ ಸಮುದ್ರದಿಂದ ಸುತ್ತುವರಿದಿರುವುದು.

೪೫-೪೮. ಇದರ ಸುತ್ತಲೂ ದೊಡ್ಡದಾದ ಕ್ರೌಂಚದ್ವೀಪವಿರುವುದು. ಅದು ಎರಡರಷ್ಟು ಪ್ರಮಾಣವುಳ್ಳ ಮೊಸರಿನ ಕೆನೆಯಿಂದ ಕೂಡಿರುವುದು. ಎಲೈ ಬಹಳ ಬುದ್ಧಿಯುಳ್ಳ ವ್ಯಾಸನೇ, ಕೇಳು. ಇಲ್ಲಿಯೂ ವರ್ಷಪರ್ವತಗಳಿರುವವು. ಅವುಗಳ ಹೆಸರನ್ನು ಹೇಳುವೆನು ಕೇಳು. ಕ್ರೌಂಚ, ವಾಮನ, ಅಂಧಕಾರಕ, ದಿವಾವೃತಿ, ಮನಸ್ಸು, ಪುಂಡರೀಕ, ದುಂದುಭಿ ಎಂಬಿವುಗಳು ಆ ಪರ್ವತಗಳ ಹೆಸರುಗಳು. ಆ ವರ್ಷದ ಪರ್ವತಗಳಲ್ಲಿ ಜನರು ಯಾವ ಈತಿಬಾಧೆಯೂ ಇಲ್ಲದವರಾಗಿ ವಾಸಮಾಡುತ್ತಿರುವರು. ಇಲ್ಲಿಯೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರೆಂಬ ಕ್ರಮದಿಂದ ನಾಲ್ಕು ವರ್ಣಗಳ ಭೇದಗಳಿರುವವು. ಇವರು ಸುವರ್ಣಮಯವಾಗಿಯೂ ಮನೋಹರವಾಗಿಯೂ, ಇರುವ ಪ್ರದೇಶಗಳಲ್ಲಿ ಸ್ನೇಹಿತರಿಂದಲೂ, ದೇವತೆಗಳ ಸಮೂಹಗಳಿಂದಲೂ ಕೂಡಿ ವಿಹಾರಮಾಡುತ್ತಿರುವರು.

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಶ್ಶೂದ್ರಾಶ್ಚಾನುಕ್ರಮೋದಿತಾಃ ।
ಸಂತಿ ತತ್ರ ಮಹಾನದ್ಯಸ್ಸಪ್ತಾನ್ಯಾಸ್ತು ಸಹಸ್ರಶಃ ॥ ೪೯ ॥

ಗೌರೀ ಕುಮುದ್ವತೀ ಚೈವ ಸಂಧ್ಯಾ ರಾತ್ರಿರ್ಮನೋಜವಾ ।
ಶಾಂತಿಶ್ಚ ಪುಂಡರೀಕಾ ಚ ಯಾಃ ಪಿಬಂತಿ ಪಯಶ್ಶುಭಂ ॥ ೫೦ ॥

ಭಗವಾನ್ಪೂಜ್ಯತೇ ತತ್ರ ಯೋಗರುದ್ರಸ್ವರೂಪವಾನ್ ।
ದಧಿಮಂಡೋದಕಶ್ಚಾಪಿ ಶಾಕದ್ವೀಪೇನ ಸಂವೃತಃ ॥ ೫೧ ॥

ದ್ವಿಗುಣೇನಾದ್ರಯಸ್ಸಪ್ತ ತೇಷಾಂ ನಾಮಾನಿ ಮೇ ಶೃಣು ।
ಪೂರ್ವೇ ತತ್ರೋದಯಗಿರಿರ್ಜಲಧಾರಃ ಪರೇ ಯತಃ ॥ ೫೨ ॥

ಪೃಷ್ಠತೋಽಸ್ತಗಿರಿಶ್ಚೈವ ಹ್ಯವಿಕೇಶಶ್ಚ ಕೇಶರೀ ।
ಶಾಕಸ್ತತ್ರ ಮಹಾವೃಕ್ಷಸ್ಸಿದ್ಧಗಂಧರ್ವಸೇವಿತಃ ॥ ೫೩ ॥

ತತ್ರ ಪುಣ್ಯಾ ಜನಪದಾಶ್ಚಾತುರ್ವರ್ಣ್ಯಸಮನ್ವಿತಾಃ ।
ನದ್ಯಶ್ಚಾತ್ರ ಮಹಾಪುಣ್ಯಾಸ್ಸರ್ವಪಾಪಭಯಾಪಹಾಃ ॥ ೫೪ ॥

೪೯–೫೧. ಇಲ್ಲಿಯೂ ಮುಖ್ಯವಾದ ಏಳು ನದಿಗಳು ಇರುವವು. ಗೌರೀ, ಕುಮುದ್ವತೀ, ಸಂಧ್ಯಾ, ರಾತ್ರಿ, ಮನೋಜವಾ, ಶಾಂತಿ, ಪುಂಡರೀಕಾ, ಎಂಬಿವುಗಳು ಆ ನದಿಗಳ ಹೆಸರುಗಳು. ಇನ್ನೂ ಬಹಳವಾದ ಸಣ್ಣ ಸಣ್ಣ ನದಿಗಳು ಇರುವವು. ಅಲ್ಲಿಯ ಜನರು ಇವುಗಳ ನೀರನ್ನು ಉಪಯೋಗಿಸುವರು. ಈ ದ್ವೀಪದಲ್ಲಿ ಯೋಗ ರುದ್ರ ಸ್ವರೂಪದಿಂದ ಇರುವ ಪೂಜ್ಯನಾದ ಶಿವನನ್ನು ಪೂಜಿಸುತ್ತಿರುವರು. ಈ ಮೊಸರಿನ ಹೆಪ್ಪುಗಳಿಂದ ಕೂಡಿದ ನೀರಿನ ಸುತ್ತಲೂ ಶಾಕದ್ವೀಪವು ಇರುವುದು.

೫೨–೫೪. ಈ ಶಾಕದ್ವೀಪವು ಹಿಂದೆ ಹೇಳಿದ ಕ್ರೌಂಚದ್ವೀಪಕ್ಕಿಂತಲೂ ಎರಡರಷ್ಟು ಹೆಚ್ಚು ವಿಸ್ತಾರವಾಗಿರುವುದು. ಇಲ್ಲಿಯೂ ಏಳು ಬೆಟ್ಟಗಳಿರುವವು ಪೂರ್ವದಿಕ್ಕಿನಲ್ಲಿ ಉದಯಪರ್ವತವೂ ಅದರ ಹತ್ತಿರದಲ್ಲಿ ಜಲಧಾರವೆಂಬ ಪರ್ವತವೂ ಇರುವುದು. ಅದರ ಹಿಂದೆ ಇರುವ ಅಸ್ತಪರ್ವತ, ಅವಿಕೇಶಪರ್ವತ, ಇವುಗಳು ಮುಖ್ಯ ವಾದವುಗಳು. ಸಿದ್ಧರೂ ಗಂಧರ್ವರೂ ಸೇವಿಸುತ್ತಿರುವ ಶಾಕವೆಂಬ ಮರವು ಈ ದ್ವೀಪದಲ್ಲಿ ಮಹಾವೃಕ್ಷವಾಗಿ ಇರುವುದು. ಅಲ್ಲಿರುವ ದೇಶಗಳು ಬಹಳ ಪುಣ್ಯ ಭೂಮಿಯೆನಿಸಿ ನಾಲ್ಕುವರ್ಣದ ಜನರಿಂದಲೂ ಕೂಡಿರುವವು. ನದಿಗಳು ಬಹಳ

ಸುಕುಮಾರೀ ಕುಮಾರೀ ಚ ನಲಿನೀ ವೇಣುಕಾ ತಥಾ ।
ಇಕ್ಷುಂಶ್ಚ ರೇಣುಕಾ ಚೈವ ಗಭಸ್ತಿಸ್ಸಪ್ತಮೀ ತಥಾ ॥ ೫೫ ॥

ಅನ್ಯಾಸ್ಸಹಸ್ರಶಸ್ತತ್ರ ಕ್ಷುದ್ರನದ್ಯೋ ಮಹಾಮುನೇ ।
ಮಹೀಧರಾಸ್ತಥಾ ಸಂತಿ ಶತಶೋಽಥ ಸಹಸ್ರಶಃ ॥ ೫೬ ॥

ಧರ್ಮಹಾನಿರ್ನ ತೇಷ್ವಸ್ತಿ ಸ್ವರ್ಗಾದಾಗತ್ಯ ಮಾನವಾಃ ।
ವರ್ಷೇಷು ತೇಷು ಪೃಥಿವೀಂ ವಿಹರಂತಿ ಪರಸ್ಪರಂ ॥ ೫೭ ॥

ಶಾಕದ್ವೀಪೇ ತು ವೈ ಸೂರ್ಯಃ ಪ್ರೀತ್ಯಾ ಜನಪದೈಸ್ಸದಾ ।
ಯಥೋಕ್ತೈರಿಜ್ಯತೇ ಸಮ್ಯಕ್ಕರ್ಮಭಿರ್ನಿಯತಾತ್ಮಭಿಃ ॥ ೫೮ ॥

ಕ್ಷೀರೋದೇನಾವೃತಸ್ಸೋಽಪಿ ದ್ವಿಗುಣೇನ ಸಮಂತತಃ ।
ಕ್ಷೀರಾಬ್ಧಿಸ್ಸರ್ವತೋ ವ್ಯಾಸ ಪುಷ್ಕರಾಖ್ಯೇನ ಸಂವೃತಃ ॥ ೫೯ ॥

ದ್ವಿಗುಣೇನ ಮಹಾವರ್ಷಸ್ತತ್ರ ಖ್ಯಾತೋಽತ್ರ ಮಾನಸಃ ।
ಯೋಜನಾನಾಂ ಸಹಸ್ರಾಣಿ ಪಂಚೈವೋರ್ಧ್ವಸಮುಚ್ಛ್ರಿತಃ ॥ ೬೦ ॥

ಪುಣ್ಯಕರವಾದವುಗಳು. ಎಲ್ಲಾ ವಿಧವಾದ ಪಾಪಗಳ ಭಯವನ್ನು ನಾಶಮಾಡುವವು. ಸುಕುಮಾರೀ, ಕುಮಾರೀ, ನಳನೀ, ವೇಣುಕಾ, ಇಕ್ಷು, ರೇಣುಕಾ, ಗಭಸ್ತಿ ಎಂಬ ಮುಖ್ಯ ನದಿಗಳಲ್ಲದೆ ಸಣ್ಣ ಸಣ್ಣ ನದಿಗಳು ಇನ್ನೂ ಸಾವಿರಗಟ್ಟಲೆಯಾಗಿರುವವು. ಬೆಟ್ಟಗಳೂ ಬಹಳವಿರುವವು. ಆ ದೇಶದಲ್ಲಿ ಧರ್ಮಕ್ಕೆ ಕೊಂಚವೂ ತೊಂದರೆಯು ಇಲ್ಲ. ಸ್ವರ್ಗವಾಸಿಗಳಾದ ಮನುಷ್ಯರು ಸ್ವರ್ಗದಿಂದ ಬಂದು ಆಯಾಯ ದೇಶಗಳಲ್ಲಿ ಅನ್ಯೋನ್ಯ ಪ್ರೀತಿಯಿಂದ ವಿಹಾರ ಮಾಡುತ್ತಿರುವರು. ಈ ಶಾಕದ್ವೀಪದಲ್ಲಿರುವ ಜನಗಳು ನಿಯತವಾದ ಮನಸ್ಸುಳ್ಳವರಾಗಿ ಶಾಸ್ತ್ರವನ್ನು ಅನುಸರಿಸಿ ಕ್ರಮದಿಂದಲೂ ಭಕ್ತಿಯಿಂದಲೂ ಸೂರ್ಯನನ್ನು ಚೆನ್ನಾಗಿ ಪೂಜಿಸುವರು.

೫೯. ಈ ಶಾಕದ್ವೀಪದ ಸುತ್ತಲೂ ಹಾಲಿನ ಸಮುದ್ರವು ಇರುವುದು. ಇದು ಹಿಂದಿನ ಸಮುದ್ರಕ್ಕಿಂತಲೂ ಎರಡರಷ್ಟು ಹೆಚ್ಚು ವಿಸ್ತಾರವಾಗಿರುವುದು. ಈ ಸಮುದ್ರದ ಸುತ್ತಲೂ ಪುಷ್ಕರದ್ವೀಪವು ಇರುವುದು. ಇದು ಹಿಂದಿನ ದ್ವೀಪಕ್ಕಿಂತಲೂ ಎರಡರಷ್ಟು ದೊಡ್ಡದಾಗಿರುವುದು.

೬೦-೬೩. ಈ ಪುಷ್ಕರದ್ವೀಪದಲ್ಲಿ ಐದುಸಾವಿರ ಯೋಜನಗಳ ಎತ್ತರದಲ್ಲಿ ಮಾನಸಸರೋವರವಿರುವುದು. ಒಂದು ಲಕ್ಷಯೋಜನ ಸುತ್ತಳತೆಯುಳ್ಳದ್ದಾಗಿರು

ತಾನಿ ಚೈವ ತು ಲಕ್ಷಾಣಿ ಸರ್ವತೋ ವಲಯಾಕೃತಿಃ ।
ಪುಷ್ಕರದ್ವೀಪವಲಯೋ ಮಧ್ಯೇನ ವಿಭಜಂತಿ ಚ ॥ ೬೧ ॥

ತೇನೈವ ವಲಯಾಕಾರಾ ದ್ವೀಪವರ್ಷಸಮಾಕೃತಿಃ ।
ದಶವರ್ಷಸ್ರಹಸ್ರಾಣಿ ತತ್ರ ಜೀವಂತಿ ಮಾನವಾಃ ॥ ೬೨ ॥

ನಿರಾಮಯಾ ವೀತಶೋಕಾ ರಾಗದ್ವೇಷವಿವರ್ಜಿತಾಃ ।
ಅಧರ್ಮೋ ನ ಮತಸ್ತೇಷಾಂ ನ ಬಂಧವಧಕೌ ಮುನೇ ॥ ೬೩ ॥

ಸತ್ಯಾನೃತೇ ನ ತಸ್ಯಾಸ್ತಾಂ ಸದೈವ ವಸತಿಸ್ಸದಾ ।
ತುಲ್ಯವೇಷಾಸ್ತು ಮನುಜಾ ಹೇಮವರ್ಣೈಕರೂಪಿಣಃ ॥ ೬೪ ॥

ವರ್ಷಶ್ಚಾಯಂ ತು ಕಾಲೇಯ ಭೌಮಸ್ಸ್ವರ್ಗೋಪಮೋಪಮಃ ।
ಸರ್ವಸ್ಯ ಸುಖದಃ ಕಾಲೋ ಜರಾರೋಗವಿವರ್ಜಿತಃ ॥ ೬೫ ॥

ವುದು. ಪುಷ್ಕರದ್ವೀಪದ ಸುತ್ತಳತೆಯನ್ನು ಇದು ಮಧ್ಯದಲ್ಲಿ ವಿಭಾಗಮಾಡುತ್ತಿರುವುದು. ಆದ್ದರಿಂದ ಈ ದ್ವೀಪದಲ್ಲಿರುವ ದೇಶಗಳು ಈ ಸರೋವರದ ಸುತ್ತಲೂ ಇರುವವು. ಇಲ್ಲಿ ಜನರು ಹತ್ತುಸಾವಿರ ವರ್ಷಗಳು ಜೀವಿಸುವರು. ಇವರು ರೋಗರಹಿತರಾಗಿಯೂ ದುಃಖರಹಿತರಾಗಿಯೂ ಕಾಮಕ್ರೋಧಗಳಿಲ್ಲದವರಾಗಿಯೂ ಇರುವರು. ಅವರು ಮತ್ತೊಬ್ಬರನ್ನು ಕೈಸೆರೆ ಹಿಡಿಯುವುದನ್ನಾಗಲೀ, ವಧೆಯನ್ನಾಗಲೀ ಮಾಡುವುದಿಲ್ಲ.

೬೪. ಅಲ್ಲಿ ಸುಳ್ಳು ನಿಜವೆಂಬ ಭೇದವಿಲ್ಲ. ಎಲ್ಲರೂ ಸತ್ಯವನ್ನೇ ನುಡಿಯುವರು. ಅಲ್ಲಿನ ವಾಸವು ಜನರಿಗೆ ಯಾವಾಗಲೂ ಸುಖಕರವಾಗಿರುವುದು. ಜನರೆಲ್ಲರೂ ಒಂದೇ ವಿಧವಾದ ವಸ್ತ್ರಗಳನ್ನೂ ಆಭರಣಗಳನ್ನೂ ಧರಿಸಿಕೊಂಡಿರುವರು. ಎಲ್ಲರೂ ಚಿನ್ನದ ಬಣ್ಣದಂತಿರುವ ಶರೀರಕಾಂತಿಯಿಂದ ಬೆಳಗುತ್ತಿರುವರು. ಅವರಿಗೆ ಅಧರ್ಮಮಾರ್ಗದಲ್ಲಿ ನಡೆಯುವ ಅಭಿಲಾಷೆಯೇ ಇಲ್ಲ. ಸುಳ್ಳು ನಿಜವೆಂಬುದು ಭೇದಭಾವವು ಆ ದೇಶಗಳಲ್ಲಿಲ್ಲ.

೬೫-೬೮. ಎಲೈ ವ್ಯಾಸಋಷಿಯೇ, ಕೇಳು ಈ ದೇಶವು ಭೂಮಿಯಲ್ಲಿದ್ದರೂ ಸ್ವರ್ಗಕ್ಕೆ ಸಮನಾಗಿರುವುದು. ಇಲ್ಲಿಯ ಕಾಲಮಾನವು ಎಲ್ಲರಿಗೂ ಸುಖಕರ

ಪುಷ್ಕರೇ ಧಾತಕೀಖಂಡೇ ಮಹಾವೀತೇ ಮಹಾಮುನೇ ।
ನ್ಯಗ್ರೋಧಂ ಪುಷ್ಕರದ್ವೀಪೇ ಬ್ರಹ್ಮಣಃ ಸ್ಥಾನಮುತ್ತಮಂ ॥ ೬೬ ॥

ತಸ್ಮಿನ್ನಿವಸತೇ ಬ್ರಹ್ಮಾ ಪೂಜ್ಯಮಾನಸ್ಸುರಾಸುರೈಃ ।
ಸ್ವಾದೂದಕೇನಾಂಬುಧಿನಾ ಪುಷ್ಕರಃ ಪರಿವೇಷ್ಟಿತಃ ॥ ೬೭ ॥

ಏವಂ ದ್ವೀಪಾಸ್ಸಮುದ್ರೈಸ್ತು ಸಪ್ತ ಸಪ್ತಭಿರಾವೃತಾಃ ।
ದ್ವೀಪಾಶ್ಚೈವ ಸಮುದ್ರಾಶ್ಚ ಸಮಾನಾ ದ್ವಿಗುಣೈಃ ಪರೈಃ ॥ ೬೮ ॥

ಉಕ್ತಾತಿರಿಕ್ತತಾ ತೇಷಾಂ ಸಮುದ್ರೇಷು ಸಮಾನಿ ವೈ ।
ಪಯಾಂಸಿ ಸರ್ವದಾ ಹ್ಯಲ್ಪತ್ವಂ ಜಾಯಂತೇ ನ ಕದಾಚನ ॥ ೬೯ ॥

ಸ್ಥಾಲೀಸ್ಥಮಗ್ನಿಸಂಯೋಗಾದಧೋ ನೋ ಮುನಿಸತ್ತಮ ।
ತಥೇಂದುವೃದ್ಧೌ ಸಲಿಲಮೂರ್ಧ್ವಗಂ ಭವತಿ ಧ್ರುವಂ ॥ ೭೦ ॥

ಉದಯಾಸ್ತಮನೇ ತ್ವಿಂದೋರ್ವರ್ಧಂತ್ಯಾಪೋ ಹ್ರಸಂತಿ ಚ ।
ಅತೋ ನ್ಯೂನಾತಿರಿಕ್ತಾಶ್ಚ ಪಕ್ಷಯೋಃ ಶುಕ್ಲಕೃಷ್ಣಯೋಃ ॥ ೭೧ ॥

ವಾಗಿರುವುದು. ಬಹಳ ಪರಿಶುದ್ಧವಾದ ಧಾತಕೀ ಖಂಡದಲ್ಲಿಯೂ, ಪುಷ್ಕರದ್ವೀಪದಲ್ಲಿಯೂ ಮುಪ್ಪು ಮತ್ತು ರೋಗಗಳಿಲ್ಲ. ಆ ಪುಷ್ಕರದ್ವೀಪದಲ್ಲಿ ಆಲದಮರವು ಬ್ರಹ್ಮನಿಗೆ ಉತ್ತಮವಾದ ಸ್ಥಾನವಾಗಿರುವುದು. ಅಲ್ಲಿ ಬ್ರಹ್ಮನು, ದೇವತೆಗಳು ಮತ್ತು ಅಸುರರು ಇವರುಗಳಿಂದ ಪೂಜೆಯನ್ನು ಸ್ವೀಕರಿಸುತ್ತಾ ಸುಖದಿಂದಿರುವನು. ಈ ಪುಷ್ಕರದ್ವೀಪದ ಸುತ್ತಲೂ ಸಿಹಿನೀರಿನ ಸಮುದ್ರವು ಇರುವುದು. ಈ ಪ್ರಕಾರವಾಗಿ ಏಳು ದ್ವೀಪಗಳೂ ಏಳು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿರುವವು. ಈ ದ್ವೀಪಗಳು ಮತ್ತು ಸಮುದ್ರಗಳು ಒಂದಕ್ಕಿಂತ ಮತ್ತೊಂದು ಎರಡರಷ್ಟು ದೊಡ್ಡವುಗಳಾಗಿರುವವು.

೬೯-೭೩. ಆ ದ್ವೀಪಗಳಿಗೂ ಮತ್ತು ಸಮುದ್ರಗಳಿಗೂ ನಾನು ಹೇಳಿದ್ದಕ್ಕಿಂತಲೂ ಹೆಚ್ಚು ಕಡಿಮೆ ಪ್ರಮಾಣವಿಲ್ಲ. ಸಮುದ್ರಗಳಲ್ಲಿ ನೀರು ಯಾವಾಗಲೂ ಕಮ್ಮಿಯಾಗುವುದಿಲ್ಲ. ಪಾತ್ರೆಯಲ್ಲಿ ನೀರನ್ನು ಇರಿಸಿ ಕೆಳಗಡೆ ಬೆಂಕಿಯನ್ನು ಹಾಕಿದರೆ ನೀರು ಮಾತ್ರ ಕುದಿಯುತ್ತಾ ಮೇಲಕ್ಕೆ ಬರುವುದು. ಹಾಗೆಯೇ ಚಂದ್ರನು ವೃದ್ಧಿಯನ್ನು ಹೊಂದಿದಾಗ ನೀರು ಉಕ್ಕುವುದು. ಚಂದ್ರನ ಉದಯಾಸ್ತಗಳಲ್ಲಿ

ಆಸಾಂ ವೃದ್ಧಿಕ್ಷಯೌ ದೃಷ್ಟೌ ಶತಶಸ್ತು ದಶೋತ್ತರಂ ।
ಸಮುದ್ರಾಣಾಂ ಮುನಿಶ್ರೇಷ್ಠ ಸರ್ವೇಷಾಂ ಕಥಿತಂ ತವ ॥ ೭೨ ॥

ಭೋಜನಂ ಪುಷ್ಕರದ್ವೀಪೇ ಪ್ರಜಾಸ್ಸರ್ವಾಃ ಸದೈವ ಹಿ ।
ಖಂಡಸ್ಯ ಕುರ್ವತೇ ವಿಪ್ರ ತತ್ರ ಸ್ವಯಮುಪಸ್ಥಿತಂ ॥ ೭೩ ॥

ಸ್ವಾಂಗದೋ ಯಸ್ಯ ಪುರತೋ ನಾಸ್ತಿ ಲೋಕಸ್ಯ ಸಂಸ್ಥಿತಿಃ ।
ದ್ವಿಗುಣಾ ಹಿರಣ್ಮಯೀ ಭೂಮಿಸ್ಸರ್ವಜಂತುವಿವರ್ಜಿತಾ ॥ ೭೪ ॥

ಲೋಕಾಲೋಕಸ್ತತಶ್ಶೈಲಸ್ಸಹಸ್ರಾಣ್ಯಚಲೋ ಹಿ ಸಃ ।
ಉಚ್ಛ್ರಯೇಣ ಹಿ ತಾವಂತಿ ಯೋಜನಾಯುತವಿಸ್ತೃತಃ ॥ ೭೫ ॥

ತಮಶ್ಚಾಂಡಕಟಾಹೇನ ಸೇಯಮುರ್ವೀ ಮಹಾಮುನೇ ।
ಪಂಚಾಶತ್ಕೋಟಿವಿಸ್ತಾರಾ ಸದ್ವೀಪಾ ಸಮಹೀಧರಾ ॥ ೭೬ ॥

ನೀರು ಹೆಚ್ಚು ಕಡಿಮೆಯಾಗುವುದು. ಈ ಕಾರಣದಿಂದ ಶುಕ್ಲ ಕೃಷ್ಣ ಪಕ್ಷಗಳಲ್ಲಿ ಹೆಚ್ಚು ಕಡಿಮೆಯಾಗುವುದು ಅನುಭವದಲ್ಲಿರುವುದು. ಈ ರೀತಿಯಾದ ಹೆಚ್ಚು ಕಡಿಮೆಯು ಸ್ವಾಭಾವಿಕ ಸ್ಥಿತಿಗಿಂತ ಹತ್ತರಷ್ಟು ಇರುವುದು. ಎಲ್ಲಾ ಸಮುದ್ರ ಗಳಿಗೂ ಈ ಪ್ರಕಾರದಿಂದ ಹೆಚ್ಚು ಕಡಮೆಯು ಇರುವುದು.

೭೩-೭೭. ಎಲೈ ಮುನಿಶ್ರೇಷ್ಠನೇ, ಕೇಳು ಪುಷ್ಕರದ್ವೀಪದಲ್ಲಿ ಪ್ರಜೆಗಳು ಯಾವಾಗಲೂ ತನ್ನಷ್ಟಕ್ಕೆ ತಾನೇ ಬೆಳೆದಿರುವ ಗೆಡ್ಡೆಗಳನ್ನು ತಿನ್ನುವರು. ಇದರ ಆಚೆಗೆ ಯಾವ ದೇಶವೂ ಇಲ್ಲ. ಲೋಕದ ಸ್ಥಿತಿಯು ಇಷ್ಟೇ ಆಗಿರುವುದು. ಇದರ ಆಚೆಗೆ ಚಿನ್ನದ ಭೂಮಿಯು ಇರುವುದು. ಈ ಪ್ರದೇಶದಲ್ಲಿ ಯಾವ ಪ್ರಾಣಿಯೂ ಇಲ್ಲ. ಅದರ ಮುಂದೆ ಲೋಕಾಲೋಕಪರ್ವತವು ಇರುವುದು. ಅದು ಸಾವಿರ ಬೆಟ್ಟಗಳಷ್ಟು ಎತ್ತರವಾಗಿಯೂ ಅಷ್ಟೇ ಉದ್ದವಾಗಿಯೂ, ಹತ್ತುಸಾವಿರ ಯೋಜನ ಅಗಲವುಳ್ಳದ್ದಾಗಿಯೂ ಇರುವುದು. ಅದರ ಮುಂದೆ ಕಗ್ಗತ್ತಲೆಯು ಇರುವುದು. ಆಮೇಲೆ ಅಂಡದ ಕೊಪ್ಪರಿಗೆಯಂತಿರುವ ಭಾಗವು ಇರುವುದು. ಎಲೈ ಮಹರ್ಷಿಯೇ, ಕೇಳು ಈ ಭೂಮಿಯು, ದ್ವೀಪಗಳೂ ಬೆಟ್ಟಗಳೂ ಎಲ್ಲವೂ ಸೇರಿ, ಐವತ್ತಾರುಕೋಟಿ ಯೋಜನ ವಿಸ್ತಾರವುಳ್ಳದ್ದಾಗಿರುವುದು. ಎಲ್ಲಾ ಪ್ರಾಣಿಗಳಿಗೂ ಆಧಾರವಾಗಿ ಪಞ್ಚ ಮಹಾ ಭೂತಗಳಲ್ಲಿ ಎಲ್ಲಾ ಭೂತಗಳಿಗಿಂತಲೂ ಹೆಚ್ಚಾದ ಗುಣವುಳ್ಳದ್ದಾಗಿರುವುದು.

**ಆಧಾರಭೂತಾ ಸರ್ವೇಷಾಂ ಸರ್ವಭೂತಗುಣಾಧಿಕಾ ।**
**ಸೇಯಂ ಧಾತ್ರೀ ಚ ಕಾಲೇಯ ಸರ್ವೇಷಾಂ ಜಗತಾಮಿಲಾ ॥ ೭೭ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ**
**ಬ್ರಹ್ಮಾಂಡಕಥನೇ ಸಪ್ತದ್ವೀಪವರ್ಣನಂ ನಾಮಾಷ್ಟಾದಶೋಽಧ್ಯಾಯಃ**



ಈ ಭೂಮಿಯು ಎಲ್ಲಾ ಜಗತ್ತುಗಳಿಗೂ ಪೋಷಣೆಯನ್ನು ಮಾಡುವ (ಉಪಮಾತೃವಿನಂತೆ) ಸಾಕು ತಾಯಿಯ ಹಾಗೆ ಇರುವುದು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಬ್ರಹ್ಮಾಂಡವಿವರಣೆಯಲ್ಲಿ ಸಪ್ತದ್ವೀಪವರ್ಣನವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

# ಏಕೋನವಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ರವಿಚಂದ್ರಮಸೋರ್ಯಾವನ್ಮಯೂಖಾ ಭಾಸಯಂತಿ ಹಿ ।
ತಾವತ್ಪ್ರಮಾಣಾ ಪೃಥಿವೀ ಭೂಲೋಕಸ್ಸ ತು ಗೀಯತೇ ॥ ೧ ॥

ಭೂಮೇರ್ಯೋಜನಲಕ್ಷೇ ತು ಸಂಸ್ಥಿತಂ ರವಿಮಂಡಲಂ ।
ಯೋಜನಾನಾಂ ಸಹಸ್ರಾಣಿ ಸದೈವ ಪರಿಸಂಖ್ಯಯಾ ॥ ೨ ॥

ಶಶಿನಸ್ತು ಪ್ರಮಾಣಾಯ ಜಗತಃ ಪರಿಚಕ್ಷತೇ ।
ರವೇರೂರ್ಧ್ವಂ ಶಶೀ ತಸ್ಥೌ ಲಕ್ಷಯೋಜನಸಂಖ್ಯಯಾ ॥ ೩ ॥

---

## ಹತ್ತೊಂಭತ್ತನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ಸೂರ್ಯಚಂದ್ರರ ಕಿರಣಗಳು ಎಲ್ಲಿಯವರೆಗೂ ವ್ಯಾಪಿಸಿ ಪ್ರಕಾಶವನ್ನು ಕೊಡುವುದೋ ಆ ಪ್ರದೇಶವೆಲ್ಲವನ್ನೂ ಭೂಲೋಕವೆಂತಲೂ, ಭೂಮಿಯೆಂತಲೂ ಕರೆಯುವರು.

೨-೫. ಭೂಮಿಗೆ ಲಕ್ಷ ಯೋಜನಗಳ ದೂರದಲ್ಲಿ ಸೂರ್ಯಮಂಡಲವು ಇರುವುದು. ಜಗತ್ತಿನ ಒಂದುಸಾವಿರ ಯೋಜನಗಳು ಯಾವಾಗಲೂ ಚಂದ್ರನ ವಿಸ್ತಾರವೆಂದು ಹೇಳುವರು. ಸೂರ್ಯನ ಮೇಲುಗಡೆಯಲ್ಲಿ ಚಂದ್ರನು ಒಂದು ಲಕ್ಷ ಯೋಜನದಲ್ಲಿರುವನು. ಚಂದ್ರನ ಮೇಲುಭಾಗದಲ್ಲಿ (ಗ್ರಹಗಳೆಲ್ಲವೂ) ಗ್ರಹ

ಗ್ರಹಾಣಾಂ ಮಂಡಲಂ ಕೃತ್ಸ್ನಂ ಶಶೇರುಪರಿ ಸಂಸ್ಥಿತಂ ।
ಸನಕ್ಷತ್ರಂ ಸಹಸ್ರಾಣಿ ದಶೈವ ಪರಿತೋಽಪರಿ ॥ ೪ ॥

ಬುಧಸ್ತಸ್ಮಾದಥೋ ಕಾವ್ಯಸ್ತಸ್ಮಾದ್ಭೌಮಸ್ಯ ಮಂಡಲಂ ।
ಬೃಹಸ್ಪತಿಸ್ತದೂರ್ಧ್ವಂ ತು ತಸ್ಯೋಽಪರಿ ಶನೈಶ್ಚರಃ ॥ ೫ ॥

ಸಪ್ತರ್ಷಿಮಂಡಲಂ ತಸ್ಮಾಲ್ಲಕ್ಷೇಣೈಕೇನ ಸಂಸ್ಥಿತಂ ।
ಋಷಿಭ್ಯಸ್ತು ಸಹಸ್ರಾಣಾಂ ಶತಾದೂರ್ಧ್ವಂ ಧ್ರುವಃ ಸ್ಥಿತಃ ॥ ೬ ॥

ಮೇಢೀಭೂತಸ್ಸ ಯಸ್ತಸ್ಯ ಜ್ಯೋತಿಶ್ಚಕ್ರಸ್ಯ ವೈ ಧ್ರುವಃ ।
ಭೂರ್ಭುವಃಸ್ವರಿತಿ ಜ್ಞೇಯಂ ಭುವ ಊರ್ಧ್ವಂ ಧ್ರುವಾದವಾಕ್ ॥ ೭ ॥

ಏಕಯೋಜನಕೋಟಿಸ್ತು ಯತ್ರ ತೇ ಕಲ್ಪವಾಸಿನಃ ।
ಧ್ರುವಾದೂರ್ಧ್ವಂ ಮಹರ್ಲೋಕಸ್ಸಪ್ತೈತೇ ಬ್ರಹ್ಮಣಸ್ಸುತಾಃ ॥ ೮ ॥

ಸನಕಶ್ಚ ಸನಂದಶ್ಚ ತೃತೀಯಶ್ಚ ಸನಾತನಃ ।
ಕಪಿಲಶ್ಚಾಸುರಿಶ್ಚೈವ ವೋಢುಃ ಪಂಚಶಿಖಸ್ತಥಾ ॥ ೯ ॥

ಮಂಡಲವೆಲ್ಲವೂ ಇರುವುದು ಅವು ಹತ್ತುಸಾವಿರ ನಕ್ಷತ್ರಗಳ ಜೊತೆಯಲ್ಲಿ ಚಂದ್ರನ ಸುತ್ತಲೂ ಮೇಲುಗಡೆಯಲ್ಲಿರುವುವು. ಬುಧನೂ, ಅವನ ಅನಂತರ ಶುಕ್ರನೂ, ಆಮೇಲೆ ಕುಜನೂ, ಅವನಿಗಿಂತ ಮೇಲೆ ಬೃಹಸ್ಪತಿಯೂ, ಅವನಿಗಿಂತ ಮೇಲೆ ಶನಿಯೂ ಇರುವರು.

೬-೧೧. ಸಪ್ತಋಷಿಗಳ ಮಂಡಲವು ಶನಿಯ ಮಂಡಲಕ್ಕಿಂತ ಒಂದುಲಕ್ಷ ಯೋಜನಗಳ ಮೇಲೆ ಇರುವುದು. ಸಪ್ತಋಷಿಗಳ ಮಂಡಲಕ್ಕಿಂತ ಒಂದು ಲಕ್ಷ ಯೋಜನದೂರದಲ್ಲಿ ಧ್ರುವಮಂಡಲವಿರುವುದು. ಈ ಧ್ರುವನು ಜ್ಯೋತಿಶ್ಚಕ್ರಕ್ಕೆಲ್ಲಕ್ಕೂ ಮೇಟಿಯ ಕಂಬವಾಗಿ ಇರುವನು. ಭೂಮಿಗಿಂತಲೂ ಮೇಲುಗಡೆಗೆ ಧ್ರುವನಿಗಿಂತಲೂ ಕೆಳಗಡೆಗೆ ಇರುವ (ಪ್ರದೇಶವು) ಅಂತರವು ಭೂರ್ಭುವಸ್ಸುವರ್ಲೋಕವೆನಿಸಿಕೊಂಡಿರುವುದು. ಅಲ್ಲಿನ ನಿವಾಸಿಗಳು ಒಂದುಕೋಟಿ ಇರುವರು. ಅವರು ಅಲ್ಲಿ ಪ್ರಳಯಕಾಲದವರೆಗೂ ವಾಸಮಾಡುವರು. ಧ್ರುವನಿಗಿಂತಲೂ ಮೇಲುಗಡೆಯಲ್ಲಿ ಮಹರ್ಲೋಕವಿರುವುದು. ಸನಕ, ಸನಂದ, ಸನಾತನ, ಕಪಿಲ, ಆಸುರಿ, ವೋಢು,

**ಉಪರಿಷ್ಟಾತ್ತತಶ್ಶುಕ್ರೋ ದ್ವಿಲಕ್ಷಾಭ್ಯಂತರೇ ಸ್ಥಿತಃ ।**
**ದ್ವಿಲಕ್ಷಯೋಜನಂ ತಸ್ಮಾದಧಃ ಸೋಮಸುತಃ ಸ್ಮೃತಃ ॥ ೧೦ ॥**

**ದ್ವಿಲಕ್ಷಯೋಜನಂ ತಸ್ಮಾದೂರ್ಧ್ವಂ ಭೌಮಃ ಸ್ಥಿತೋ ಮುನೇ ।**
**ದ್ವಿಲಕ್ಷಯೋಜನಂ ತಸ್ಮಾದೂರ್ಧ್ವಂ ಜೀವಃ ಸ್ಥಿತೋ ಗುರುಃ ॥ ೧೧ ॥**

**ದ್ವಿಲಕ್ಷಯೋಜನಂ ಜೀವಾದೂರ್ಧ್ವಂ ಸೌರಿರ್ವ್ಯವಸ್ಥಿತಃ ।**
**ಏತೇ ಸಪ್ತ ಗ್ರಹಾಃ ಪ್ರೋಕ್ತಾಸ್ಸ್ವಸ್ವರಾಶಿವ್ಯವಸ್ಥಿತಾಃ ॥ ೧೨ ॥**

**ರುದ್ರಲಕ್ಷೈರ್ಯೋಜನತಸ್ಸಪ್ತರ್ಷಯಃ ಸ್ಥಿತಾಃ ।**
**ವಿಶ್ವಲಕ್ಷೈರ್ಯೋಜನತೋ ಧ್ರುವಸ್ಥಿತಿರುದಾಹೃತಾ ॥ ೧೩ ॥**

**ಚತುರ್ಗುಣೋತ್ತರೇ ಚೋರ್ಧ್ವಂ ಜನಲೋಕಾತ್ತಪಃ ಸ್ಮೃತಂ ।**
**ವೈರಾಜಾ ಯತ್ರ ದೇವಾ ವೈ ಸ್ಥಿತಾ ದಾಹವಿವರ್ಜಿತಾಃ ॥ ೧೪ ॥**

**ಷಡ್ಗುಣೇನ ತಪೋಲೋಕಾತ್ಸತ್ಯಲೋಕೋ ವ್ಯವಸ್ಥಿತಃ ।**
**ಬ್ರಹ್ಮಲೋಕಃ ಸ ವಿಜ್ಞೇಯೋ ವಸಂತ್ಯಮಲಚೇತಸಃ ॥ ೧೫ ॥**

ಪಂಚಶಿಖ ಎಂಬ ಏಳು ಜನ ಬ್ರಹ್ಮಪುತ್ರರು ಅಲ್ಲಿರುವರು. ಅದಕ್ಕಿಂತ ಎರಡುಲಕ್ಷ ಯೋಜನಗಳ ಮೇಲೆ ಶುಕ್ರನು ಇರುವನು. ಅವನಿಗಿಂತಲೂ ಎರಡುಲಕ್ಷ ಯೋಜನ ಗಳ ಮೇಲೆ ಬುಧನು ಇರುವನು. ಅವನಿಗಿಂತಲೂ ಮೇಲೆ ಕುಜನು ಇರುವನು. ಅವನಿಗಿಂತಲೂ ಎರಡು ಲಕ್ಷ ಯೋಜನಗಳ ಮೇಲೆ ಗುರುವು ಇರುವನು.

೧೨–೧೩. ಈ ಗುರುವು ಇರುವ ಪ್ರದೇಶಕ್ಕಿಂತಲೂ ಎರಡುಲಕ್ಷ ಯೋಜನ ಗಳ ಮೇಲೆ ಶನಿಯು ಇರುವನು. ಅವರವರ ರಾಶಿಯಲ್ಲಿ ನಿಯತರಾಗಿ ಇರುವ ಈ ಏಳು ಗ್ರಹಗಳ ವಿಷಯವನ್ನು ಹೇಳಿರುವೆನು. ಈ ಗ್ರಹಮಂಡಲದ ಮೇಲೆ ಹನ್ನೊಂದುಲಕ್ಷ ಯೋಜನಗಳ ಮೇಲುಗಡೆಯಲ್ಲಿ ಸಪ್ತಋಷಿಗಳು ಇರುವರು. ಇವರಿಗಿಂತಲೂ ಹದಿನಾಲ್ಕುಲಕ್ಷ ಯೋಜನಗಳ ಮೇಲೆ ಧ್ರುವಮಂಡಲವಿರುವುದು.

೧೪–೧೬. ಜನಲೋಕಕ್ಕಿಂತಲೂ ನಾಲ್ಕರಷ್ಟು ಎತ್ತರವಾದ ಪ್ರದೇಶದಲ್ಲಿ ತಪೋಲೋಕವಿರುವುದು. ಈ ಲೋಕದಲ್ಲಿ ವೈರಾಜರೆಂಬ ದೇವತೆಗಳು ದಾಹಾದಿ ಕ್ಲೇಶರಹಿತರಾಗಿ ಸುಖದಿಂದಿರುವರು. ಈ ತಪೋಲೋಕದಿಂದ ಆರರಷ್ಟು ಎತ್ತರ

ಸತ್ಯಧರ್ಮರತಾಶ್ಚೈವ ಜ್ಞಾನಿನೋ ಬ್ರಹ್ಮಚಾರಿಣಃ ।
ಯದ್ಗಾಮಿನೋಽಥ ಭೂಲೋಕಾನ್ನಿವಸಂತಿ ಹಿ ಮಾನವಾಃ ॥ ೧೬ ॥

ಭುವರ್ಲೋಕೇ ತು ಸಂಸಿದ್ಧಾ ಮುನಯೋ ದೇವರೂಪಿಣಃ ।
ಸ್ವರ್ಗಲೋಕೇ ಸುರಾದಿತ್ಯಾ ಮರುತೋ ವಸವೋಽಶ್ವಿನೌ ॥ ೧೭ ॥

ವಿಶ್ವೇದೇವಾಸ್ತಥಾ ರುದ್ರಾಸ್ಸಾಧ್ಯಾ ನಾಗಾಃ ಖಗಾದಯಃ ।
ನವಗ್ರಹಾಸ್ತತಸ್ತತ್ರ ಋಷಯೋ ವೀತಕಲ್ಮಷಾಃ ॥ ೧೮ ॥

ಏತೇ ಸಪ್ತ ಮಹಾಲೋಕಾಃ ಕಾಲೇಯ ಕಥಿತಾಸ್ತವ ।
ಪಾತಾಲಾನಿ ಚ ಸಪ್ತೈವ ಬ್ರಹ್ಮಾಂಡಸ್ಯ ಚ ವಿಸ್ತರಃ ॥ ೧೯ ॥

ದಧಿವೃಕ್ಷಫಲಂ ಯದ್ವದ್ವೃತ್ತಿಶ್ಚೋರ್ಧ್ವಮಧಸ್ತಥಾ ।
ಏತದಂಡಕಟಾಹೇನ ಸರ್ವತೋ ವೈ ಸಮಾವೃತಂ ॥ ೨೦ ॥

---

ದಲ್ಲಿ • ಸತ್ಯಲೋಕವಿರುವುದು ಇದಕ್ಕೆ ಬ್ರಹ್ಮಲೋಕವೆಂದೂ ಹೆಸರು. ಇಲ್ಲಿ ನಿರ್ಮಲವಾದ ಮನಸ್ಸುಳ್ಳವರೂ, ಸತ್ಯ ಧರ್ಮಗಳಲ್ಲಿ ತಪ್ಪದೆ ನಡೆಯುವವರೂ, ಆತ್ಮಜ್ಞಾನವುಳ್ಳವರೂ, ಬ್ರಹ್ಮಚಾರಿಗಳೂ ವಾಸಮಾಡುವರು. ಭೂಲೋಕದಲ್ಲಿ ವಿಶೇಷವಾಗಿ ಪುಣ್ಯವನ್ನು ಮಾಡಿ ಈ ಲೋಕವನ್ನು ಹೊಂದಲು ಅರ್ಹರಾದ ಮನುಷ್ಯರು ಮಾತ್ರ ಈ ಬ್ರಹ್ಮಲೋಕದಲ್ಲಿರುವರು.

೧೭-೧೯. ಭುವರ್ಲೋಕದಲ್ಲಿ ಸಿದ್ಧರಾದ ಮುನಿಗಳು ದೇವತೆಗಳ ರೂಪಿನಿಂದ ಇರುವರು. ಸ್ವರ್ಗಲೋಕದಲ್ಲಿ ದೇವತೆಗಳೂ, ಅದಿತಿಯ ಮಕ್ಕಳೂ, ಸಪ್ತ ಮರುತ್ತುಗಳೂ, ಅಷ್ಟವಸುಗಳೂ, ಅಶ್ವಿನೀದೇವತೆಗಳೂ, ವಿಶ್ವೇದೇವರೂ, ರುದ್ರರೂ, ಸಾಧ್ಯರೂ, ನಾಗಗಳೂ, ಪಕ್ಷಿಗಳೇ ಮೊದಲಾದವರೂ, ನವಗ್ರಹಗಳೂ ಯಾವ ವಿಧವಾದ ಪಾಪಸಂಬಂಧವೂ ಇಲ್ಲದಿರುವ ಋಷಿಗಳೂ, ಇರುವರು. ಈ ಏಳು ಲೋಕಗಳ ವಿಷಯವನ್ನು ಹೇಳಿರುವೆನು. ಎಲೈ, ವ್ಯಾಸಋಷಿಯೆ! ಕೇಳು ಇದರಂತೆಯೇ ಪಾತಾಳಲೋಕವೂ ಏಳು ಭಾಗಗಳಿಂದ ಕೂಡಿರುವುದು. ಬ್ರಹ್ಮಾಂಡದ ವಿಸ್ತಾರವು ಇಷ್ಟರಮಟ್ಟಿನದಾಗಿರುವುದು.

೨೦-೨೨. (ದಧಿವೃಕ್ಷ) ಬೇಲದಮರದ ಹಣ್ಣುಗಳ ಕೆಳಗೂ ಮೇಲೂ ಚಿಪ್ಪು ಇರುವ ಹಾಗೆ ಈ ಬ್ರಹ್ಮಾಂಡವನ್ನು (ಮುಸುಕಿನಿಂದ) ಘಟ್ಟಿಯಾದ ಮುಚ್ಚಳವು

**ಪಯಸಾ ದಶಗುಣೇನ ಸರ್ವತಸ್ತತ್ಸಮಾವೃತಂ ।**
**ವಹ್ನಿನಾ ವಾಯುನಾ ಚಾಪಿ ನಭಸಾ ತಮಸಾ ತಥಾ　　॥ ೨೦ ॥**

**ಭೂತಾದಿನಾಪಿ ಮಹತಾ ಸದ್ಗುಣೋತ್ತರವೇಷ್ಟಿತಃ ।**
**ಮಹಾಂತಂ ಚ ಸಮಾವೃತ್ಯ ಪ್ರಧಾನಂ ಪುರುಷಃ ಸ್ಥಿತಃ　　॥ ೨೨ ॥**

**ಅನಂತಸ್ಯ ನ ತಸ್ಯಾಸ್ತಿ ಸಂಖ್ಯಾಪಿ ಪರಮಾತ್ಮನಃ ।**
**ತೇನಾನಂತ ಇತಿ ಖ್ಯಾತಃ ಪ್ರಮಾಣಂ ನಾಸ್ತಿ ವೈ ಯತಃ　　॥ ೨೩ ॥**

**ಹೇತುಭೂತಸ್ಸಮಸ್ತಸ್ಯ ಪ್ರಕೃತಿಸ್ಸಾ ಪರಾ ಮುನೇ ।**
**ಅಂಡಾನಾಂ ತು ಸಹಸ್ರಾಣಾಂ ಸಹಸ್ರಾಣ್ಯಯುತಾನಿ ಚ　　॥ ೨೪ ॥**

**ಈದೃಶಾನಾಂ ಪ್ರಭೂತಾನಿ ತಸ್ಮಾದವ್ಯಕ್ತಜನ್ಮನಃ ।**
**ದಾರುಣ್ಯಗ್ನಿಸ್ತಿಲೇ ತೈಲಂ ಪಯಸ್ಸು ಚ ಯಥಾ ಘೃತಂ　　॥ ೨೫ ॥**

ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವುದು. ಈ ಅಂಡಕಟಾಹದ ಸುತ್ತಲೂ ಇದರ ಹತ್ತರಷ್ಟು ನೀರು ಇರುವುದು. ಇದರಂತೆಯೇ ಕ್ರಮವಾಗಿ ಅಗ್ನಿ, ವಾಯು, ಆಕಾಶ, ಕಗ್ಗತ್ತಲೆ, ಪಂಚತನ್ಮಾತ್ರ, ಮಹತ್ತತ್ವ ಇವುಗಳು ಹತ್ತರಷ್ಟು ಪ್ರಮಾಣದಿಂದ ಸುತ್ತಲೂ ಇರುವವು. ಈ ಮಹತ್ತತ್ವದ ಸುತ್ತಲೂ ಪ್ರಕೃತಿಯೂ ಪುರುಷನೂ ಇರುವರು.

೨೩-೨೪. ಪರಮಾತ್ಮನಿಗೆ ಕೊನೆಯೆಂಬುದೇ ಇಲ್ಲ. ಅವನ ಸ್ವರೂಪಾದಿಗಳಿಗೆ ಸಂಖ್ಯೆಯೇ ಇಲ್ಲ. ಇವನ ಪ್ರಮಾಣವು ಲೆಕ್ಕಕ್ಕೆ ಸಿಕ್ಕದಿರುವುದರಿಂದಲೇ ಈ ಪರಮಾತ್ಮನಿಗೆ ಅನಂತನೆಂದು ಹೆಸರು ಬಂದಿರುವುದು. ಇವನು ಎಲ್ಲಕ್ಕೂ ಕಾರಣವಾದ ಪ್ರಕೃತಿಯಾಗಿಯೂ ಇರುವನು. ನಾನು ಈಗ ಹೇಳಿರುವ ಪ್ರಕಾರದಿಂದ ಇರುವ ಬ್ರಹ್ಮಾಂಡಗಳು ಸಹಸ್ರಗಟ್ಟಲೆಯಾಗಿಯೂ, ಲಕ್ಷಗಟ್ಟಲೆಯಾಗಿಯೂ, ಕೋಟಿಗಟ್ಟಲೆಯಾಗಿಯೂ ಇರುವವು.

೨೫-೨೬. ಅವ್ಯಕ್ತಸ್ವರೂಪನಾದ ಬ್ರಹ್ಮನ ದೆಸೆಯಿಂದ ಈ ಪ್ರಕಾರವಾದ ಬ್ರಹ್ಮಾಂಡಗಳು ಬಹಳವಾಗಿ ಹುಟ್ಟಿರುವವು. ಮರದಲ್ಲಿರುವ ಅಗ್ನಿಯ ಹಾಗೆಯೂ, ಎಳ್ಳಿನಲ್ಲಿರುವ ಎಣ್ಣೆಯ ಹಾಗೆಯೂ, ಹಾಲಿನಲ್ಲಿರುವ ತುಪ್ಪದ ಹಾಗೆಯೂ ಈ ಪರಮಾತ್ಮನು ಎಲ್ಲವನ್ನೂ ವ್ಯಾಪಿಸಿಕೊಂಡಿರುವನು. ಎಲ್ಲಕ್ಕೂ ಮೊದಲನೆಯ ಕಾರಣ

ತಥಾಸೌ ಪರಮಾತ್ಮಾ ವೈ ಸರ್ವಂ ವ್ಯಾಪ್ಯಾತ್ಮವೇದನಃ ।
ಆದಿಬೀಜಾತ್ಪ್ರಸುವತೇ ತತಸ್ತೇಭ್ಯಃ ಪರೇಽಂಡಜಾಃ ॥ ೨೬ ॥

ತೇಭ್ಯಃ ಪುತ್ರಾಸ್ತಥಾನ್ಯೇಷಾಂ ಬೀಜಾನ್ಯನ್ಯಾನಿ ವೈ ತತಃ ।
ಮಹದಾದಯೋ ವಿಶೇಷಾಂತಾಸ್ತದ್ಭವಂತಿ ಸುರಾದಯಃ ॥ ೨೭ ॥

ಬೀಜಾದ್ವೃಕ್ಷಪ್ರರೋಹೇಣ ಯಥಾ ನಾಪಚಯಸ್ತರೋಃ ।
ಸೂರ್ಯಕಾಂತಮಣೇಃ ಸೂರ್ಯಾದ್ಯದ್ವದ್ವಹ್ನಿಃ ಪ್ರಜಾಯತೇ ॥ ೨೮ ॥

ತದ್ವತ್ಸಂಜಾಯತೇ ಸೃಷ್ಟಿಃ ಶಿವಸ್ತತ್ರ ನ ಕಾಮಯೇತ್ ।
ಶಿವಶಕ್ತಿಸಮಾಯೋಗದೇವಾದ್ಯಾಃ ಪ್ರಭವಂತಿ ಹಿ ॥ ೨೯ ॥

ತಥಾ ಸ್ವಕರ್ಮಣೈಕೇನ ಪ್ರರೋಹಮುಪಯಾಂತಿ ವೈ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸ ಶಿವಃ ಪರಿಗೀಯತೇ ॥ ೩೦ ॥

---

ನಾಗಿ, ಹುಟ್ಟುವುದಕ್ಕೆ ಬೀಜರೂಪದಿಂದ ಇರುವ ಇವನಿಂದಲೇ ಮಹದಾದಿತತ್ತ್ವಗಳೂ, ಅವುಗಳಿಂದ ಬ್ರಹ್ಮಾಂಡಗಳೂ, ಲೋಕಗಳೂ ಉತ್ಪತ್ತಿಯಾಗುವವು.

೨೭-೩೦. ಅಂಡದಿಂದ ಹುಟ್ಟಿದವರಿಂದ ಮಕ್ಕಳೂ, ಹಾಗೆಯೇ ಇತರರ ಹುಟ್ಟುವಿಕೆಗೆ ಕಾರಣವಾದ ಬೇರೆಬೇರೆಯಾದ ಬೀಜಗಳೂ ಅವುಗಳಿಂದ ಉಂಟಾಗುವವು. ಈ ಪ್ರಕಾರದಿಂದ ಉತ್ಪತ್ತಿಯಾಗುವ ಕ್ರಮಕ್ಕೆ ಮಹತ್ತತ್ತ್ವವೆಂಬ ವಿಶೇಷ ಪದಾರ್ಥವೇ ಕೊನೆಯಾಗಿರುವುದು. ಆ ಮಹತ್ತತ್ತ್ವವೇ ದೇವತೆಗಳೇ ಮೊದಲಾದವರು ಹುಟ್ಟುವುದಕ್ಕೆ ಕಾರಣವಾಗಿರುವುದು. ಬೀಜದಿಂದ ಮರದ ಮೊಳಕೆಯು ಹುಟ್ಟಿದ ಮಾತ್ರದಿಂದ ಮರಕ್ಕೆ ಅಪಾಯವು ಯಾವುದೂ ಇಲ್ಲವಷ್ಟೆ. ಸೂರ್ಯಕಾಂತಮಣಿಯಿಂದ ಸೂರ್ಯನ ಸನ್ನಿಧಾನದಲ್ಲಿ ಅಗ್ನಿಯು ಹುಟ್ಟುವುದು. ಇದರಂತೆಯೇ ಸೃಷ್ಟಿಯೂ ಉಂಟಾಗುವುದು. ಆ ವಿಷಯದಲ್ಲಿ ಶಿವನು ಯಾವುದನ್ನೂ ಹೀಗೆ ಆಗಬೇಕೆಂದು ಅಪೇಕ್ಷೆ ಮಾಡುವುದಿಲ್ಲ. ಶಿವ ಮತ್ತು ಶಕ್ತಿ ಇವರುಗಳ ಸಂಬಂಧದಿಂದಲೇ ಮೊದಲು ಪದಾರ್ಥಗಳು ಹುಟ್ಟುವವು. ಅವುಗಳು ತಮ್ಮ ತಮ್ಮ ಕರ್ಮಗಳಿಂದಲೇ ಮುಖ್ಯವಾಗಿ ಉತ್ಪತ್ತಿಯನ್ನು ಹೊಂದುವವು. ಆ ಶಿವನೇ ಬ್ರಹ್ಮ, ವಿಷ್ಣು, ರುದ್ರ ಎಂಬುದಾಗಿ ಹೇಳಿಸಿಕೊಳ್ಳುವನು. ಆದ್ದರಿಂದಲೇ ಅವನು ಎಲ್ಲವನ್ನೂ ರಕ್ಷಿಸುತ್ತಿದ್ದು ಕೊನೆಯಲ್ಲಿ ತನ್ನಲ್ಲಿಯೇ ಎಲ್ಲವನ್ನೂ ಲಯಮಾಡಿಕೊಳ್ಳುವನು. ಎಲ್ಲಾ ವಿಧವಾದ ಕಾರ್ಯಗಳಿಗೂ ಆ ಶಿವನೇ ಕರ್ತೃವಾಗಿರುವನು ಎಂದು ಹೇಳುವರು.

ತಸ್ಮಾದುದ್ಧರತೇ ಸರ್ವಂ ಯಸ್ಮಿಂಶ್ಚ ಲಯಮೇಷ್ಯತಿ ।
ಕರ್ತಾ ಕ್ರಿಯಾಣಾಂ ಸರ್ವಾಸಾಂ ಸ ಶಿವಃ ಪರಿಗೀಯತೇ ॥ ೩೦ ॥

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ಛಿಂಧಿ ಮೇ ಸಂಶಯಂ ಮಹತ್ ।
ಸಂತಿ ಲೋಕಾ ಹಿ ಬ್ರಹ್ಮಾಂಡಾದುಪರಿಷ್ಟಾನ್ನ ವಾ ಮುನೇ ॥ ೩೨ ॥

॥ ಸನತ್ಕುಮಾರ ಉವಾಚ ॥

ಬ್ರಹ್ಮಾಂಡಾದುಪರಿಷ್ಟಾಚ್ಚ ಸಂತಿ ಲೋಕಾ ಮುನೀಶ್ವರ ।
ತಾಞ್ಛೃಣು ತ್ವಂ ವಿಶೇಷೇಣ ವಚ್ಮಿ ತೇಽಹಂ ಸಮಾಸತಃ ॥ ೩೩ ॥

ವಿಧಿಲೋಕಾತ್ಪರೋ ಲೋಕೋ ವೈಕುಂಠ ಇತಿ ವಿಶ್ರುತಃ ।
ವಿರಾಜತೇ ಮಹಾದೀಪ್ತ್ಯಾ ಯತ್ರ ವಿಷ್ಣುಃ ಪ್ರತಿಷ್ಠಿತಃ ॥ ೩೪ ॥

ತಸ್ಯೋಪರಿಷ್ಟಾತ್ಕೌಮಾರೋ ಲೋಕೋ ಹಿ ಪರಮಾದ್ಭುತಃ ।
ಸೇನಾನೀಃ ಶಂಭುತನಯೋ ರಾಜತೇ ಯತ್ರ ಸುಪ್ರಭಃ ॥ ೩೫ ॥

ತತಃ ಪರಮುಮಾಲೋಕೋ ಮಹಾದಿವ್ಯೋ ವಿರಾಜತೇ ।
ಯತ್ರ ಶಕ್ತಿರ್ವಿಭಾತ್ಯೇಕಾ ತ್ರಿದೇವಜನನೀ ಶಿವಾ ॥ ೩೬ ॥

---

೩೧-೩೩. ವ್ಯಾಸಋಷಿಯು ಮತ್ತೆ ಕೇಳುತ್ತಾನೆ:—ಎಲೈ ಮುನಿಶ್ರೇಷ್ಠನೇ, ಈಗ ನನಗೆ ಒಂದು ದೊಡ್ಡ ಸಂಶಯವುಂಟಾಗಿರುವುದು. ಬ್ರಹ್ಮಾಂಡದ ಮೇಲುಗಡೆ ಯಲ್ಲಿ ಲೋಕಗಳು ಇರುವವೇ ಅಥವಾ ಇಲ್ಲವೇ ಎಂಬುದನ್ನು ಹೇಳು ಎಂದು ಕೇಳಲು, ಸನತ್ಕುಮಾರನಿಂತೆಂದನು. ಎಲೈ ವ್ಯಾಸನೇ, ಕೇಳು ಬ್ರಹ್ಮಾಂಡದ ಮೇಲು ಭಾಗದಲ್ಲಿಯೂ ಲೋಕಗಳಿರುವವು. ಅವುಗಳನ್ನು ಸಂಕ್ಷೇಪವಾಗಿ ವಿವರದಿಂದ ಹೇಳು ವೆನು ಕೇಳು.

೩೪-೩೬. ಬ್ರಹ್ಮಲೋಕಕ್ಕಿಂತಲೂ ಮೇಲುಗಡೆಯಲ್ಲಿ ವೈಕುಂಠವೆಂದು ಪ್ರಸಿದ್ಧವಾದ ಲೋಕವಿರುವುದು. ಈ ಲೋಕದಲ್ಲಿ ವಿಷ್ಣುವು ಬಹಳ ಕಾಂತಿಯಿಂದ ಬೆಳಗುತ್ತಾ ವಾಸಿಸುತ್ತಿರುವನು. ಆ ವೈಕುಂಠದ ಮೇಲುಗಡೆಯಲ್ಲಿ ಬಹಳ ಆಶ್ಚರ್ಯ ಕರವಾದ ಕುಮಾರಲೋಕವು ಇರುವುದು. ಅಲ್ಲಿ ಶಿವನ ಪುತ್ರನಾದ ದೇವಸೇನಾ ಪತಿಯಾದ ಷಣ್ಮುಖನಿರುವನು. ಆದರ ಮೇಲುಗಡೆಯಲ್ಲಿ ಪಾರ್ವತಿಯು ವಾಸ ಮಾಡುವ ಉಮಾಲೋಕವು ಇರುವುದು. ಅಲ್ಲಿ ತ್ರಿಮೂರ್ತಿಗಳಿಗೂ ಜನನಿಯಾದ ದೇವಿಯು ಶಕ್ತಿರೂಪದಿಂದ ಮಂಗಳಕರಳಾಗಿ ಇರುವಳು.

ತಥಾಸೌ ಪರಮಾತ್ಮಾ ವೈ ಸರ್ವಂ ವ್ಯಾಪ್ಯಾತ್ಮವೇದನಃ ।
ಆದಿಬೀಜಾತ್ಪ್ರಸುವತೇ ತತಸ್ತೇಭ್ಯಃ ಪರೇಽಡಜಾಃ ॥ ೨೬ ॥

ತೇಭ್ಯಃ ಪುತ್ರಾಸ್ತಥಾನ್ಯೇಷಾಂ ಬೀಜಾನ್ಯನ್ಯಾನಿ ವೈ ತತಃ ।
ಮಹದಾದಯೋ ವಿಶೇಷಾಂತಾಸ್ತದ್ಭವಂತಿ ಸುರಾದಯಃ ॥ ೨೭ ॥

ಬೀಜಾದ್ವೃಕ್ಷಪ್ರರೋಹೇಣ ಯಥಾ ನಾಪಚಯಸ್ತರೋಃ ।
ಸೂರ್ಯಕಾಂತಮಣೇಃ ಸೂರ್ಯಾದ್ಯದ್ವದ್ವಹ್ನಿಃ ಪ್ರಜಾಯತೇ ॥ ೨೮ ॥

ತದ್ವತ್ಸಂಜಾಯತೇ ಸೃಷ್ಟಿಃ ಶಿವಸ್ತತ್ರ ನ ಕಾಮಯೇತ್ ।
ಶಿವಶಕ್ತಿಸಮಾಯೋಗದೇವಾದ್ಯಾಃ ಪ್ರಭವಂತಿ ಹಿ ॥ ೨೯ ॥

ತಥಾ ಸ್ವಕರ್ಮಣೈಕೇನ ಪ್ರರೋಹಮುಪಯಾಂತಿ ವೈ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸ ಶಿವಃ ಪರಿಗೀಯತೇ ॥ ೩೦ ॥

---

ನಾಗಿ, ಹುಟ್ಟುವುದಕ್ಕೆ ಬೀಜರೂಪದಿಂದ ಇರುವ ಇವನಿಂದಲೇ ಮಹದಾದಿತತ್ತ್ವಗಳೂ, ಅವುಗಳಿಂದ ಬ್ರಹ್ಮಾಂಡಗಳೂ, ಲೋಕಗಳೂ ಉತ್ಪತ್ತಿಯಾಗುವವು.

೨೭-೩೦. ಅಂಡದಿಂದ ಹುಟ್ಟಿದವರಿಂದ ಮಕ್ಕಳೂ, ಹಾಗೆಯೇ ಇತರರ ಹುಟ್ಟುವಿಕೆಗೆ ಕಾರಣವಾದ ಬೇರೆಬೇರೆಯಾದ ಬೀಜಗಳೂ ಅವುಗಳಿಂದ ಉಂಟಾಗುವವು. ಈ ಪ್ರಕಾರದಿಂದ ಉತ್ಪತ್ತಿಯಾಗುವ ಕ್ರಮಕ್ಕೆ ಮಹತ್ತತ್ತ್ವವೆಂಬ ವಿಶೇಷ ಪದಾರ್ಥವೇ ಕೊನೆಯಾಗಿರುವುದು. ಆ ಮಹತ್ತತ್ತ್ವವೇ ದೇವತೆಗಳೇ ಮೊದಲಾದವರು ಹುಟ್ಟುವುದಕ್ಕೆ ಕಾರಣವಾಗಿರುವುದು. ಬೀಜದಿಂದ ಮರದ ಮೊಳಕೆಯು ಹುಟ್ಟಿದ ಮಾತ್ರದಿಂದ ಮರಕ್ಕೆ ಅಪಾಯವು ಯಾವುದೂ ಇಲ್ಲವಷ್ಟೆ. ಸೂರ್ಯಕಾಂತಮಣಿಯಿಂದ ಸೂರ್ಯನ ಸನ್ನಿಧಾನದಲ್ಲಿ ಅಗ್ನಿಯು ಹುಟ್ಟುವುದು. ಇದರಂತೆಯೇ ಸೃಷ್ಟಿಯೂ ಉಂಟಾಗುವುದು. ಆ ವಿಷಯದಲ್ಲಿ ಶಿವನು ಯಾವುದನ್ನೂ ಹೀಗೆ ಆಗಬೇಕೆಂದು ಅಪೇಕ್ಷೆ ಮಾಡುವುದಿಲ್ಲ. ಶಿವ ಮತ್ತು ಶಕ್ತಿ ಇವರುಗಳ ಸಂಬಂಧದಿಂದಲೇ ಮೊದಲು ಪದಾರ್ಥಗಳು ಹುಟ್ಟುವವು. ಅವುಗಳು ತಮ್ಮ ತಮ್ಮ ಕರ್ಮಗಳಿಂದಲೇ ಮುಖ್ಯವಾಗಿ ಉತ್ಪತ್ತಿಯನ್ನು ಹೊಂದುವವು. ಆ ಶಿವನೇ ಬ್ರಹ್ಮ, ವಿಷ್ಣು, ರುದ್ರ ಎಂಬುದಾಗಿ ಹೇಳಿಸಿಕೊಳ್ಳುವನು. ಆದ್ದರಿಂದಲೇ ಅವನು ಎಲ್ಲವನ್ನೂ ರಕ್ಷಿಸುತ್ತಿದ್ದು ಕೊನೆಯಲ್ಲಿ ತನ್ನಲ್ಲಿಯೇ ಎಲ್ಲವನ್ನೂ ಲಯಮಾಡಿಕೊಳ್ಳುವನು. ಎಲ್ಲಾ ವಿಧವಾದ ಕಾರ್ಯಗಳಿಗೂ ಆ ಶಿವನೇ ಕರ್ತೃವಾಗಿರುವನು ಎಂದು ಹೇಳುವರು.

ತಸ್ಮಾದುದ್ಧರತೇ ಸರ್ವಂ ಯಸ್ಮಿಂಶ್ಚ ಲಯಮೇಷ್ಯತಿ ।
ಕರ್ತಾ ಕ್ರಿಯಾಣಾಂ ಸರ್ವಾಸಾಂ ಸ ಶಿವಃ ಪರಿಗೀಯತೇ　　॥ ೩೦ ॥

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ಛಿಂಧಿ ಮೇ ಸಂಶಯಂ ಮಹತ್ ।
ಸಂತಿ ಲೋಕಾ ಹಿ ಬ್ರಹ್ಮಾಂಡಾದುಪರಿಷ್ಟಾನ್ನ ವಾ ಮುನೇ　　॥ ೩೧ ॥

॥ ಸನತ್ಕುಮಾರ ಉವಾಚ ॥

ಬ್ರಹ್ಮಾಂಡಾದುಪರಿಷ್ಟಾಚ್ಚ ಸಂತಿ ಲೋಕಾ ಮುನೀಶ್ವರ ।
ತಾಞ್ಶೃಣು ತ್ವಂ ವಿಶೇಷೇಣ ವಚ್ಮಿ ತೇಽಹಂ ಸಮಾಸತಃ　　॥ ೩೩ ॥

ವಿಧಿಲೋಕಾತ್ಪರೋ ಲೋಕೋ ವೈಕುಂಠ ಇತಿ ವಿಶ್ರುತಃ ।
ವಿರಾಜತೇ ಮಹಾದೀಪ್ತ್ಯಾ ಯತ್ರ ವಿಷ್ಣುಃ ಪ್ರತಿಷ್ಠಿತಃ　　॥ ೩೪ ॥

ತಸ್ಯೋಪರಿಷ್ಟಾತ್ಕೌಮಾರೋ ಲೋಕೋ ಹಿ ಪರಮಾದ್ಭುತಃ ।
ಸೇನಾನೀಃ ಶಂಭುತನಯೋ ರಾಜತೇ ಯತ್ರ ಸುಪ್ರಭಃ　　॥ ೩೫ ॥

ತತಃ ಪರಮುಮಾಲೋಕೋ ಮಹಾದಿವ್ಯೋ ವಿರಾಜತೇ ।
ಯತ್ರ ಶಕ್ತಿರ್ವಿಭಾತ್ಯೇಕಾ ತ್ರಿದೇವಜನನೀ ಶಿವಾ　　॥ ೩೬ ॥

---

೩೧-೩೩. ವ್ಯಾಸಋಷಿಯು ಮತ್ತೆ ಕೇಳುತ್ತಾನೆ :—ಎಲೈ ಮುನಿಶ್ರೇಷ್ಠನೇ, ಈಗ ನನಗೆ ಒಂದು ದೊಡ್ಡ ಸಂಶಯುಉಂಟಾಗಿರುವುದು. ಬ್ರಹ್ಮಾಂಡದ ಮೇಲುಗಡೆಯಲ್ಲಿ ಲೋಕಗಳು ಇರುವವೇ ಅಥವಾ ಇಲ್ಲವೇ ಎಂಬುದನ್ನು ಹೇಳು ಎಂದು ಕೇಳಲು, ಸನತ್ಕುಮಾರನಿಂತೆಂದನು. ಎಲೈ ವ್ಯಾಸನೇ, ಕೇಳು ಬ್ರಹ್ಮಾಂಡದ ಮೇಲು ಭಾಗದಲ್ಲಿಯೂ ಲೋಕಗಳಿರುವವು. ಅವುಗಳನ್ನು ಸಂಕ್ಷೇಪವಾಗಿ ವಿವರದಿಂದ ಹೇಳುವೆನು ಕೇಳು.

೩೪-೩೬. ಬ್ರಹ್ಮಲೋಕಕ್ಕಿಂತಲೂ ಮೇಲುಗಡೆಯಲ್ಲಿ ವೈಕುಂಠವೆಂದು ಪ್ರಸಿದ್ಧವಾದ ಲೋಕವಿರುವುದು. ಈ ಲೋಕದಲ್ಲಿ ವಿಷ್ಣುವು ಬಹಳ ಕಾಂತಿಯಿಂದ ಬೆಳಗುತ್ತಾ ವಾಸಿಸುತ್ತಿರುವನು. ಆ ವೈಕುಂಠದ ಮೇಲುಗಡೆಯಲ್ಲಿ ಬಹಳ ಆಶ್ಚರ್ಯಕರವಾದ ಕುಮಾರಲೋಕವು ಇರುವುದು. ಅಲ್ಲಿ ಶಿವನ ಪುತ್ರನಾದ ದೇವಸೇನಾಪತಿಯಾದ ಷಣ್ಮುಖನಿರುವನು. ಅದರ ಮೇಲುಗಡೆಯಲ್ಲಿ ಪಾರ್ವತಿಯು ವಾಸಮಾಡುವ ಉಮಾಲೋಕವು ಇರುವುದು. ಅಲ್ಲಿ ತ್ರಿಮೂರ್ತಿಗಳಿಗೂ ಜನನಿಯಾದ ದೇವಿಯು ಶಕ್ತಿರೂಪದಿಂದ ಮಂಗಳಕರಳಾಗಿ ಇರುವಳು.

ಪರಾತ್ಪರಾ ಹಿ ಪ್ರಕೃತೀ ರಜಸ್ಸತ್ತ್ವತಮೋಮಯೀ ।
ನಿರ್ಗುಣಾ ಚ ಸ್ವಯಂ ದೇವೀ ನಿರ್ವಿಕಾರಾ ಶಿವಾತ್ಮಿಕಾ ॥ ೩೭ ॥

ತಸ್ಯೋಪರಿಷ್ಟಾದ್ವಿಜ್ಞೇಯಶ್ಶಿವಲೋಕಸ್ಸನಾತನಃ ।
ಅವಿನಾಶೀ ಮಹಾದಿವ್ಯೋ ಮಹಾಶೋಭಾನ್ವಿತಸ್ಸದಾ ॥ ೩೮ ॥

ವಿರಾಜಿತೇ ಪರಂ ಬ್ರಹ್ಮ ಯತ್ರ ಶಂಭುರ್ಮಹೇಶ್ವರಃ ।
ತ್ರಿದೇವಜನಕಸ್ಸ್ವಾಮೀ ಸರ್ವೇಷಾಂ ತ್ರಿಗುಣಾತ್ಪರಃ ॥ ೩೯ ॥

ತತ ಊರ್ಧ್ವಂ ನ ಲೋಕಾಶ್ಚ ಗೋಲೋಕಸ್ತತ್ಸಮೀಪತಃ ।
ಗೋಮಾತರಸ್ಸುಶೀಲಾಖ್ಯಾಸ್ತತ್ರ ಸಂತಿ ಶಿವಪ್ರಿಯಾಃ ॥ ೪೦ ॥

ತತ್ಪಾಲಃ ಕೃಷ್ಣನಾಮಾ ಹಿ ರಾಜತೇ ಶಂಕರಾಜ್ಞಯಾ ।
ಪ್ರತಿಷ್ಠಿತಶ್ಶಿವೇನೈವ ಶಕ್ತ್ಯಾ ಸ್ವಚ್ಛಂದಚಾರಿಣಾ ॥ ೪೧ ॥

೩೭-೩೯. ಪರಾಪರವೆಸ್ತುವೆಂದು ಹೇಳಲ್ಪಡುವ ಈ ದೇವಿಯು ಸತ್ತ್ವರಜಸ್ತಮೋಗುಣಗಳ ಸ್ವರೂಪಳಾಗಿದ್ದರೂ ಅವುಗಳ ಪರಿಣಾಮದಿಂದ ವಿಕಾರವನ್ನು ಹೊಂದದೆ ಶಿವಸ್ವರೂಪವಾಗಿರುವಳು ಎಂದರೆ ಈ ದೇವಿಯು ಉತ್ತಮವಾದ ಎಲ್ಲಾ ಪದಾರ್ಥಗಳಿಗಿಂತಲೂ ಉತ್ತಮಳು. ರಜಸ್ಸು, ತಮಸ್ಸು, ಸತ್ವ ಎಂಬ ಮೂರು ಗುಣಗಳಿಂದ ಕೂಡಿರುವವಳು. ಈ ದೇವಿಯು (ನಿರ್ಗುಣಳಾಗಿ) ಗುಣಗಳಿಗೆ ಅಧೀನಳಾಗದೆ ಇರುವಳು. ವಿಕಾರವನ್ನು ಹೊಂದದೆ ಶಿವನ ರೂಪದಿಂದ ಇರುವಳು. ಆ ಉಮಾಲೋಕದ ಮೇಲುಭಾಗದಲ್ಲಿ ಬಹಳ ಕಾಂತಿಯಿಂದ ಕೂಡಿರುವ ಶಿವಲೋಕವಿರುವುದು. ಈ ಶಿವಲೋಕಕ್ಕೆ ಯಾವಾಗಲೂ ನಾಶವಿಲ್ಲ. ಇದು ಎಲ್ಲ ಲೋಕಗಳಿಗಿಂತಲೂ ಶ್ರೇಷ್ಠವಾಗಿರುವುದು. ಆ ಲೋಕದಲ್ಲಿ ಪರಬ್ರಹ್ಮರೂಪದಿಂದ ಇರುವ ಮಹೇಶ್ವರನಾದ ಶಿವನು, ಬ್ರಹ್ಮ, ವಿಷ್ಣು, ರುದ್ರರೆಂಬ ಮೂರು ದೇವತೆಗಳಿಗೂ ಕಾರಣನಾಗಿಯೂ, ಎಲ್ಲರಿಗೂ ಅಧಿಪತಿಯಾಗಿಯೂ, ಸತ್ತ್ವವೇ ಮೊದಲಾದ ಮೂರು ಗುಣಗಳಿಂದಲೂ ಬೇರೆಯಾಗಿಯೂ ಪ್ರಕಾಶಿಸುತ್ತಿರುವನು.

೪೦-೪೧. ಈ ಶಿವನ ಲೋಕಕ್ಕಿಂತಲೂ ಮೇಲುಗಡೆಯಲ್ಲಿ ಯಾವ ಲೋಕಗಳೂ ಇಲ್ಲ. ಆದರೆ ಅದರ ಹತ್ತಿರದಲ್ಲಿ ಗೋಲೋಕವು ಇರುವುದು. ಸುಶೀಲಾ ಎಂಬ ಹೆಸರುಳ್ಳ ಗೋಮಾತೃಗಳು ಶಿವನಿಗೆ ಪ್ರೀತಿಕರಗಳಾಗಿರುವುವು. ಕೃಷ್ಣನೆಂಬ ದೇವನು ಶಿವನ ಅಪ್ಪಣೆಯಿಂದ ಆ ಲೋಕವನ್ನು ರಕ್ಷಿಸುತ್ತಾ ಅಲ್ಲಿಯೇ ನೆಲಸಿರುವನು. ಇದಕ್ಕಾಗಿಯೇ ಇವನನ್ನು ಶಿವನು ಇಲ್ಲಿ ನಿಲ್ಲಿಸಿರುವನು.

**ಶಿವಲೋಕೋಽದ್ಭುತೋ ವ್ಯಾಸ ನಿರಾಧಾರೋ ಮನೋಹರಃ ।**
**ಅತಿನಿರ್ವಚನೀಯಶ್ಚ ನಾನಾವಸ್ತುವಿರಾಜಿತಃ ॥ ೪೨ ॥**

**ಶಿವಸ್ತು ತದಧಿಷ್ಠಾತಾ ಸರ್ವದೇವಶಿರೋಮಣಿಃ ।**
**ವಿಷ್ಣುಬ್ರಹ್ಮಹರೈಸ್ಸೇವ್ಯಃ ಪರಮಾತ್ಮಾ ನಿರಂಜನಃ ॥ ೪೩ ॥**

**ಇತೀ ತೇ ಕಥಿತಾ ತಾತ ಸರ್ವಬ್ರಹ್ಮಾಂಡಸಂಸ್ಥಿತಿಃ ।**
**ತದೂರ್ಧ್ವಂ ಲೋಕಸಂಸ್ಥಾನಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೪೪ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ**
**ಲೋಕವರ್ಣನಂ ನಾಮೈಕೋನವಿಂಶೋಽಧ್ಯಾಯಃ**

---

೪೨. ಎಲೈ ವ್ಯಾಸಋಷಿಯೇ, ಕೇಳು. ಈ ಶಿವಲೋಕವು ಸ್ವತಂತ್ರವಾಗಿ ತನ್ನ ಇಚ್ಛೆಯಿಂದ ನಡೆಯುವ ಶಕ್ತಿದೇವತೆಯಿಂದ ಕೂಡಿ ಯಾವ ಆಧಾರವೂ ಇಲ್ಲದೆ ಆಶ್ಚರ್ಯಕರವಾಗಿಯೂ ಮನೋಹರವಾಗಿಯೂ ಇರುವುದು. ಈ ಲೋಕವನ್ನು ಮಾತಿನಿಂದ ವರ್ಣಿಸಲು ಸಾಧ್ಯವಿಲ್ಲ. ಅನೇಕ ಶ್ರೇಷ್ಠ ಪದಾರ್ಥಗಳಿಂದ ಕೂಡಿ ಪ್ರಕಾಶಿಸುತ್ತಿರುವುದು.

೪೩. ಎಲ್ಲಾ ದೇವತೆಗಳಿಗೂ ಶ್ರೇಷ್ಠನಾದ ಶಿವನು ಆ ಶಿವಲೋಕಕ್ಕೆ ಅಧಿಪತಿಯಾಗಿರುವನು. ಈ ಶಿವನು ವಿಷ್ಣು, ಬ್ರಹ್ಮ, ರುದ್ರ ಇವರುಗಳಿಂದ ಸೇವಿಸಲ್ಪಡುತ್ತಾ ಅಲ್ಲಿ ಬೆಳಗುತ್ತಿರುವನು. ಆ ಶಿವನು ನಿರ್ವಿಕಾರನೂ, ನಿರ್ಗುಣನೂ, ನಾಶರಹಿತನೂ ಆದ ಪರಮಾತ್ಮನಾಗಿರುವನು.

೪೪. ಎಲೈ ವ್ಯಾಸಋಷಿಯೇ, ಕೇಳು. ಬ್ರಹ್ಮಾಂಡಕ್ಕೆ ಸಂಬಂಧಿಸಿದ ಸ್ಥಿತಿಯ ಕ್ರಮವೆಲ್ಲವನ್ನೂ ನಿನಗೆ ಹೇಳಿರುವೆನು. ಮತ್ತು ಇದಕ್ಕಿಂತಲೂ ಮೇಲೆ ಇರುವ ಲೋಕಗಳ ಸ್ಥಿತಿಯನ್ನೂ ಹೇಳಿರುವೆನು. ಈಗ ನೀನು ಮತ್ತೇನನ್ನು ಕೇಳಬಯಸುವೆ? ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಪುರಾಣದ ಉಮಾಸಂಹಿತೆಯಲ್ಲಿ ಲೋಕವರ್ಣನವೆಂಬ
ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ವಿಂಶೋಽಧ್ಯಾಯಃ

ವ್ಯಾಸ ಉವಾಚ ॥

**ಸನತ್ಕುಮಾರ ಸರ್ವಜ್ಞ ತತ್ಪ್ರಾಪ್ತಿಂ ವದ ಸತ್ತಮಂ ।**
**ಯದ್ಗತ್ವಾ ನ ನಿವರ್ತಂತೇ ಶಿವಭಕ್ತಿಯುತಾ ನರಾಃ ॥ ೧ ॥**

॥ ಸನತ್ಕುಮಾರ ಉವಾಚ ॥

**ಪರಾಶರಸುತ ವ್ಯಾಸ ಶೃಣು ಪ್ರೀತ್ಯಾ ಶುಭಾಂ ಗತಿಂ ।**
**ವ್ರತಂ ಹಿ ಶುದ್ಧಭಕ್ತಾನಾಂ ತಥಾ ಶುದ್ಧಂ ತಪಸ್ವಿನಾಂ ॥ ೨ ॥**

### ಇಪ್ಪತ್ತನೆಯ ಅಧ್ಯಾಯವು

೧. ವ್ಯಾಸಋಷಿಯು ಸನತ್ಕುಮಾರನನ್ನು ಕುರಿತು ಎಲೈ ಪ್ರಾಜ್ಞನಾದ ಸನತ್ಕುಮಾರನೆ, ನೀನು ಸರ್ವಜ್ಞನು. ಶಿವನಲ್ಲಿ ಭಕ್ತಿಯುಳ್ಳವರು ಆ ಶಿವನ ಲೋಕವನ್ನು ಹೊಂದಿ ಪುನಃ ಹಿಂದಿರುಗುವುದಿಲ್ಲವಷ್ಟೆ? ಅಂತಹ ಆ ಶಿವಲೋಕವನ್ನು ಹೊಂದುವ ಬಗೆ ಹೇಗೆ? ಅದನ್ನು ದಯವಿಟ್ಟು ನನಗೆ ಹೇಳು ಎನ್ನಲು,

೨. ಸನತ್ಕುಮಾರನಿಂತೆಂದನು:—ಪರಾಶರ ಪುತ್ರನಾದ ಎಲೈ ವ್ಯಾಸನೇ, ಕೇಳು. ತಪಸ್ಸನ್ನು ಮಾಡುವವರಿಗೂ, ಶುದ್ಧವಾದ ಮನಸ್ಸಿನಿಂದ ಭಕ್ತಿಯುಳ್ಳವರಾಗಿ ವ್ರತವನ್ನು ಆಚರಿಸುವವರಿಗೂ, ಪರಿಶುದ್ಧಿಯನ್ನು ಉಂಟುಮಾಡಿ ಉತ್ತಮವಾದ ಗತಿಯನ್ನು ಕೊಡುವ ಮಾರ್ಗವನ್ನು ಹೇಳುವೆನು.

ಯೇ ಶಿವಂ ಶುದ್ಧಕರ್ಮಾಣಸ್ಸುಶುದ್ಧತಪಸಾನ್ವಿತಾಃ ।
ಸಮರ್ಚಯಂತಿ ತಂ ನಿತ್ಯಂ ವಂದ್ಯಾಸ್ತೇ ಸರ್ವಥಾನ್ವಹಂ ॥ ೩ ॥

ನಾತಪ್ತತಪಸೋ ಯಾಂತಿ ಶಿವಲೋಕಮನಾಮಯಂ ।
ಶಿವಾನುಗ್ರಹಸದ್ಧೇತುಸ್ತಪ ಏವ ಮಹಾಮುನೇ ॥ ೪ ॥

ತಪಸಾ ದಿವಿ ಮೋದಂತೇ ಪ್ರತ್ಯಕ್ಷಂ ದೇವತಾಗಣಾಃ ।
ಋಷಯೋ ಮುನಯಶ್ಚೈವ ಸತ್ಯಂ ಜಾನೀಹಿ ಮದ್ವಚಃ ॥ ೫ ॥

ಸುದುರ್ಧರಂ ದುರಾರಾಧ್ಯಂ ಸುಧುರಂ ದುರತಿಕ್ರಮಂ ।
ತತ್ಸರ್ವಂ ತಪಸಾ ಸಾಧ್ಯಂ ತಪೋ ಹಿ ದುರತಿಕ್ರಮಂ ॥ ೬ ॥

ಸುಸ್ಥಿತಸ್ತಪಸಿ ಬ್ರಹ್ಮಾ ನಿತ್ಯಂ ವಿಷ್ಣುರ್ಹರಸ್ತಥಾ ।
ದೇವಾ ದೇವ್ಯೋಽಖಿಲಾಃ ಪ್ರಾಪ್ತಾಸ್ತಪಸಾ ದುರ್ಲಭಂ ಫಲಂ ॥ ೭ ॥

೩-೪. ಶುದ್ಧವಾದ ಕಾರ್ಯಗಳನ್ನು ಮಾಡುತ್ತಾ, ಪರಿಶುದ್ಧವಾದ ತಪಸ್ಸಿನಿಂದ ಕೂಡಿ ಪ್ರತಿದಿನದಲ್ಲಿಯೂ ಶಿವನನ್ನು ಪೂಜಿಸುವವರು ಸರ್ವರಿಗೂ ವಂದ್ಯರು. ಎಂದರೆ ಎಲ್ಲರೂ ಅವರನ್ನು ಪ್ರತಿದಿನವೂ ಭಕ್ತಿಯಿಂದ ನಮಸ್ಕರಿಸಬೇಕು. ತಪಸ್ಸನ್ನು ಮಾಡದೆ ಇರುವವರು ಯಾವ ಈತಿಬಾಧೆಯೂ ಇಲ್ಲದಿರುವ ಶಿವನ ಲೋಕವನ್ನು ಹೊಂದಲಾರರು. ಎಲೈ, ಮಹರ್ಷಿಯೆ! ಕೇಳು ಶಿವನ ಅನುಗ್ರಹವನ್ನು ಉಂಟುಮಾಡಿಕೊಡಲು ತಪಸ್ಸೆಂಬುವುದು ಉತ್ತಮವಾದ ಸಾಧನವಾಗಿರುವುದು.

೫. ದೇವತೆಗಳು ತಪಸ್ಸಿನಿಂದಲೇ ಸ್ವರ್ಗದಲ್ಲಿ ಸುಖವನ್ನು ಅನುಭವಿಸುತ್ತಿರುವುದು ಪ್ರತ್ಯಕ್ಷವಾಗಿರುವುದು. ಇದರಂತೆಯೇ ಋಷಿಗಳೂ, ಮುನಿಗಳೂ ಇರುವರೆಂದು ತಿಳಿ. ನನ್ನ ಮಾತು ನಿಜವೆಂದು ತಿಳಿದುಕೊಂಡು ನೀನೂ ಅದರಂತೆ ಆಚರಿಸು.

೬-೭. ಧರಿಸಲು ಅಸಾಧ್ಯವಾಗಿಯೂ, ಸೇವಿಸಲು ಅಶಕ್ಯವಾಗಿಯೂ, ಮೀರಲು ಆಗದಿರುವುದಾಗಿಯೂ ಇರುವದೆಲ್ಲವೂ ತಪಸ್ಸಿನಿಂದಲೇ ಸಾಧ್ಯವಾಗುವುದು. ಆದ್ದರಿಂದ ತಪಸ್ಸಿನ ಶಕ್ತಿಯು ಅಪ್ರತಿಹತವಾಗಿರುವುದು ಎಂದರೆ ಅದರ ಶಕ್ತಿಯನ್ನು ಯಾರಿಂದಲೂ ತಡೆಯಲಾಗುವುದಿಲ್ಲ. ಬ್ರಹ್ಮನೂ, ವಿಷ್ಣುವೂ, ಹರನೂ ಕೂಡ ದುರ್ಲಭವಾದ ಇಷ್ಟಾರ್ಥಗಳನ್ನೂ ಸಹ ತಪಃಪ್ರಭಾವದಿಂದ ಹೊಂದಿರುವರು.

ಯೇನ ಯೇನ ಹಿ ಭಾವೇನ ಸ್ಥಿತ್ವಾ ಯತ್ಕ್ರಿಯತೇ ತಪಃ ।
ತತಃ ಸಂಪ್ರಾಪ್ಯತೇಽಸೌ ತೈರಿಹ ಲೋಕೇ ನ ಸಂಶಯಃ ॥ ೮ ॥

ಸಾತ್ತ್ವಿಕಂ ರಾಜಸಂ ಚೈವ ತಾಮಸಂ ತ್ರಿವಿಧಂ ಸ್ಮೃತಂ ।
ವಿಜ್ಞೇಯಂ ಹಿ ತಪೋ ವ್ಯಾಸ ಸರ್ವಸಾಧನಸಾಧನಂ ॥ ೯ ॥

ಸಾತ್ತ್ವಿಕಂ ದೈವತಾನಾಂ ಹಿ ಯತೀನಾಮೂರ್ಧ್ವರೇತಸಾಂ ।
ರಾಜಸಂ ದಾನವಾನಾಂ ಹಿ ಮನುಷ್ಯಾಣಾಂ ತಥೈವ ಚ ॥
ತಾಮಸಂ ರಕ್ಷಸಾಣಾಂ ಹಿ ನರಾಣಾಂ ಕ್ರೂರಕರ್ಮಣಾಂ ॥ ೧೦ ॥

ತ್ರಿವಿಧಂ ತತ್ಫಲಂ ಪ್ರೋಕ್ತಂ ಮುನಿಭಿಸ್ತತ್ತ್ವದರ್ಶಿಭಿಃ ।
ಜಪೋ ಧ್ಯಾನಂ ತು ದೇವಾನಾಮರ್ಚನಂ ಭಕ್ತಿತಶ್ಶುಭಂ ॥ ೧೧ ॥

ಸಾತ್ತ್ವಿಕಂ ತದ್ಧಿ ನಿರ್ದಿಷ್ಟಮಶೇಷಫಲಸಾಧಕಂ ।
ಇಹ ಲೋಕೇ ಪರೇ ಚೈವ ಮನೋಽಭಿಪ್ರೇತಸಾಧನಂ ॥ ೧೨ ॥

೮-೯. ಜನರು ಯಾವ ಭಾವವನ್ನು ಸ್ಥಿರವಾಗಿರಿಸಿಕೊಂಡು ತಪಸ್ಸನ್ನು ಮಾಡುವರೋ ಅಂತಹ ಫಲವನ್ನು ಅವರು ಈ ಲೋಕದಲ್ಲಿಯೇ ಹೊಂದುವುದರಲ್ಲಿ ಸಂಶಯವಿಲ್ಲ. ತಪಸ್ಸೆಂಬುವುದು ಸಾತ್ತ್ವಿಕ, ರಾಜಸ, ತಾಮಸ ಎಂದು ಮೂರು ವಿಧವಾಗಿರುವುದು. ಇದು ಎಲ್ಲಾ ವಿಧವಾದ ಕಾರ್ಯಗಳಿಗೂ ಸಾಧನಭೂತ ವಾಗಿರುವುದು.

೧೦-೧೨. ದೇವತೆಗಳೂ, ಜಿತೇಂದ್ರಿಯರಾದ ಯತಿಗಳೂ ಮಾಡುವ ತಪಸ್ಸು ಸಾತ್ತ್ವಿಕತಪಸ್ಸೆನಿಸುವುದು. ದಾನವರೂ, ಮನುಷ್ಯರೂ ಮಾಡುವ ತಪಸ್ಸು ರಾಜಸವು. ರಾಕ್ಷಸರೂ, ಕ್ರೂರಕರ್ಮಿಗಳಾದ ಮನುಷ್ಯರೂ ಮಾಡುವ ತಪಸ್ಸಿಗೆ ತಾಮಸ ತಪಸ್ಸೆಂದು ಹೆಸರು. ತತ್ತ್ವದರ್ಶಿಗಳಾದ ಋಷಿಗಳು, ಈ ಮೂರು ವಿಧ ವಾದ ತಪಸ್ಸಿಗೂ ಬೇರೆಬೇರೆಯಾದ ಮೂರು ವಿಧವಾದ ಫಲವು ಇರುವುದೆಂದು ಹೇಳುವರು. ದೇವತೆಗಳನ್ನು ಉದ್ದೇಶಮಾಡಿಕೊಂಡು ಮಂತ್ರವನ್ನು ಜಪಿಸುವುದೂ, ಭಕ್ತಿಯಿಂದ ಪೂಜೆಯನ್ನು ಮಾಡಿ ಧ್ಯಾನಮಾಡುವುದೂ ಉತ್ತಮವಾದದ್ದು. ಈ ಪ್ರಕಾರದಿಂದ ಮಾಡುವ ತಪಸ್ಸು ಸಾತ್ವಿಕವೆನಿಸಿಕೊಂಡು ಎಲ್ಲಾ ವಿಧವಾದ ಪ್ರಯೋ ಜನಗಳನ್ನೂ ಉಂಟುಮಾಡಿಕೊಂಡಿರುವುದಾಗಿರುವುದು. ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ, ಮನಸ್ಸಿನ ಇಷ್ಟವನ್ನು ಸಾಧಿಸಿಕೊಡಲು ಕಾರಣವೆನಿಸಿ ಕೊಂಡಿರುವುದು. ಇದನ್ನು ಸಾತ್ವಿಕ ತಪಸ್ಸೆಂದು ಹೇಳುವರು.

ಕಾಮನಾಫಲಮುದ್ದಿಶ್ಯ ರಾಜಸಂ ತಪ ಉಚ್ಯತೇ ।
ನಿಜದೇಹಂ ಸುಸಂಪೀಡ್ಯ ದೇಹಶೋಷಕದುಸ್ಸಹೈಃ ॥ ೧೩ ॥

ತಪಸ್ತಾಮಸಮುದ್ದಿಷ್ಟಂ ಮನೋಽಭಿಪ್ರೇತಸಾಧನಂ ॥ ೧೪ ॥

ಉತ್ತಮಂ ಸಾತ್ತ್ವಿಕಂ ವಿದ್ಯಾದ್ಧರ್ಮಬುದ್ಧಿಶ್ಚ ನಿಶ್ಚಲಾ ।
ಸ್ನಾನಂ ಪೂಜಾ ಜಪೋ ಹೋಮಃ ಶುದ್ಧಶೌಚಮಹಿಂಸನಂ ॥ ೧೫ ॥

ವ್ರತೋಪವಾಸಚರ್ಯಾ ಚ ಮೌನಮಿಂದ್ರಿಯನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ ದಾನಂ ಕ್ಷಾಂತಿರ್ದಮೋ ದಯಾ ॥ ೧೬ ॥

ವಾಪೀಕೂಪತಡಾಗಾದೇಃ ಪ್ರಾಸಾದಸ್ಯ ಚ ಕಲ್ಪನಾ ।
ಕೃಚ್ಛ್ರಂ ಚಾಂದ್ರಾಯಣಂ ಯಜ್ಞಸ್ಸುತೀರ್ಥಾನ್ಯಾಶ್ರಮಾಃ ಪುನಃ ॥ ೧೭ ॥

೧೩-೧೪. ಮನಸ್ಸಿನಲ್ಲಿ ಒಂದು ಇಷ್ಟವಾದ ಕಾರ್ಯವನ್ನು ಉದ್ದೇಶಮಾಡಿಕೊಂಡು ಅದನ್ನು ಸಾಧಿಸುವುದಕ್ಕಾಗಿ ಆಚರಿಸುವ ತಪಸ್ಸಿಗೆ ರಾಜಸವೆಂತಲೂ, ತನ್ನ ಶರೀರವನ್ನು ಸಹಿಸಲಶಕ್ಯವಾದ ನಿಯಮಗಳಿಂದ ವಣಗಿಸಿಕೊಂಡು, ಪೀಡಿಸಿ ತನ್ನ ಇಷ್ಟವನ್ನು ಸಾಧಿಸಲು ಮಾಡುವ ತಪಸ್ಸನ್ನು ತಾಮಸವೆಂದೂ ಕರೆಯುವರು.

೧೫-೧೭. ಸಾತ್ತ್ವಿಕವಾದ ತಪಸ್ಸನ್ನು ಉತ್ತಮವೆಂದು ಹೇಳುವರು. ಇದರಿಂದ ಸ್ಥಿರವಾದ ಧರ್ಮವನ್ನು ಆಚರಿಸಬೇಕೆಂಬ ಬುದ್ಧಿಯು ಹುಟ್ಟುವುದು. ಸ್ನಾನವೂ, ಜಪವೂ, ದೇವತಾ ಪೂಜೆಯನ್ನು ಮಾಡುವುದು, ಹೋಮಮಾಡುವುದು ಪರಿಶುದ್ಧಿಗಾಗಿ ಶೌಚವನ್ನು ಮಾಡಿಕೊಳ್ಳುವುದು, ಹಿಂಸೆಯನ್ನು ಮಾಡದಿರುವುದು, ವ್ರತವನ್ನು ಮಾಡುವುದು, ಉಪವಾಸವನ್ನು ಮಾಡುವುದು, ಯಾರ ಸಂಗಡಲೂ ಮಾತನಾಡದೆ ಇರುವುದು, ಇಂದ್ರಿಯವನ್ನು ಹತೋಟಿಯಲ್ಲಿ ಇರಿಸಿಕೊಂಡಿರುವುದು, ಸರಿಯಾದ ಮಾರ್ಗದಲ್ಲಿ ಬುದ್ಧಿಯನ್ನು ಇರಿಸಿಕೊಂಡಿರುವುದು, ಜ್ಞಾನವನ್ನು ವೃದ್ಧಿಗೊಳಿಸುವುದು, ನಿಜವನ್ನು ಹೇಳುವುದು, ಕೋಪವನ್ನು ಮಾಡಿಕೊಳ್ಳದೆ ಇರುವುದು, ದಾನಮಾಡುವುದು, ಕಷ್ಟವನ್ನು ಸಹಿಸುವುದು. ಅಂತರಿಂದ್ರಿಯಗಳನ್ನು ಹತೋಟಿಯಲ್ಲಿರಿಸಿಕೊಳ್ಳುವುದು, ಪ್ರಾಣಿಗಳಲ್ಲಿ ದಯೆಯೂ, ಭಾವಿ, ಕೆರೆ, ಕೊಳ, ಇವೇ ಮೊದಲಾದುವುಗಳನ್ನೂ ದೇವಸ್ಥಾನಗಳನ್ನೂ ಮಾಡಿಸುವುದು, ಕೃಚ್ಛ್ರವನ್ನು ಆಚರಿಸುವುದು, ಚಾಂದ್ರಾಯಣ ವ್ರತವನ್ನು ಮಾಡುವುದು, ಯಜ್ಞಗಳನ್ನು ಮಾಡು

ಧರ್ಮಸ್ಥಾನಾನಿ ಚೈತಾನಿ ಸುಖದಾನಿ ಮನೀಷಿಣಾಂ ।
ಸುಧರ್ಮಃ ಪರಮೋ ವ್ಯಾಸ ಶಿವಭಕ್ತೇಶ್ಚ ಕಾರಣಂ ॥ ೧೮ ॥

ಸಂಕ್ರಾಂತಿವಿಷುವದ್ಯೋಗೋ ನಾದಮುಕ್ತೇ ನಿಯುಜ್ಯತಾಂ ।
ಧ್ಯಾನ್ಯಂ ತ್ರಿಕಾಲಿಕಂ ಜ್ಯೋತಿರುನ್ಮನೀಭಾವಧಾರಣಾ ॥ ೧೯ ॥

ರೇಚಕಃ ಪೂರಕಃ ಕುಂಭಃ ಪ್ರಾಣಾಯಾಮಸ್ತ್ರಿಧಾ ಸ್ಮೃತಃ ।
ನಾಡೀಸಂಚಾರವಿಜ್ಞಾನಂ ಪ್ರತ್ಯಾಹಾರನಿರೋಧನಂ ॥ ೨೦ ॥

ತುರೀಯಂ ತದಧೋ ಬುದ್ಧಿರಣಿಮಾದ್ಯಷ್ಟಸಂಯುತಂ ।
ಪೂರ್ವೋತ್ತಮಂ ಸಮುದ್ದಿಷ್ಟಂ ಪರಜ್ಞಾನಪ್ರಸಾಧನಂ ॥ ೨೧ ॥

ಕಾಷ್ಠಾವಸ್ಥಾ ಮೃತಾವಸ್ಥಾ ಹಾರಿತಾ ವೇತಿ ಕೀರ್ತಿಕಾಃ ।
ನಾನೋಪಲಬ್ಧಯೋ ಹ್ಯೇತಾಸ್ಸರ್ವಪಾಪಪ್ರಣಾಶನಾಃ ॥ ೨೨ ॥

ವುದು, ಸರಿಯಾದ ತೀರ್ಥಗಳನ್ನು ಸೇವಿಸುವುದು, ಆಶ್ರಮಗಳಲ್ಲಿ ವಾಸಮಾಡುವುದು, ಇವೆಲ್ಲವೂ ಬುದ್ಧಿವಂತರಾದವರಿಗೆ ಸುಖವನ್ನು ಉಂಟುಮಾಡಿಕೊಡುವ ಉತ್ತಮವಾದ ಧರ್ಮವೆನಿಸಿಕೊಂಡು, ಶಿವಭಕ್ತಿಗೆ ಕಾರಣವಾಗುವುದು.

೧೯-೨೧. ಸಂಕ್ರಾಂತಿಯೂ ಮತ್ತು ವಿಷುವದ್ಯೋಗವೂ ಇಲ್ಲದ ಕಾಲದಲ್ಲಿ ನಿಶ್ಶಬ್ದವಾದ ಪ್ರದೇಶದಲ್ಲಿ ಮನಸ್ಸನ್ನು ಸ್ಥಿರವಾಗಿ ಇರಿಸಿ ಮೂರು ಕಾಲದಲ್ಲಿಯೂ ಜ್ಯೋತಿಸ್ಸನ್ನು ಧ್ಯಾನಮಾಡುತ್ತಾ ಉನ್ಮನೀಭಾವವನ್ನು ಧರಿಸಿಕೊಂಡಿರುವುದು, ಯೋಗವೆನಿಸುವುದು. ರೇಚಕ, ಪೂರಕ, ಕುಂಭಕವೆಂದು ಪ್ರಾಣಾಯಾಮವು ಮೂರು ವಿಧವಾಗಿ ಇರುವುದೆಂದು ನಿಶ್ಚಯಿಸಿರುವರು. ನಾಡಿಗಳಲ್ಲಿ ಸಂಚರಿಸುವ ಕ್ರಮವನ್ನು ತಿಳಿದು ಪ್ರತ್ಯಾಹಾರ ಕ್ರಮದಿಂದ ಮನಸ್ಸನ್ನು ಸ್ಥಿರವಾಗಿರಿಸಿ ಧ್ಯಾನಮಾಡುವುದು ಉತ್ತಮವಾದ ಮಾರ್ಗವು. ಅಣಿಮಾದಿ ಅಷ್ಟಸಿದ್ಧಿಗಳಿಗಾಗಿ ಆಶೆಪಟ್ಟು ಧ್ಯಾನಮಾಡುವುದು ಹಿಂದೆ ಹೇಳಿದ್ದಕಿಂತಲೂ ಕಡಿಮೆಯ ಮಾರ್ಗವಾಗಿರುವುದು. ಮೊದಲು ಹೇಳಿದ ಮಾರ್ಗವು ಆತ್ಮನನ್ನು ಸಾಕ್ಷಾತ್ಕಾರ ಮಾಡಿಕೊಡುವುದರಿಂದ ಉತ್ತಮವೆನಿಸಿಕೊಂಡಿರುವುದು.

೨೨. ಧ್ಯಾನ್ಯದ ಅತಿಶಯದಿಂದ ಕಾಷ್ಠಾವಸ್ಥಾ, ಮೃತಾವಸ್ಥಾ, ಹಾರಿತಾವಸ್ಥಾ ಎಂಬುದಾಗಿ ಮೂರು ಪ್ರಕಾರದ ಸ್ಥಿತಿಯು ನಿಶ್ಚಿತವಾಗಿರುವುದು. ಅನೇಕ ವಿಧ

ನಾರೀ ಶಯ್ಯಾ ತಥಾ ಪಾನಂ ವಸ್ತ್ರಧೂಪವಿಲೇಪನಂ ।
ತಾಂಬೂಲಭಕ್ಷಣಂ ಪಂಚ ರಾಜೈಶ್ವರ್ಯವಿಭೂತಯಃ ॥ ೨೩ ॥

ಹೇಮಭಾರಸ್ತಥಾ ತಾಮ್ರಂ ಗೃಹಾಶ್ಚ ರತ್ನಧೇನವಃ ।
ಪಾಂಡಿತ್ಯಂ ವೇದಶಾಸ್ತ್ರಾಣಾಂ ಗೀತನೃತ್ಯವಿಭೂಷಣಂ ॥ ೨೪ ॥

ಶಂಖವೀಣಾಮೃದಂಗಾಶ್ಚ ಗಜೇಂದ್ರಶ್ಛತ್ರಚಾಮರೇ ।
ಭೋಗರೂಪಾಣಿ ಚೈತಾನಿ ವಿಭಿಶ್ಯಕ್ತೋऽನುರಾಜ್ಯತೇ ॥ ೨೫ ॥

ಆದರ್ಶವಸ್ಮನೇ ಸ್ನೇಹೈಸ್ತಿಲವತ್ಸ ನಿಪೀಡ್ಯತೇ ।
ಅರಂ ಗಚ್ಛೇತಿ ಚಾಪ್ಯೇನಂ ಕುರುತೇ ಜ್ಞಾನಮೋಹಿತಃ ॥ ೨೬ ॥

ವಾಗಿ ಇರುವ ಈ ಆತ್ಮಸಾಕ್ಷಾತ್ಕಾರದ ಮಾರ್ಗಗಳು ಎಲ್ಲಾ ವಿಧವಾದ ಪಾಪಗಳನ್ನೂ ನಾಶಮಾಡುವುವು.

೨೩. ಉತ್ತಮಜಾತಿಯ ಸ್ತ್ರೀಯರು, ಹಾಸಿಗೆ, ಪಾನಗಳು, ವಸ್ತ್ರಗಳು, ಗಂಧವೇ ಮೊದಲಾದ ವಾಸನೆಯುಳ್ಳ ದ್ರವ್ಯಗಳು, ತಾಂಬೂಲಸೇವನ ಈ ಐದೂ ರಾಜಭೋಗಗಳೆನಿಸುವವು.

೨೪–೨೫. ರಾಶಿರಾಶಿಯಾಗಿರುವ ಚಿನ್ನವು, ತಾಮ್ರವು, ಉತ್ತಮವಾದ ಮನೆಗಳು, ವೇದಶಾಸ್ತ್ರಗಳ ಜ್ಞಾನ, ಸಂಗೀತ, ನರ್ತನ ಆಭರಣಗಳು, ಶಂಖ, ವೀಣೆ, ಮೃದಂಗ ಇವುಗಳನ್ನು ಬಾರಿಸುವುದು, ಉತ್ತಮವಾದ ಆನೆ, ಛತ್ರ, ಚಾಮರಗಳನ್ನು ಹೊಂದಿರುವುದು, ಇವೆಲ್ಲವೂ ಸುಖಸಾಧನಗಳಾದುದರಿಂದ ಸಮರ್ಥನಾದವನು ಇವುಗಳಲ್ಲಿ ಅನುರಾಗದಿಂದ ಇರುವನು. ಎಲೈ ವ್ಯಾಸಋಷಿಯೇ, ಕೇಳು ಸ್ನೇಹದಿಂದ ಬದ್ಧನಾದವನು ಎಣ್ಣೆಗಾಗಿ ಎಳ್ಳನ್ನು ಹಿಂಡುವ ಹಾಗೆ ಇತರರಿಂದ ತೊಂದರೆಯನ್ನು ಅನುಭವಿಸುವನು.

೨೬–೨೮. ಈ ಭೋಗಗಳಿಂದಲೂ, ಭೋಗಸಾಧನಗಳಿಂದಲೂ, ತೃಪ್ತಿಯುಂಟಾಗುವುದಿಲ್ಲ. ಇವುಗಳನ್ನು ತ್ಯಜಿಸು ಎಂದು ಶಾಸ್ತ್ರವು ಹೇಳುವುದು. ಈ ವಿಷಯವನ್ನು ತಿಳಿದಿದ್ದಾಗ್ಯೂ ಅಜ್ಞಾನದಿಂದ ಭ್ರಮೆಯನ್ನು ಹೊಂದಿ ಈ ಲೋಕದಲ್ಲಿ ಸಂಸಾರದಲ್ಲಿ ಸಿಕ್ಕಿದವನಾಗಿ ಸ್ಥಿರಚರರೂಪವಾಗಿರುವ ಜನ್ಮಗಳಲ್ಲಿ ದುಃಖದಿಂದ ಸಂಕಟ

ಜಾನನ್ನಪೀಹ ಸಂಸಾರೇ ಭ್ರಮತೇ ಘಟಿಯಂತ್ರವತ್ ।
ಸರ್ವಯೋನಿಷು ದುಃಖಾರ್ತಃ ಸ್ಥಾವರೇಷು ಚರೇಷು ಚ ॥ ೨೭ ॥

ಏವಂ ಯೋನಿಷು ಸರ್ವಾಸು ಪ್ರತಿಕ್ರಮ್ಯ ಭ್ರಮೇಣ ತು ।
ಕಾಲಾಂತರವಶಾದ್ಯಾತಿ ಮಾನುಷ್ಯಮತಿದುರ್ಲಭಂ ॥ ೨೮ ॥

ವ್ಯುತ್ಕ್ರಮೇಣಾಪಿ ಮಾನುಷ್ಯಂ ಪ್ರಾಪ್ಯತೇ ಪುಣ್ಯಗೌರವಾತ್ ।
ವಿಚಿತ್ರಾ ಗತಯಃ ಪ್ರೋಕ್ತಾಃ ಕರ್ಮಣಾಂ ಗುರುಲಾಘವಾತ್ ॥ ೨೯ ॥

ಮಾನುಷ್ಯಂ ಚ ಸಮಾಸಾದ್ಯ ಸ್ವರ್ಗಮೋಕ್ಷಪ್ರಸಾಧನಂ ।
ನಾಚರತ್ಯಾತ್ಮನಃ ಶ್ರೇಯಸ್ಸ ಮೃತಶ್ಶೋಚತೇ ಚಿರಂ ॥ ೩೦ ॥

ದೇವಾಸುರಾಣಾಂ ಸರ್ವೇಷಾಂ ಮಾನುಷ್ಯಂ ಚಾತಿದುರ್ಲಭಂ ।
ತತ್ಸಂಪ್ರಾಪ್ಯ ತಥಾ ಕುರ್ಯಾನ್ನ ಗಚ್ಛೇನ್ನರಕಂ ಯಥಾ ॥ ೩೧ ॥

ಪಡುತ್ತಾ ಗಡಿಯಾರದಂತೆ ಪ್ರಾಣಿಯು ಸುತ್ತುತ್ತಿರುವನು. ಹೀಗೆಯೇ ಅನೇಕ ವಿಧವಾದ ಯೋನಿಗಳಲ್ಲೆಲ್ಲಾ ಸುತ್ತುತ್ತಿದ್ದು ಹೊಂದಲು ಅಶಕ್ಯವಾದ ಮನುಷ್ಯನ ಜನ್ಮವನ್ನು ಬಹಳ ಕಾಲದಮೇಲೆ ಹೊಂದುವನು.

೨೯-೩೧. ಒಂದು ವೇಳೆ ಈ ಕ್ರಮ ತಪ್ಪಿ ಮನುಷ್ಯಜನ್ಮವು ಬಹಳ ಪುಣ್ಯ ಮಾಡಿದವನಿಗೆ ಉಂಟಾಗಬಹುದು. ಅವನು ಮಾಡುವ ಕರ್ಮಗಳಲ್ಲಿ ಚಿಕ್ಕದು ದೊಡ್ಡದು ಎಂಬ ತಾರತಮ್ಯದಿಂದ ಅನೇಕ ವಿಧವಾದ ಗತಿಗಳು ಉಂಟಾಗುವವು. ಆದರೆ ಅವನು ಸ್ವರ್ಗ ಮತ್ತು ಮೋಕ್ಷ ಇವುಗಳನ್ನು ಸಾಧಿಸುವುದಕ್ಕೆ ಅನುಕೂಲವಾದ ಮನುಷ್ಯಜನ್ಮವನ್ನು ಹೊಂದಿದರೂ, ತನಗೆ ಶ್ರೇಯಸ್ಸನ್ನುಂಟುಮಾಡುವ ಕೆಲಸವನ್ನು ಮಾಡುವುದಿಲ್ಲ. ಇದರಿಂದ ಅವನು ಮೃತನಾದನಂತರ ಬಹಳ ವ್ಯಸನವನ್ನು ಹೊಂದುವನು. ದೇವತೆಗಳಿಗೂ, ಅಸುರರಿಗೂ ಕೂಡ ಮನುಷ್ಯಜನ್ಮವು ಹೊಂದಲಸಾಧ್ಯವಾಗಿರುವುದು. ಆದ್ದರಿಂದ ಇಷ್ಟುಮಟ್ಟಿನ ಮನುಷ್ಯ ಜನ್ಮವನ್ನು ಹೊಂದಿದರೂ, ನರಕವನ್ನು ಹೊಂದದೆ ಇರುವಂತೆ ಹೇಗೆ ನಡೆಯಬೇಕೋ ಆ ರೀತಿಯಾಗಿ ಕಾರ್ಯಸಾಧನಮಾಡಿಕೊಳ್ಳುವದು ಉತ್ತಮವು.

ಸ್ವರ್ಗಾಪವರ್ಗಲಾಭಾಯ ಯದಿ ನಾಸ್ತಿ ಸಮುದ್ಯಮಃ ।
ದುರ್ಲಭಂ ಪ್ರಾಪ್ಯ ಮಾನುಷ್ಯಂ ವೃಥಾ ತಜ್ಜನ್ಮ ಕೀರ್ತಿತಂ ॥ ೩೨ ॥

ಸರ್ವಸ್ಯ ಮೂಲಂ ಮಾನುಷ್ಯಂ ಚತುರ್ವರ್ಗಸ್ಯ ಕೀರ್ತಿತಂ ।
ಸಂಪ್ರಾಪ್ಯ ಧರ್ಮತೋ ವ್ಯಾಸ ತದ್ಯತ್ನಾದನುಪಾಲಯೇತ್ ॥ ೩೩ ॥

ಧರ್ಮಮೂಲಂ ಹಿ ಮಾನುಷ್ಯಂ ಲಬ್ಧ್ವಾ ಸರ್ವಾರ್ಥಸಾಧಕಂ ।
ಯದಿ ಲಾಭಾಯ ಯತ್ನಃ ಸ್ಯಾನ್ಮೂಲಂ ರಕ್ಷೇತ್ಸ್ವಯಂ ತತಃ ॥ ೩೪ ॥

ಮಾನುಷ್ಯೇಽಪಿ ಚ ವಿಪ್ರತ್ವಂ ಯಃ ಪ್ರಾಪ್ಯ ಖಲು ದುರ್ಲಭಂ ।
ನಾಚರತ್ಯಾತ್ಮನಃ ಶ್ರೇಯಃ ಕೋಽನ್ಯಸ್ತಸ್ಮಾದಚೇತನಃ ॥ ೩೫ ॥

ದ್ವೀಪಾನಾಮೇವ ಸರ್ವೇಷಾಂ ಕರ್ಮಭೂರಿಯಮುಚ್ಯತೇ ।
ಇತಸ್ಸ್ವರ್ಗಶ್ಚ ಮೋಕ್ಷಶ್ಚ ಪ್ರಾಪ್ಯತೇ ಸಮುಪಾರ್ಜಿತಃ ॥ ೩೬ ॥

---

೩೨. ಹೊಂದಲಸಾಧ್ಯವಾದ ಮನುಷ್ಯ ಜನ್ಮವನ್ನು ಹೊಂದಿಯೂ, ಸ್ವರ್ಗ, ಮೋಕ್ಷಗಳನ್ನು ಹೊಂದಲು ಪ್ರಯತ್ನಪಡದಿರುವವನ ಜನ್ಮವು ವ್ಯರ್ಥವೆನಿಸಿಕೊಳು ವುದು.

೩೩-೩೪. ನಾಲ್ಕು ವಿಧವಾದ ಪುರುಷಾರ್ಥಗಳನ್ನು ಸಾಧಿಸುವುದಕ್ಕೂ ಮನುಷ್ಯಜನ್ಮವು ಕಾರಣವೆಂದು ಹೇಳಿರುವುದರಿಂದ ಮನುಷ್ಯಜನ್ಮವನ್ನು ಸರಿಯಾದ ಧರ್ಮಾಚರಣೆಯಿಂದ ಪ್ರಯತ್ನಪೂರ್ವಕವಾಗಿ ಕಾಪಾಡಿಕೊಳ್ಳಬೇಕು. ಮನುಷ್ಯ ಜನ್ಮವು ಎಲ್ಲಾ ವಿಧವಾದ ಪ್ರಯತ್ನವನ್ನೂ ಮಾಡಿ ಇಷ್ಟಗಳನ್ನು ಹೊಂದಲು ಅನು ಕೂಲವಾಗಿರುವುದು ಧರ್ಮಕ್ಕೆ ಮೂಲಭೂತವಾಗಿರುವುದು. ಆದುದರಿಂದ ಮನುಷ್ಯಜನ್ಮದ ಪ್ರಯೋಜನವನ್ನು ಹೊಂದಲಪೇಕ್ಷಿಸುವವನು ಈ ಜನ್ಮಕ್ಕೆ ಸಾಧನ ಭೂತವಾದ ಧರ್ಮವನ್ನು ಬಹು ಪ್ರಯತ್ನದಿಂದ ಕಾಪಾಡಿಕೊಳ್ಳಬೇಕು. ಎಂದರೆ ಧರ್ಮಾಚರಣೆಯಿಂದಿದ್ದು ಮನುಷ್ಯಜನ್ಮವನ್ನು ಸಾರ್ಥಕಮಾಡಿಕೊಳ್ಳಬೇಕು.

೩೫-೩೬. ಮನುಷ್ಯ ಜನ್ಮವನ್ನು ಹೊಂದಿ ಅದರಲ್ಲಿಯೂ ದುರ್ಲಭವಾದ ಬ್ರಾಹ್ಮಣನಾಗಿ ಹುಟ್ಟಿ, ತನಗೆ ಶ್ರೇಯಸ್ಸುಂಟಾಗುವ ಕೆಲಸವನ್ನು ಮಾಡದೆ ಇರುವವನಿಗಿಂತ ಜ್ಞಾನವಿಲ್ಲದ ಜಡಪದಾರ್ಥವು ಬೇರೊಂದಿಲ್ಲ. (ಈ ಭರತಖಂಡವು) ಈ ಜಂಬೂದ್ವೀಪವು ಎಲ್ಲಾ ದ್ವೀಪಗಳಲ್ಲಿಯೂ ಕರ್ಮಭೂಮಿ ಎಂದು ಪ್ರಸಿದ್ಧ ವಾಗಿರುವುದು. ಇಲ್ಲಿ ಮಾಡುವ ಪುಣ್ಯದಿಂದ ಸ್ವರ್ಗವೂ, ಮೋಕ್ಷವೂ ಲಭಿಸುವವು.

ದೇಶೇऽಸ್ಮಿನ್ಭಾರತೇ ವರ್ಷೇ ಪ್ರಾಪ್ಯ ಮಾನುಷ್ಯಮಧ್ರುವಂ ।
ನ ಕುರ್ಯಾದಾತ್ಮನಃ ಶ್ರೇಯಸ್ತೇನಾತ್ಮಾ ಖಲು ವಂಚಿತಃ ॥ ೩೭ ॥

ಕರ್ಮಭೂಮಿರಿಯಂ ವಿಪ್ರ ಫಲಭೂಮಿರಸೌ ಸ್ಮೃತಾ ।
ಇಹ ಯತ್ಕ್ರಿಯತೇ ಕರ್ಮ ಸ್ವರ್ಗೇ ತದನುಭುಜ್ಯತೇ ॥ ೩೮ ॥

ಯಾವತ್ಸ್ವಾಸ್ಥ್ಯಂ ಶರೀರಸ್ಯ ತಾವದ್ಧರ್ಮಂ ಸಮಾಚರೇತ್ ।
ಅಸ್ವಸ್ಥಶ್ಚೋದಿತೋऽಪ್ಯನ್ಯೈರ್ನ ಕಿಂಚಿತ್ಕರ್ತುಮುತ್ಸಹೇತ್ ॥ ೩೯ ॥

ಅಧ್ರುವೇಣ ಶರೀರೇಣ ಧ್ರುವಂ ಯೋ ನ ಪ್ರಸಾಧಯೇತ್ ।
ಧ್ರುವಂ ತಸ್ಯ ಪರಿಭ್ರಷ್ಟಮಧ್ರುವಂ ನಷ್ಟಮೇವ ಚ ॥ ೪೦ ॥

ಆಯುಷಃ ಖಂಡಖಂಡಾನಿ ನಿಪತಂತಿ ತದಗ್ರತಃ ।
ಅಹೋರಾತ್ರೋಪದೇಶೇನ ಕಿಮರ್ಥಂ ನಾವಬುಧ್ಯತೇ ॥ ೪೧ ॥

೩೭-೩೮, ಈ ಭರತವರ್ಷದಲ್ಲಿ ಮನುಷ್ಯಜನ್ಮವನ್ನು ಹೊಂದಿಯೂ ತನಗೆ ಶ್ರೇಯಸ್ಸನ್ನು ಸಂಪಾದಿಸದೇ ಇರುವವನು ತನ್ನ ಮುಂದಿನ ಜನ್ಮದ ವಿಷಯದಲ್ಲಿ ತನಗೆ ತಾನೇ ವಂಚನೆಯನ್ನು ಮಾಡಿಕೊಂಡಂತಾಗುವುದು. ಇದು ಕರ್ಮಭೂಮಿ ಯಾಗಿರುವುದು. ಇತರ ಪ್ರದೇಶಗಳು ಕರ್ಮಫಲವನ್ನು ಅನುಭವಿಸಬೇಕಾದ ಭೋಗಭೂಮಿಯಾಗಿರುವವು. ಈ ಲೋಕದಲ್ಲಿ ಮಾಡತಕ್ಕ ಕರ್ಮಕ್ಕನುಸಾರವಾಗಿ ಸ್ವರ್ಗದಲ್ಲಿ ಅದರ ಫಲವನ್ನು ಅನುಭವಿಸಬೇಕಾಗಿರುವುದು.

೩೯-೪೦. ಶರೀರದ ಸ್ಥಿತಿಯು ಅನುಕೂಲವಾಗಿರುವ ಕಾಲದಲ್ಲಿ ಧರ್ಮವನ್ನು ಆಚರಿಸಬೇಕು. ಶರೀರಕ್ಕೆ ತೊಂದರೆಯು ಉಂಟಾದ ಕಾಲದಲ್ಲಿ ಇನ್ನೊಬ್ಬರು ಧರ್ಮ ವನ್ನು ಮಾಡು ಎಂದು ಹೇಳಿದಾಗ್ಯೂ ಅದನ್ನು ನಡೆಸಲು ಉತ್ಸಾಹವು ಉಂಟಾಗುವು ದಿಲ್ಲ. ಅನಿತ್ಯವಾದ ಶರೀರದಿಂದ ನಿತ್ಯವಾದ ಮೋಕ್ಷಾದಿಗಳನ್ನು ಹೊಂದಲು ಅವ ಕಾಶವು ಸಿಕ್ಕಿರುವಾಗ, ಪ್ರಯತ್ನಪಟ್ಟು ಅದನ್ನು ಸಾಧಿಸದೆ ಇರುವವನಿಗೆ ಅನಿತ್ಯವಾದ ಶರೀರವೂ, ನಿತ್ಯವಾದ ಸುಖವೂ ಸಿಕ್ಕದೆ ಎರಡು ವಿಧವಾದ ನಷ್ಟವು ಉಂಟಾಗುವುದು.

೪೧-೪೨. ಅವನ ಆಯುಸ್ಸಿನಲ್ಲಿ ಕೊಂಚಕೊಂಚವಾಗಿ ರಾತ್ರಿಯೂ ಮತ್ತು ಹಗಲು ಎಂಬ ನೆವದಿಂದ ಕಾಲವು ಕಳೆದುಹೋಗುವುದು. ಇವನ್ನು ಏತಕ್ಕಾಗಿ

ಯದಾ ನ ಜ್ಞಾಯತೇ ಮೃತ್ಯುಃ ಕದಾ ಕಸ್ಯ ಭವಿಷ್ಯತಿ ।
ಆಕಸ್ಮಿಕೇ ಹಿ ಮರಣೇ ಧೃತಿಂ ವಿಂದತಿ ಕಸ್ತಥಾ ॥ ೪೨ ॥

ಪರಿತ್ಯಜ್ಯ ಯದಾ ಸರ್ವಮೇಕಾಕೀ ಯಾಸ್ಯತಿ ಧ್ರುವಂ ।
ನ ದದಾತಿ ಕದಾ ಕಸ್ಮಾತ್ಪಾಥೇಯಾರ್ಥಮಿದಂ ಧನಂ ॥ ೪೩ ॥

ಗೃಹೀತದಾನಪಾಥೇಯಃ ಸುಖಂ ಯಾತಿ ಯಮಾಲಯಂ ।
ಅನ್ಯಥಾ ಕ್ಲಿಶ್ಯತೇ ಜಂತುಃ ಪಾಥೇಯರಹಿತೇ ಪಥಿ ॥ ೪೪ ॥

ಯೇಷಾಂ ಕಾಲೇಯ ಪುಣ್ಯಾನಿ ಪರಿಪೂರ್ಣಾನಿ ಸರ್ವತಃ ।
ಗಚ್ಛತಾಂ ಸ್ವರ್ಗದೇಶಂ ಹಿ ತೇಷಾಂ ಲಾಭಃ ಪದೇಪದೇ ॥ ೪೫ ॥

ಇತಿ ಜ್ಞಾತ್ವಾ ನರಃ ಪುಣ್ಯಂ ಕುರ್ಯಾತ್ಪಾಪಂ ವಿವರ್ಜಯೇತ್ ।
ಪುಣ್ಯೇನ ಯಾತಿ ದೇವತ್ವಮಪುಣ್ಯೋ ನರಕಂ ವ್ರಜೇತ್ ॥ ೪೬ ॥

ತಿಳಿದುಕೊಳ್ಳಬಾರದು ? ಮೃತ್ಯುವು ಬರತಕ್ಕ ಕಾಲವು ಗೊತ್ತಾಗುವುದಿಲ್ಲ. ಮರಣವು ಯಾರಿಗೆ ಯಾವಾಗ ಉಂಟಾಗುವುದೋ ತಿಳಿಯುವುದಿಲ್ಲ. ಮರಣವು ಆಕಸ್ಮಿಕವಾಗಿ ಉಂಟಾಗುವುದರಿಂದ ಯಾರುತಾನೆ ಧೈರ್ಯದಿಂದಿರುವುದಕ್ಕಾದೀತು ?

೪೩-೪೪. ಮರಣವು ಸನ್ನಿಹಿತವಾಗಲು ಎಲ್ಲವನ್ನೂ ಬಿಟ್ಟು ಒಬ್ಬನೇ ಎಂದರೆ ತನ್ನಷ್ಟಕ್ಕೆ ತಾನೇ ಹೋಗಬೇಕಾಗಿರುವುದು. ಇದು ಯಾರಿಗೂ ತಪ್ಪುವಹಾಗಿಲ್ಲ. ಆದ್ದರಿಂದ ಉಪೇಕ್ಷೆಯನ್ನು ಮಾಡುತ್ತಾ ಸುಮ್ಮನಿದ್ದರೆ ಏನು ಪ್ರಯೋಜನ ? ಏತಕ್ಕಾಗಿ ಮುಂದಿನ ಶುಭಫಲವನ್ನು ಉಂಟುಮಾಡುವ ಉದ್ದೇಶದಿಂದ ಧನವನ್ನು ಧರ್ಮಮಾಡುವುದಿಲ್ಲ ? ಧರ್ಮವನ್ನು ಮಾಡಿದಲ್ಲಿ ತಾನು ಒಬ್ಬಂಟಿಗನಾಗಿ ಹೋಗುವಾಗ ತಾನು ಮಾಡಿದ ಧರ್ಮದ ಬುತ್ತಿಯ ಗಂಟನ್ನು ಹಿಡಿದುಕೊಂಡು ಸುಖವಾಗಿ ಯಮನ ಮನೆಯನ್ನು ಹೊಂದಬಹುದು. ಇಲ್ಲದಿದ್ದರೆ ಯಮನ ಮನೆಗೆ ಹೋಗುವ ದಾರಿಯಲ್ಲಿ ಬುತ್ತಿಯ ಗಂಟು ಯಾವುದೂ ಇಲ್ಲದೆ ಕಷ್ಟಪಡಬೇಕಾಗುವುದು.

೪೫-೪೬. ಎಲ್ಲಾ ವಿಧದಿಂದಲೂ ಪುಣ್ಯವನ್ನು ಚೆನ್ನಾಗಿ ಸಂಪಾದನೆಮಾಡಿದವರು ಸ್ವರ್ಗವನ್ನು ಹೊಂದುವರಲ್ಲದೆ ಅವರಿಗೆ ಎಷ್ಟೋ ವಿಧವಾದ ಅನುಕೂಲಗಳೂ ಉಂಟಾಗುವವು. ಹೀಗೆಂದು ಮನುಷ್ಯನು ತಿಳಿದುಕೊಂಡು ಪುಣ್ಯಕೆಲಸವನ್ನು ಮಾಡಬೇಕು. ಪಾಪಮಾಡುವುದನ್ನು ಬಿಡಬೇಕು. ಪುಣ್ಯದಿಂದ ಸ್ವರ್ಗಕ್ಕೂ, ಪಾಪ

**ಯೇ ಮನಾಗಪಿ ದೇವೇಶಂ ಪ್ರಪನ್ನಾಶ್ಶರಣಂ ಶಿವಂ ।**
**ತೇಽಪಿ ಘೋರಂ ನ ಪಶ್ಯಂತಿ ಯಮಂ ನ ನರಕಂ ತಥಾ ॥ ೪೭ ॥**

**ಕಿಂತು ಪಾಪೈರ್ಮಹಾಮೋಹೈಃ ಕಿಂಚಿತ್ಕಾಲೇ ಶಿವಾಜ್ಞಯಾ ।**
**ವಸಂತಿ ತತ್ರ ಮಾನುಷ್ಯಾಸ್ತತೋ ಯಾಂತಿ ಶಿವಾಸ್ಪದಂ ॥ ೪೮ ॥**

**ಯೇ ಪುನಸ್ಸರ್ವಭಾವೇನ ಪ್ರತಿಪನ್ನಾ ಮಹೇಶ್ವರಂ ।**
**ನ ತೇ ಲಿಂಪಂತಿ ಪಾಪೇನ ಪದ್ಮಪತ್ರಮಿವಾಂಭಸಾ ॥ ೪೯ ॥**

**ಉಕ್ತಂ ಶಿವೇತಿ ಯೈರ್ನಾಮ ತಥಾ ಹರಹರೇತಿ ಚ ।**
**ನ ತೇಷಾಂ ನರಕಾದ್ಭೀತಿರ್ಯಮಾದ್ಧಿ ಮುನಿಸತ್ತಮ ॥ ೫೦ ॥**

**ಪರಲೋಕಸ್ಯ ಪಾಥೇಯಂ ಮೋಕ್ಷೋಪಾಯಮನಾಮಯಂ ।**
**ಪುಣ್ಯಸಂಘೈಕನಿಲಯಂ ಶಿವ ಇತ್ಯಕ್ಷರದ್ವಯಂ ॥ ೫೧ ॥**

ದಿಂದ ನರಕಕ್ಕೂ ಹೋಗುವನು. ಶಿವನನ್ನು ಕೊಂಚಮಟ್ಟಿಗಾದರೂ ಶರಣುಹೊಂದು ವವರು ಭಯವನ್ನು ಉಂಟುಮಾಡುವ ಯಮನನ್ನೂ, ನಕರವನ್ನೂ ನೋಡು ವುದಿಲ್ಲ. ಆದರೆ ತಿಳಿಯದೆ ಪಾಪಮಾಡಿದವರು ಶಿವನಾಜ್ಞೆಯಂತೆ ಯಮಲೋಕದಲ್ಲಿ ಸ್ವಲ್ಪಕಾಲ ಮಾತ್ರವಿದ್ದು ಬಳಿಕ ಶಿವಲೋಕಕ್ಕೆ ಹೋಗುವರು.

೪೯-೫೦. ಎಲ್ಲಾ ವಿಧದಿಂದಲೂ ಮಹೇಶ್ವರನನ್ನು ಶರಣುಹೊಂದಿದವರು ನೀರಿನಿಂದ ತಾವರೆಯ ಎಲೆಯು ಬೇರೆ ಇರುವಂತೆ ಪಾಪಸಂಬಂಧವಿಲ್ಲದವರಾಗುವರು. ಎಲೈ ಮುನಿಶ್ರೇಷ್ಠನೇ, ಕೇಳು. ಶಿವ-ಶಿವ, ಹರ-ಹರ, ಎಂಬುದಾಗಿ ಶಿವನ ನಾಮ ಸ್ಮರಣೆಯನ್ನು ಮಾಡುವವರಿಗೆ ನರಕಭಯವಾಗಲಿ, ಯಮನ ಭಯವಾಗಲಿ ಉಂಟಾಗುವುದಿಲ್ಲ.

೫೧-೫೨. ಶಿವ ಎಂಬ ಎರಡು ಅಕ್ಷರವು ಮನುಷ್ಯನಿಗೆ ಪರಲೋಕದ ಪುಣ್ಯದ ಗಂಟಾಗಿರುವುದು. ಸುಖಸಾಮ್ರಾಜ್ಯವೆನಿಸಿದ ಮೋಕ್ಷವನ್ನು ಹೊಂದುವ ಉಪಾಯ ವಾಗಿರುವುದು. ಪುಣ್ಯರಾಶಿಗೆ ಮುಖ್ಯವಾದ ನೆಲೆಯಾಗಿರುವುದು. ಶಿವನಾಮ ಸ್ಮರಣೆಯೇ ಸಂಸಾರವೆಂಬ ಬಲವಾದ ರೋಗವನ್ನು ನಾಶಮಾಡುವುದು. ಇದು

ಶಿವನಾಮ್ನೈವ ಸಂಸಾರಮಹಾರೋಗೈಕಶಾಮಕಂ ।
ನಾನ್ಯತ್ಸಂಸಾರರೋಗಸ್ಯ ಶಾಮಕಂ ದೃಶ್ಯತೇ ಮಯಾ　　　　॥ ೫೨ ॥

ಬ್ರಹ್ಮಹತ್ಯಾಸಹಸ್ರಾಣಿ ಪುರಾ ಕೃತ್ವಾ ತು ಪುಲ್ಕಶಃ ।
ಶಿವೇತಿ ನಾಮ ವಿಮಲಂ ಶ್ರುತ್ವಾ ಮೋಕ್ಷಂ ಗತಃ ಪುರಾ　　　　॥ ೫೩ ॥

ತಸ್ಮಾದ್ವಿವರ್ಧಯೇದ್ಭಕ್ತಿಮೀಶ್ವರೇ ಸತತಂ ಬುಧಃ ।
ಶಿವಭಕ್ತ್ಯಾ ಮಹಾಪ್ರಾಜ್ಞ ಭುಕ್ತಿಂ ಮುಕ್ತಿಂ ಚ ವಿಂದತಿ　　　　॥ ೫೪ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಮುನಿವಿಶೇಷಕಥನಂ ನಾಮ ವಿಂಶೋಽಧ್ಯಾಯಃ



ಹೊರತು ಸಂಸಾರಭಯವನ್ನು ನಾಶಮಾಡುವ ಸಾಧನವು ಬೇರೆಯಾವುದೂ ಇಲ್ಲ ವೆಂದು ನಾನು ತಿಳಿದಿರುವೆನು.

೫೩-೫೪. ಪೂರ್ವದಲ್ಲಿ ಸಾವಿರಾರು ಬ್ರಹ್ಮಹತ್ಯೆಗಳನ್ನು ಮಾಡಿದ್ದ ಹೊಲೆಯ ನೊಬ್ಬನು ನಿರ್ಮಲವಾದ ಶಿವನಾಮವನ್ನು ಸ್ಮರಿಸಿ ಮುಕ್ತಿಯನ್ನು ಹೊಂದಿದನು. ಆದ್ದರಿಂದ ತಿಳಿವಳಿಕೆಯುಳ್ಳವನು ಯಾವಾಗಲೂ ಈಶ್ವರನಲ್ಲಿ ಭಕ್ತಿಯನ್ನು ಹೆಚ್ಚಿಸ ಬೇಕು. ಎಲೈ ಮಹಾಪ್ರಾಜ್ಞನಾದ ವ್ಯಾಸನೇ, ಕೇಳು. ಶಿವಭಕ್ತಿಯಿಂದ ಮಾನವನು ಭೋಗವನ್ನೂ ಮೋಕ್ಷವನ್ನೂ ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಶಿವಮಂತ್ರದ ಅತಿಶಯ ಮಹಿಮಾವರ್ಣನವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ಉಮಾಸಂಹಿತಾಯಾಂ
## ಏಕವಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಬ್ರಾಹ್ಮಣತ್ವಂ ಹಿ ದುಷ್ಪ್ರಾಪ್ಯಂ ನಿಸರ್ಗಾದ್ಬ್ರಹ್ಮಣೋ ಭವೇತ್ ।
ಈಶ್ವರಸ್ಯ ಮುಖಾತ್ಕ್ಷತ್ರೋ ಬಾಹುಭ್ಯಾಮೂರುತೋ ವಿಶಃ ॥ ೧

ಪದ್ಭ್ಯಾಂ ಶೂದ್ರಸ್ಸಮುತ್ಪನ್ನ ಇತಿ ತಸ್ಯ ಮುಖಾಚ್ಛ್ರುತಿಃ ।
ಕಿಮು ಸ್ಥಿತಿಮಧಃಸ್ಥಾನಾದಾಪ್ನುವಂತಿ ಹ್ಯತೋ ವದ ॥ ೨

### ಇಪ್ಪತ್ತೊಂದನೆಯ ಅಧ್ಯಾಯವು

೧-೨. ವ್ಯಾಸಋಷಿಯು ಪ್ರಶ್ನೆ ಮಾಡಿದನು :—ಬ್ರಾಹ್ಮಣನ ಜನ್ಮವು ಹೊಂದ ಲಶಕ್ಯವಾದದ್ದು. ಆದರೆ ಅದು ಬ್ರಹ್ಮನ ನಿಯಮಕ್ಕನುಸಾರವಾಗಿ ಉಂಟಾಗುವುದು. ದೇವದೇವನಾದ ಪರಮೇಶ್ವರನ ಮುಖದಿಂದ ಬ್ರಾಹ್ಮಣನೂ, ಬಾಹುಗಳಿಂದ ಕ್ಷತ್ರಿಯನೂ, ತೊಡೆಗಳಿಂದ ವೈಶ್ಯನೂ, ಪಾದಗಳಿಂದ ಶೂದ್ರನೂ ಹುಟ್ಟಿರುವರೆಂದು ವೇದವು ಹೇಳುವುದು. ಹೀಗೆ ಇರುವಾಗ ಇವರು ಪುನಃ ಹುಟ್ಟುವಾಗ ತಾವು ಇರುವುದಕ್ಕಿಂತಲೂ ಕಡಿಮೆಯಾದ ಜಾತಿಯಲ್ಲಿ ಹೇಗೆ ಹುಟ್ಟುವರು ಎಂಬುವುದಕ್ಕೆ ಕಾರಣವನ್ನು ತಿಳಿಸು ಎನ್ನಲು,

॥ ಸನತ್ಕುಮಾರ ಉವಾಚ ॥

ದುಷ್ಕೃತೇನ ತು ಕಾಲೇಯ ಸ್ಥಾನಾದ್ಭ್ರಶ್ಯಂತಿ ಮಾನವಾಃ ।
ಶ್ರೇಷ್ಠಂ ಸ್ಥಾನಂ ಸಮಾಸಾದ್ಯ ತಸ್ಮಾದ್ರಕ್ಷೇತ ಪಂಡಿತಃ ॥ ೩ ॥

ಯಸ್ತು ವಿಪ್ರತ್ವಮುತ್ಸೃಜ್ಯ ಕ್ಷತ್ರಯೋನ್ಯಾಂ ಪ್ರಸೂಯತೇ ।
ಬ್ರಾಹ್ಮಣ್ಯಾತ್ಸ ಪರಿಭ್ರಷ್ಟಃ ಕ್ಷತ್ರಿಯತ್ವಂ ನಿಷೇವತೇ ॥ ೪ ॥

ಅಧರ್ಮಸೇವನಾನ್ಮೂಢಸ್ತಥೈವ ಪರಿವರ್ತತೇ ।
ಜನ್ಮಾಂತರಸಹಸ್ರಾಣಿ ತಮಸ್ಯಾವಿಶತೇ ಯತಃ ॥ ೫ ॥

ತಸ್ಮಾತ್ಪ್ರಾಪ್ಯ ಪರಂ ಸ್ಥಾನಂ ಪ್ರಮಾದ್ಯನ್ನಂ ತು ನಾಶಯೇತ್ ।
ಸ್ವಸ್ಥಾನಂ ಸರ್ವದಾ ರಕ್ಷೇತ್ಪ್ರಾಪ್ಯಾಪಿ ವಿಪದೋ ನರಃ ॥ ೬ ॥

ಬ್ರಾಹ್ಮಣತ್ವಂ ಶುಭಂ ಪ್ರಾಪ್ಯ ಬ್ರಾಹ್ಮಣ್ಯಂ ಯೋಽವಮನ್ಯತೇ ।
ಭೋಜ್ಯಾಭೋಜ್ಯಂ ನ ಜಾನಾತಿ ಸ ಪುಮಾನ್ಕ್ಷತ್ರಿಯೋ ಭವೇತ್ ॥ ೭ ॥

೩. ಸನತ್ಕುಮಾರನು ಹೇಳಿದನು :—ಎಲೈ ವ್ಯಾಸನೇ, ಕೇಳು ಮನುಷ್ಯರು ತಮ್ಮ ಪಾಪಗಳಿಂದ ಅವರವರು ಇರುವ ಜಾತಿಗಳಿಂದ ಕೀಳು ಜಾತಿಗಳಿಗೆ ಹೋಗುವರು. ಎಂದರೆ ವಿಶೇಷವಾಗಿ ಪಾಪಮಾಡಿದವರು ಮುಂದೆ ತಮ್ಮ ಜಾತಿಗಿಂತಲೂ ಕೀಳು ಜಾತಿಯಲ್ಲಿ ಜನಿಸುವರು. ಆದ್ದರಿಂದ ಉತ್ತಮವಾದ ಸ್ಥಿತಿಯನ್ನು ಹೊಂದಿದವನು ಅದನ್ನು ಕಾಪಾಡಿಕೊಳ್ಳಬೇಕು.

೪-೬. ಬ್ರಾಹ್ಮಣನಾದವನು ತನ್ನ ಜಾತಿಯನ್ನು ಬಿಟ್ಟು ಕ್ಷತ್ರಿಯ ಜಾತಿಯ ಸ್ತ್ರೀಯರಲ್ಲಿ ಮಕ್ಕಳನ್ನು ಪಡೆಯುವುದಾದರೇ ಅವನು ತನ್ನ ಬ್ರಾಹ್ಮಣ ಜಾತಿಯನ್ನು ಕಳೆದುಕೊಂಡು ಕ್ಷತ್ರಿಯ ಜಾತಿಗೆ ಸೇರಿದವನಾಗುವನು. ಈ ವಿಧವಾದ ಅಧರ್ಮ ಕಾರ್ಯ ಮಾಡುವವನು ಸಾವಿರ ಜನ್ಮಗಳವರುವಿಗೂ ಹಾಗೆಯೇ ಇರಬೇಕಾಗುವುದು. ಆದ್ದರಿಂದ ಉತ್ತಮವಾದ ಸ್ಥಾನವನ್ನು ಹೊಂದಿರುವವನು ಅದನ್ನು ಕಳೆದುಕೊಳ್ಳಬಾರದು. ಉತ್ತಮ ಜಾತಿಯಲ್ಲಿ ಜನಿಸಿದ ಮನುಷ್ಯನು ತನಗೆ ಎಷ್ಟೇ ವಿಪತ್ತು ಒದಗಿದರೂ ಯಾವಾಗಲೂ ತನ್ನ ಸ್ಥಾನಮಾನಗಳನ್ನು ಕಾಪಾಡಿಕೊಳ್ಳಬೇಕು.

೭-೧೧. ಬ್ರಾಹ್ಮಣನಾಗಿ ಹುಟ್ಟಿ ಉತ್ತಮವಾದ ಆ ಜಾತಿಯ ಧರ್ಮಗಳನ್ನು ನಡೆಸುವುದು ಅವಮಾನವೆಂದು ತಿಳಿಯುವುದೂ, ಅಥವಾ ತನ್ನ ಜಾತಿಗೇ ಅವಮಾನ

**ಕರ್ಮಣಾ ಯೇನ ಮೇಧಾವೀ ಶೂದ್ರೋ ವೈಶ್ಯೋ ಹಿ ಜಾಯತೇ ।**
**ತತ್ತೇ ವಕ್ಷ್ಯಾಮಿ ನಿಖಿಲಂ ಯೇನ ವರ್ಣೋತ್ತಮೋ ಭವೇತ್ ॥ ೮ ॥**

**ಶೂದ್ರಕರ್ಮ ಯಥೋದ್ದಿಷ್ಟಂ ಶೂದ್ರೋ ಭೂತ್ವಾ ಸಮಾಚರೇತ್ ।**
**ಯಥಾವತ್ಪರಿಚರ್ಯಾಂ ತು ತ್ರಿಷು ವರ್ಣೇಷು ನಿತ್ಯದಾ ॥ ೯ ॥**

**ಕುರುತೇ ಕಾಮಯಾನಸ್ತು ಶೂದ್ರೋಽಪಿ ವೈಶ್ಯತಾಂ ವ್ರಜೇತ್ ।**
**ಯೋ ಯೋಜಯೇದ್ಧನೈರ್ವೈಶ್ಯೋ ಜುಹ್ವಾನಶ್ಚ ಯಥಾವಿಧಿ ॥ ೧೦ ॥**

**ಅಗ್ನಿಹೋತ್ರಮುಪಾದಾಯ ಶೇಷಾನ್ನಕೃತಭೋಜನಃ ।**
**ಸ ವೈಶ್ಯಃ ಕ್ಷತ್ರಿಯಕುಲೇ ಜಾಯತೇ ನಾತ್ರ ಸಂಶಯಃ ॥ ೧೧ ॥**

**ಕ್ಷತ್ರಿಯೋ ಜಾಯತೇ ಯಜ್ಞೈಸ್ಸಂಸ್ಕೃತೈರಾತ್ತದಕ್ಷಿಣೈಃ ।**
**ಅಧೀತೆ ಸ್ವರ್ಗಮನ್ವಿಚ್ಛಂಸ್ತ್ರೇತಾಗ್ನಿಶರಣಂ ಸದಾ ॥ ೧೨ ॥**

ಮಾಡುವುದೂ, ಬ್ರಾಹ್ಮಣನು ತಿನ್ನಲು ಯೋಗ್ಯವಲ್ಲದ ವಸ್ತುಗಳನ್ನು ತಿನ್ನುವುದೂ ಮೊದಲಾದ ನೀಚಕೃತ್ಯಗಳನ್ನು ಮಾಡಿದರೆ ಅವನು ಕ್ಷತ್ರಿಯನಾಗುವನು. ಬುದ್ಧಿವಂತನಾದ ಶೂದ್ರನು ತನಗಿಂತಲೂ ಉತ್ತಮವರ್ಣವಾದ ವೈಶ್ಯನಾಗುವುದಕ್ಕೆ ಯಾವ ಯಾವ ಕೆಲಸಗಳನ್ನು ಮಾಡಬೇಕೆಂಬುದನ್ನು ಹೇಳುವೆನು. ಶೂದ್ರನಾದವನು ತನಗೆ ಉಚಿತವಾದ ಕರ್ಮವನ್ನು ಮಾಡಬೇಕು ಎಂದರೆ, ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ತನಗಿಂತಲೂ ಉತ್ತಮ ವರ್ಣದವರಾದ ಬ್ರಾಹ್ಮಣ ಕ್ಷತ್ರಿಯ ವೈಶ್ಯರ ಸೇವೆಯನ್ನು ದಿನವಹಿಯಲ್ಲಿಯೂ ಮಾಡುತ್ತಾ ನಿಷ್ಕಾಮದಿಂದ ಇದ್ದಲ್ಲಿ ವೈಶ್ಯನಾಗುವನು. ವೈಶ್ಯನಾದವನು ಶಾಸ್ತ್ರಕ್ರಮಗಳಿಂದ ಎಂದರೆ ನ್ಯಾಯಾರ್ಜಿತವಾದ ಧನವನ್ನು ಉಪಯೋಗಿಸಿಕೊಂಡು ಹೋಮವನ್ನು ಮಾಡುತ್ತಾ ಅಗ್ನಿಹೋತ್ರಿಯಾಗಿ, ವೈಶ್ವದೇವ ಬಲಿಹರಣಗಳ ಶೇಷಾನ್ನವನ್ನು ಊಟಮಾಡುತ್ತಾ ಬಂದರೆ ಅವನು ಕ್ಷತ್ರಿಯ ಕುಲದಲ್ಲಿ ಹುಟ್ಟುವುದರಲ್ಲಿ ಸಂಶಯವಿಲ್ಲ.

೧೨-೧೪. ಕ್ಷತ್ರಿಯನಾದವನು ಆಯಾಯ ಯಜ್ಞಗಳಿಗೆ ತಕ್ಕ ದಕ್ಷಿಣೆಗಳಿಂದ ಯಜ್ಞಗಳನ್ನು ಸರಿಯಾಗಿ ಆಚರಿಸಬೇಕು. ಯಾವಾಗಲೂ ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ ಎಂಬ ಮೂರು ಅಗ್ನಿಗಳನ್ನು ಸೇವಿಸುವವನಾಗಿರಬೇಕು. ಸ್ವರ್ಗದಲ್ಲಿ ಅಪೇಕ್ಷೆಯುಳ್ಳವನಾಗಿ ವೇದಗಳನ್ನು ಅಧ್ಯಯನಮಾಡಬೇಕು. ಯಾವಾ

ಆರ್ದ್ರಹಸ್ತಪದೋ ನಿತ್ಯಂ ಕ್ಷಿತಿಂ ಧರ್ಮೇಣ ಪಾಲಯೇತ್ ।
ಋತುಕಾಲಾಭಿಗಾಮೀ ಚ ಸ್ವಭಾರ್ಯಾಂ ಧರ್ಮತತ್ಪರಃ ॥ ೧೩ ॥

ಸರ್ವಾತಿಥ್ಯಂ ತ್ರಿವರ್ಗಸ್ಯ ಭೂತೇಭ್ಯೋ ದೀಯತಾಮಿತಿ ।
ಗೋಬ್ರಾಹ್ಮಣಾತ್ಮನೋಽರ್ಥಂ ಹಿ ಸಂಗ್ರಾಮಾಭಿಹತೋ ಭವೇತ್ ॥ ೧೪ ॥

ತೇನಾಗ್ನಿಮಂತ್ರಪೂತಾತ್ಮಾ ಕ್ಷತ್ರಿಯೋ ಬ್ರಾಹ್ಮಣೋ ಭವೇತ್ ।
ವಿಧಿತೋ ಬ್ರಾಹ್ಮಣೋ ಭೂತ್ವಾ ಯಾಜಕಸ್ತು ಪ್ರಜಾಯತೇ ॥ ೧೫ ॥

ಸ್ವಕರ್ಮನಿರತೋ ನಿತ್ಯಂ ಸತ್ಯವಾದೀ ಜಿತೇಂದ್ರಿಯಃ ।
ಪ್ರಾಪ್ಯತೇ ವಿಪುಲಸ್ಸ್ವರ್ಗೋ ದೇವಾನಾಮಪಿ ವಲ್ಲಭಃ ॥ ೧೬ ॥

ಬ್ರಾಹ್ಮಣತ್ವಂ ಹಿ ದುಷ್ಪ್ರಾಪ್ಯಂ ಕೃಚ್ಛ್ರೇಣ ಸಾಧ್ಯತೇ ನರೈಃ ।
ಬ್ರಾಹ್ಮಣ್ಯಾ ಸಕಲಂ ಪ್ರಾಪ್ಯಂ ಮೋಕ್ಷಶ್ಚಾಪಿ ಮುನೀಶ್ವರ ॥ ೧೭ ॥

---

ಗಲೂ ಕೈಕಾಲುಗಳನ್ನು ತೊಳೆದುಕೊಂಡು ಪರಿಶುದ್ಧನಾಗಿರಬೇಕು. (ಭೂಮಿಯನ್ನು) ರಾಜ್ಯವನ್ನು ಧರ್ಮದಿಂದ ಕಾಪಾಡಬೇಕು. ಧರ್ಮವನ್ನು ಆಚರಿಸುವುದರಲ್ಲಿ ಆಸಕ್ತನಾಗಿ ತನ್ನ ಭಾರ್ಯೆಯಲ್ಲಿಯೇ ತೃಪ್ತನಾಗಿ ಋತುಕಾಲದಲ್ಲಿ ಮಾತ್ರ ಅವಳನ್ನು ಭೋಗಿಸುತ್ತಿರಬೇಕು. ಎಲ್ಲರಿಗೂ ಆತಿಥ್ಯವನ್ನು ಮಾಡುತ್ತಾ ಗೋವುಗಳು, ಬ್ರಾಹ್ಮಣರು, ಮತ್ತು ತನಗೂ ಎಲ್ಲಾ ಪ್ರಾಣಿಗಳಿಗೂ, ಧರ್ಮ ಕಾಮ ಅರ್ಥಗಳನ್ನು ಸಾಧಿಸಲು ಅನುಕೂಲವಾದ ಮಾರ್ಗಗಳನ್ನು ಕಲ್ಪಿಸಿಕೊಡಬೇಕು. ಬ್ರಾಹ್ಮಣರಿಗಾಗಿಯೂ ತನಗಾಗಿಯೂ ಯುದ್ಧವನ್ನು ಮಾಡಬೇಕಾದ ಸಂದರ್ಭ ಒದಗಿದರೆ ಯುದ್ಧಮಾಡಲು ಹಿಂತೆಗೆಯಬಾರದು.

೧೫-೧೬. ಕ್ಷತ್ರಿಯನು ಈರೀತಿ ಇದ್ದರೆ ಅಗ್ನಿಸೇವನೆಯಿಂದಲೂ, ಮಂತ್ರಜಪದಿಂದಲೂ, ಪರಿಶುದ್ಧನಾಗಿ ಬ್ರಾಹ್ಮಣನಾಗಿ ಹುಟ್ಟುವನು. ಬ್ರಾಹ್ಮಣನಾದವನು ತನ್ನ ಧರ್ಮದಿಂದ ಯಜ್ಞಮಾಡಿಸುವವನಾಗುವನು. ಅವನು ಯಾವಾಗಲೂ ತನ್ನ ಕರ್ಮದಲ್ಲಿ ಆಸಕ್ತನಾಗಿ ಸತ್ಯವನ್ನು ಹೇಳುವವನಾಗಿಯೂ ಜಿತೇಂದ್ರಿಯನಾಗಿಯೂ ಇದ್ದಲ್ಲಿ ವಿಸ್ತಾರವಾದ ಸ್ವರ್ಗವನ್ನು ಹೊಂದಿ ಅಲ್ಲಿ ದೇವತೆಗಳಿಗೆ ಪ್ರೀತಿಪಾತ್ರನಾಗುವನು.

೧೭-೧೮. ಬ್ರಾಹ್ಮಣನಾಗಿ ಹುಟ್ಟುವುದು ಬಹು ಕಷ್ಟವು. ಮನುಷ್ಯರು ಅದನ್ನು ಕಷ್ಟಪಟ್ಟು ಸಾಧಿಸಬೇಕಾಗಿರುವುದು. ಬ್ರಾಹ್ಮಣಧರ್ಮದಿಂದ ಎಲ್ಲವನ್ನೂ

ತಸ್ಮಾತ್ಸರ್ವಪ್ರಯತ್ನೇನ ಬ್ರಾಹ್ಮಣೋ ಧರ್ಮತತ್ಪರಃ ।
ಸಾಧನಂ ಸರ್ವವರ್ಗಸ್ಯ ರಕ್ಷೇದ್ಬ್ರಾಹ್ಮಣ್ಯಮುತ್ತಮಂ ॥ ೧೮ ॥

॥ ವ್ಯಾಸ ಉವಾಚ ॥

ಸಂಗ್ರಾಮಸ್ಯೇಹ ಮಾಹಾತ್ಮ್ಯಂ ತ್ವಯೋಕ್ತಂ ಮುನಿಸತ್ತಮ ।
ಏತದಿಚ್ಛಾಮ್ಯಹಂ ಶ್ರೋತುಂ ಬ್ರೂಹಿ ತ್ವಂ ವದತಾಂ ವರ ॥ ೧೯ ॥

॥ ಸನತ್ಕುಮಾರ ಉವಾಚ ॥

ಅಗ್ನಿಷ್ಟೋಮಾದಿಭಿರ್ಯಜ್ಞೈರಿಷ್ಟ್ವಾ ವಿಪುಲದಕ್ಷಿಣೈಃ ।
ನ ತತ್ಫಲಮವಾಪ್ನೋತಿ ಸಂಗ್ರಾಮೇ ಯದವಾಪ್ನುಯಾತ್ ॥ ೨೦ ॥

ಇತಿ ತತ್ತ್ವವಿದಃ ಪ್ರಾಹುರ್ಯಜ್ಞಕರ್ಮವಿದಸ್ಸದಾ ।
ತಸ್ಮಾತ್ತತ್ತೇ ಪ್ರವಕ್ಷ್ಯಾಮಿ ಯತ್ಫಲಂ ಶಾಸ್ತ್ರಜೀವಿನಾಂ ॥ ೨೧ ॥

ಹೊಂದಬಹುದು. ಮೋಕ್ಷವೂ ಸಿಕ್ಕುವುದು. ಆದ್ದರಿಂದ ಬ್ರಾಹ್ಮಣನು ವಿಶೇಷ ಪ್ರಯತ್ನದಿಂದ ತನ್ನ ಧರ್ಮಾಚರಣೆಯಲ್ಲಿ ಆಸಕ್ತನಾಗಿ ನಾಲ್ಕು ಪುರುಷಾರ್ಥಗಳಿಗೂ ಸಾಧಕವಾದ ತನ್ನ ಶ್ರೇಷ್ಠವಾದ ಬ್ರಾಹ್ಮಣಧರ್ಮವನ್ನು ರಕ್ಷಿಸಿಕೊಳ್ಳಬೇಕು.

೧೯. ವ್ಯಾಸನು ಮತ್ತೆ ಕೇಳಿದನು :—ಎಲೈ ಪ್ರಾಜ್ಞನೇ, ಕೇಳಿದ್ದನ್ನು ಸರಿಯಾಗಿ ಹೇಳುವವರಲ್ಲಿ ನೀನು ಶ್ರೇಷ್ಠನು. ನೀನು ಯುದ್ಧದ ಮಹಿಮೆಯನ್ನು ಸ್ವಲ್ಪಮಟ್ಟಿಗೆ ಹೇಳಿರುತ್ತೀಯೆ. ಅದನ್ನು ಕೇಳಲು ನನಗೆ ಇಚ್ಛೆಯಿರುವುದರಿಂದ ಅದನ್ನೇ ವಿಸ್ತರಿಸಿ ಹೇಳು ಎಂದನು.

೨೦. ಸನತ್ಕುಮಾರನಿಂತೆಂದನು :—ಸರಿಯಾದ ದಕ್ಷಿಣೆಗಳಿಂದ ಅಗ್ನಿಷ್ಟೋಮವೇ ಮೊದಲಾದ ಯಜ್ಞಗಳನ್ನು ಮಾಡಿದವನೂ ಸಹ ನ್ಯಾಯವನ್ನನುಸರಿಸಿ ಸರಿಯಾಗಿ ಯುದ್ಧಮಾಡಿದವನ ಫಲವನ್ನು ಹೊಂದಲು ಸಾಧ್ಯವಿಲ್ಲ.

೨೧. ಯಜ್ಞಕರ್ಮಗಳನ್ನು ತಿಳಿದವರೂ, ತತ್ತ್ವಗಳನ್ನು ಬಲ್ಲವರೂ ಕೂಡ ಹೀಗೆಯೇ ಹೇಳುವರು. ಆದ್ದರಿಂದ ಆಯುಧಗಳನ್ನು ಧರಿಸಿ ಅದರಿಂದಲೇ ಜೀವನವನ್ನು ಮಾಡುವವರಿಗೆ ಉಂಟಾಗುವ ಗತಿಯನ್ನು ಹೇಳುವೆನು ಕೇಳು.

ಧರ್ಮಲಾಭೋಽರ್ಥಲಾಭಶ್ಚ ಯಶೋಲಾಭಸ್ತಥೈವ ಚ ।
ಯಶ್ಶೂರೋ ವಾಂಛತೇ ಯುದ್ಧಂ ವಿಮೃದನ್ಪರವಾಹಿನೀಂ ॥ ೨೨ ॥

ತಸ್ಯ ಧರ್ಮಾರ್ಥಕಾಮಾಶ್ಚ ಯಜ್ಞಾಶ್ಚೈವ ಸದಕ್ಷಿಣಾಃ ।
ಪರಂ ಹ್ಯಭಿಮುಖಂ ದತ್ವಾ ತದ್ಯಾನಂ ಯೋಽಧಿರೋಹತಿ ॥ ೨೩ ॥

ವಿಷ್ಣುಲೋಕೇ ಸ ಜಾಯೇತ ಯಶ್ಚ ಯುದ್ಧೇಽಪರಾಜಿತಃ ।
ಅಶ್ವಮೇಧಾನವಾಪ್ನೋತಿ ಚತುರೋ ನ ಮೃತಸ್ಸ ಚೇತ್ ॥ ೨೪ ॥

ಯಸ್ತು ಶಸ್ತ್ರಮನುತ್ಸೃಜ್ಯ ಮ್ರಿಯತೇ ವಾಹಿನೀಮುಖೇ ।
ಸಂಮುಖೋ ವರ್ತತೇ ಶೂರಸ್ಸ ಸ್ವರ್ಗಾನ್ನ ನಿವರ್ತತೇ ॥ ೨೫ ॥

ರಾಜಾ ವಾ ರಾಜಪುತ್ರೋ ವಾ ಸೇನಾಪತಿರಥಾಪಿ ವಾ ।
ಹತಃ ಕ್ಷಾತ್ರೇಣ ಯಃ ಶೂರಸ್ತಸ್ಯ ಲೋಕೋಽಕ್ಷಯೋ ಭವೇತ್ ॥ ೨೬ ॥

೨೨. ಯುದ್ಧಮಾಡುವವರಿಗೆ ಧರ್ಮವೂ, ದ್ರವ್ಯವೂ, ಕೀರ್ತಿಯೂ ಲಭಿಸುವವು. ಶತ್ರುಸೇನೆಯನ್ನು ನಾಶಮಾಡಲಪೇಕ್ಷಿಸುವ ಶೂರನು ಯುದ್ಧವನ್ನು ಅಪೇಕ್ಷಿಸುತ್ತಿರುವನು. ಅವನಿಗೆ ಶತ್ರುವು ಎದುರಾಗಿರುವ ಕಾಲದಲ್ಲಿ ಆ ಶತ್ರುವನ್ನು ನಾಶಮಾಡಿ ಅವನ ವಾಹನವನ್ನು ತಾನು ಏರುವುದರಿಂದ ಧರ್ಮವೂ, ದ್ರವ್ಯವೂ ಉಂಟಾಗುವುದಲ್ಲದೇ ಕಾಮವೆಂಬ ಪುರುಷಾರ್ಥವೂ ಉಂಟಾಗುವುದು. ಇದಲ್ಲದೇ ದಕ್ಷಿಣೆಯನ್ನು ಕೊಟ್ಟು ಯಜ್ಞವನ್ನು ಮಾಡಿದ ಫಲವೂ ಬರುವುದು.

೨೩. ಯುದ್ಧದಲ್ಲಿ ಗೆದ್ದವನು ವಿಷ್ಣುಲೋಕವನ್ನು ಹೊಂದುವನು. ಧರ್ಮಯುದ್ಧದಲ್ಲಿ ಮರಣವನ್ನು ಹೊಂದದೇ ಇರುವವನು. ಅಶ್ವಮೇಧಯಜ್ಞದ ಫಲವನ್ನು ಹೊಂದುವನು.

೨೪-೨೬. ಯುದ್ಧದಲ್ಲಿ ಸೇನೆಯ ಮುಂದುಗಡೆಯಲ್ಲಿ ನಿಂತುಕೊಂಡು ಆಯುಧಗಳನ್ನು ಕೆಳಗಿಡದೆ ಯುದ್ಧವನ್ನು ಮಾಡಿ ಮೃತನಾಗುವವನು ಸ್ವರ್ಗವನ್ನು ಸೇರುವನು. ಅವನು ಅಲ್ಲಿಂದ ಕೆಳಕ್ಕೆ ಇಳಿಯುವುದಿಲ್ಲ. ರಾಜನಾಗಲೀ ರಾಜಪುತ್ರನಾಗಲೀ ಸೇನಾಧಿಪತಿಯೇ ಆಗಲಿ ಕ್ಷತ್ರಿಯಧರ್ಮದಿಂದ ಯುದ್ಧಮಾಡಿದ ಶೂರನಾದವನಿಗೆ ಉಂಟಾಗುವ ಲೋಕವು ನಾಶವಿಲ್ಲದ್ದಾಗಿರುವುದು.

ಯಾವಂತಿ ತಸ್ಯ ರೋಮಾಣಿ ಭಿದ್ಯಂತೇಽಸ್ತ್ರೈರ್ಮಹಾಹವೇ ।
ತಾವತೋ ಲಭತೇ ಲೋಕಾನ್ಸರ್ವಕಾಮದುಘಾನ್ಯಕ್ಷಯಾನ್ ॥ ೨೭ ॥

ವೀರಾಸನಂ ವೀರಶಯ್ಯಾ ವೀರಸ್ಥಾನಸ್ಥಿತಿಃ ಸ್ಥಿರಾ ।
ಸರ್ವದಾ ಭವತಿ ವ್ಯಾಸ ಇಹ ಲೋಕೇ ಪರತ್ರ ಚ ॥ ೨೮ ॥

ಗವಾರ್ಥೇ ಬ್ರಾಹ್ಮಣಾರ್ಥೇ ಚ ಸ್ಥಾನಸ್ವಾಮ್ಯರ್ಥಮೇವ ಚ ।
ಯೇ ಮೃತಾಸ್ತೇ ಸುಖಂ ಯಾಂತಿ ಯಥಾ ಸುಕೃತಿನಸ್ತಥಾ ॥ ೨೯ ॥

ಯಃ ಕಶ್ಚಿದ್ಬ್ರಾಹ್ಮಣಂ ಹತ್ವಾ ಪಶ್ಚಾತ್ಪ್ರಾಣಾನ್ಪರಿತ್ಯಜೇತ್ ।
ತತ್ರಾಸೌ ಸ್ವಪತೇರ್ಯುದ್ಧೇ ಸ ಸ್ವರ್ಗಾನ್ನ ನಿವರ್ತತೇ ॥ ೩೦ ॥

ಕ್ರವ್ಯಾದೈರ್ದಂತಿಭಿಶ್ಚೈವ ಹತಸ್ಯ ಗತಿರುತ್ತಮಾ ।
ದ್ವಿಜಗೋಸ್ವಾಮಿನಾಮರ್ಥೇ ಭವೇದ್ವಿಪುಲದಾಕ್ಷಯಾ ॥ ೩೧ ॥

೨೭-೨೮. ಯುದ್ಧದಲ್ಲಿ ಆಯುಧಪ್ರಹಾರಗಳಿಂದ ಶೂರನಾದವನ ಎಷ್ಟು ರೋಮಗಳು ಕತ್ತರಿಸಲ್ಪಡುವವೋ, ಸರ್ವಾಭೀಷ್ಟಗಳನ್ನು ಕೊಡುವ ಉತ್ತಮವಾದ ಅಷ್ಟು ಲೋಕಗಳನ್ನು, ಯುದ್ಧದಲ್ಲಿ ಆಯುಧಗಳಿಂದ ಶರೀರವನ್ನು ಕಳೆದುಕೊಂಡವನು ಹೊಂದುವನು. ಯುದ್ಧಮಾಡುವವನಿಗೆ ವೀರಾಸನವೂ, ವೀರಶಯ್ಯೆಯೂ, ಸ್ಥಿರವಾಗಿರುವ ವೀರನ ಸ್ಥಿತಿಯೂ, ಇಲ್ಲಿಯೂ ಪರಲೋಕದಲ್ಲಿಯೂ ಸಿಕ್ಕುವುವು.

೨೯-೩೦. ಗೋಬ್ರಾಹ್ಮಣರಿಗಾಗಿಯೂ, ತಮ್ಮ ಸ್ಥಾನಮಾನಗಳಿಗಾಗಿಯೂ ಯುದ್ಧಮಾಡಿ ಮರಣವನ್ನು ಹೊಂದುವವರು, ಪುಣ್ಯವಂತರು ಹೊಂದುವ ಗತಿಯನ್ನು ಹೊಂದುವರು. ತನ್ನ ರಾಜನಿಗಾಗಿ ಯುದ್ಧಮಾಡುವವನು ಯುದ್ಧದಲ್ಲಿ ಬ್ರಾಹ್ಮಣನನ್ನು ಕೊಂದು ನಂತರ ತಾನೇ ಮರಣವನ್ನು ಹೊಂದಿದರೂ ಸ್ವರ್ಗದಿಂದ ಹಿಂತಿರುಗುವುದಿಲ್ಲ.

೩೧. ಮಾಂಸವನ್ನು ತಿನ್ನುವ ಹಕ್ಕಿಗಳಿಂದಲಾಗಲೀ ಆನೆಗಳಿಂದಲಾಗಲೀ ಮರಣವನ್ನು ಹೊಂದಿದವರಿಗೆ ಉತ್ತಮವಾದ ಗತಿಯು ಉಂಟಾಗುವುದು. ಬ್ರಾಹ್ಮಣರು ಗೋವುಗಳು ಮತ್ತು ತಮ್ಮ ರಾಜನು ಇವರಿಗಾಗಿ ಮರಣವನ್ನು ಹೊಂದುವವನು. ಬಹಳ ಕಾಲದವರೆಗೆ ಉತ್ತಮವಾದ ಲೋಕವನ್ನು ಹೊಂದುವನು.

ಶಕ್ಯೋಽಸ್ತಿಹ ಸಮರ್ಥಶ್ಚ ಯಷ್ಟುಂ ಕ್ರತುಶತೈರಪಿ ।
ಆತ್ಮದೇಹಪರಿತ್ಯಾಗಃ ಕರ್ತುಂ ಯುಧಿ ಸುದುಷ್ಕರಃ ॥ ೩೨ ॥

ಯುದ್ಧಂ ಪುಣ್ಯತಮಂ ಸ್ವರ್ಗ್ಯಂ ರೂಪಜ್ಞಂ ಸರ್ವತೋಮುಖಂ ।
ಸರ್ವೇಷಾಮೇವ ವರ್ಣಾನಾಂ ಕ್ಷತ್ರಿಯಸ್ಯ ವಿಶೇಷತಃ ॥ ೩೩ ॥

ಭೃಶಂ ಚೈವ ಪ್ರವಕ್ಷ್ಯಾಮಿ ಯುದ್ಧಧರ್ಮಂ ಸನಾತನಂ ।
ಯಾದೃಶಾಯ ಪ್ರಹರ್ತವ್ಯಂ ಯಾದೃಶಂ ಪರಿವರ್ಜಯೇತ್ ॥ ೩೪ ॥

ಆತತಾಯಿನಮಾಯಾಂತಮಪಿ ವೇದಾಂತಗಂ ದ್ವಿಜಂ ।
ಜಿಘಾಂಸಂತಂ ಜಿಘಾಂಸೇತ್ತು ನ ತೇನ ಬ್ರಹ್ಮಹಾ ಭವೇತ್ ॥ ೩೫ ॥

ಹಂತಾಸ್ಯಸೌ ನ ಹಂತವ್ಯಃ ಪಾನೀಯಂ ಯಶ್ಚ ಯಾಚತೇ ।
ರಣೇ ಹತ್ವಾತುರಾನ್ಯಸ್ಯ ಸ ನರೋ ಬ್ರಹ್ಮಹಾ ಭವೇತ್ ॥ ೩೬ ॥

೩೨-೩೩. ಸಾಮರ್ಥ್ಯವಿರುವವನು ಅನೇಕ ವಿಧವಾದ ಯಜ್ಞಗಳನ್ನಾದರೂ ಮಾಡಬಹುದು. ಆದರೆ ಯುದ್ಧದಲ್ಲಿ ತನ್ನ ಶರೀರವನ್ನು ತ್ಯಾಗಮಾಡುವುದು ಕಷ್ಟತರವಾಗಿರುವುದು. ಯುದ್ಧವೆಂಬುದು ಪುಣ್ಯವನ್ನುಂಟುಮಾಡಿಕೊಡುವುದು, ಸ್ವರ್ಗವನ್ನುಂಟುಮಾಡುವುದು, ಶರೀರಕ್ಕೆ ಕಾಂತಿಯನ್ನುಂಟುಮಾಡಿಕೊಡುವುದು. ಎಲ್ಲಾ ಜಾತಿಯವರಿಗೂ ಮೇಲೆ ಹೇಳಿದ ಫಲವು ದೊರಕುವುದಾದರೂ ಕ್ಷತ್ರಿಯನಿಗೆ ಯುದ್ಧದಲ್ಲಿ ಫಲವು ಹೆಚ್ಚಾಗಿರುವುದು.

೩೪-೩೫. ಇನ್ನು ಯುದ್ಧಧರ್ಮವನ್ನು ಹೇಳುವೆನು:—ಧರ್ಮದಿಂದ ಯುದ್ಧದಲ್ಲಿ ಯಾರನ್ನು ಕೊಲ್ಲಬೇಕು ಯಾರನ್ನು ಬಿಡಬೇಕು ಎಂಬ ವಿಷಯವನ್ನು ಚೆನ್ನಾಗಿ ಹೇಳುವೆನು. ಯುದ್ಧದಲ್ಲಿ ಆಯುಧವನ್ನು ಹಿಡಿದುಕೊಂಡು ತನ್ನನ್ನು ಕೊಲ್ಲಲು ಬರುತ್ತಿರುವವನು, ವೇದಾಂತವನ್ನು ತಿಳಿದಿರುವ ಬ್ರಾಹ್ಮಣನೇ ಆದಾಗ್ಯೂ ತನ್ನನ್ನು ಕೊಲ್ಲುವ ಇಚ್ಛೆಯಿಂದ ಬಂದಕಾರಣ ಅವನನ್ನು ಖಂಡಿತವಾಗಿಯೂ ಕೊಂದುಬಿಡಬೇಕು. ಇದರಿಂದ ಬ್ರಹ್ಮಹತ್ಯಾ ದೋಷವು ಬರುವುದಿಲ್ಲ.

೩೬-೩೭. ಯುದ್ಧದಲ್ಲಿ ತನ್ನನ್ನು ಆಯುಧಗಳಿಂದ ಪ್ರಹರಿಸಿದವನೂ ಸಹ ವಿಪತ್ತಿಗೆ ಸಿಕ್ಕಿಕೊಂಡು ನೀರು ಬೇಕೆಂದು ದೈನ್ಯದಿಂದ ಕೇಳುತ್ತಿರುವಾಗ ಅವನನ್ನು ಕೊಲ್ಲಬಾರದು. ಯುದ್ಧದಲ್ಲಿ ಗಾಯಗೊಂಡು ನರಳುತ್ತಿರುವವರನ್ನು ಕೊಂದರೆ

ವ್ಯಾಧಿತಂ ದುರ್ಬಲಂ ಬಾಲಂ ಸ್ತ್ರೀನಾಥಂ ಕೃಪಣಂ ಧ್ರುವಂ
ಧನುರ್ಭಗ್ನಂ ಛಿನ್ನಗುಣಂ ಹತ್ವಾ ವೈ ಬ್ರಹ್ಮಹಾ ಭವೇತ್ ॥ ೩೭ ॥

ಏವಂ ವಿಚಾರ್ಯ ಸದ್ಧೀಮಾನ್ಸ್ವೇಷ್ಟಿ ್ರೀತ್ಯಾ ರಣಪ್ರಿಯಃ ।
ಸ ಜನ್ಮನಃ ಫಲಂ ಪ್ರಾಪ್ಯ ಪರತ್ರೇಹ ಪ್ರಮೋದತೇ ॥ ೩೮ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ರಣಫಲವರ್ಣನಂ ನಾಮೈಕವಿಂಶೋಽಧ್ಯಾಯಃ



ಆದರಿಂದ ಬ್ರಹ್ಮಹತ್ಯಾ ದೋಷವು ಬರುವುದು. ಆಯುಧದಿಂದ ಪೆಟ್ಟುತಗಲಿ ರೋಗವುಳ್ಳವನೂ, ಬಲಹೀನನೂ, ಹುಡುಗನಾದವನೂ, ಹೆಂಗಸರ ಜೊತೆಯಲ್ಲಿರುವವನೂ, ಕೃಪಣನಾದವನೂ, ಹೆದರುವವನೂ, ಬಿಲ್ಲಾಗಲೀ, ಬಿಲ್ಲಿನ ಹೆದೆಯಾಗಲೀ ಕತ್ತರಿಸಿ ಹೋಗಿ ಯುದ್ಧಮಾಡಲು ಆಯುಧವಿಲ್ಲದೆ ದುರ್ಬಲನಾಗಿರುವವನೂ ಇವರೆಲ್ಲರನ್ನೂ ಕೊಲ್ಲಬಾರದು. ಇವರುಗಳನ್ನು ಕೊಂದರೆ ಬ್ರಹ್ಮಹತ್ಯಾ ದೋಷವು ಬರುವುದು.

೩೮. ಆದುದರಿಂದ ಬುದ್ಧಿವಂತನಾದವನು ಹೀಗೆಲ್ಲಾ ಚೆನ್ನಾಗಿ ಯೋಚಿಸಿ ಧರ್ಮಯುದ್ಧದಲ್ಲಿ ಆಸಕ್ತನಾಗಿರಬೇಕು. ಧರ್ಮಸೂಕ್ಷ್ಮವನ್ನು ತಿಳಿದು ವಿಚಾರದಿಂದ ಯುದ್ಧಾಸಕ್ತನಾಗಿರುವವನಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಉತ್ತಮವಾದ ಫಲವು ಲಭಿಸಿ ಸಂತೋಷದಿಂದಿರುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಯುದ್ಧದ ಫಲವರ್ಣನವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ದ್ವಾವಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ವಿಧಿಂ ತಾತ ವದೇದಾನೀಂ ಜೀವಜನ್ಮವಿಧಾನತಃ ।
ಗರ್ಭೇ ಸ್ಥಿತಿಂ ಚ ತಸ್ಯಾಪಿ ವೈರಾಗ್ಯಾರ್ಥಂ ಮುನೀಶ್ವರ ॥ ೧ ॥

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸ ಸಮಾಸೇನ ಶಾಸ್ತ್ರಸಾರಮಶೇಷತಃ ।
ವದಿಷ್ಯಾಮಿ ಸುವೈರಾಗ್ಯಂ ಮುಮುಕ್ಷೋರ್ಭವಬಂಧಕೃತ್ ॥ ೨ ॥

### ಇಪ್ಪತ್ತೊಂದನೆಯ ಅಧ್ಯಾಯವು

೧. ವ್ಯಾಸಋಷಿಯು ಕೇಳುವನು :—ಎಲೈ ಪೂಜ್ಯನೇ, ಜೀವನು ಹೇಗೆ ಉತ್ಪತ್ತಿಯನ್ನು ಪಡೆಯುವನು ? ಜೀವನು ಗರ್ಭದಲ್ಲಿದ್ದುಕೊಂಡು ಶರೀರವನ್ನು ಹೊಂದುವ ಕ್ರಮವನ್ನೂ, ಗರ್ಭದ ಸ್ಥಿತಿಯನ್ನೂ, ಆ ಜೀವನ ಕರ್ಮಫಲಾನುಭವ ಕ್ರಮವನ್ನೂ ದಯವಿಟ್ಟು ವಿವರಿಸಿ ಹೇಳು. ಇದರಿಂದ ವೈರಾಗ್ಯವು ಸುಲಭವಾಗಿ ಜನಿಸುವುದು ಎನ್ನಲು,

೨-೫. ಸನತ್ಕುಮಾರನಿಂತೆಂದನು :—ಎಲೈ ವ್ಯಾಸನೇ, ಕೇಳು. ಶಾಸ್ತ್ರದ ಸಾರವನ್ನು ವಿಸ್ತಾರವಾಗಿ ವಿವರಿಸಿ ಹೇಳುವೆನು. ಇದು ಮುಕ್ತಿಯನ್ನು ಹೊಂದ ಲಿಚ್ಛೆಯುಳ್ಳವನಿಗೆ ಜನ್ಮಗಳ ಬಂಧನವನ್ನು ತೊಲಗಿಸುವುದು. ಅಡಿಗೆಯನ್ನು

ಪಾಕಪಾತ್ರಸ್ಯ ಮಧ್ಯೇ ತು ಪೃಥಗನ್ನಂ ಪೃಥಗ್ಜಲಂ ।
ಅಗ್ನೇರೂರ್ಧ್ವಗಂ ಜಲಂ ಸ್ಥಾಪ್ಯಂ ತದನ್ನಂ ಚ ಜಲೋಪರಿ ॥ ೩ ॥

ಜಲಸ್ಯಾಧಸ್ಸ ಚಾಗ್ನಿರ್ಹಿ ಸ್ಥಿತೋಽಗ್ನಿಂ ಧಮತೇ ಶನೈಃ ।
ವಾಯುನಾ ಧಮ್ಯಮಾನೋಽಗ್ನಿರತ್ಯುಷ್ಣಂ ಕುರುತೇ ಜಲಂ ॥ ೪ ॥

ತದನ್ನಮುಷ್ಣತೋಯೇನ ಸಮಂತಾತ್ಪಚ್ಯತೇ ಪುನಃ ।
ದ್ವಿಧಾ ಭವತಿ ತತ್ಪಕ್ವಂ ಪೃಥಕ್ಕಿಟ್ಟಂ ಪೃಥಗ್ರಸಃ ॥ ೫ ॥

ಮಲೈರ್ದ್ವಾದಶಭಿಃ ಕಿಟ್ಟಂ ಭಿನ್ನಂ ದೇಹಾದ್ಬಹಿರ್ಭವೇತ್ ।
ರಸಸ್ತು ದೇಹೇ ಸರತಿ ಸ ಪುಷ್ಟಸ್ತೇನ ಜಾಯತೇ ॥ ೬ ॥

ಕರ್ಣಾಕ್ಷಿನಾಸಿಕಾ ಜಿಹ್ವಾ ದಂತಾಃ ಶಿಶ್ನೋ ಗುದಂ ನಖಾಃ ।
ಮಲಾಶ್ರಯಃ ಕಫಃ ಸ್ವೇದೋ ವಿಣ್ಮೂತ್ರಂ ದ್ವಾದಶ ಸ್ಮೃತಾಃ ॥ ೭ ॥

ಮಾಡುವ ಪಾತ್ರೆಯಲ್ಲಿ ಮೊದಲು ಅಕ್ಕಿಯು ಬೇರೆಯಾಗಿಯೂ ನೀರು ಬೇರೆಯಾಗಿಯೂ ಇರುವುದು. ಬೆಂಕಿಯ ಮೇಲೆ ಪಾತ್ರೆಯಲ್ಲಿ ನೀರನ್ನು ಇರಿಸಿದರೆ ನೀರಿನ ಮೇಲಕ್ಕೆ ಬೆಂದ ಪದಾರ್ಥವು ಬರುವುದು. ನೀರಿನ ಕೆಳಗೆ ಬೆಂಕಿಯು ಇರುವುದು. ಅಗ್ನಿಯು ಮೆಲ್ಲಗೆ ಬೇಯುವಂತೆ ಮಾಡುವುದು. ಘಾಳಿಯಿಂದ ಅಗ್ನಿಯು ಉರಿಯುಳ್ಳದ್ದಾಗಿ ನೀರು ಬಿಸಿಯಾಗುವಂತೆ ಮಾಡುವುದು. ಆ ನೀರು ಬಹಳ ಬಿಸಿಯುಳ್ಳದ್ದಾಗಿ ಅನ್ನವು ಚೆನ್ನಾಗಿ ಆಗುವಂತೆ ಮಾಡುವುದು. ಬೇಯುವ ಕಾಲದಲ್ಲಿ ಕಶ್ಮಲವು ಬೇರೆಯಾಗಿಯೂ ರುಚಿಯಾದ ಪದಾರ್ಥವು ಬೇರೆಯಾಗಿಯೂ ಆಗುವುದು.

೬. ಇದೇ ರೀತಿಯಲ್ಲಿ ನಮ್ಮ ಶರೀರದಲ್ಲಿಯೂ ಹನ್ನೆರಡು ವಿಧವಾದ ಕಶ್ಮಲಗಳಿಂದ ಕೂಡಿದ ಮಲವು ದೇಹದಿಂದ ಹೊರಗಡೆಗೆ ಬರುತ್ತಿರುವುದು. ರುಚಿಯಾದ ಪದಾರ್ಥವು ಸಾರವಾಗಿರುವುದರಿಂದ ದೇಹದ ಎಲ್ಲಾ ಕಡೆಯಲ್ಲೂ ವ್ಯಾಪಿಸಿ ಶರೀರಕ್ಕೆ ಬಲವನ್ನು ಕೊಡುವುದರ ಮೂಲಕ ಶರೀರವನ್ನು ವೃದ್ಧಿಗೊಳಿಸುವುದು.

೭-೮. ಕಿವಿ, ಮೂಗು, ಕಣ್ಣು, ನಾಲಿಗೆ, ಹಲ್ಲುಗಳು, ಜಲಬಾಧೆಮಾಡುವ ಇಂದ್ರಿಯ, ಮಲವಿಸರ್ಜನೆಯನ್ನು ಮಾಡುವ ಇಂದ್ರಿಯ, ಉಗುರು, ದೇಹದ ಒಳಗಡೆಯಲ್ಲಿ ಮಲವು ಸೇರುವ ಪ್ರದೇಶ, ಕಫ, ಬೆವರು, ಮಲಮೂತ್ರಗಳು ಇವುಗಳಲ್ಲಿ

**ಹೃತ್ಪದ್ಮೇ ಪ್ರತಿಬದ್ಧಾಶ್ಚ ಸರ್ವನಾಡ್ಯಸ್ಸಮಂತತಃ ।**
**ಜ್ಞೇಯಾ ರಸಪ್ರವಾಹಿನ್ಯಸ್ತತ್ಪ್ರಕಾರಂ ಬ್ರುವೇ ಮುನೇ ॥ ೮ ॥**

**ತಾಸಾಂ ಮುಖೇಷು ತಂ ಸೂಕ್ಷ್ಮಂ ಪ್ರಾಣಸ್ಸ್ಥಾಪಯತೇ ರಸಂ ।**
**ರಸೇನ ತೇನ ನಾಡೀಸ್ತಾಃ ಪ್ರಾಣಂ ಪೂರಯತೇ ಪುನಃ ॥ ೯ ॥**

**ಪುನಃ ಪ್ರಯಾಂತಿ ಸಂಪೂರ್ಣಾಃ ತಾಶ್ಚ ದೇಹಂ ಸಮಂತತಃ ।**
**ತತಸ್ಸ ನಾಡೀಮಧ್ಯಸ್ಥಶ್ಶರೀರೇಣಾತ್ಮನಾ ರಸಃ ॥ ೧೦ ॥**

**ಪಚ್ಯತೇ ಪಚ್ಯಮಾನಾಚ್ಚ ಭವೇತ್ಪಾಕದ್ವಯಂ ಪುನಃ ।**
**ತ್ವಕ್ತಯಾ ವೇಷ್ಟ್ಯತೇ ಪೂರ್ವಂ ರುಧಿರಂ ಚ ಪ್ರಜಾಯತೇ ॥ ೧೧ ॥**

ಹನ್ನೆರಡು ವಿಧವಾಗಿ ಮಲವು ಉಂಟಾಗುವುದೆಂದು ನಿಶ್ಚಯಮಾಡಿರುವರು. ಹೃದಯಕಮಲದಲ್ಲಿ ಎಲ್ಲಾ ನಾಡಿಗಳೂ ಸುತ್ತಲೂ ಸೇರಿಕೊಂಡಿರುವವು. ಇವುಗಳೆಲ್ಲವೂ ರಸವನ್ನು (ಸಾರವಾದ ರಕ್ತವನ್ನು) ಎಲ್ಲಾ ಕಡೆಗೂ ವ್ಯಾಪಿಸುವ ಹಾಗೆ ಮಾಡುವವು. ಆ ಕ್ರಮವನ್ನು ಹೇಳುವೆನು.

೯-೧೧. ಪ್ರಾಣವಾಯುವು ಸೂಕ್ಷ್ಮವಾದ ರಸವನ್ನು ಆ ನಾಡಿಗಳ ಮುಂಭಾಗಕ್ಕೆ ತಂದು ಸೇರಿಸುವುದು. ಆ ನಾಡಿಗಳು ತಮ್ಮಲ್ಲಿರುವ ರಸದ ಮೂಲಕವಾಗಿ ಅದನ್ನು ಸೇರಿಸಿಕೊಂಡು ಪ್ರಾಣವಾಯುವಿಗೆ ರಸವನ್ನು ಸೇರಿಸುವುವು. ಹೀಗೆ ಮಾಡುವುದರಿಂದ ಪುನಃ ನಾಡಿಗಳು ಹಿಂದಿನಂತೆಯೇ ರಸವನ್ನು ತಾವು ಹೀರಿಕೊಂಡು ಪ್ರಾಣವಾಯುವಿನ ಮೂಲಕವಾಗಿಯೇ ದೇಹದ ಎಲ್ಲಾ ಭಾಗಗಳಿಗೂ ಸೇರುವವು. ಆದ್ದರಿಂದ ನಾಡಿಗಳ ಮಧ್ಯದಲ್ಲಿ ಇರುವ ಸಾರವಾದ ಭಾಗವು ಶರೀರದಲ್ಲಿ ತಾನಾಗಿಯೇ ಶುದ್ಧಿಯನ್ನು ಹೊಂದುವುದು. ಕೆಲವು ಅಂಶವು ಶುದ್ಧಿಯಾಗಿಯೂ ಕೆಲವು ಅಂಶವು ಶುದ್ಧಿಯಾಗತಕ್ಕವುಗಳಾಗಿಯೂ ಇರುವುದು. ಚರ್ಮವು ಚುಚ್ಚಿದ ಕೂಡಲೇ ಮೊದಲು ರಕ್ತವು ಬರುವುದು. ಆದ್ದರಿಂದಲೇ ಮೊದಲು ಆಹಾರ ಪದಾರ್ಥದ ಸಾರವಾದ ಭಾಗದಿಂದ ಮೊದಲು ರಕ್ತವು ಉಂಟಾಗುವುದು. ರಕ್ತದಿಂದಲೇ ಲೋಮಗಳು (ಸಣ್ಣ ಕೂದಲುಗಳು) ಮಾಂಸ, ದಪ್ಪಕೂದಲುಗಳು ಉಂಟಾಗುವವು. ಮಾಂಸದಿಂದಲೇ ನರಗಳು ಉಂಟಾಗುವವು.

ರಕ್ತಾಲ್ಲೋಮಾನಿ ಮಾಂಸಂ ಚ ಕೇಶಾ ಸ್ನಾಯುಶ್ಚ ಮಾಂಸತಃ ।
ಸ್ನಾಯುತಶ್ಚ ತಥಾಸ್ಥೀನಿ ನಖಾ ಮಜ್ಜಾಸ್ಥಿಸಂಭವಾಃ ॥ ೧೨ ॥

ಮಜ್ಜಾಕಾರಣವೈಕಲ್ಯಂ ಶುಕ್ರಂ ಹಿ ಪ್ರಸವಾತ್ಮಕಂ ।
ಇತಿ ದ್ವಾದಶಧಾನ್ನಸ್ಯ ಪರಿಣಾಮಃ ಪ್ರಕೀರ್ತಿತಃ ॥ ೧೩ ॥

ಶುಕ್ರೋಽನ್ನಾಜ್ಜಾಯತೇ ಶುಕ್ರಾದ್ದಿವ್ಯದೇಹಸ್ಯ ಸಂಭವಃ ।
ಋತುಕಾಲೇ ಯದಾ ಶುಕ್ರಂ ನಿರ್ದೋಷಂ ಯೋನಿಸಂಸ್ಥಿತಂ ॥ ೧೪ ॥

ತದಾ ತದ್ವಾಯುಸಂಸ್ಪೃಷ್ಟಂ ಸ್ತ್ರೀರಕ್ತೇನೈಕತಾಂ ವ್ರಜೇತ್ ।
ವಿಸರ್ಗಕಾಲೇ ಶುಕ್ರಸ್ಯ ಜೀವಃ ಕಾರಣಸಂಯುತಃ ॥ ೧೫ ॥

ಸಂವೃತಃ ಪ್ರವಿಶೇದ್ಯೋನಿಂ ಕರ್ಮಭಿಸ್ಸ್ವೈರ್ನಿಯೋಜಿತಃ ।
ತಚ್ಛುಕ್ರರಕ್ತಮೇಕಸ್ಥಮೇಕಾಹಾತ್ಕಲಿಲಂ ಭವೇತ್ ॥ ೧೬ ॥

---

೧೨-೧೩. ನರಗಳಿಂದ ಮೂಳೆಗಳು, ಉಗರು, ಇವುಗಳು ಉಂಟಾಗುವವು. ಮೂಳೆಯ ಮೇಲೆ ಎಣ್ಣೆಯಂತೆ ಜಿಡ್ಡಾಗಿರುವ ಪದಾರ್ಥವು, ಮಜ್ಜಾ ಎಂಬ ಹೆಸರಿನಿಂದ ಮೂಳೆಯಿಂದಲೇ ಉಂಟಾಗುವುದು. ಈ ಮಜ್ಜಾ ಎಂಬುದರ ವಿಕಾರವೇ ಶುಕ್ರವೆಂದು ಹೇಳಿಸಿಕೊಂಡು ಪ್ರಾಣಿಯ ಶರೀರದ ಉತ್ಪತ್ತಿಗೆ ಕಾರಣವಾದ ವೀರ್ಯ, ಧಾತು ಎಂಬ ಹೆಸರನ್ನು ಹೊಂದಿರುವುದು. ಅನ್ನದ ಪರಿಣಾಮವು ಹೀಗೆ ಹೇಳಿರುವ ಕ್ರಮದಿಂದ ಹನ್ನೆರಡು ವಿಧವಾಗಿ ಉಂಟಾಗುವುದು. ಇದನ್ನು ಹೇಳಿರುವೆನು.

೧೪. ಮೇಲೆ ಹೇಳಿದ ರೀತಿಯಲ್ಲಿ ಅನ್ನದಿಂದ ಶುಕ್ರವು (ವೀರ್ಯವು) ಉಂಟಾಗುವುದು. ಶುಕ್ರದಿಂದಲೇ ಉತ್ತಮವಾದ ಶರೀರವು ಉಂಟಾಗುವುದು.

೧೫-೧೬. ಸ್ತ್ರೀಯರು ಋತುಮತಿಯರಾದ ಕಾಲ ಮೊದಲುಗೊಂಡು ಹದಿನಾರು ದಿನಗಳು ಋತುಕಾಲವೆನಿಸುವುದು. ಈ ಋತುಕಾಲದಲ್ಲಿ ಸ್ತ್ರೀಯರ ಯೋನಿಯನ್ನು ಹೊಂದಿದ ಪರಿಶುದ್ಧವಾದ ಶುಕ್ರವಾಗಲಿ, ಶುಕ್ರದ ಸಂಬಂಧವಾದ ವಾಯುವಾಗಲಿ ಸ್ತ್ರೀಯ ಯೋನಿಯಲ್ಲಿ ಸ್ತ್ರೀಯ ರಕ್ತದೊಡನೆ ಸೇರಿದರೆ, ಭೇದವು ತಿಳಿಯದೇ ಇರುವವಮಟ್ಟಿನ ಒಂದು ಸಣ್ಣ ರೂಪವನ್ನು ಹೊಂದುವುದು. ಪುರುಷನು ರೇತಸ್ಸನ್ನು ಸ್ತ್ರೀಯೋನಿಯಲ್ಲಿ ಬಿಡುವ ವೇಳೆಯಲ್ಲಿ ಗರ್ಭಕ್ಕೆ ಸೇರಬೇಕಾಗಿರುವ ಜೀವನು ತನ್ನ ಕರ್ಮಗಳಿಂದ ಬದ್ಧನಾಗಿ ಕಾರಣಶರೀರದಿಂದ ಕೂಡಿದವನಾಗಿ ರಹಸ್ಯವಾಗಿ

ಪಂಚರಾತ್ರೇಣ ಕಲಿಲಂ ಬುದ್ಬುದಾಕಾರತಾಂ ವ್ರಜೇತ್ ।
ಬುದ್ಬುದಸ್ಸಪ್ತರಾತ್ರೇಣ ಮಾಂಸಪೇಶೀ ಭವೇತ್ಪುನಃ ॥ ೧೭ ॥

ಗ್ರೀವಾ ಶಿರಶ್ಚ ಸ್ಕಂಧೌ ಚ ಪೃಷ್ಠವಂಶಸ್ತಥೋದರಂ ।
ಪಾಣಿಪಾದಂ ತಥಾ ಪಾರ್ಶ್ವೇ ಕಟಿರ್ಗಾತ್ರಂ ತಥೈವ ಚ ॥ ೧೮ ॥

ದ್ವಿಮಾಸಾಭ್ಯಂತರೇಣೈವ ಕ್ರಮಶಸ್ಸಂಭವೇದಿಹ ।
ತ್ರಿಭಿರ್ಮಾಸೈಃ ಪ್ರಜಾಯಂತೇ ಸರ್ವೇ ಹ್ಯಂಕುರಸಂಧಯಃ ॥ ೧೯ ॥

ಮಾಸೈಶ್ಚತುರ್ಭಿರಂಗುಲ್ಯಃ ಪ್ರಜಾಯಂತೇ ಯಥಾಕ್ರಮಂ ।
ಮುಖಂ ನಾಸಾ ಚ ಕರ್ಣೌ ಚ ಮಾಸೈಃ ಪಂಚಭಿರೇವ ಚ ॥ ೨೦ ॥

ದಂತಪಂಕ್ತಿಸ್ತಥಾ ಗುಹ್ಯಂ ಜಾಯಂತೇ ಚ ನಖಾಃ ಪುನಃ ।
ಕರ್ಣಯೋಽಸ್ತು ಭವೇಚ್ಛಿದ್ರಂ ಷಣ್ಮಾಸಾಭ್ಯಂತರೇಣ ತು ॥ ೨೧ ॥

ಪಾಯುರ್ಮೇಹಮುಪಸ್ಥಂ ಚ ನಾಭಿಶ್ಚಾಭ್ಯುಪಜಾಯತೇ ।
ಸಂಧಯೋ ಯೇ ಚ ಗಾತ್ರೇಷು ಮಾಸೈರ್ಜಾಯಂತಿ ಸಪ್ತಭಿಃ ॥ ೨೨ ॥

ಯೋನಿಯನ್ನು ಸೇರುವನು. ಆ ಯೋನಿಯನ್ನು ಸೇರಿದ ರೇತಸ್ಸೂ ಯೋನಿಯೊಳಗಿನ ರಕ್ತವೂ ಒಂದು ಕಡೆಯಲ್ಲಿ ಸೇರಿ ಒಂದು ದಿನದಲ್ಲಿ ಘಟ್ಟಿಯಾದ ನೊರೆಯಾಗುವುದು. ಐದು ರಾತ್ರಿಯಲ್ಲಿ ಆ ಘಟ್ಟಿಯಾದ ನೊರೆಯು ಗುಳ್ಳೆಯಾಗುವುದು. ಅದು ಏಳು ದಿನಗಳಲ್ಲಿ ಮಾಂಸದ ಉಂಡೆಯಾಗುವುದು.

೧೮-೨೧. ಎರಡು ತಿಂಗಳಿನವಳಗಾಗಿ ಆ ಮಾಂಸದ ಉಂಡೆಯು ಕುತ್ತಿಗೆ, ತಲೆ, ಹೆಗಲು, ಬೆನ್ನಿನಮೂಳೆ, ಹೊಟ್ಟೆ, ಕೈಕಾಲು, ಎರಡು ಪಾರ್ಶ್ವಗಳು, ಸೊಂಟ ಇವುಗಳುಳ್ಳ ಶರೀರವಾಗಿ ಮಾರ್ಪಡುವುದು. ಮೂರನೆಯ ತಿಂಗಳಿನಲ್ಲಿ ಆಯಾಯ ಅವಯವಗಳ ಸಂಧಿಗಳು, ಅಂಕುರಗಳು ಬೇರೆಬೇರೆಯಾಗುವುವು. ನಾಲ್ಕನೆಯ ತಿಂಗಳಿನಲ್ಲಿ ಬೆರಳುಗಳು ಕ್ರಮವಾಗಿ ಬೆಳೆಯುವವು. ಆರನೆಯ ತಿಂಗಳಿನಲ್ಲಿ ಮುಖ, ಮೂಗು, ಕಿವಿಗಳು, ಹಲ್ಲಿನಸಾಲು, ಗುಹ್ಯೇಂದ್ರಿಯ, ಉಗರುಗಳು, ಕಿವಿಯ ರಂಧ್ರಗಳು ಇವುಗಳು ಬೆಳೆಯುವವು.

೨೨-೨೩. ಏಳನೆಯ ತಿಂಗಳಿನಲ್ಲಿ ಮಲವಿಸರ್ಜನೆಯನ್ನು ಮಾಡುವ ಪ್ರದೇಶ, ಉಪಸ್ಥೇಂದ್ರಿಯ, ನಾಭಿ, ಶರೀರದ ಸಂಧಿಪ್ರದೇಶಗಳು ಇವುಗಳು ಆಗುವವು.

ಅಂಗಪ್ರತ್ಯಂಗಸಂಪೂರ್ಣಃ ಪರಿಪಕ್ವಸ್ಸ ತಿಷ್ಠತಿ ।
ಉದರೇ ಮಾತುರಾಚ್ಛನ್ನೋ ಜರಾಯೌ ಮುನಿಸತ್ತಮ ॥ ೨೩ ॥

ಮಾತುರಾಹಾರಚರ್ಯೇಣ ಷಡ್ವಿಧೇನ ರಸೇನ ತು ।
ನಾಭಿನಾಲನಿಬದ್ಧೇನ ವರ್ಧತೇ ಸ ದಿನೇದಿನೇ ॥ ೨೪ ॥

ತತಸ್ಸ್ಮೃತಿಂ ಲಭೇಜ್ಜೀವಸ್ಸಂಪೂರ್ಣೇಽಸ್ಮಿಂಚ್ಛರೀರಕೇ ।
ಸುಖಂ ದುಃಖಂ ವಿಜಾನಾತಿ ನಿದ್ರಾಸ್ವಪ್ನಂ ಪುರಾ ಕೃತಂ ॥ ೨೫ ॥

ಮೃತಶ್ಚಾಹಂ ಪುನರ್ಜಾತಃ ಪುನಶ್ಚಾಹಂ ಪುನರ್ಮೃತಃ ।
ನಾನಾಯೋನಿಸಹಸ್ರಾಣಿ ಮಯಾ ದೃಷ್ಟಾನಿ ಜಾಯತಾ ॥ ೨೬ ॥

ಅಧುನಾ ಜಾತಮಾತ್ರೋಽಹಂ ಪ್ರಾಪ್ತಸಂಸ್ಕಾರ ಏವ ಚ ।
ಶ್ರೇಯೋಽಮುನಾ ಕರಿಷ್ಯಾಮಿ ಯೇನ ಗರ್ಭೇ ನ ಸಂಭವಃ ॥ ೨೭ ॥

ಮತ್ತು ಎಲ್ಲಾ ಅಂಗೋಪಾಂಗಗಳಿಂದ ಕೂಡಿದ ಶರೀರವು ತಾಯಿಯ ಹೊಟ್ಟೆಯಲ್ಲಿ ಸುತ್ತಲೂ ರಕ್ಷಣೆಯುಳ್ಳದ್ದಾಗಿ ಜರಾಯುವೆಂಬ ಚೀಲದಿಂದ ಸುತ್ತಲ್ಪಟ್ಟು ಚೆನ್ನಾಗಿ ಬೆಳೆದಿರುವುದು. ತಾಯಿಯ ಆಹಾರಪದಾರ್ಥಗಳಿಂದಲೂ ಆರುವಿಧವಾದ ರಸಗಳಿಂದಲೂ ತನ್ನ ನಾಭಿಯ ಮೂಲಕವಾಗಿ ಅದನ್ನು ಹೊಂದಿ ದಿನಂಪ್ರತಿಯಲ್ಲಿಯೂ ಚೆನ್ನಾಗಿ ವೃದ್ಧಿಯನ್ನು ಹೊಂದುವುದು.

೨೪-೨೫. ಅನಂತರ ಜೀವನು ಸಂಪೂರ್ಣವಾಗಿ ಬೆಳೆದಿರುವ ಆ ಶರೀರದಲ್ಲಿ ಸ್ಮೃತಿಯನ್ನು ಹೊಂದುವನು. ಸುಖ, ದುಃಖ, ನಿದ್ರೆ, ಸ್ವಪ್ನ ಇವುಗಳನ್ನು ತಿಳಿಯುವ ಶಕ್ತಿಯುಳ್ಳವನಾಗಿರುವನು. ಇದರಂತೆ ತಾನು ಹಿಂದೆ ಮಾಡಿದ ಕರ್ಮಗಳೆಲ್ಲವನ್ನೂ ಸ್ಮರಿಸಿಕೊಳ್ಳುವನು.

೨೬-೨೭. ನಾನು ಮೃತನಾದವನು ಪುನಃ ಹುಟ್ಟಿರುವೆನು. ಈಗ ಹುಟ್ಟಿ ಪುನಃ ಮೃತನಾಗುವೆನು. ಈರೀತಿ ನಾನು ಅನೇಕಸಾವಿರ ಯೋನಿಗಳಲ್ಲಿ ಜನ್ಮವನ್ನು ಹೊಂದಿದ್ದಾಯಿತು. ಈಗ ನಾನು ಹುಟ್ಟಿದ ಕೂಡಲೇ ಸಂಸ್ಕಾರವನ್ನು ಹೊಂದಿ ಮುಂದಕ್ಕೆ ನನಗೆ ಗರ್ಭದಲ್ಲಿ ಹುಟ್ಟುವಿಕೆಯು ಉಂಟಾಗದೇ ಇರುವ ಹಾಗೆ ಈ ಶರೀರದಿಂದ ಕರ್ಮಗಳನ್ನು ಮಾಡುವೆನು. ಹೀಗೆಂಬುದಾಗಿ ಆ ಜೀವನು ಗರ್ಭದಲ್ಲಿಯೇ ಇದ್ದುಕೊಂಡು ಯೋಚನೆಯನ್ನು ಮಾಡುತ್ತಿರುವನು. ಮತ್ತು ನಾನು

ಗರ್ಭಸ್ಥಶ್ಚಿಂತಯತ್ಯೇವಮಹಂ ಗರ್ಭಾದ್ವಿನಿಸ್ಸೃತಃ ।
ಅನ್ವೇಷ್ಯಾಮಿ ಶಿವಜ್ಞಾನಂ ಸಂಸಾರವಿನಿವರ್ತಕಂ ॥ ೨೮ ॥

ಏವಂ ಸ ಗರ್ಭದುಃಖೇನ ಮಹತಾ ಪರಿಪೀಡಿತಃ ।
ಜೀವಃ ಕರ್ಮವಶಾದಾಸ್ತೇ ಮೋಕ್ಷೋಪಾಯಂ ವಿಚಿಂತಯನ್ ॥ ೨೯ ॥

ಯಥಾ ಗಿರಿವರಾಕ್ರಾಂತಃ ಕಶ್ಚಿದ್ದುಃಖೇನ ತಿಷ್ಠತಿ ।
ತಥಾ ಜರಾಯುಣಾ ದೇಹೀ ದುಃಖಂ ತಿಷ್ಠತಿ ವೇಷ್ಟಿತಃ ॥ ೩೦ ॥

ಪತಿತಸ್ಸಾಗರೇ ಯದ್ವದ್ದುಃಖಮಾಸ್ತೇ ಸಮಾಕುಲಃ ।
ಗರ್ಭೋದಕೇನ ಸಿಕ್ತಾಂಗಸ್ಸರ್ವದಾಕುಲಿತಸ್ತದಾ ॥ ೩೧ ॥

ಲೋಹಕುಂಭೇ ಯಥಾ ನ್ಯಸ್ತಃ ಪಚ್ಯತೇ ಕಶ್ಚಿದಗ್ನಿನಾ ।
ಗರ್ಭಕುಂಭೇ ತಥಾ ಕ್ಷಿಪ್ತಃ ಪಚ್ಯತೇ ಜಠರಾಗ್ನಿನಾ ॥ ೩೨ ॥

ಗರ್ಭದಿಂದ ಹೊರಕ್ಕೆ ಬಂದನಂತರ ಸಂಸಾರವನ್ನು ನಾಶಮಾಡತಕ್ಕ ಶಿವಸಂಬಂಧಿಯಾದ ಜ್ಞಾನವನ್ನು ಹುಡುಕುವೆನು ಎಂದು ಯೋಚಿಸುತ್ತಾ ಗರ್ಭವಾಸದಲ್ಲಿ ಉಂಟಾಗುವ ಬಹಳವಾದ ದುಃಖದಿಂದ ಸಂಕಟವನ್ನು ಅನುಭವಿಸುತ್ತಾ ತನ್ನ ಕರ್ಮಕ್ಕೆ ಬದ್ಧನಾಗಿ ಮೋಕ್ಷೋಪಾಯವನ್ನು ಆಲೋಚಿಸುತ್ತಿರುವನು.

೩೦-೩೧. ದೊಡ್ಡದಾದ ಬೆಟ್ಟವು ತನ್ನ ಮೇಲೆ ಇರುವಾಗ ದುಃಖದಿಂದ ಇರುವವನ ಹಾಗೆ ಗರ್ಭದ ಜರಾಯುವಿನಿಂದ ಸುತ್ತಲ್ಪಟ್ಟು ದುಃಖದಿಂದ ಕೂಡಿ ಸಂಕಟಪಡುತ್ತಿರುವನು. ಸಮುದ್ರದಲ್ಲಿ ಬಿದ್ದವನು ದುಃಖದಿಂದ ಕೂಡಿ ಯೋಚನೆ ಮಾಡುವ ಹಾಗೆ ಆ ಜೀವನು ಗರ್ಭಕೋಶದ ನೀರಿನಲ್ಲಿ ಶರೀರವು ನೆನೆಯುತ್ತಿರಲು ಯಾವಾಗಲೂ ಯೋಚನೆಯಿಂದ ಕೂಡಿರುವನು.

೩೨-೩೩. ಅಗ್ನಿಯ ಮೇಲೆ ಇರಿಸಿರುವ ಪಾತ್ರೆಯಲ್ಲಿ ಇರುವ ವಸ್ತುವು ಬೆಂಕಿಯಿಂದ ಬೇಯುವ ಹಾಗೆ ಜಠರಾಗ್ನಿಯಿಂದ ಗರ್ಭದಲ್ಲಿರುವ ಜೀವನು ತೊಂದರೆಯನ್ನು ಅನುಭವಿಸುವನು. ಬೆಂಕಿಯಿಂದ ಕಾದಿರುವ ಸೂಜಿಗಳಿಂದ ಸ್ವಲ್ಪವೂ

ಸೂಚೀಭಿರಗ್ನಿವರ್ಣಾಭಿರ್ನಿರ್ಭಿನ್ನಸ್ಯ ನಿರಂತರಂ ।
ಯದ್ದುಃಖಂ ಜಾಯತೇ ತಸ್ಯ ತತ್ರ ಸಂಸ್ಥಸ್ಯ ಚಾಧಿಕಂ ॥ ೩೩ ॥

ಗರ್ಭವಾಸಾತ್ಪರಂ ದುಃಖಂ ಕಷ್ಟಂ ನೈವಾಸ್ತಿ ಕುತ್ರಚಿತ್ ।
ದೇಹಿನಾಂ ದುಃಖಬಹುಲಂ ಸುಘೋರಮತಿಸಂಕಟಂ ॥ ೩೪ ॥

ಇತ್ಯೇತತ್ಸುಮಹದ್ದುಃಖಂ ಪಾಪಿನಾಂ ಪರಿಕೀರ್ತಿತಂ ।
ಕೇವಲಂ ಧರ್ಮಬುದ್ಧೀನಾಂ ಸಪ್ತಮಾಸೈರ್ಭವಸ್ಸದಾ ॥ ೩೫ ॥

ಗರ್ಭಾತ್ಸುದುರ್ಲಭಂ ದುಃಖಂ ಯೋನಿಯಂತ್ರನಿಪೀಡನಾತ್ ।
ಭವೇತ್ಪಾಪಾತ್ಮನಾಂ ವ್ಯಾಸ ನ ಹಿ ಧರ್ಮಯುತಾತ್ಮನಾಂ ॥ ೩೬ ॥

ಇಕ್ಷುವತ್ಪೀಡ್ಯಮಾನಸ್ಯ ಯಂತ್ರೇಣೈವ ಸಮಂತತಃ ।
ಶಿರಸಾ ತಾಡ್ಯಮಾನಸ್ಯ ಪಾಪಮುದ್ಗರಕೇಣ ಚ ॥ ೩೭ ॥

ಅವಕಾಶವಿಲ್ಲದ ಹಾಗೆ ಚುಚ್ಚಿದರೆ ಉಂಟಾಗುವ ದುಃಖಕ್ಕೆ ಸಮನಾದ ಅಥವಾ ಅದಕ್ಕಿಂತಲೂ ಅಧಿಕವಾದ ದುಃಖವು ಗರ್ಭದಲ್ಲಿರುವವನಿಗೆ ಉಂಟಾಗುತ್ತಿರುವುದು.

೩೪-೩೫. ಪ್ರಾಣಿಗಳಿಗೆ ಗರ್ಭವಾಸಕ್ಕಿಂತಲೂ ಹೆಚ್ಚಾದ ದುಃಖವೂ ಕಷ್ಟವೂ ಬೇರೆಲ್ಲಿಯೂ ಇರುವುದಿಲ್ಲ. ಅಲ್ಲಿ ಪ್ರಾಣಿಗಳಿಗೆ ಆಗುವ ಸಂಕಟವು ಬಹು ಭಯಂಕರವಾಗಿರುವುದು. ಪಾಪಿಗಳಾದವರಿಗೆ ಈ ಪ್ರಕಾರವಾದ ದುಃಖವು ಗರ್ಭದಲ್ಲಿ ಉಂಟಾಗುವುದು. ಧರ್ಮಬುದ್ಧಿಯುಳ್ಳವರಿಗೆ ಏಳನೆಯ ತಿಂಗಳಿನಲ್ಲಿಯೇ ಯಾವಾಗಲೂ ಜನನವು ಉಂಟಾಗುವುದು.

೩೬. ಪಾಪಿಗಳಾದವರಿಗೆ ಗರ್ಭದಿಂದ ಹೊರಗಡೆ ಬರುವಾಗ ಯೋನಿಯಂತ್ರದ (ಗರ್ಭಕೋಶದ) ಪೀಡನೆಯಿಂದ ಬಹಳ ದುಃಖವುಂಟಾಗುವುದು. ಎಲೈ ವ್ಯಾಸಋಷಿಯೇ, ಕೇಳು ಧರ್ಮಬುದ್ಧಿಯುಳ್ಳವರಿಗೆ ಈ ಪ್ರಕಾರವಾದ ದುಃಖವು ಉಂಟಾಗುವುದಿಲ್ಲ.

೩೭-೩೮. ಕಬ್ಬನ್ನು ಗಾಣಕ್ಕೆ ಹಾಕಿದಕಾಲದಲ್ಲಿ ಎಲ್ಲಾ ಕಡೆಯಲ್ಲೂ ರಸವನ್ನು ಹಿಂಡುವಂತೆ ಯೋನಿಯಂತ್ರದಿಂದ (ಗರ್ಭಕೋಶದಿಂದ) ಹೊರಗಡೆ ಬರುವಾಗ ಯೋನಿಯಂತ್ರದಿಂದ ಅಮುಕಲ್ಪಟ್ಟು ಬಹು ದುಃಖವುಂಟಾಗುವುದು. ಪಾಪವೆಂಬ

ಯಂತ್ರೇಣ ಪೀಡಿತಾ ಯದ್ವನ್ನಿಸ್ಸಾರಾಸ್ಸ್ಯುಸ್ತಿಲಾಃ ಕ್ಷಣಾತ್ ।
ತಥಾ ಶರೀರಂ ನಿಸ್ಸಾರಂ ಯೋನಿಯಂತ್ರನಿಪೀಡನಾತ್ ॥ ೩೮ ॥

ಅಸ್ಥಿಪಾದತುಲಾಸ್ತಂಭಂ ಸ್ನಾಯುಬಂಧೇನ ಯಂತ್ರಿತಂ ।
ರಕ್ತಮಾಂಸಮೃದಾಲಿಪ್ತಂ ವಿಣ್ಮೂತ್ರದ್ರವ್ಯಭಾಜನಂ ॥ ೩೯ ॥

ಕೇಶರೋಮನಖಚ್ಛನ್ನಂ ರೋಗಾಯತನಮಾತುರಂ ।
ವದನೈಕಮಹಾದ್ವಾರಂ ಗವಾಕ್ಷಾಷ್ಟಕಭೂಷಿತಂ ॥ ೪೦ ॥

ಓಷ್ಠದ್ವಯಕಪಾಟಂ ಚ ತಥಾ ಜಿಹ್ವಾರ್ಗಲಾನ್ವಿತಂ ।
ಭೋಗತೃಷ್ಣಾತುರಂ ಮೂಢಂ ರಾಗದ್ವೇಷವಶಾನುಗಂ ॥ ೪೧ ॥

ಸಂವರ್ತಿತಾಂಗಪ್ರತ್ಯಂಗಂ ಜರಾಯುಪರಿವೇಷ್ಟಿತಂ ।
ಸಂಕಟೇನಾವಿವಿಕ್ತೇನ ಯೋನಿಮಾರ್ಗೇಣ ನಿರ್ಗತಂ ॥ ೪೨ ॥

ಮುದ್ಗರಾಯುಧವು ತಲೆಯಮೇಲೆ ಬಡಿಯುವುದು. ಎಣ್ಣೆಗಾಗಿ ಗಾಣಕ್ಕೆ ಹಾಕಿದ ಎಳ್ಳಿನ ಹಾಗೆ ಯೋನಿಯಂತ್ರದ ಪೀಡನೆಯಿಂದ ಶರೀರವು ಹಿಂಡಲ್ಪಟ್ಟು ಸಾರವಿಲ್ಲದ್ದಾಗುವುದು.

೩೯-೪೨. ಈ ಶರೀರವು ಮೂಳೆಯಿಂದ ಕೂಡಿರುವ ಪಾದವೆಂಬ ಕಂಭದಿಂದ ನಿಂತಿರುವುದು. ನರಗಳಿಂದ ಬಿಗಿಯಾಗಿ ಕಟ್ಟಲ್ಪಟ್ಟಿರುವುದು. ರಕ್ತಮಾಂಸಗಳೆಂಬ ಮಣ್ಣಿನಿಂದ ಮೆತ್ತಿದ್ದಾಗಿರುವುದು. ಮಲಮೂತ್ರಗಳಿಗೆ ಆಶ್ರಯವಾಗಿರುವುದು. ಕೂದಲು, ರೋಮ, ಉಗುರು ಇವುಗಳಿಂದ ತುಂಬಿರುವುದು. ರೋಗಕ್ಕೂ ದುಃಖಕ್ಕೂ ತೌರುಮನೆಯಾಗಿರುವುದು. ಇದಕ್ಕೆ ಮುಖವೇ ಹೆಬ್ಬಾಗಿಲು. ಎಂಟು ಕಿಟಕಿಗಳಿಂದ ಕೂಡಿರುವುದು. ಎರಡು ತುಟಿಗಳೆಂಬ ಬಾಗಿಲುಗಳಿಂದಲೂ, ನಾಲಿಗೆಯೆಂಬ ಅಗಣಿಯಿಂದಲೂ ಕೂಡಿರುವುದು. ಭೋಗಪಡಬೇಕೆಂಬ ಆಸೆಯಿಂದ ಕೂಡಿ ಅಜ್ಞಾನದಿಂದ ಕಾಮಕ್ರೋಧಗಳಿಗೆ ವಶವರ್ತಿಯಾಗಿರುವುದು. ಚೆನ್ನಾಗಿ ಬೆಳೆದಿರುವ ಅಂಗೋಪಾಂಗಗಳಿಂದ ಕೂಡಿ ಜರಾಯುವಿನಿಂದ ಸುತ್ತುವರಿಯಲ್ಪಟ್ಟಿರುವುದು. ಈ ಪ್ರಕಾರವಾದ ಶರೀರವು ಬಹಳ ದುಃಖದಿಂದ ಕೂಡಿ ಯೋನಿಮಾರ್ಗದಿಂದ ಹೊರಕ್ಕೆ ಬರುವುದು.

ವಿಣ್ಮೂತ್ರರಕ್ತಸಿಕ್ತಾಂಗಂ ವಿಕೋಶಿಕೆಸಮುದ್ಭವಂ ।
ಅಸ್ಥಿಪಂಜರವಿಖ್ಯಾತಮಸ್ಮಿನ್ ಜ್ಞೇಯಂ ಕಲೇವರಂ ॥ ೪೩ ॥

ಶತತ್ರಯಂ ಷಷ್ಟ್ಯಧಿಕಂ ಪಂಚ ಪೇಶೀಶತಾನಿ ಚ ।
ಸಾರ್ಧಾಭಿಸ್ತಿಸೃಭಿಶ್ಛನ್ನಂ ಸಮಂತಾದ್ರೋಮಕೋಟಿಭಿಃ ॥ ೪೪ ॥

ಶರೀರಂ ಸ್ಥೂಲಸೂಕ್ಷ್ಮಾಭಿರ್ದೃಶ್ಯಾದೃಶ್ಯಾ ಹಿ ತಾಸ್ಸ್ಮೃತಾಃ ।
ಏತಾವತೀಭಿರ್ನಾಡೀಭಿಃ ಕೋಟಿಭಿಸ್ತತ್ಸಮಂತತಃ ॥ ೪೫ ॥

ಅಸ್ವೇದಮಧುಭಿರ್ಯಾಭಿರಂತಸ್ಥಃ ಸ್ರವತೇ ಬಹಿಃ ।
ದ್ವಾತ್ರಿಂಶದ್ದಶನಾಃ ಪ್ರೋಕ್ತಾ ವಿಂಶತಿಶ್ಚ ನಖಾಃ ಸ್ಮೃತಾಃ ॥ ೪೬ ॥

ಪಿತ್ತಸ್ಯ ಕುಡವಂ ಜ್ಞೇಯಂ ಕಫಸ್ಯಾಥಾಢಕಂ ಸ್ಮೃತಂ ।
ವಸಾಯಾಶ್ಚ ಪಲಂ ವಿಂಶತ್ತದರ್ಧಂ ಕಪಿಲಸ್ಯ ಚ ॥ ೪೭ ॥

---

೪೩. ಈ ಶರೀರವು ಗರ್ಭದಿಂದ ಹೊರಹೊರಟು ಯೋನಿಮಾರ್ಗದಿಂದ ಹೊರಗಡೆ ಬರುವಾಗ ಮಲಮೂತ್ರಗಳಿಂದ ಅವಯವಗಳೆಲ್ಲವೂ ನೆನೆದು, ಧಮನಿಗಳೆಲ್ಲವೂ ಒಡೆದುಹೋಗಿ ಮೂಳೆಗಳಗೂಡು ಎಂದು ಹೆಸರುಳ್ಳದ್ದಾಗಿ ಈಚೆಗೆ ಬರುವುದು.

೪೪-೪೬. ಈ ಶರೀರದಲ್ಲಿ ಮುನ್ನೂರರವತ್ತು ಮೂಳೆಗಳೂ, ಐನೂರು ಮಾಂಸಖಂಡಗಳೂ, ಮುನ್ನೂರೈವತ್ತುಕೋಟಿ ರೋಮಕೂಪಗಳೂ ಇರುವವು. ಮುನ್ನೂರೈವತ್ತುಕೋಟಿ ನಾಡಿಗಳಿರುವವು. ಈ ನಾಡಿಗಳಲ್ಲಿ ಕೆಲವು ಸ್ಥೂಲವಾಗಿಯೂ ಕೆಲವು ಕಣ್ಣಿಗೆ ಕಾಣದಷ್ಟು ಸೂಕ್ಷ್ಮವಾಗಿಯೂ ಇರುವವು. ಬೆವರಿಲ್ಲದೆ ಜಿಡ್ಡಿನಿಂದ ಕೂಡಿದ ದ್ರವವಾದ ಪದಾರ್ಥಗಳು ಈ ನಾಡಿಗಳಿಂದ ಜಿನುಗುತ್ತಿರುವವು. ಮೂವತ್ತೆರಡು ಹಲ್ಲುಗಳೂ ಇಪ್ಪತ್ತು ಉಗುರುಗಳೂ ಇರುವವು.

೪೭-೪೮. ಶರೀರದಲ್ಲಿ ಪಿತ್ಥರಸವು ಒಂದು ಕುಡವ (ಪಾವು) ಪ್ರಮಾಣದಷ್ಟು ಇರುವುದು. ಕಫವು ಒಂದು ಆಢಕ (ತೊಗರಿ) ಪ್ರಮಾಣದಷ್ಟೂ, ವಸಾ ಎಂಬ ಜಿಡ್ಡು ಇಪ್ಪತ್ತು ತೊಲಗಳಷ್ಟೂ, ಕಪಿಲವೆಂಬುದು ಹತ್ತುತೊಲಗಳಷ್ಟೂ, ಮೇದಸ್ಸು (ಕೊಬ್ಬು) ಹದಿನೈದೂವರೆ ತೊಲಗಳಷ್ಟೂ, ಇದರಲ್ಲಿ ರಕ್ತವು ಮೂರು ತೊಲದಷ್ಟೂ ಇರುವವು. ಮಜ್ಜಾ ಎಂಬ ಧಾತುವು ರಕ್ತದ ನಾಲ್ಕರಷ್ಟು ಇರುವುದು.

ಪಂಚಾರ್ಧಂ ತುಲಾ ಜ್ಞೇಯಾ ಪಲಾನಿ ದಶ ಮೇದಸಃ ।
ಪಲತ್ರಯಂ ಮಹಾರಕ್ತಂ ಮಜ್ಜಾಯಾಶ್ಚ ಚತುರ್ಗುಣಂ ॥ ೪೮ ॥

ಶುಕ್ರೋಽರ್ಧಂ ಕುಡವಂ ಜ್ಞೇಯಂ ತದ್ಬೀಜಂ ದೇಹಿನಾಂ ಬಲಂ ।
ಮಾಂಸಸ್ಯ ಚೈಕಪಿಂಡೇನ ಪಲಸಾಹಸ್ರಮುಚ್ಯತೇ ॥ ೪೯ ॥

ರಕ್ತಂ ಪಲಶತಂ ಜ್ಞೇಯಂ ವಿಣ್ಮೂತ್ರಂ ಯತ್ಪ್ರಮಾಣತಃ ।
ಅಜಲಯಶ್ಚ ಚತ್ವಾರಶ್ಚತ್ವಾರೋ ಮುನಿಸತ್ತಮ ॥ ೫೦ ॥

ಇತಿ ದೇಹಗೃಹಂ ಹ್ಯೇತನ್ನಿತ್ಯಸ್ಯಾನಿತ್ಯಮಾತ್ಮನಃ ।
ಅವಿಶುದ್ಧಂ ವಿಶುದ್ಧಸ್ಯ ಕರ್ಮಬಂಧಾದ್ವಿನಿರ್ಮಿತಂ ॥ ೫೧ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ದೇಹೋತ್ಪತ್ತಿವರ್ಣನಂ ನಾಮ ದ್ವಾವಿಂಶೋಽಧ್ಯಾಯಃ



ಶುಕ್ರವು (ವೀರ್ಯವು) ಅರ್ಧಕುಡವ ಪ್ರಮಾಣವಿರುವುದು. ಈ ಶುಕ್ರವೇ ಪ್ರಾಣಿಗಳಿಗೆ ಬಲವನ್ನು ಕೊಡುವ ಸಾರವಾದ ವಸ್ತುವಾಗಿರುವುದು.

೪೯. ಮಾಂಸವು ಒಟ್ಟಿನಲ್ಲಿ ಒಂದುಸಾವಿರ ಪಲದಷ್ಟು ಇರುವುದು. ರಕ್ತವು ಒಂದುನೂರು ಪಲಗಳು ಇರುವುವು. ಮಲಮೂತ್ರಗಳು ಇದೇ ಅಳತೆಯಂತೆ ನಾಲ್ಕು ನಾಲ್ಕು ಬೊಗಸೆಗಳಷ್ಟು ಇರುವವು.

೫೦-೫೧. ಎಲೈ ಮುನಿಶ್ರೇಷ್ಠನೇ, ಕೇಳು. ನಿತ್ಯನಾಗಿರುವ ಆತ್ಮನಿಗೆ ಅನಿತ್ಯವಾದ ಶರೀರವೆಂಬ ಈ ಮನೆಯು ಈರೀತಿ ನಿರ್ಮಿತವಾಗಿರುವುದು. ಪರಿಶುದ್ಧನಾದ ಆವನಿಗೆ ಕರ್ಮಬಂಧದಿಂದ ಅಶುಚಿಯಾದ ಆ ಶರೀರವು ವಾಸಸ್ಥಳವಾಗಿ ಏರ್ಪಟ್ಟಿರುವುದು.

ಇಲ್ಲಿಗೆ ಶ್ರೀ ಶಿವಪುರಾಣದ ಉಮಾಸಂಹಿತೆಯಲ್ಲಿ ದೇಹೋತ್ಪತ್ತಿವರ್ಣನವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ತ್ರಯೋವಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

**ಶೃಣು ವ್ಯಾಸ ಮಹಾಬುದ್ಧೇ ದೇಹಸ್ಯಾಶುಚಿತಾಂ ಮುನೇ ।**
**ಮಹತ್ತ್ವಂ ಚ ಸ್ವಭಾವಸ್ಯ ಸಮಾಸಾತ್ಕಥಯಾಮ್ಯಹಂ ॥ ೧ ॥**

**ಶುಕ್ರಶೋಣಿತಸಂಯೋಗಾದ್ದೇಹಸ್ಸಂಜಾಯತೇ ಯತಃ ।**
**ನಿತ್ಯಂ ವಿಣ್ಮೂತ್ರಸಂಪೂರ್ಣಸ್ತೇನಾಯಮಶುಚಿಃ ಸ್ಮೃತಃ ॥ ೨ ॥**

**ಯಥಾಂತರ್ವಿಷ್ಠಯಾ ಪೂರ್ಣಶ್ಶುಚಿಮಾನ್ನ ಬಹಿರ್ಘಟಃ ।**
**ಶೋಧ್ಯಮಾನೋ ಹಿ ದೇಹೋಽಯಂ ತೇನಾಯಮಶುಚಿಸ್ತ್ವತಃ ॥ ೩ ॥**

---

### ಇಪ್ಪತ್ತಮೂರನೆಯ ಅಧ್ಯಾಯವು

೧-೨. ಸನತ್ಕುಮಾರನಿಂತೆಂದನು :—ಎಲೈ ಪ್ರಾಜ್ಞನಾದ ವ್ಯಾಸನೇ, ಕೇಳು. ಈ ಶರೀರದ ಪರಿಶುದ್ಧತೆಯನ್ನೂ, ಸ್ವಭಾವವನ್ನೂ, ಅದರ ಮಹತ್ತನ್ನೂ ವಿಶದವಾಗಿ ಹೇಳುವೆನು. ಶುಕ್ರ ಮತ್ತು ಯೋನಿರಕ್ತ ಇವುಗಳ ಸಂಬಂಧದಿಂದಲೇ ಶರೀರವು ಉಂಟಾಗಿರುವುದರಿಂದಲೂ ಯಾವಾಗಲೂ ಮಲಮೂತ್ರಗಳಿಂದ ತುಂಬಿರುವುದರಿಂದಲೂ ಈ ಶರೀರವು ಅಶುಚಿಯಾದದ್ದೆಂದು ಹೇಳುವರು.

೩. ಮಡಿಕೆಯೊಳಗೆ ಮಲವನ್ನು ತುಂಬಿ ಹೊರಗಡೆಯಲ್ಲಿ ಅದನ್ನು ಎಷ್ಟು ತೊಳೆದರೂ ಅದು ಪರಿಶುದ್ಧವಾಗಿರುವುದಿಲ್ಲವಷ್ಟೆ? ಅದರಂತೆಯೇ ಈ ದೇಹವನ್ನು ಪ್ರತಿದಿನವೂ ತೊಳೆದರೂ ಅಪರಿಶುದ್ಧವಾದ್ದರಿಂದ ಇದು ಯಾವಾಗಲೂ ಅಶುಚಿಯಾಗಿಯೇ ಇರುವುದು.

**ಸಂಪ್ರಾಪ್ಯಾತಿಪವಿತ್ರಾಣಿ ಪಂಚಗವ್ಯಂ ಹವೀಂಷಿ ಚ ।**
**ಅಶುಚಿತ್ವಂ ಕ್ಷಣಾದ್ಯಾಂತಿ ಕಿಮನ್ಯದಶುಚಿಸ್ತತಃ ॥ ೪ ॥**

**ಹೃದ್ಯಾನ್ಯನ್ನಪಾನಾನಿ ಯಂ ಪ್ರಾಪ್ಯ ಸುರಭೀಣಿ ಚ ।**
**ಅಶುಚಿತ್ವಂ ಪ್ರಯಾಂತ್ಯಾಶು ಕಿಮನ್ಯದಶುಚಿಸ್ತತಃ ॥ ೫ ॥**

**ಹೇ ಜನಾಃ ಕಿಂ ನ ಪಶ್ಯಂತಿ ಯನ್ನಿರ್ಯಾತಿ ದಿನೇ ದಿನೇ ।**
**ಸ್ವದೇಹಾತ್ಕಶ್ಮಲಂ ಪೂತಿಸ್ತದಾಧಾರಃ ಕಥಂ ಶುಚಿಃ ॥ ೬ ॥**

**ದೇಹಃ ಸಂಶೋಧ್ಯಮಾನೋಽಪಿ ಪಂಚಗವ್ಯಕುಶಾಂಬುಭಿಃ ।**
**ಘೃಷ್ಯಮಾಣ ಇವಾಂಗಾರೋ ನಿರ್ಮಲತ್ವಂ ನ ಗಚ್ಛತಿ ॥ ೭ ॥**

೪. ಬಹಳ ಪರಿಶುದ್ಧವಾದ ಪಂಚಗವ್ಯ, ಹವಿಸ್ಸು ಇವುಗಳನ್ನು ಈ ಶರೀರಕ್ಕೆ ಹಾಕಿದರೆ ಪರಿಶುದ್ಧವಾದ ಆ ವಸ್ತುಗಳೂ ಕೂಡ ಒಂದು ಕ್ಷಣದಲ್ಲಿಯೇ ಅಪರಿಶುದ್ಧತೆಯನ್ನು ಹೊಂದುವವು. ಪರಿಶುದ್ಧವಲ್ಲದ ಪದಾರ್ಥವನ್ನು ಸೇವಿಸಿದರಂತೂ ಅಶುಚಿಯಾಗುವುದೆಂದು ಹೇಳಬೇಕಾಗಿಯೇ ಇಲ್ಲ. ಈ ಶರೀರಕ್ಕಿಂತಲೂ ಅಶುಚಿಯಾಗಿರುವುದು ಬೇರೆ ಯಾವುದೂ ಇಲ್ಲ.

೫. ಸುವಾಸನೆಯಿಂದ ಕೂಡಿ ಮನೋಹರವಾದ ಅನ್ನಪಾನಾದಿಗಳನ್ನು ಈ ಶರೀರಕ್ಕೆ ಹಾಕಿದರೆ, ಎಂದರೆ ತಿಂದರೆ ಈ ಶರೀರವು ಅದನ್ನು ಬೇಗನೆ ಅಪರಿಶುದ್ಧವಾದದ್ದನ್ನಾಗಿ ಮಾಡುವುದರಿಂದ ಈ ಶರೀರಕ್ಕಿಂತಲೂ ಅಶುಚಿಯಾದದ್ದು ಬೇರೆ ಯಾವುದಿರುವುದು ?

೬. ಎಲೈ ಜನರೇ ಕೇಳಿರಿ. ಈ ಶರೀರದಿಂದ ಪ್ರತಿದಿನವೂ ಹೊರಕ್ಕೆ ಬರುವ ಪದಾರ್ಥವು ಬಹಳ ದುರ್ವಾಸನೆಯುಳ್ಳದ್ದಾಗಿರುವುದನ್ನು ನೀವು ನೋಡುತ್ತಿರುವಿರಿ. ಉತ್ತಮವಾದ ವಸ್ತುವನ್ನು ಈ ಪ್ರಕಾರಕ್ಕೆ ತರುವ ಈ ಶರೀರಕ್ಕಿಂತಲೂ ಅಪರಿಶುದ್ಧವಾದ ವಸ್ತುವು ಬೇರೆ ಯಾವದಿರುವುದು ?

೭-೮. ಪಂಚಗವ್ಯ, ದರ್ಭೆಯನೀರು ಇವುಗಳಿಂದ ಈ ಶರೀರವು ಸ್ವಲ್ಪಮಟ್ಟಿಗೆ ಶುದ್ಧಿಯನ್ನು ಹೊಂದುತ್ತಿದ್ದರೂ, ಪುಡಿಮಾಡಿದ ಇದ್ದಲಿನಂತೆ ಇದು ಬೇರೆ ಶುದ್ಧಿಯನ್ನು ಹೊಂದುವುದಿಲ್ಲ. ಈ ಶರೀರದಿಂದ ಕಫ, ಮೂತ್ರ, ಮಲ ಇವೇ ಮೊದ

ಸ್ರೋತಾಂಸಿ ಯಸ್ಯ ಸತತಂ ಪ್ರಭವಂತಿ ಗಿರೇರಿವ ।
ಕಫಮೂತ್ರಪುರೀಷಾದ್ಯೈಸ್ಸ ದೇಹಶ್ಶುಧ್ಯತೇ ಕಥಂ ॥ ೮ ॥

ಸರ್ವಾಶುಚಿನಿಧಾನಸ್ಯ ಶರೀರಸ್ಯ ನ ವಿದ್ಯತೇ ।
ಶುಚಿರೇಕಃ ಪ್ರದೇಶೋಽಪಿ ವಿಣ್ಮೂತ್ರಸ್ಯ ದೃತೇರಿವ ॥ ೯ ॥

ಸ್ಪೃಷ್ಟ್ವಾತ್ಮದೇಹಸ್ರೋತಾಂಸಿ ಮೃತ್ತೋಯೈಃ ಶೋಧ್ಯತೇ ಕರಃ ।
ತಥಾಪ್ಯಶುಚಿಭಾಂಡಸ್ಯ ನ ಬಿಭ್ರಂಶ್ಯಂತಿ ಕಿಂಕರಾಃ ॥ ೧೦ ॥

ಕಾಯಸ್ಸುಗಂಧಧೂಪಾದ್ಯೈರ್ಯತ್ನೇನಾಽಪಿ ಸುಸಂಸ್ಕೃತಃ ।
ನ ಜಹಾತಿ ಸ್ವಭಾವಂ ಸ ಶ್ವಪುಚ್ಛಮಿವ ನಾಮಿತಂ ॥ ೧೧ ॥

ಯಥಾ ಜಾತ್ಯೈವ ಕೃಷ್ಣೋಽರ್ಥಃ ಶುಕ್ಲಸ್ಸ್ಯಾನ್ನ ಹ್ಯುಪಾಯತಃ ।
ಸಂಶೋಧ್ಯಮಾನಾಪಿ ತಥಾ ಭವೇನ್ಮೂರ್ತಿರ್ನ ನಿರ್ಮಲಾ ॥ ೧೨ ॥

ಲಾದ ಅಶುಚಿ ಪದಾರ್ಥಗಳು, ಬೆಟ್ಟದಿಂದ ತೊರೆಗಳು ಹುಟ್ಟಿ ಹರಿಯುವಂತೆ ಶರೀರದಿಂದ ಹೊರಗಡೆ ಬರುತ್ತಿರುವ ಕಾರಣ, ಇವುಗಳಿಗೆ ಆಧಾರವಾದ ಶರೀರವು ಹೇಗೆ ತಾನೇ ಶುದ್ಧಿಯುಳ್ಳದ್ದಾಗಿರುವುದು ?

೯-೧೦. ಎಲ್ಲಾ ವಿಧವಾದ ಅಶುಚಿ ಪದಾರ್ಥಗಳಿಗೂ ಕಾರಣವಾಗಿ ಮಲಮೂತ್ರಗಳ ಚೀಲದಂತೆ ಇರುವ ಈ ಶರೀರದಲ್ಲಿ ಪರಿಶುದ್ಧವಾದ ಪ್ರದೇಶವು ಒಂದಾದರೂ ಇಲ್ಲ. ತಮ್ಮ ಶರೀರದ ಬೆವರೇ ಮೊದಲಾದುವುಗಳನ್ನು ತಾವೇ ಕೈಯಲ್ಲಿ ಮುಟ್ಟಿದ ಮಾತ್ರಕ್ಕೆ ಆ ಕೈಯನ್ನು ಮಣ್ಣಿನಿಂದಲೂ ನೀರಿನಿಂದಲೂ ತೊಳೆದು ಶುದ್ಧಿ ಮಾಡಿಕೊಳ್ಳುವರು. ಹೀಗಿದ್ದಾಗ್ಯೂ ಅಶುಚಿಯಾದ ಶರೀರವೆಂಬ ಈ ಪಾತ್ರೆಯ ವಿಷಯದಲ್ಲಿ ಕೈಗಳು ಅದಕ್ಕೆ ದಾಸರಾಗಿರುವುದನ್ನು ತಪ್ಪಿಸುವುದಕ್ಕಾಗುವುದಿಲ್ಲ.

೧೧. ಶರೀರವನ್ನು ಸುಗಂಧಲೇಪನ, ಸುವಾಸನೆಯುಳ್ಳ ಧೂಪ ಮೊದಲಾದವುಗಳಿಂದ ಎಷ್ಟೇ ಸಂಸ್ಕರಿಸಿದರೂ, ಡೊಂಕಾದ ನಾಯಿಯ ಬಾಲವನ್ನು ಸರಿಮಾಡಲು ಆಗದಿರುವಂತೆ ಇದು ತನ್ನ ಅಪರಿಶುದ್ಧ ಸ್ವಭಾವವನ್ನು ಬಿಡುವುದಿಲ್ಲ.

೧೨-೧೪. ಸ್ವಭಾವದಿಂದಲೇ ಕಪ್ಪಗೆ ಇರುವ ಪದಾರ್ಥವನ್ನು ಯಾವ ಉಪಾಯದಿಂದಲೂ ಬೆಳ್ಳಗೆ ಮಾಡಲಾಗುವುದಿಲ್ಲ. ಅದರಂತೆ ಅಶುಚಿಯಾದ ಈ ಶರೀರವನ್ನು ಚೆನ್ನಾಗಿ ಶುದ್ಧಿಮಾಡಿದಾಗ್ಯೂ ಶುದ್ಧವಾಗುವುದಿಲ್ಲ. ಜನರು ತಮ್ಮ

ಜಿಘ್ರನ್ನಪಿ ಸ್ವದುರ್ಗಂಧಂ ಪಶ್ಯನ್ನಪಿ ಸ್ವಕಂ ಮಲಂ ।
ನ ವಿರಜ್ಯೇತ ಲೋಕೋಽಯಂ ಪೀಡಯನ್ನಪಿ ನಾಸಿಕಾಂ ॥ ೧೩ ॥

ಅಹೋ ಮೋಹಸ್ಯ ಮಾಹಾತ್ಮ್ಯಂ ಯೇನೇದಂ ಛಾದಿತಂ ಜಗತ್ ।
ಶೀಘ್ರಂ ಪಶ್ಯನ್ಸ್ವಕಂ ದೋಷಂ ಕಾಯಸ್ಯ ನ ವಿರಜ್ಯತೇ ॥ ೧೪ ॥

ಸ್ವದೇಹಸ್ಯ ವಿಗಂಧೇನ ನ ವಿರಜ್ಯೇತ ಯೋ ನರಃ ।
ವಿರಾಗಕಾರಣಂ ತಸ್ಯ ಕಿಮೇತದುಪದಿಶ್ಯತೇ ॥ ೧೫ ॥

ಸರ್ವಸ್ಯೈವ ಜಗನ್ಮಧ್ಯೇ ದೇಹ ಏವಾಶುಚಿರ್ಭವೇತ್ ।
ತನ್ಮಲಾವಯವಸ್ಪರ್ಶಾಚ್ಛುಚಿರಪ್ಯಶುಚಿರ್ಭವೇತ್ ॥ ೧೬ ॥

ಗಂಧಲೇಪಾಪನೋದಾರ್ಥಂ ಶೌಚಂ ದೇಹಸ್ಯ ಕೀರ್ತಿತಂ ।
ದ್ವಯಸ್ಯಾಪಗಮಾಚ್ಛುದ್ಧಿಶ್ಶುದ್ಧಸ್ಪರ್ಶಾದ್ವಿಶುಧ್ಯತಿ ॥ ೧೭ ॥

ಶರೀರದ ದುರ್ವಾಸನೆಯನ್ನು ಮೂಸಿನೋಡಿ ಜಿಹಾಸೆಗೊಳ್ಳುವರು. ತಮ್ಮ ಮಲವನ್ನು ನೋಡಿ ದುರ್ವಾಸನೆಯಿಂದ ಮೂಗನ್ನು ಮುಚ್ಚಿಕೊಳ್ಳುವರು. ಆದರೂ ಈ ಶರೀರದ ವಿಷಯದಲ್ಲಿ ವೈರಾಗ್ಯವನ್ನು ಹೊಂದುವುದಿಲ್ಲ. ಪ್ರಪಂಚವೆಲ್ಲವನ್ನೂ ಆವರಿಸಿಕೊಂಡು ಎಲ್ಲರನ್ನೂ ಮೋಹಗೊಳಿಸಿರುವ ಅಜ್ಞಾನದ ಮಹಿಮೆಯು ಈರೀತಿ ಆಶ್ಚರ್ಯಕರವಾಗಿರುವುದು.

೧೫. ತನ್ನ ಶರೀರದ ದುರ್ವಾಸನೆಯಿಂದ ಜಿಹಾಸೆಯುಂಟಾಗಿ ವೈರಾಗ್ಯವನ್ನು ಹೊಂದದೇ ಇರುವ ಮನುಷ್ಯನಿಗೆ ವೈರಾಗ್ಯವನ್ನು ಹುಟ್ಟಿಸಲು ಎಷ್ಟು ಉಪದೇಶ ಮಾಡಿದರೆ ತಾನೇ ಸಾಧ್ಯವಾದೀತು ?

೧೬. ಈ ಜಗತ್ತಿನಲ್ಲಿರುವ ಅಶುಚಿಯಾದ ಪದಾರ್ಥಗಳಲ್ಲೆಲ್ಲಾ ಈ ಶರೀರವೇ ಎಲ್ಲಕ್ಕೂ ಹೆಚ್ಚಾಗಿ ಅಪರಿಶುದ್ಧವಾಗಿರುವುದು. ಆ ಶರೀರದ ಮಲವಿಸರ್ಜನಾವಯವಗಳನ್ನು ಮುಟ್ಟಿದ ಮಾತ್ರದಿಂದ ಅವನು ಶುದ್ಧನಾದರೂ ಅಶುದ್ಧನಾಗುವನು.

೧೭. ಶರೀರದ ದುರ್ಗಂಧವನ್ನು ಹೋಗಲಾಡಿಸುವುದಕ್ಕಾಗಿ ಶರೀರಕ್ಕೆ ಶೌಚವನ್ನು ಮಾಡಿಕೊಳ್ಳಬೇಕೆಂದು ಹೇಳಿರುವರು. ದುರ್ವಾಸನೆಯೂ ಮಲದ ಲೇಪವೂ ಶೌಚದಿಂದ ನಾಶವಾಗಿ ಶರೀರಶುದ್ಧಿಯು ಉಂಟಾಗುವುದು. ಪರಿಶುದ್ಧವಾದ ಪದಾರ್ಥವನ್ನು ಮುಟ್ಟುವುದರಿಂದಲೂ ಶುದ್ಧಿಯು ಉಂಟಾಗುವುದು.

ಗಂಗಾತೋಯೇನ ಸರ್ವೇಣ ಮೃದ್ಭಾರೈಃ ಪರ್ವತೋಪಮೈಃ ।
ಆಮೃತ್ಯೋರಾಚರೇಚ್ಛೌಚಂ ಭಾವದುಷ್ಟೋ ನ ಶುಧ್ಯತಿ ॥ ೧೮ ॥

ತೀರ್ಥಸ್ನಾನೈಸ್ತಪೋಭಿರ್ವಾ ದುಷ್ಟಾತ್ಮಾ ನೈವ ಶುಧ್ಯತಿ ।
ಶ್ವದೃತಿಃ ಕ್ಷಾಲಿತಾ ತೀರ್ಥೇ ಕಿಂ ಶುದ್ಧಿಮಧಿಗಚ್ಛತಿ ॥ ೧೯ ॥

ಅಂತರ್ಭಾವಪ್ರದುಷ್ಟಸ್ಯ ವಿಶತೋಽಪಿ ಹುತಾಶನಂ ।
ನ ಸ್ವರ್ಗೋ ನಾಪವರ್ಗಶ್ಚ ದೇಹನಿರ್ದಹನಂ ಪರಂ ॥ ೨೦ ॥

ಸರ್ವೇಣ ಗಾಂಗೇನ ಜಲೇನ ಸಮ್ಯಕ್
ಮೃತ್ಪರ್ವತೇನಾಪ್ಯಥ ಭಾವದುಷ್ಟಃ ।
ಆಜನ್ಮನಃ ಸ್ನಾನಪರೋ ಮನುಷ್ಯೋ
ನ ಶುಧ್ಯತೀತ್ಯೇವ ವಯಂ ವದಾಮಃ ॥ ೨೧ ॥

ಪ್ರಜ್ವಾಲ್ಯ ವಹ್ನಿಂ ಘೃತತೈಲಸಿಕ್ತಂ
ಪ್ರದಕ್ಷಿಣಾವರ್ತಶಿಖಂ ಮಹಾಂತಂ ।

೧೮-೧೯. ಮನಸ್ಸಿನಲ್ಲಿ ಶುದ್ಧವಿಲ್ಲದ ಮನುಷ್ಯನು ಗಂಗಾನದಿಯು ನೀರಿನಿಂದಲೂ, ಬೆಟ್ಟಕ್ಕಿಂತಲೂ ಹೆಚ್ಚಾದ ಮಣ್ಣಿನಿಂದಲೂ ಸಾಯುವವರೆಗೆ ಶೌಚವನ್ನು ಮಾಡಿಕೊಂಡಾಗ್ಯೂ ಶುದ್ಧಿಯನ್ನು ಹೊಂದುವುದಿಲ್ಲ. ದುಷ್ಟ ಮನಸ್ಸುಳ್ಳವನು ತೀರ್ಥಗಳಲ್ಲಿ ಸ್ನಾನ ಮಾಡಿದಾಗ್ಯೂ ತಪಸ್ಸುಗಳನ್ನು ಮಾಡಿದರೂ ಶುದ್ಧನಾಗುವುದಿಲ್ಲ. ನಾಯಿಯ ಚರ್ಮದಿಂದ ಮಾಡಿದ ಚೀಲವನ್ನು ತೀರ್ಥದಿಂದ ಎಷ್ಟೇ ತೊಳೆದರೂ ಅದು ಶುದ್ಧವಾಗುವುದೇ ?

೨೦-೨೧. ಮನಸ್ಸಿನ ಭಾವಶುದ್ಧಿಯಿಲ್ಲದವನು ಅಗ್ನಿಪ್ರವೇಶಮಾಡಿದರೂ, ಪ್ರವೇಶಿಸಿದರೂ ಸ್ವರ್ಗವೂ ಮೋಕ್ಷವೂ ದೊರೆಯುವುದಿಲ್ಲ. ಶರೀರವನ್ನು ಸುಟ್ಟುಕೊಳ್ಳುವ ಶ್ರಮ ಮಾತ್ರ ಅವನಿಗೆ ಆಗುವುದು. ದುಷ್ಟವಾದ ಮನಸ್ಸುಳ್ಳವನು ಗಂಗಾನದಿಯ ನೀರಿನಿಂದಲೂ ಬೆಟ್ಟಕ್ಕೆ ಸಮನಾದಷ್ಟು ಮಣ್ಣಿನಿಂದಲೂ ತಾನು ಹುಟ್ಟಿದ್ದು ಮೊದಲುಗೊಂಡು ಸಾಯುವವರೆಗೂ ಶರೀರವನ್ನು ಚೆನ್ನಾಗಿ ತೊಳೆಯುತ್ತಿದ್ದಾಗ್ಯೂ ಅವನು ಶುದ್ಧನಾಗುವುದಿಲ್ಲವೆಂದು ನಾವು ಮತ್ತೊಮ್ಮೆ ಹೇಳುವೆವು.

೨೨. ತುಪ್ಪ ಎಣ್ಣೆ ಇವುಗಳನ್ನು ಹಾಕಿ ಬೆಂಕಿಯನ್ನು ಬಲವಾಗಿ ಉರಿಯುವಂತೆ ಮಾಡಿ ಅದು ಪ್ರದಕ್ಷಿಣಾಕಾರವಾಗಿ ಉರಿಯುತ್ತಿರುವ ಕಾಲದಲ್ಲಿ ಆ ಬೆಂಕಿ

ಪ್ರವಿಶ್ಯ ದಗ್ಧಸ್ತ್ವಪಿ ಭಾವದುಷ್ಟೋ
ನ ಧರ್ಮಮಾಪ್ನೋತಿ ಫಲಂ ನ ಚಾನ್ಯತ್ ॥ ೨೨ ॥

ಗಂಗಾದಿತೀರ್ಥೇಷು ವಸಂತಿ ಮತ್ಸ್ಯಾಃ
ದೇವಾಲಯೇ ಪಕ್ಷಿಗಣಾಶ್ಚ ನಿತ್ಯಂ ।
ಭಾವೋಜ್ಝಿತಾಸ್ತೇ ನ ಫಲಂ ಲಭಂತೇ
ತೀರ್ಥಾವಗಾಹಾಚ್ಚ ತಥೈವ ದಾನಾತ್ ॥ ೨೩ ॥

ಭಾವಶುದ್ಧಿಃ ಪರಂ ಶೌಚಂ ಪ್ರಮಾಣಂ ಸರ್ವಕರ್ಮಸು ।
ಅನ್ಯಥಾಲಿಂಗ್ಯತೇ ಕಾಂತಾ ಭಾವೇನ ದುಹಿತಾನ್ಯಥಾ ॥ ೨೪ ॥

ಮನಸೋ ಭಿದ್ಯತೇ ವೃತ್ತಿರಭಿನ್ನೇಷ್ವಪಿ ವಸ್ತುಷು ।
ಅನ್ಯಥೈವ ಸುತಂ ನಾರೀ ಚಿಂತಯತ್ಯನ್ಯಥಾ ಪತಿಂ ॥ ೨೫ ॥

ಯಲ್ಲಿ ಪ್ರವೇಶಮಾಡಿ ತನ್ನ ಶರೀರವನ್ನು ದಹಿಸಿದರೂ ದುಷ್ಟಮನಸ್ಸುಳ್ಳವನು ಧರ್ಮಿಷ್ಠನಾಗುವುದಿಲ್ಲ. ಮತ್ತು ಅವನಿಗೆ ಮತ್ತಾವ ಫಲವೂ ಬರುವುದಿಲ್ಲ.

೨೩. ಗಂಗೆಯೇ ಮೊದಲಾದ ತೀರ್ಥಗಳಲ್ಲಿ ಮೀನುಗಳೇ ಮೊದಲಾದ ಜಲ ಚರಗಳು ವಾಸಮಾಡುವವು. ದೇವಸ್ಥಾನಗಳಲ್ಲಿ ಹಕ್ಕಿಗಳು ಯಾವಾಗಲೂ ವಾಸ ಮಾಡುವವು. ಅವುಗಳಿಗೆ ಸರಿಯಾದ ಮನೋಭಾವವು ಇಲ್ಲದಿರುವುದರಿಂದ ಯಾವ ಫಲವನ್ನೂ ಹೊಂದುವುದಿಲ್ಲ. ಇದರಂತೆಯೇ ದುಷ್ಟವಾದ ಮನಸ್ಸುಳ್ಳವನು ತೀರ್ಥ ಸ್ನಾನವನ್ನು ಮಾಡಿದರೂ ದಾನವನ್ನು ಮಾಡಿದರೂ ಯಾವ ಫಲವನ್ನೂ ಹೊಂದ ಲಾರನು.

೨೪-೨೫. ಚಿತ್ತಶುದ್ಧಿಯನ್ನು ಹೊಂದಿರುವುದೇ ಎಂದರೆ ಭಾವಶುದ್ಧಿಯೇ ಎಲ್ಲಾ ಕರ್ಮಗಳಲ್ಲಿಯೂ ಉತ್ತಮವಾದ ಶೌಚವೆನಿಸಿಕೊಳ್ಳುವುದು. ಇದು ನಿಜ ವಾದದ್ದು. ತನ್ನ ಪತ್ನಿಯನ್ನು ಆಲಂಗಿಸಿಕೊಳ್ಳುವುದು, ತನ್ನ ಮಗಳನ್ನು ತಬ್ಬಿ ಕೊಳ್ಳುವುದು ಇವೆರಡರ ವಿಷಯದಲ್ಲಿಯೂ ಮನಸ್ಸಿನ ಅಭಿಪ್ರಾಯವು ಬೇರೆಯಾಗಿ ಇರುವುದು. ಹೆಂಗಸು ಎಂಬ ಪದಾರ್ಥವು ಒಂದೇ ಆಗಿದ್ದಾಗ್ಯೂ ಮನಸ್ಸಿನ ಅಭಿ ಪ್ರಾಯವು ಬೇರೆಯಾಗಿ ಒಬ್ಬಳ ವಿಷಯದಲ್ಲಿ ಭೋಗೇಚ್ಛೆಯೂ ಇನ್ನೊಬ್ಬಳಲ್ಲಿ ಶುದ್ಧವಾದ ಪ್ರೀತಿಯೂ ಇರುವುದು. ಹೀಗಿಲ್ಲದಿದ್ದರೆ ಹೆಂಗಸಾದವಳು ಮಗನನ್ನು ಯೋಚಿಸುವ ರೀತಿಯಲ್ಲಿ ಗಂಡನನ್ನು ತಿಳಿಯುವುದಿಲ್ಲ.

ಪಶ್ಯಧ್ವಮಸ್ಯ ಭಾವಸ್ಯ ಮಹಾಭಾಗ್ಯಮಶೇಷತಃ ।
ಪರಿಷ್ವಕ್ತೋಽಪಿ ಯನ್ನಾರ್ಯಾ ಭಾವಹೀನಂ ನ ಕಾಮಯೇತ್ ॥ ೨೬ ॥

ನಾದ್ಯಾದ್ವಿವಿಧಮನ್ನಾದ್ಯಂ ಭಕ್ಷ್ಯಾಣಿ ಸುರಭೀಣಿ ಚ ।
ಯದಿ ಚಿಂತಾಂ ಸಮಾಧತ್ತೇ ಚಿತ್ತೇ ಕಾಮಾದಿಷು ತ್ರಿಷು ॥ ೨೭ ॥

ಗೃಹ್ಯತೇ ತೇನ ಭಾವೇನ ನರೋ ಭಾವಾದ್ವಿಮುಚ್ಯತೇ ।
ಭಾವತಶ್ಶುಚಿಶುದ್ಧಾತ್ಮಾ ಸ್ವರ್ಗಂ ಮೋಕ್ಷಂ ಚ ವಿಂದತಿ ॥ ೨೮ ॥

ಭಾವೇನೈಕಾತ್ಮಶುದ್ಧಾತ್ಮಾ ದಹನ್ ಜುಹ್ವನ್ಸ್ತುವನ್ಮೃತಃ ।
ಜ್ಞಾನಾವಾಪ್ತೇರವಾಪ್ಯಾಶು ಲೋಕಾನ್ಬಹುಯಾಜಿನಾಂ ॥ ೨೯ ॥

೨೬-೨೭. ಮನಸ್ಸಿನ ಅಭಿಪ್ರಾಯದ ಮಹಿಮೆಯನ್ನು ಸಂಪೂರ್ಣವಾಗಿ ವಿಚಾರಮಾಡಿದಲ್ಲಿ ಇದು ಚೆನ್ನಾಗಿ ತಿಳಿಯುವುದು. ಆಲಂಗಿಸಿಕೊಂಡಾಗ್ಯೂ ಮನಸ್ಸಿನಲ್ಲಿ ಕಾಮವು ಇಲ್ಲದಿರುವವನನ್ನು ಹೆಂಗಸು ಅಪೇಕ್ಷಿಸುವುದಿಲ್ಲ. ಮನಸ್ಸಿನಲ್ಲಿ ಕಾಮವೇ ಮೊದಲಾದ ಮೂರು ವಿಧವಾದ ಚಿಂತೆಗಳಿಂದ ಮನಸ್ಸು ವ್ಯಾಕುಲಗೊಂಡಿದ್ದರೆ ಅನೇಕ ಪ್ರಕಾರವಾದ ಅನ್ನಪಾನಗಳನ್ನೂ, ಸುವಾಸನೆಯುಳ್ಳ ರುಚಿಕರವಾದ ಭಕ್ಷ್ಯಗಳನ್ನೂ ಮನುಷ್ಯನು ತಿನ್ನುವುದಿಲ್ಲ. ಅವನಿಗೆ ಒಂದೂ ಬೇಡವಾಗುವುದು. ಮನಸ್ಸು ಸಮಾಧಾನವಾದನಂತರ ಅವುಗಳನ್ನು ತಿಂದು ಸುಖವನ್ನು ಹೊಂದುವನು.

೨೮. ಮನುಷ್ಯನು ಯಾವ ವಿಧವಾದ ಮನೋವೃತ್ತಿಯನ್ನು ಹೊಂದುವನೋ ಅದಕ್ಕನುಸಾರವಾಗಿ ಅವನಿಗೆ ಫಲಾಫಲಗಳುಂಟಾಗುವವು. ಕೆಟ್ಟಮನೋವೃತ್ತಿಯಿದ್ದರೆ ಅದು ಕಳೆದನಂತರ ಚಿತ್ತಶುದ್ಧಿಯನ್ನು ಹೊಂದಿ, ಬಳಿಕ ಸ್ವರ್ಗವನ್ನೂ ಮೋಕ್ಷವನ್ನೂ ಪಡೆಯುವನು.

೨೯. ಪರಿಶುದ್ಧವಾದ ಮನಸ್ಸಿನಿಂದ ಅಗ್ನಿಯನ್ನು ಪ್ರವೇಶಿಸಿದವನು ಸುಡುತ್ತಿದ್ದಾಗ್ಯೂ ತನ್ನ ಇಷ್ಟದೇವತೆಯನ್ನು ಸ್ತೋತ್ರಮಾಡುತ್ತಾ ಮೃತನಾಗಿ ಸರಿಯಾದ ಜ್ಞಾನಪ್ರಾಪ್ತಿಯಿಂದ, ಅನೇಕ ಯಜ್ಞಗಳನ್ನು ಮಾಡಿದವರಿಗೆ ಲಭಿಸುವ ಪುಣ್ಯಲೋಕಗಳನ್ನು ಬೇಗನೆ ಪಡೆವನು.

ಜ್ಞಾನಾಮಲಾಂಭಸಾ ಪುಂಸಾಂ ಸದ್ವೈರಾಗ್ಯಮೃದಾ ಪುನಃ ।
ಅವಿದ್ಯಾರಾಗವಿಣ್ಮೂತ್ರಲೇಪಗಂಧವಿಶೋಧನಂ ॥ ೩೦ ॥

ಏವಮೇತಚ್ಛರೀರಂ ಹಿ ನಿಸರ್ಗಾದಶುಚಿ ಸ್ಮೃತಂ ।
ತ್ವಙ್ಮಾತ್ರಸಾರಂ ನಿಸ್ಸಾರಂ ಕದಲೀಸಾರಸನ್ನಿಭಂ ॥ ೩೧ ॥

ಜ್ಞಾತ್ವೈವಂ ದೋಷವದ್ದೇಹಂ ಯಃ ಪ್ರಾಜ್ಞಃ ಶಿಥಿಲೋ ಭವೇತ್ ।
ದೇಹಭೋಗೋದ್ಭವಾದ್ಭಾವಾಚ್ಛುಮಚಿತ್ತಃ ಪ್ರಸನ್ನಧೀಃ ॥ ೩೨ ॥

ಸೋಽತಿಕ್ರಾಮತಿ ಸಂಸಾರಂ ಜೀವನ್ಮುಕ್ತಃ ಪ್ರಜಾಯತೇ ।
ಸಂಸಾರಕದಲೀಸಾರದೃಢಗ್ರಾಹ್ಯವತಿಷ್ಠತೇ ॥ ೩೩ ॥

ಏವಮೇತನ್ಮಹಾಕಷ್ಟಂ ಜನ್ಮದುಃಖಂ ಪ್ರಕೀರ್ತಿತಂ ।
ಪುಂಸಾಮಜ್ಞಾನದೋಷೇಣ ನಾನಾಕರ್ಮವಶೇನ ಚ ॥ ೩೪ ॥

೩೦. ಆ ಮನುಷ್ಯನಿಗೆ ಜ್ಞಾನವೆಂಬ ನಿರ್ಮಲವಾದ ತೀರ್ಥದಿಂದಲೂ, ವೈರಾಗ್ಯವೆಂಬ ಮೃತ್ತಿಕೆಯಿಂದಲೂ, ಅಜ್ಞಾನವೆಂಬ ಕಾಮದಿಂದ ಬಂದಿರುವ ಮಲ ಮೂತ್ರಲೇಪಗಳ ವಾಸನೆಯು ಸಂಪೂರ್ಣವಾಗಿ ನಾಶವನ್ನು ಹೊಂದುವುದು

೩೧-೩೨. ಈಗ ನಾನು ಹೇಳಿರುವ ಪ್ರಕಾರದಿಂದ ಈ ಶರೀರವು ಸ್ವಭಾವದಿಂದಲೇ ಅಪರಿಶುದ್ಧವಾಗಿರುವುದು ಎಂದು ತಿಳಿಸಿದ್ದಾಯಿತು. ಈ ಶರೀರವು ಬಾಳೆಯಗಿಡದ ಹಾಗೆ ನಿಸ್ಸಾರವಾಗಿರುವುದು. ಮೇಲೆ ಇರುವ ಚರ್ಮಮಾತ್ರದಿಂದ ಶುದ್ಧವಾಗಿ ಕಾಣಿಸುವುದು. ಶರೀರವು ಹೀಗೆ ಇರುವುದೆಂದು ಚೆನ್ನಾಗಿ ತಿಳಿದು ಬುದ್ಧಿವಂತನಾದವನು ದೇಹಕ್ಕೆ ಬೇಕಾದ ಸೌಖ್ಯವನ್ನು ಕಲ್ಪಿಸುವುದರಲ್ಲಿಯೇ ಮನಸ್ಸನ್ನಿಡದೆ ಕೆಟ್ಟ ಭಾವನೆಗಳನ್ನು ಬಿಟ್ಟು ಸಂತೋಷಚಿತ್ತನಾಗಿರದೇಕು.

೩೩-೩೪. ಈ ಪ್ರಕಾರದಿಂದ ಭೋಗಾಪೇಕ್ಷೆಯಿಲ್ಲದೆ ಉಪಶಾಂತನಾದವನು ಸಂಸಾರವನ್ನು ದಾಟಿ ಜೀವನ್ಮುಕ್ತನೆನಿಸಿಕೊಳ್ಳುವನು. ಸಂಸಾರವೆಂಬುದು ಸಾರವಿಲ್ಲದಿರುವ ಬಾಳೆಯ ಗಿಡದಂತಿರುವುದು. ಇದನ್ನು ಜನ್ಮದುಃಖವೆಂದು ಕರೆಯುವರು. ಇದು ಬಹಳ ಕಷ್ಟವನ್ನುಂಟುಮಾಡುವುದು. ಅಜ್ಞಾನದ ದೋಷವೂ ಅನೇಕ ವಿಧವಾದ ಕರ್ಮಗಳ ಸಂಬಂಧವೂ ಇಂತಹ ಜನ್ಮದುಃಖಕ್ಕೆ ಕಾರಣವಾಗಿರುವುದು.

ಇತ್ಥಂ ಮಹತ್ಪರಂ ದಿವ್ಯಂ ಶಾಸ್ತ್ರಮುಕ್ತಂ ಶಿವೇನ ತು ।
ತಪಸಃ ಕಥನಾರ್ಥಾಯ ಸ್ವರ್ಗಮೋಕ್ಷಪ್ರಸಾಧನಂ ॥ ೪೫ ॥

ಯೇ ಸತ್ಯಸ್ಮಿಂಚ್ಛಿವೇ ಜ್ಞಾನೇ ಸರ್ವಕಾಮಾರ್ಥಸಾಧನೇ ।
ನ ಕುರ್ವಂತ್ಯಾತ್ಮನಃ ಶ್ರೇಯಸ್ತದತ್ರ ಮಹದದ್ಭುತಂ ॥ ೪೬ ॥

ಅವ್ಯಕ್ತೇಂದ್ರಿಯವೃತ್ತಿತ್ವಾದ್ಬಾಲ್ಯೇ ದುಃಖಂ ಮಹತ್ಪುನಃ ।
ಇಚ್ಛನ್ನಪಿ ನ ಶಕ್ನೋತಿ ವಕ್ತುಂ ಕರ್ತುಂ ಪ್ರತಿಕ್ರಿಯಾಂ ॥ ೪೭ ॥

ದಂತೋತ್ಥಾನೇ ಮಹದ್ದುಃಖಮಲ್ಪೇನ ವ್ಯಾಧಿನಾ ತಥಾ ।
ಬಾಲರೋಗೈಶ್ಚ ವಿವಿಧೈಃ ಪೀಡಾ ಬಾಲಗ್ರಹೈರಪಿ ॥ ೪೮ ॥

ಕ್ವಚಿತ್ತೃಟ್ಕ್ಷುತ್ಪರೀತಾಂಗಃ ಕ್ವಚಿತ್ತಿಷ್ಠತಿ ಸಂರಟನ್ ।
ವಿಣ್ಮೂತ್ರಭಕ್ಷಣಾದ್ಯಂ ಚ ಮೋಹಾದ್ಬಾಲಸ್ಸಮಾಚರೇತ್ ॥ ೪೯ ॥

---

೪೫-೪೬. ಸಾಕ್ಷಾತ್ ಶಿವನೇ ಈ ಉತ್ತಮ ಶಾಸ್ತ್ರವನ್ನು ಉಪದೇಶಿಸಿರುವನು. ತಪಸ್ಸುಮಾಡಿ ಶಿವಜ್ಞಾನವನ್ನು ಪಡೆದು ಸ್ವರ್ಗಮೋಕ್ಷಗಳನ್ನು ಸಾಧಿಸಬಹುದೆಂದು ಹೇಳಿರುವನು. ಎಲ್ಲಾ ವಿಧವಾದ ಇಷ್ಟಾರ್ಥಗಳನ್ನೂ ಸಾಧಿಸಲು ಸಮರ್ಥವಾದ ಈ ಪ್ರಕಾರವಾದ ಶಿವಜ್ಞಾನವು ಇದ್ದಾಗ್ಯೂ ತಮ್ಮ ತಮ್ಮ ಶ್ರೇಯಸ್ಸನ್ನು ಸಾಧಿಸಿದೇ ಇರುವರಲ್ಲಾ ? ಇದು ಬಹಳ ಆಶ್ಚರ್ಯವಲ್ಲವೇ ?

೪೭. ಬಾಲ್ಯದಲ್ಲಿ ಇಂದ್ರಿಯಪಾಟವವು ಇಲ್ಲದಿರುವುದು ದೊಡ್ಡ ದುಃಖವು. ತನಗೆ ಇಚ್ಛೆಯಿದ್ದರೂ ದುಃಖಕ್ಕೆ ತಕ್ಕ ಪ್ರತೀಕಾರವನ್ನು ಮಾಡುವುದಕ್ಕೂ ಅದನ್ನು ಹೇಳುವುದಕ್ಕೂ ತಕ್ಕ ಶಕ್ತಿಯು ಬಾಲ್ಯದಲ್ಲಿ ಇರುವುದಿಲ್ಲ.

೪೮-೪೯. ಬಾಲ್ಯದಲ್ಲಿ ಹಲ್ಲು ಹುಟ್ಟುವಾಗ ಬಹಳ ದುಃಖವು ಉಂಟಾಗುವುದು. ಕೊಂಚ ಖಾಯಿಲೆಯೂ ಬರುವುದು. ಎಳೆಯ ಮಕ್ಕಳ ಸಂಬಂಧವಾದ ಅನೇಕ ರೋಗಗಳೂ ಬಾಲಗ್ರಹಗಳಿಂದ ತೊಂದರೆಯೂ ಉಂಟಾಗುವುದು. ಕೆಲವು ವೇಳೆ ಹಸಿವು ಬಾಯಾರಿಕೆಗಳಿಂದ ಸಂಕಟಪಡುವನು. ಕೆಲವು ವೇಳೆ ಅಳುತ್ತಿರುವನು. ಅಜ್ಞಾನದಿಂದ ಮಲಮೂತ್ರಗಳನ್ನೂ ಸಹ ತಿಂದುಬಿಡುವನು. ಇವೇ ಮೊದಲಾದವು ಬಾಲ್ಯದಲ್ಲಿ ಉಂಟಾಗುವ ದುಃಖವು.

ಕೌಮಾರೇ ಕರ್ಣಪೀಡಾಯಾಂ ಮಾತಾಪಿತ್ರೋಶ್ಚ ಸಾಧನೈಃ ।
ಅಕ್ಷರಾಧ್ಯಯನಾದ್ಯೈಶ್ಚ ನಾನಾದುಃಖಂ ಪ್ರವರ್ತತೇ ॥ ೫೦ ॥

ಬಾಲ್ಯೇ ದುಃಖಮತೀತ್ಯೈವ ಪಶ್ಯನ್ನಪಿ ವಿಮೂಢಧೀಃ ।
ನ ಕುರ್ವೀತಾತ್ಮನಃ ಶ್ರೇಯಸ್ತದತ್ರ ಮಹದದ್ಭುತಂ ॥ ೫೧ ॥

ಪ್ರವೃತ್ತೇಂದ್ರಿಯವೃತ್ತಿತ್ವಾತ್ಕಾಮರೋಗಪ್ರಪೀಡನಾತ್ ।
ತದಪ್ರಾಪ್ತೌ ತು ಸತತಂ ಕುತಃ ಸೌಖ್ಯಂ ತು ಯೌವನೇ ॥ ೫೨ ॥

ಈರ್ಷ್ಯಯಾ ಚ ಮಹದ್ದುಃಖಂ ಮೋಹಾದ್ರಕ್ತಸ್ಯ ತಸ್ಯ ಚ ।
ನೇತ್ರಸ್ಯ ಕುಪಿತಸ್ಯೇವ ತ್ಯಾಗೀ ದುಃಖಾಯ ಕೇವಲಂ ॥ ೫೩ ॥

ನ ರಾತ್ರೌ ವಿಂದತೇ ನಿದ್ರಾಂ ಕಾಮಾಗ್ನಿಪರಿವೇದಿತಃ ।
ದಿವಾಪಿ ಚ ಕುತಸ್ಸೌಖ್ಯಮರ್ಥೋಪಾರ್ಜನಚಿಂತಯಾ ॥ ೫೪ ॥

---

೫೦. ಕೌಮಾರವಯಸ್ಸಿನಲ್ಲಿ ಕಿವಿಯನೋವು ಮೊದಲಾದ ರೋಗಗಳೂ ಪೀಡಿಸುವವು. ತಂದೆತಾಯಿಗಳನ್ನು ಇವನು ಶುಶ್ರೂಷೆಮಾಡಬೇಕಾಗಿರುವುದು. ಅಕ್ಷರವನ್ನು ಕಲಿಯುವುದು, ಓದುವುದು ಇವೇ ಮೊದಲಾದ ದುಃಖವು ಉಂಟಾಗುವುದು.

೫೧. ಬಾಲ್ಯದಲ್ಲಿ ದುಃಖವನ್ನು ಅನುಭವಿಸುತ್ತಿದ್ದರೂ ಅದರ ತಿಳುವಳಿಕೆ ಇದ್ದಾಗ್ಯೂ ದಡ್ಡನಾಗಿ ತನಗೆ ಶ್ರೇಯಸ್ಸನ್ನು ಸಾಧಿಸಿಕೊಳ್ಳದಿರುವುದು ಬಹಳ ಆಶ್ಚರ್ಯಕರವಾಗಿರುವುದು.

೫೨–೫೩. ಯೌವನದಲ್ಲಿ ಇಂದ್ರಿಯಪಾಟವವು ಚೆನ್ನಾಗಿರುವ ಕಾರಣ ಕಾಮವೆಂಬ ರೋಗದ ಬಾಧೆಯಿಂದ ನರಳುವನು. ತನ್ನ ಕಾಮವು ನಡೆಯದೇ ಇದ್ದಲ್ಲಿ ಸೌಖ್ಯವು ಹೇಗೆ ತಾನೇ ಉಂಟಾದೀತು ? ತನಗೆ ಇಷ್ಟವಾದ ವಸ್ತುವು ತನಗೆ ಸಿಕ್ಕದೆ ಇನ್ನೊಬ್ಬನಿಗೆ ಸಿಕ್ಕಿದಾಗ ಅಸೂಯೆಯಿಂದ ಬಹಳ ದುಃಖವು ಉಂಟಾಗುವುದು. ತನಗೆ ಇಷ್ಟವಾದ ವಸ್ತುವು ದೊರಯದೆ ಅದರ ಆಸೆಯಿಂದ ಉಂಟಾಗುವ ದುಃಖವು ಬಹಳವಾಗಿರುವುದು. ಕಣ್ಣಿಗೆ ಬೇನೆ ಬಂದಾಗ ವಸ್ತುಗಳನ್ನು ನೋಡಲಾಗುವುದಿಲ್ಲವಷ್ಟೆ? ಅದರಂತೆ ಇಷ್ಟವಸ್ತುಗಳು ದೊರೆಯದಿದ್ದರೆ ದುಃಖವು ಉಂಟಾಗುವುದೇ ಹೊರತು ಸುಖವು ಉಂಟಾಗುವುದಿಲ್ಲ.

೫೪–೫೬. ಕಾಮಾಗ್ನಿಯಿಂದ ಕಷ್ಟಪಡುವವನಿಗೆ ರಾತ್ರಿಯ ಕಾಲದಲ್ಲಿ ನಿದ್ರೆಯು ಬರುವುದಿಲ್ಲ. ಹಗಲು ದ್ರವ್ಯವನ್ನು ಸಂಪಾದಿಸಬೇಕೆಂಬ ಚಿಂತೆಯು

ಸ್ತ್ರೀಷ್ವಧ್ಯಾಸಿತಚಿತ್ತಸ್ಯ ಯೇ ಪುಂಸಃ ಶುಕ್ರಬಿಂದವಃ ।
ತೇ ಸುಖಾಯ ನ ಮನ್ಯಂತೇ ಸ್ವೇದಜಾ ಇವ ತೇ ತಥಾ ॥ ೫೫ ॥

ಕೃಮಿಭಿಸ್ತುದ್ಯಮಾನಸ್ಯ ಕುಷ್ಠಿನೋ ವಾನರಸ್ಯ ಚ ।
ಕಂಡೂಯನಾಭಿತಾಪೇನ ಯದ್ಭವೇತ್ಸ್ತ್ರೀಷು ತದ್ವಿದಃ ॥ ೫೬ ॥

ಯಾದೃಶಂ ಮನ್ಯತೇ ಸೌಖ್ಯಂ ಗಂಡೇ ಪೂತಿವಿನಿರ್ಗಮಾತ್ ।
ತಾದೃಶಂ ಸ್ತ್ರೀಷು ಮಂತವ್ಯಂ ನಾಧಿಕಂ ತಾಸು ವಿದ್ಯತೇ ॥ ೫೭ ॥

ವಿಣ್ಮೂತ್ರಸ್ಯ ಸಮುತ್ಸರ್ಗಾತ್ಸುಖಂ ಭವತಿ ಯಾದೃಶಂ ।
ತಾದೃಶಂ ಸ್ತ್ರೀಷು ವಿಜ್ಞೇಯಂ ಮೂಢೈಃ ಕಲ್ಪಿತಮನ್ಯಥಾ ॥ ೫೮ ॥

ನಾರೀಷ್ವವಸ್ತುಭೂತಾಸು ಸರ್ವದೋಷಾಶ್ರಯಾಸು ಚ ।
ನಾಣುಮಾತ್ರಂ ಸುಖಂ ತಾಸು ಕಥಿತಂ ಪಂಚಚೂಡಯಾ ॥ ೫೯ ॥

ಬಹಳವಾಗಿರುವುದರಿಂದ ಸೌಖ್ಯವೆಲ್ಲಿಯದು? ಸ್ತ್ರೀಯರಲ್ಲಿ ಸೌಖ್ಯಪಡಬೇಕೆಂದು ಇಚ್ಛಿಸಿ ಶುಕ್ರಬಿಂದುಗಳನ್ನು ಸ್ತ್ರೀಶರೀರಕ್ಕೆ ಬಿಡುವುದರಿಂದ ಹೆಚ್ಚಿನ ಸೌಖ್ಯವೇನೂ ಆಗುವುದಿಲ್ಲ. ಶರೀರದಿಂದ ಬೆವರು ಹನಿಗಳು ಉದುರುವಂತೆ ಶುಕ್ರಬಿಂದುಗಳು ಸ್ತ್ರೀಶರೀರದಲ್ಲಿ ಬೀಳುವವು. ಅದರಿಂದ ಏನು ಸೌಖ್ಯ? ಕುಷ್ಠರೋಗದಿಂದ ಬಾಧೆಯನ್ನು ಅನುಭವಿಸುವ ಕಪಿಗೆ ಹುಳುಗಳು ಕಡಿಯುವಾಗ ಕೆರೆದುಕೊಳ್ಳುವುದಷ್ಟೆ? ಆ ಕೆರತದಿಂದ ಕಪಿಗೆ ಉಂಟಾಗುವಷ್ಟು ಸುಖವೇ ಸ್ತ್ರೀಯ ಭೋಗದಿಂದ ಉಂಟಾಗುವುದೆಂದು ಅದನ್ನು ತಿಳಿದವರು ಹೇಳುವರು.

೫೭-೫೮. ಕೆನ್ನೆಯಲ್ಲಿ ಹುಣ್ಣು ಉಂಟಾಗಿ ದುರ್ಗಂಧವುಂಟಾದಾಗ ಅನುಭವಿಸುವ ಸುಖವು ಸ್ತ್ರಿಯರಲ್ಲಿ ಭೋಗಪಡುವುದರಿಂದ ಉಂಟಾಗುವುದೇ ಹೊರತು ಅದಕ್ಕಿಂತಲೂ ಹೆಚ್ಚಾದ ಸುಖವು ಉಂಟಾಗುವುದಿಲ್ಲವೆಂದು ತಿಳಿಯಬೇಕು. ಮಲಮೂತ್ರವಿಸರ್ಜನೆಯಿಂದ ಏನು ಸೌಖ್ಯವುಂಟಾಗುವುದೋ ಸ್ತ್ರೀಯರಿಂದ ಉಂಟಾಗುವ ಸುಖವೂ ಅದರಂತೆಯೇ ಎಂದು ತಿಳಿಯಬೇಕು. ದಡ್ಡರು ಇದನ್ನು ಬೇರೆ ವಿಧವಾಗಿ ತಿಳಿದುಕೊಂಡಿರುವರು.

೫೯-೬೦. ಸ್ತ್ರೀಯರೆಂಬುವರು ಸೌಖ್ಯವನ್ನುಂಟುಮಾಡುವ ಪದಾರ್ಥಗಳಲ್ಲಿ ಸೇರಿದವರಲ್ಲ. ಎಲ್ಲಾ ವಿಧವಾದ ದೋಷಗಳಿಗೂ ಆಶ್ರಯವಾಗಿರುವರು. ಇವರಲ್ಲಿ

**ಸಂಮಾನನಾವಮಾನಾಭ್ಯಾಂ ವಿಯೋಗೇನೇಷ್ಟಸಂಗಮಾತ್ ।**
**ಯೌವನಂ ಜರಯಾ ಗ್ರಸ್ತಂ ಕ್ವ ಸೌಖ್ಯಮನುಪದ್ರವಂ　　॥ ೬೦ ॥**

**ವಲೀಪಲಿತಖಾಲಿತ್ಯೈಃ ಶ್ಶಿಥಿಲೀಕೃತವಿಗ್ರಹಂ ।**
**ಸರ್ವಕ್ರಿಯಾಸ್ವಶಕ್ತಿಂ ಚ ಜರಯಾ ಜರ್ಜರೀಕೃತಂ　　॥ ೬೧ ॥**

**ಸ್ತ್ರೀಪುಂಸಯೌವನಂ ಹೃದ್ಯಮನ್ಯೋಽನ್ಯಸ್ಯ ಪ್ರಿಯಂ ಪುರಾ ।**
**ತದೇವ ಜರಯಾ ಗ್ರಸ್ತಮನಯೋರಪಿ ನಃ ಪ್ರಿಯಂ　　॥ ೬೨ ॥**

**ಅಪೂರ್ವವತ್ಸ್ವಮಾತ್ಮಾನಂ ಜರಯಾ ಪರಿವರ್ತಿತಂ ।**
**ಯಃ ಪಶ್ಯನ್ನಪಿ ರಜ್ಯೇತ ಕೋಽನ್ಯಸ್ತಸ್ಮಾದಚೇತನಃ　　॥ ೬೩ ॥**

**ಜರಾಭಿಭೂತಃ ಪುರುಷಃ ಪುತ್ರೀಪುತ್ರಾದಿಬಾಂಧವೈಃ ।**
**ಅಸಕ್ತತ್ವಾದ್ದುರಾಧರ್ಷೈರ್ಭೃತ್ಯೈಶ್ಚ ಪರಿಭೂಯತೇ　　॥ ೬೪ ॥**

ಅಣುಮಾತ್ರವೂ ಸುಖವುಂಟಾಗಲಾರದು. ಇದನ್ನು ಪಂಚಚೂಡಾ ಎಂಬ ಅಪ್ಸರ ಸ್ತ್ರೀಯು ಹೇಳಿರುವಳು. ಮಾನಾವಮಾನಗಳು, ವಿರಹದುಃಖ, ಇಷ್ಟಜನರ ಸಂಗ ಇವೇ ಮೊದಲಾದುವುಗಳಿಂದಲೂ ಮುಪ್ಪಿನಿಂದಲೂ ಯೌವನವು ನಾಶವಾಗುವುದರಿಂದ ನಿರ್ಬಾಧಕವಾದ ಸೌಖ್ಯವೆಲ್ಲಿಯದು?

೬೧. ಮುಪ್ಪಿನಿಂದ ಉಂಟಾಗುವ ಮೈಯಿನ ಚರ್ಮದ ಬಿಗಿಯು ತಪ್ಪುವಿಕೆ, (ಸುಕ್ಕು) ಕೂದಲು ಬೆಳ್ಳಗಾಗುವಿಕೆ, ಶರೀರವು ಶಿಥಿಲವಾಗುವುದು, ಯಾವ ಕೆಲಸವನ್ನೂ ಮಾಡಲು ಶಕ್ತಿಯಿಲ್ಲದೇ ಇರುವುದು ಇವೆಲ್ಲಾ ಮುಪ್ಪಿನಲ್ಲಿ ಉಂಟಾಗುವ ಬಾಧೆಗಳು. ಇವುಗಳನ್ನುಂಟುಮಾಡುವ ಮುಪ್ಪು ಯೌವನವನ್ನು ಹಾಳುಮಾಡುವುದು.

೬೨-೬೩. ಮೊದಲು ಸ್ತ್ರೀಪುರುಷರಿಗೆ ಇರುವ ಯೌವನವು ಪರಸ್ಪರವಾಗಿ ಮನೋಹರವಾಗಿರುವುದು. ಮುಪ್ಪಿನಿಂದ ಅದು ಅವರಿಗೇ ಅಸಹ್ಯವಾಗಿ ಕಾಣಿಸುವುದು. ಹಿಂದೆ ಇದ್ದವನೇ ಮುಪ್ಪಿನಿಂದ ಬೇರೆಯಾದವನಂತೆ ಆಗುವನು. ಇದನ್ನು ನೋಡಿ ತಿಳಿಯುತ್ತಿದ್ದಾಗ್ಯೂ ವೈರಾಗ್ಯವನ್ನು ಹೊಂದದೇ ಇರುವವನಿಗಿಂತ ಅಜ್ಞಾನಿಯು ಯಾವನಿರುವನು?

೬೪-೬೫. ಮುಪ್ಪಿನಿಂದ ತಾನು ಹಿಂದಿನಂತೆ ಇಲ್ಲದಿರುವುದರಿಂದ, ಮಗಳು ಮಗ ಇವರೇ ಮೊದಲಾದ ಬಂಧುಗಳೂ ಸೇವಕರೂ ಎಲ್ಲರೂ ಇವನನ್ನು ತಿರಸ್ಕಾರ

ಧರ್ಮಮರ್ಥಂ ಚ ಕಾಮಂ ವಾ ಮೋಕ್ಷಂ ವಾತಿಜರಾತುರಃ ।
ಅಶಕ್ತಸ್ಸಾಧಿತುಂ ತಸ್ಮಾದ್ಯುವಾ ಧರ್ಮಂ ಸಮಾಚರೇತ್ ॥ ೬೫ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಸಂಸಾರಚಿಕಿತ್ಸಾಯಾಂ ದೇಹಾಶುಚಿತ್ವಬಾಲ್ಯಾದ್ಯವಸ್ಥಾ
ದುಃಖವರ್ಣನಂ ನಾಮ ತ್ರಯೋವಿಂಶೋಽಧ್ಯಾಯಃ



ಮಾಡುವರು. ಮುದುಕನು ಧರ್ಮವನ್ನಾಗಲೀ ಅರ್ಥವನ್ನಾಗಲೀ, ಕಾಮವನ್ನಾಗಲೀ, ಮೋಕ್ಷವನ್ನಾಗಲೀ ಸಾಧಿಸಲು ಶಕ್ತನಲ್ಲದ ಕಾರಣ ಯೌವನವಿರುವಾಗಲೇ ಧರ್ಮವನ್ನಾಚರಿಸಬೇಕು.

ಇಲ್ಲಿಗೆ ಶ್ರೀ ಶಿವಪುರಾಣದ ಉಮಾಸಂಹಿತೆಯಲ್ಲಿ ದೇಹದ ಅಶುಚಿತ್ವ ಬಾಲ್ಯವೇ
ಮೊದಲಾದವುಗಳಲ್ಲಿ ಉಂಟಾಗುವ ದುಃಖವರ್ಣನವೆಂಬ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ಉಮಾಸಂಹಿತಾಯಾಂ
# ಚತುರ್ವಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಕುತ್ಸಿತಂ ಯೋಷಿದಥ ಯತ್ಸಂಪ್ರೋಕ್ತಂ ಪಂಚಚೂಡಯಾ ।
ತನ್ಮೇ ಬ್ರೂಹಿ ಸಮಾಸೇನ ಯದಿ ತುಷ್ಟೋಽಸಿ ಮೇ ಮುನೇ ॥ ೧ ॥

॥ ಸನತ್ಕುಮಾರ ಉವಾಚ ॥

ಸ್ತ್ರೀಣಾಂ ಸ್ವಭಾವಂ ವಕ್ಷ್ಯಾಮಿ ಶೃಣು ವಿಪ್ರ ಯಥಾತಥಂ ।
ಯಸ್ಯ ಶ್ರವಣಮಾತ್ರೇಣ ಭವೇದ್ವೈರಾಗ್ಯಮುತ್ತಮಂ ॥ ೨ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ವ್ಯಾಸಮುನಿಯು ಸನತ್ಕುಮಾರವನ್ನು ಪ್ರಶ್ನೆ ಮಾಡುವನು :—ಎಲೈ ಮುನಿಯೇ, ಪಂಚಚೂಡೆಯು, ಸ್ತ್ರೀಯರುಗಳು ಕೆಟ್ಟ ಸ್ವಭಾವವುಳ್ಳವರೆಂದು ಹೇಳಿರುವಳಷ್ಟೆ? ಆ ವಿಷಯವನ್ನು ನನಗೆ ವಿಸ್ತಾರವಾಗಿ ತಿಳಿಸು ಎನ್ನಲು,

೨. ಸನತ್ಕುಮಾರನಿಂತೆಂದನು :—ಎಲೈ ವ್ಯಾಸಮುನಿಯೇ, ಸ್ತ್ರೀಯರ ಸ್ವಭಾವವನ್ನು ಪಂಚಚೂಡೆಯು ಹೇಳಿದ ರೀತಿಯಲ್ಲೇ ಹೇಳುವೆನು ಕೇಳು. ಇದನ್ನು ಕೇಳಿದರೆ ಉತ್ತಮವಾದ ವೈರಾಗ್ಯವು ಪ್ರಾಪ್ತವಾಗುವುದು.

ಸ್ತ್ರಿಯೋ ಮೂಲಂ ಹಿ ದೋಷಾಣಾಂ ಲಘುಚಿತ್ತಾಃ ಸದಾ ಮುನೇ ।
ತದಾಸಕ್ತಿರ್ನ ಕರ್ತವ್ಯಾ ಮೋಕ್ಷೇಪ್ಸುಭಿರತಂದ್ರಿತೈಃ ॥ ೩ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ನಾರದಸ್ಯ ಚ ಸಂವಾದಂ ಪುಂಶ್ಚಲ್ಯಾ ಪಂಚಚೂಡಯಾ ॥ ೪ ॥

ಲೋಕಂ ಪರಿಚರನ್ ಧೀಮಾನ್ ದೇವರ್ಷಿರ್ನಾರದಃ ಪುರಾ ।
ದದರ್ಶಾಪ್ಸರಸಂ ಬಾಲಾಂ ಪಂಚಚೂಡಾಮನುತ್ತಮಾಂ ॥ ೫ ॥

ಪಪ್ರಚ್ಛಾಪ್ಸರಸಂ ಸುಭ್ರೂಂ ನಾರದೋ ಮುನಿಸತ್ತಮಃ ।
ಸಂಶಯೋ ಹೃದಿ ಮೇ ಕಶ್ಚಿತ್ತನ್ಮೇ ಬ್ರೂಹಿ ಸುಮಧ್ಯಮೇ ॥ ೬ ॥

ಏವಮುಕ್ತಾ ತು ಸಾ ವಿಪ್ರಂ ಪ್ರತ್ಯುವಾಚ ವರಾಪ್ಸರಾಃ ।
ವಿಷಯೇ ಸತಿ ವಕ್ಷ್ಯಾಮಿ ಸಮರ್ಥಾಂ ಮನ್ಯಸೇಽಥ ಮಾಂ ॥ ೭ ॥

೩. ಎಲೈ ಮುನಿಯೇ, ದೋಷಗಳಿಗೆಲ್ಲಾ ಸ್ತ್ರೀಯರೇ ಕಾರಣರು. ಅವರ ಮನಸ್ಸು ಯಾವಾಗಲೂ ದುರ್ಬಲವಾಗಿರುತ್ತದೆ. ಆದುದರಿಂದ ಮೋಕ್ಷವನ್ನು ಹೊಂದಲಿಷ್ಟವುಳ್ಳವರು ಸ್ತ್ರೀಯರ ವಿಷಯದಲ್ಲಿ ನಂಬಿಕೆಯನ್ನಿಡಬಾರದು.

೪. ಈ ವಿಷಯದಲ್ಲಿ ಹಿಂದೆ ನಡೆದ ಒಂದು ಚರಿತ್ರೆಯು ಉದಾಹರಣೆಯಾಗಿದೆ. ನಾರದನಿಗೂ ಮತ್ತು ಕುಲಟೆಯಾದ ಪಂಚಚೂಡೆಯೆಂಬ ಅಪ್ಸರಸ್ತ್ರೀಗೂ ನಡೆದ ಸಂವಾದವನ್ನು ಹೇಳುವೆನು.

೫. ಪೂರ್ವದಲ್ಲಿ ದೇವಋಷಿಯಾದ ನಾರದನು ಲೊಕವನ್ನೆಲ್ಲಾ ಸಂಚರಿಸುತ್ತಾ ಒಂದಾನೊಂದು ದಿವಸ ಸುಂದರಿಯೂ ಬಾಲೆಯೂ ಆದ ಪಂಚಚೂಡಾ ಎಂಬ ಅಪ್ಸರಸ್ತ್ರೀಯನ್ನು ನೋಡಿದನು.

೬. ಮುನಿಶ್ರೇಷ್ಠನಾದ ನಾರದನು ಆ ಸುಂದರಿಯಾದ ಪಂಚಚೂಡೆಯನ್ನು ಕುರಿತು ಎಲೌ ಪಂಚಚೂಡೆಯೇ, ನನ್ನ ಮನಸ್ಸಿನಲ್ಲಿ ಒಂದು ಸಂಶಯವಿದೆ. ಅದನ್ನು ನೀನು ನಿವಾರಿಸುವಿಯಾ ಎನ್ನಲು,

೭. ಆ ಮಾತನ್ನು ಕೇಳಿ ಆ ಅಪ್ಸರೆಯು ನಾರದನನ್ನು ಕುರಿತು ನೀನು ಕೇಳಬೇಕೆಂದಿರುವ ವಿಷಯವನ್ನು ಕೇಳು ಹೇಳಬಹುದಾದ ವಿಷಯವಾದರೆ ಉತ್ತರ ಕೊಡುವೆನು. ಆಗ ನನ್ನ ಸಾಮರ್ಥ್ಯವು ನಿನಗೆ ತಿಳಿಯುವುದು ಎಂದಳು.

॥ ನಾರದ ಉವಾಚ ॥

ನ ತ್ವಾಮವಿಷಯೇ ಭದ್ರೇ ನಿಯೋಕ್ಷ್ಯಾಮಿ ಕಥಂಚನ ।
ಸ್ತ್ರೀಣಾಂ ಸ್ವಭಾವಮಿಚ್ಛಾಮಿ ತ್ವತ್ತಃ ಶ್ರೋತುಂ ಸುಮಧ್ಯಮೇ ॥ ೮ ॥

॥ ಸನತ್ಕುಮಾರ ಉವಾಚ ॥

ಏತಚ್ಛ್ರುತ್ವಾ ವಚಸ್ತಸ್ಯ ದೇವರ್ಷೇರಪ್ಸರೋತ್ತಮಾ ।
ಪ್ರತ್ಯುವಾಚ ಮುನೀಶಂ ತಂ ದೇವರ್ಷಿಂ ಮುನಿಸತ್ತಮಂ ॥ ೯ ॥

॥ ಪಂಚಚೂಡೋವಾಚ ॥

ಮುನೇ ಶೃಣು ನ ಶಕ್ಯಾ ಸ್ತ್ರೀ ಸತೀ ವೈ ನಿಂದಿತುಂ ಸ್ತ್ರಿಯಾ ।
ವಿದಿತಾಸ್ತೇ ಸ್ತ್ರಿಯೋ ಯಾಶ್ಚ ಯಾದೃಶ್ಯಶ್ಚ ಸ್ವಭಾವತಃ ॥ ೧೦ ॥

ನ ಮಾಮರ್ಹಸಿ ದೇವರ್ಷೇ ನಿಯೋಕ್ತುಂ ಪ್ರಶ್ನಮೀದೃಶಂ ।
ಇತ್ಯುಕ್ತ್ವಾ ಸಾಽಭವತ್ತೂಷ್ಣೀಂ ಪಂಚಚೂಡಾಪ್ಸರೋವರಾ ॥ ೧೧ ॥

೮. ನಾರದನು ಹೇಳುವನು:—ಎಲೌ ಮಂಗಳಕರಳೇ, ಕೆಲಸಕ್ಕೆ ಬಾರದ ವೃತ್ತಾಂತವನ್ನು ಹೇಳೆಂದು ನಾನು ನಿನ್ನನ್ನು ಬಲವಂತಮಾಡಲಾರೆನು. ಆದರೆ ಸ್ತ್ರೀಯರುಗಳ ಸ್ವಭಾವವನ್ನು ನಿನ್ನಿಂದ ಕೇಳಬೇಕೆಂದು ಇಚ್ಛೆ ಇರುವುದರಿಂದ ಅದನ್ನು ನೀನು ಹೇಳು ಎಂದನು.

೯. ಸನತ್ಕುಮಾರನು ವ್ಯಾಸನಿಗೆ ಹೇಳುವನು:—ಎಲೈ ಮುನಿಶ್ರೇಷ್ಠನೇ, ನಾರದನ ಮಾತನ್ನು ಕೇಳಿ ಪಂಚಚೂಡೆಯು ಮುನಿಶ್ರೇಷ್ಠನಾದ ನಾರದನನ್ನು ಕುರಿತು,

೧೦-೧೧. ಪಂಚಚೂಡೆಯು ಹೇಳುವಳು:—ಎಲೈ ಮುನಿಯೇ, ಪತಿವ್ರತೆಯಾದವಳನ್ನು ಯಾವ ಸ್ತ್ರೀಯೂ ನಿಂದಿಸಬಾರದು. ಯಾವ ಯಾವ ಸ್ತ್ರೀಯರು ಎಂತಹ ಸ್ವಭಾವವುಳ್ಳವರು ಎಂದು ಲೋಕದಲ್ಲಿ ಪ್ರಸಿದ್ಧವಾಗಿರುವರು ಎಂಬ ಈ ವಿಷಯದಲ್ಲಿ ನನ್ನನ್ನು ನೀನು ಪ್ರಶ್ನೆಮಾಡಬೇಡ ಎಂದು ಹೇಳಿ ಆ ಅಪ್ಸರೆಯು ಸುಮ್ಮನಾದಳು.

**ಅಥ ದೇವರ್ಷಿವರ್ಯೋಽ ಹಿ ಶ್ರುತ್ವಾ ತದ್ವಾಕ್ಯಮುತ್ತಮಂ ।**
**ಪ್ರತ್ಯುವಾಚ ಪುನಸ್ತಾಂ ವೈ ಲೋಕಾನಾಂ ಹಿತಕಾಮ್ಯಯಾ ॥ ೧೨ ॥**

॥ ನಾರದ ಉವಾಚ ॥

**ಮೃಷಾವಾದೇ ಭವೇದ್ದೋಷಸ್ಸತ್ಯೇ ದೋಷೋ ನ ವಿದ್ಯತೇ ।**
**ಇತಿ ಜಾನೀಹಿ ಸತ್ಯಂ ತ್ವಂ ವದಾತಸ್ತತ್ಸುಮಧ್ಯಮೇ ॥ ೧೩ ॥**

॥ ಸನತ್ಕುಮಾರ ಉವಾಚ ॥

**ಇತ್ಯುಕ್ತಾ ಸಾ ಕೃತಮತೀ ರಭಸಾ ಚಾರುಹಾಸಿನೀ ।**
**ಸ್ತ್ರೀದೋಷಾನ್ ಶಾಶ್ವತಾನ್ ಸತ್ಯಾನ್ ಭಾಷಿತುಂ ಸಂಪ್ರಚಕ್ರಮೇ ॥ ೧೪ ॥**

॥ ಪಂಚಚೂಡೋವಾಚ ॥

**ಕುಲೀನಾ ನಾಥವಂತ್ಯಶ್ಚ ರೂಪವಂತ್ಯಶ್ಚ ಯೋಷಿತಃ ।**
**ಮರ್ಯಾದಾಸು ನ ತಿಷ್ಠಂತಿ ಸ ದೋಷಃ ಸ್ತ್ರೀಷು ನಾರದ ॥ ೧೫ ॥**

---

೧೨. ಅನಂತರ ದೇವಋಷಿಯಾದ ನಾರದನು ಪಂಚಚೂಡೆಯ ಮಾತನ್ನು ಕೇಳಿ ಪುನಃ ಅವಳನ್ನು ಕುರಿತು ಲೋಕಕ್ಕೆ ಹಿತವನ್ನು ಮಾಡಬೇಕೆಂಬ ದೃಷ್ಟಿಯಿಂದ ಮತ್ತಿಂತೆಂದನು.

೧೩. ಎಲೌ ಸುಂದರಿಯೇ, ಸುಳ್ಳು ಹೇಳಿದರೆ ದೋಷಬರುವುದು. ಸತ್ಯವನ್ನು ನುಡಿದರೆ ದೋಷವಿಲ್ಲ. ಇದನ್ನು ನೀನು ತಿಳಿದೇ ಇರುವೆ. ಆದುದರಿಂದ ಸತ್ಯವನ್ನು ಹೇಳು. ಅದರಿಂದ ನಿನಗೆ ದೋಷವಿಲ್ಲ ಎಂದನು.

೧೪. ಸನತ್ಕುಮಾರನು ಹೇಳುವನು:—ಈರೀತಿಯಾದ ಮಾತನ್ನು ಕೇಳಿ ಮನೋಹರವಾಗಿ ನಗುತ್ತಾ ಆ ಅಪ್ಸರೆಯು ಸ್ತ್ರೀಯರ ದೋಷಗಳನ್ನು ಯಥಾವತ್ತಾಗಿ ವಿವರಿಸಲು ಪ್ರಾರಂಭಿಸಿದಳು.

೧೫. ಸತ್ಕುಲಪ್ರಸೂತರೂ, ಪತಿಯನ್ನುಳ್ಳವರೂ, ಸುಂದರಿಯರೂ ಆದ ಸ್ತ್ರೀಯರು ಸಹ ತಮ್ಮ ಸ್ವಭಾವವನ್ನು ಮೀರದೆ ಇರುವುದಿಲ್ಲ. ಅದು ಸ್ತ್ರೀಯರಲ್ಲಿನ ದೊಡ್ಡ ದೋಷವು.

ನ ಸ್ತ್ರೀಭ್ಯಃ ಕಿಂಚಿದನ್ಯದ್ವೈ ಪಾಪೀಯಸ್ತರಮಸ್ತಿ ಹ ।
ಸ್ತ್ರಿಯೋ ಮೂಲಂ ಹಿ ಪಾಪಾನಾಂ ತಥಾತ್ವಮಪಿ ವೇತ್ಥ ಹ ॥ ೧೬ ॥

ಸಮಾಜ್ಞಾತಾನರ್ಥವತಃ ಪ್ರತಿರೂಪಾನ್ ಯಥೇಪ್ಸಿತಾನ್ ।
ಯತೀನಂತರಮಾಸಾದ್ಯ ನಾಲಂ ನಾರ್ಯಃ ಪ್ರತೀಕ್ಷಿತುಂ ॥ ೧೭ ॥

ಅಸದ್ಧರ್ಮಸ್ತ್ವಯಂ ಸ್ತ್ರೀಣಾಮಸ್ಮಾಕಂ ಭವತಿ ಪ್ರಭೋ ।
ಪಾಪೀಯಸೋ ನರಾನ್ ಯದ್ವೈ ಲಜ್ಜಾಂ ತ್ಯಕ್ತ್ವಾ ಭಜಾಮಹೇ ॥ ೧೮ ॥

ಸ್ತ್ರಿಯಂ ಚ ಯಃ ಪ್ರಾರ್ಥಯತೇ ಸನ್ನಿಕರ್ಷಂ ಚ ಗಚ್ಛತಿ ।
ಈಷಚ್ಚ ಕುರುತೇ ಸೇವಾಂ ತಮೇವೇಚ್ಛಂತಿ ಯೋಷಿತಃ ॥ ೧೯ ॥

ಅನರ್ಥಿತ್ವಾನ್ಮನುಷ್ಯಾಣಾಂ ಭಯಾತ್ಪತಿಜನಸ್ಯ ಚ ।
ಮರ್ಯಾದಾಯಾಮಮರ್ಯಾದಾಃ ಸ್ತ್ರಿಯಸ್ತಿಷ್ಠಂತಿ ಭರ್ತೃಷು ॥ ೨೦ ॥

೧೬. ಸ್ತ್ರೀಯರುಗಳಿಗೆ ಇದಾಗಲೀ ಮತ್ತೊಂದಾಗಲೀ ಅತ್ಯಂತ ಪಾಪವೆಂಬ ಜ್ಞಾನವೇ ಇರುವುದಿಲ್ಲ. ಆದುದರಿಂದ ಸ್ತ್ರೀಯರೇ ಪಾಪಗಳಿಗೆಲ್ಲಾ ಕಾರಣಭೂತ ರಾದವರು ಎಂದು ತಿಳಿ. ಇದು ನಿಶ್ಚಯವು.

೧೭. ತಮಗಿಷ್ಟವಾದ ಯೋಗ್ಯವಾದ ವಸ್ತುಗಳನ್ನು ಹೊಂದಲು ಸಮರ್ಥ ರಾಗಿಯೂ ಜ್ಞಾನಿಗಳಾಗಿಯೂ ಇರುವ ಯತಿಗಳನ್ನು ಮಾತ್ರ ಇವರು ಒಲಿಸಿ ಕೊಳ್ಳಲು ಅಸಮರ್ಥರಾಗಿರುವರು.

೧೮. ಎಲೈ ಮುನಿಯೇ, ಪಾಪಿಗಳಾದ ನಮ್ಮಂತಹ ಸ್ತ್ರೀಯರು ಲಜ್ಜೆಯನ್ನು ಬಿಟ್ಟು ಮನುಷ್ಯನನ್ನು ಸೇರುವರು. ಇದು ಒಂದು ಅಧರ್ಮವಾದ ವಿಷಯವು.

೧೯. ಯಾವನು ಸ್ತ್ರೀಯರನ್ನು ಪ್ರಾರ್ಥಿಸಿಕೊಳ್ಳುವನೋ, ಅವರ ಹತ್ತಿರ ಓಡಾಡುವನೋ, ಸ್ವಲ್ಪವಾದರೂ ಅವರ ಸೇವೆಯನ್ನು ಮಾಡುವನೋ ಅವನನ್ನೇ ಸ್ತ್ರೀಯರು ಇಷ್ಟಪಡುವರು.

೨೦. ಸ್ತ್ರೀಯರು ಪತಿಯ ಭಯದಿಂದ ಅವನ ಅಧೀನದಲ್ಲಿರುವವರು ಅಥವಾ ಕಾಮುಕರಾದ ಇತರ ಜನರು ಸಿಕ್ಕದಿರುವಾಗ ಮಾತ್ರ ಪತಿಯ ಆಜ್ಞೆಯಲ್ಲಿರುವರು. ಬೇರೆ ಕಾರಣದಿಂದಲ್ಲ.

ನಾಸಾಂ ಕಶ್ಚಿದಮಾನ್ಯೋಽಸ್ತಿ ನಾಸಾಂ ವಯಸಿ ನಿಶ್ಚಯಃ ।
ಸುರೂಪಂ ವಾ ಕುರೂಪಂ ವಾ ಪುಮಾಂಸಮುಪಭುಂಜತೇ ॥ ೨೧ ॥

ನ ಭಯಾದಥ ವಾ ಕ್ರೋಶಾನ್ನಾರ್ಥಹೇತೋಃ ಕಥಂಚನ ।
ನ ಜ್ಞಾತಿಕುಲಸಂಬಂಧಾತ್ ಸ್ತ್ರಿಯಸ್ತಿಷ್ಠಂತಿ ಭರ್ತೃಷು ॥ ೨೨ ॥

ಯೌವನೇ ವರ್ತಮಾನಾನಾಮಿಷ್ಟಾಭರಣವಾಸಸಾಂ ।
ನಾರೀಣಾಂ ಸ್ವೈರವೃತ್ತೀನಾಂ ಸ್ಪೃಹಯಂತಿ ಕುಲಸ್ತ್ರಿಯಃ ॥ ೨೩ ॥

ಯಾ ಹಿ ಶಶ್ವದ್ಬಹುಮತಾ ರಕ್ಷ್ಯಂತೇ ದಯಿತಾಃ ಸ್ತ್ರಿಯಃ ।
ಅಪಿ ತಾಃ ಸಂಪ್ರಸಜ್ಜಂತೇ ಕುಬ್ಜಾಂಧಜಡವಾಮನೇ ॥ ೨೪ ॥

ಪಂಗುಷ್ವಪಿ ಚ ದೇವರ್ಷೇ ಯೇ ಚಾನ್ಯೇ ಕುತ್ಸಿತಾಃ ನರಾಃ ।
ಸ್ತ್ರೀಣಾಮಗಮ್ಯೋ ಲೋಕೇಷು ನಾಸ್ತಿ ಕಶ್ಚಿನ್ಮಹಾಮುನೇ ॥ ೨೫ ॥

೨೧. ಸ್ತ್ರೀಯರಿಗೆ ಇಂತಹ ಪುರುಷನು ಯೋಗ್ಯನೆಂದಾಗಲೀ, ಇಂತಹವನು ತನಗೆ ಸರಿಯಾದ ವಯಸ್ಸಿನವನೆಂದಾಗಲೀ ಇಲ್ಲವು. ಅವರಿಗೆ ಮನಸ್ಸು ಬಂತೆಂದರೆ ಸುಂದರನಾಗಲೀ, ಕುರೂಪಿಯಾಗಲೀ ಅಂತಹ ಪುರುಷನೊಡನೆ ರಮಿಸುತ್ತಾರೆ.

೨೨-೨೩. ಸ್ತ್ರೀಯರು ಗಂಡನ ಭಯದಿಂದಲಾಗಲೀ, ಸಿಟ್ಟಿನಿಂದಲಾಗಲೀ, ಹಣದಾಸೆಯಿಂದಲಾಗಲೀ, ಜ್ಞಾತಿಗಳ ಮತ್ತು ಕುಲದ ಸಂಬಂಧದ ದೃಷ್ಟಿಯಿಂದ ಲಾಗಲೀ, ಪತಿಯ ಆಜ್ಞೆಯಲ್ಲಿ ಇರುವುದಿಲ್ಲ. ಕುಲಸ್ತ್ರೀಯರು ಯುವತಿಯರಾಗಿರುವಾಗ ತಮಗಿಷ್ಟವಾದ ಆಭರಣಗಳನ್ನೂ ಬಟ್ಟೆಗಳನ್ನೂ ಧರಿಸಿ ಸ್ವೇಚ್ಛೆಯಾಗಿ ವ್ಯವಹಾರ ಮಾಡುತ್ತಿರುವ ಸ್ತ್ರೀಯರನ್ನು ನೋಡಿ ಅದರಂತೆ ಇರಲು ಅಪೇಕ್ಷಿಸುವರು.

೨೪. ಯಾರು ಸ್ತ್ರೀಯರನ್ನು ಬಾರಿಬಾರಿಗೂ ಬಹುಮಾನಿಸಿ ಕಾಪಾಡುವರೋ ಅಂತಹವರು ಕುಳ್ಳರಾಗಿರಲಿ, ಕುರುಡರಾಗಿರಲಿ ಅಥವಾ ಮೋಟರಾಗಿರಲಿ ಅವರನ್ನು ಸ್ತ್ರೀಯರು ಹೊಂದಲಪೇಕ್ಷಿಸುವರು.

೨೫. ಎಲೈ ನಾರದನೇ, ಕೇಳು. ಮನುಷ್ಯರು ಕುಂಟರಾಗಿರಲಿ, ಅಧಮ ರಾಗಿರಲಿ ಯಾರಾದರೂ ಸರಿಯೆ ಇಂಥವನು ತಮಗೆ ಅಯೋಗ್ಯನು ಎಂಬ ಪರಿಜ್ಞಾನವೇ ಸ್ತ್ರೀಯರಿಗಿರುವುದಿಲ್ಲ.

ಯದಿ ಪುಂಸಾಂ ಗತಿರ್ಬ್ರಹ್ಮನ್ ಕಥಂಚಿನ್ನೋಪಪದ್ಯತೇ ।
ಅಪ್ಯನ್ಯೋನ್ಯಂ ಪ್ರವರ್ತಂತೇ ನ ಚ ತಿಷ್ಠಂತಿ ಭರ್ತೃಷು ॥ ೨೬ ॥

ಅಲಾಭಾತ್ಪುರುಷಾಣಾಂ ಚ ಭಯಾತ್ಪರಿಜನಸ್ಯ ಚ ।
ವಧಬಂಧಭಯಾಚ್ಚೈವ ತಾ ಭಗ್ನಾಶಾ ಹಿ ಯೋಷಿತಃ ॥ ೨೭ ॥

ಚಲಸ್ವಭಾವಾ ದುಶ್ಚೇಷ್ಟಾ ದುರ್ಗ್ರಾಹ್ಯಾ ಭಾವತಸ್ತಥಾ ।
ಪ್ರಾಜ್ಞಸ್ಯ ಪುರುಷಸ್ಯೇಹ ಯಥಾ ರತಿಪರಿಗ್ರಹಾತ್ ॥ ೨೮ ॥

ನಾಗ್ನಿಸ್ತೃಷ್ಯತಿ ಕಾಷ್ಠಾನಾಂ ನಾಪಗಾನಾಂ ಮಹೋದಧಿಃ ।
ನಾಂತಕಸ್ಸರ್ವಭೂತಾನಾಂ ನ ಪುಂಸಾಂ ವಾಮಲೋಚನಾಃ ॥ ೨೯ ॥

ಇದಮನ್ಯಚ್ಚ ದೇವರ್ಷೇ ರಹಸ್ಯಂ ಸರ್ವಯೋಷಿತಾಂ ।
ದೃಷ್ಟ್ವೈವ ಪುರುಷಂ ಸದ್ಯೋ ಯೋನಿಃ ಪ್ರಕ್ಲಿದ್ಯತೇ ಸ್ತ್ರಿಯಃ ॥ ೩೦ ॥

೨೬. ಗಂಡನ ವಿಚಾರದಲ್ಲಿ ಸ್ತ್ರೀಯರಿಗೆ ಹೊಂದಿಕೆ ಇಲ್ಲದಿದ್ದರೂ, ತಮಗೆ ಇಷ್ಟರಾದ ಜನರಲ್ಲಿ ಅನ್ಯೋನ್ಯ ಪ್ರೀತಿಯಿಂದ ಪ್ರವರ್ತಿಸುವರು.

೨೭. ತಮಗಿಷ್ಟನಾದವನು ದೊರೆಯದೆ ಪರಿಜನರ ಭಯವೂ ಇದ್ದು ಮತ್ತು ಮರಣ, ಕಾರಾಗೃಹ, ಬಂಧನ ಮುಂತಾದುವುಗಳ ಭಯವೂ ಇದ್ದರೆ ಆಗ ಮಾತ್ರ ಸ್ತ್ರೀಯರಿಗೆ ಪರಪುರುಷರಲ್ಲಿ ಆಸಕ್ತಿಯಿಲ್ಲದಿರುವುದು.

೨೮. ಜ್ಞಾನಿಯಾದ ಪುರುಷನು ವಿಚಾರಿಸಿದರೆ ಸ್ತ್ರೀಯರ ಸ್ವಭಾವವು ಬಹು ಚಂಚಲವಾದುದು. ಅವರದು ಕೆಟ್ಟವ್ಯವಹಾರವು. ರತಿಕಾಲದಲ್ಲಿ ಅವರಿಗೆ ಕೃತ್ಯಾಕೃತ್ಯ ವಿಷಯವೇ ಇರುವುದಿಲ್ಲ.

೨೯. ಎಷ್ಟೇ ಸೌದೆಗಳನ್ನು ಹಾಕಿದರೂ ಅಗ್ನಿಗೆ ತೃಪ್ತಿಯಾಗುವುದಿಲ್ಲ. ಎಷ್ಟೇ ನದಿಗಳು ಬಂದು ಸೇರಿದರೂ ಸಮುದ್ರಕ್ಕೆ ತೃಪ್ತಿಯಾಗುವುದಿಲ್ಲ. ಎಷ್ಟೇಜನ ಸತ್ತರೂ ಸಹ ಯಮನಿಗೆ ತೃಪ್ತಿಯಾಗುವುದಿಲ್ಲ. ಹಾಗೆಯೇ ಎಷ್ಟೇ ಕಾಮುಕರಾದ ಜನರಿದ್ದರೂ ಸ್ತ್ರೀಯರಿಗೆ ತೃಪ್ತಿಯಾಗುವುದಿಲ್ಲ.

೩೦. ಎಲೈ ನಾರದನೇ, ನೋಡು. ಎಲ್ಲಾ ಸ್ತ್ರೀಯರುಗಳಲ್ಲಿಯೂ ಇರುವ ಇನ್ನೊಂದು ಗುಟ್ಟಾದ ವಿಷಯವೇನೆಂದರೆ, ಸ್ತ್ರೀಯರುಗಳಿಗೆ ತಮಗಿಷ್ಟನಾದ ಪುರುಷ

**ಸುಸ್ನಾತಂ ಪುರುಷಂ ದೃಷ್ಟ್ವಾ ಸುಗಂಧಂ ಮಲವರ್ಜಿತಂ ।**
**ಯೋನಿಃ ಪ್ರಕ್ಲಿದ್ಯತೇ ಸ್ತ್ರೀಣಾಂ ದೃತೇಃ ಪಾತ್ರಾದಿವೋದಕಂ ॥ ೩೧ ॥**

**ಕಾಯಾನಾಮಪಿ ದಾತಾರಂ ಕರ್ತಾರಂ ಮಾನಸಾಂತ್ವಯೋಃ ।**
**ರಕ್ಷಿತಾರಂ ನ ಮೃಷ್ಯಂತಿ ಭರ್ತಾರಂ ಪರಮಂ ಸ್ತ್ರೀಯಃ ॥ ೩೨ ॥**

**ನ ಕಾಮಭೋಗಾತ್ಪರಮಾನ್ನಾಲಂಕಾರಾರ್ಥಸಂಚಯಾತ್ ।**
**ತಥಾ ಹಿತಂ ನ ಮನ್ಯಂತೇ ಯಥಾ ರತಿಪರಿಗ್ರಹಾತ್ ॥ ೩೩ ॥**

**ಅಂತಕಶ್ಯಮನೋ ಮೃತ್ಯುಃ ಪಾತಾಲಂ ಬಡಬಾಮುಖಂ ।**
**ಕ್ಷುರಾಧಾರಾಂ ವಿಷಂ ಸರ್ಪೋ ವಹ್ನಿರಿತ್ಯೇಕತಃ ಸ್ತ್ರೀಯಃ ॥ ೩೪ ॥**

---

ನನ್ನು ನೋಡಿದಾಕ್ಷಣವೇ ಅವರ ಯೋನಿಪ್ರದೇಶವು ಕಾಮವಿಕಾರಕ್ಕೊಳಗಾಗಿ ಒದ್ದೆಯಾಗುವುದು.

೩೧. ಸ್ನಾನಮಾಡಿ ಶುಚಿಯಾಗಿಯೂ, ಗಂಧಲೇಪನಾದಿಗಳಿಂದ ಅಲಂಕೃತನಾಗಿಯೂ ಇರುವ ಸುಂದರ ಪುರುಷನನ್ನು ನೋಡಿದಕ್ಷಣವೇ ನೀರಿನಿಂದ ಪಾತ್ರೆಯು ಒದ್ದೆಯಾಗುವಂತೆ ಅವರ ಯೋನಿಪ್ರದೇಶವು ಒದ್ದೆಯಾಗುವುದು.

೩೨. ಶರೀರವನ್ನೇ ಅವರಿಗೋಸ್ಕರ ಕೊಟ್ಟರೂ ಮನಸ್ಸನ್ನು ಸಮಾಧಾನಗೊಳಿಸಿ ರಕ್ಷಿಸಿದರೂ ಸ್ತ್ರೀಯರು ಶ್ರೇಷ್ಠನಾದ ಪತಿಯ ವಿಷಯದಲ್ಲಿ ಸಮಾಧಾನದಿಂದಿರುವುದಿಲ್ಲ.

೩೩. ಸ್ತ್ರೀಯರಿಗೆ ರತಿಸುಖಕ್ಕಿಂತ ಹಿತವಾದುದು ಯಾವುದೂ ಇಲ್ಲ. ಅವರಿಷ್ಟಾರ್ಥಗಳನ್ನು ನೇರವೇರಿಸುವುದರಿಂದಾಗಲೀ ಅವರು ಕೇಳಿದ ಒಡವೆಗಳನ್ನು ತಂದುಕೊಡುವುದರಿಂದಾಗಲೀ ಅವರಿಗೆ ತೃಪ್ತಿಯಾಗುವುದಿಲ್ಲ.

೩೪. ಅಂತಕನೂ, ಯಮನೂ, ಮೃತ್ಯುವೂ, ಪಾತಾಲವೂ, ಬಡಬಾಗ್ನಿಯೂ, ಕತ್ತಿಯಮೊನೆ, ವಿಷ, ಸರ್ಪ, ವಹ್ನಿ, ಇವೆಲ್ಲವೂ ಎಂದರೆ ಇವರಲ್ಲಿರುವ ದೋಷಗಳೆಲ್ಲವೂ ಸ್ತ್ರೀಯರಲ್ಲಿ ಒಂದೇಕಡೆ ಸೇರಿರುತ್ತವೆ.

ಯತಶ್ಚ ಭೂತಾನಿ ಮಹಾಂತಿ ಪಂಚ
ಯತಶ್ಚ ಲೋಕೋ ವಿಹಿತೋ ವಿಧಾತ್ರಾ ।
ಯತಃ ಪುಮಾಂಸಃ ಪ್ರಮದಾಶ್ಚ ನಿರ್ಮಿತಾಃ
ಸದೈವ ದೋಷಃ ಪ್ರಮದಾಸು ನಾರದ ॥ ೩೫ ॥

॥ ಸನತ್ಕುಮಾರ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯಾ ನಾರದಸ್ತುಷ್ಟಮಾನಸಃ ।
ತಥ್ಯಂ ಮತ್ವಾ ತತಸ್ತದ್ವೈ ವಿರಕ್ತೋಽಭೂದ್ಧಿ ತಾಸು ಚ ॥ ೩೬ ॥

ಇತ್ಯುಕ್ತಃ ಸ್ತ್ರೀಸ್ವಭಾವಸ್ತೇ ಪಂಚಚೂಡೋಕ್ತ ಆದರಾತ್ ।
ವೈರಾಗ್ಯಕಾರಣಂ ವ್ಯಾಸ ಕಿಮನ್ಯಚ್ಛ್ರೋತುಮಿಚ್ಛಸಿ ॥ ೩೭ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಸ್ತ್ರೀಸ್ವಭಾವವರ್ಣನಂ ನಾಮಚತುರ್ವಿಂಶೋಽಧ್ಯಾಯಃ

೩೫. ಬ್ರಹ್ಮನು ಯಾವ ಕಾರಣದಿಂದ ಪಂಚಭೂತಗಳನ್ನೂ, ಚತುರ್ದಶ ಭುವನಗಳನ್ನೂ ನಿರ್ಮಿಸಿರುವನೋ ಯಾವ ಕಾರಣದಿಂದ ಗಂಡಸರನ್ನೂ ಹೆಂಗಸರನ್ನೂ ನಿರ್ಮಿಸಿರುವನೋ ಅದೇ ಕಾರಣದಿಂದಲೇ ಸ್ತ್ರೀಯರಲ್ಲಿ ದೋಷಗಳನ್ನೂ ನಿರ್ಮಿಸಿರುವನು.

೩೬. ಸನತ್ಕುಮಾರನು ಹೇಳುವನು:—ಈರೀತಿಯಾಗಿ ಹೇಳಿದ ಪಂಚಚೂಡೆಯ ಮಾತನ್ನು ಕೇಳಿ ನಾರದನು ಸಂತೋಷಗೊಂಡು, ನಿಜವಾದ ವಿಷಯವನ್ನು ಕೇಳಿ ತಿಳಿದುಕೊಂಡು ಅಂದಿನಿಂದ ಸ್ತ್ರೀಯರ ವಿಷಯದಲ್ಲಿ ವಿರಕ್ತಿಯನ್ನು ಹೊಂದಿದನು.

೩೭. ಎಲೈ ವ್ಯಾಸನೇ, ಪಂಚಚೂಡೆಯು ಹೇಳಿದ ಸ್ತ್ರೀಯರ ಸ್ವಭಾವವನ್ನು ನಾನು ನಿನಗೆ ಹೇಳಿರುವೆನು. ಇದು ವೈರಾಗ್ಯವನ್ನುಂಟುಮಾಡುವುದು. ಈಗ ಮತ್ತೇನನ್ನು ಕೇಳಬೇಕೆಂದಿರುವೆ? ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಸ್ತ್ರೀಸ್ವಭಾವವರ್ಣನವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಪಂಚವಿಂಶೋऽಧ್ಯಾಯಃ

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ತ್ವತ್ಸಕಾಶಾನ್ಮಯಾ ಮುನೇ ।
ಸ್ತ್ರೀಸ್ವಭಾವಃ ಶ್ರುತಃ ಪ್ರೀತ್ಯಾ ಕಾಲಜ್ಞಾನಂ ವದಸ್ವ ಮೇ ॥ ೧ ॥

॥ ಸನತ್ಕುಮಾರ ಉವಾಚ ॥

ಇದಮೇವ ಪುರಾಪೃಚ್ಛತ್ಪಾರ್ವತೀ ಪರಮೇಶ್ವರಂ ।
ಶ್ರುತ್ವಾ ನಾನಾಕಥಾಂ ದಿವ್ಯಾಂ ಪ್ರಸನ್ನಾ ಸುಪ್ರಣಮ್ಯ ತಂ ॥ ೨ ॥

### ಇಪ್ಪತ್ತೈದನೆಯ ಅಧ್ಯಾಯವು

೧. ವ್ಯಾಸಮುನಿಯು ಪ್ರಶ್ನೆ ಮಾಡುವನು :—ಎಲೈ ಸರ್ವಜ್ಞನಾದ ಸನತ್ಕುಮಾರನೇ, ನಿನ್ನಿಂದ ಸ್ತ್ರೀಯರ ಸ್ವಭಾವವನ್ನು ಕೇಳಿದ್ದಾಯಿತು. ಈಗ ನನಗೆ ಕಾಲಜ್ಞಾನವನ್ನು ವಿವರಿಸಿ ಹೇಳು ಎನ್ನಲು,

೨. ಸನತ್ಕುಮಾರನು ಹೇಳುವನು :—ಎಲೈ ಮುನಿಯೇ, ಪೂರ್ವದಲ್ಲಿ ನಾನಾವಿಧವಾದ ಕಥೆಗಳನ್ನು ಕೇಳಿದನಂತರ ಇದೇ ವಿಷಯವನ್ನು ಪಾರ್ವತಿಯು ಪರಮೇಶ್ವರನನ್ನು ನಮಸ್ಕರಿಸಿ ಕೇಳಿದಳು. ಅದನ್ನೇ ಹೇಳುವೆನು.

॥ ಪಾರ್ವತ್ಯುವಾಚ ॥

ಭಗವನ್ ತತ್ಪ್ರಸಾದೇನ ಜ್ಞಾತಂ ಮೇ ಸಕಲಂ ಮತಂ ।
ಯಥಾರ್ಚನಂ ತು ತೇ ದೇವ ಯಮತ್ರಶ್ಚ ಯಥಾವಿಧಿ ॥ ೩ ॥

ಅದ್ಯಾಪಿ ಸಂಶಯಸ್ತ್ವೇಕಃ ಕಾಲಚಕ್ರಂ ಪ್ರತಿ ಪ್ರಭೋ ।
ಮೃತ್ಯುಚಿಹ್ನಂ ಯಥಾ ದೇವ ಕಿಂ ಪ್ರಮಾಣಂ ಯಥಾಯುಷಃ ॥ ೪ ॥

ತಥಾ ಕಥಯ ಮೇ ನಾಥ ಯದ್ಯಹಂ ತವ ವಲ್ಲಭಾ ।
ಇತಿ ಪೃಷ್ಟಸ್ತಯಾ ದೇವ್ಯಾ ಪ್ರತ್ಯುವಾಚ ಮಹೇಶ್ವರಃ ॥ ೫ ॥

॥ ಈಶ್ವರ ಉವಾಚ ॥

ಸತ್ಯಂ ತೇ ಕಥಯಿಷ್ಯಾಮಿ ಶಾಸ್ತ್ರಂ ಸರ್ವೋತ್ತಮಂ ಪ್ರಿಯೇ ।
ಯೇನ ಶಾಸ್ತ್ರೇಣ ದೇವೇಶಿ ನರೈಃ ಕಾಲಃ ಪ್ರಬುಧ್ಯತೇ ॥ ೬ ॥

ಅಹಃ ಪಕ್ಷಂ ತಥಾ ಮಾಸಮೃತುಂ ಚಾಯನವತ್ಸರೌ ।
ಸ್ಥೂಲಸೂಕ್ಷ್ಮಗತೈಶ್ಚಿಹ್ನೈರ್ಬಹಿರಂತರ್ಗತೈಸ್ತಥಾ ॥ ೭ ॥

೩. ಪಾರ್ವತಿಯು ಕೇಳುವಳು:—ಎಲೈ ಪರಮೇಶ್ವರನೇ, ನಿನ್ನ ಅನುಗ್ರಹದಿಂದ ಸಕಲ ವಿಷಯಗಳು ಗೊತ್ತಾದವು. ನಿನ್ನನ್ನು ಪೂಜಿಸುವ ವಿಷಯವೂ ಮತ್ತು ಯಥಾವಿಧಿಯಾದ ಧ್ಯಾನವೂ ತಿಳಿಯಿತು.

೪-೫. ಆದರೆ ಕಾಲಚಕ್ರದ ವಿಷಯದಲ್ಲಿ ನನಗಿನ್ನೂ ಒಂದು ಸಂಶಯವು ಇದ್ದೇ ಇರುವುದು. ಓ ಪ್ರಭುವೇ, ನಾನು ನಿನಗೆ ಪ್ರೀತಿಪಾತ್ರಳಾಗಿದ್ದ ಪಕ್ಷಕ್ಕೆ ಆಯುಸ್ಸಿನಲ್ಲಿ ಮೃತ್ಯುಚಿಹ್ನೆಯು ಎಂತಹುದು ಎಂಬ ವಿಷಯವನ್ನು ನನಗೆ ಹೇಳು. ಎಂಬುದಾಗಿ ಪಾರ್ವತಿಯು ಕೇಳಲು ಮಹೇಶ್ವರನಿಂತೆಂದನು.

೬. ಎಲೌ ಪ್ರಿಯೇ, ಜನರು ಯಾವುದರಿಂದ ಕಾಲವನ್ನು ಚೆನ್ನಾಗಿ ತಿಳಿಯುವರೋ ಅಂತಹ ಸರ್ವೋತ್ತಮವಾದ ಶಾಸ್ತ್ರವನ್ನು ಸತ್ಯವಾಗಿ ಹೇಳುವೆನು.

೭-೮. ಜನಗಳಿಗೆ ಉಪಕಾರವಾಗುವುದಕ್ಕೋಸ್ಕರವಾಗಿಯೂ ಮತ್ತು ವೈರಾಗ್ಯವುಂಟಾಗುವುದಕ್ಕೂ ನಾನು ಈಗ, ದಿವಸ, ಪಕ್ಷ, ಮಾಸ, ಋತು, ಅಯನ, ವರ್ಷ ಮೊಂತಾದುವುಗಳನ್ನು ಸ್ಥೂಲವಾದ ಮತ್ತು ಸೂಕ್ಷ್ಮವಾದ ಚಿಹ್ನೆಗಳಿಂದಲೂ

ತತ್ತ್ತೇಽಹಂ ಸಂಪ್ರವಕ್ಷ್ಯಾಮಿ ಶೃಣು ತತ್ತ್ವೇನ ಸುಂದರಿ ।
ಲೋಕಾನಾಮುಪಕಾರಾರ್ಥಂ ವೈರಾಗ್ಯಾರ್ಥಮುಮೇಽಧುನಾ ॥ ೮ ॥

ಅಕಸ್ಮಾತ್ಪಾಂಡುರಂ ದೇಹಮೂರ್ಧ್ವರಾಗಂ ಸಮಂತತಃ ।
ತದಾ ಮೃತ್ಯುಂವಿಜಾನೀಯಾತ್ ಷಣ್ಮಾಸಾಭ್ಯಂತರೇ ಪ್ರಿಯೇ ॥ ೯ ॥

ಮುಖಂ ಕರ್ಣೌ ತಥಾ ಚಕ್ಷುರ್ಜಿಹ್ವಾಸ್ತಂಭೋ ಯದಾ ಭವೇತ್ ।
ತದಾ ಮೃತ್ಯುಂ ವಿಜಾನೀಯಾತ್ ಷಣ್ಮಾಸಾಭ್ಯಂತರೇ ಪ್ರಿಯೇ ॥ ೧೦ ॥

ರೌರವಾನುಗತಂ ಭದ್ರೇ ಧ್ವನಿಂ ನಾಕರ್ಣಯೇದ್ದ್ರುತಂ ।
ಷಣ್ಮಾಸಾಭ್ಯಂತರೇ ಮೃತ್ಯುರ್ಜ್ಞಾತವ್ಯಃ ಕಾಲವೇದಿಭಿಃ ॥ ೧೧ ॥

ರವಿಸೋಮಾಗ್ನಿಸಂಯೋಗಾದ್ಯದೋದ್ಯೋತಂ ನ ಪಶ್ಯತಿ ।
ಕೃಷ್ಣಂ ಸರ್ವಂ ಸಮಸ್ತಂ ಚ ಷಣ್ಮಾಸಂ ಜೀವಿತಂ ತಥಾ ॥ ೧೨ ॥

---

ಅಂತರಂಗ ಬಹಿರಂಗ ಚಿಹ್ನೆಗಳಿಂದಲೂ ಹೇಳುವೆನು. ಎಲೌ ಸುಂದರಿ, ಅದನ್ನು ಲಕ್ಷ್ಯವಿಟ್ಟು ಕೇಳು.

೯. ದೇಹವು ಅಕಸ್ಮಾತ್ತಾಗಿ ಬಿಳುಪಾದರೆ ಮತ್ತು ಸುತ್ತಲೂ ಊರ್ಧ್ವರಾಗವಾಗಲು ಅಲ್ಲಿಂದ ಆರು ತಿಂಗಳೊಳಗೇ ಮೃತ್ಯುವುಂಟಾಗುವುದೆಂದು ತಿಳಿಯಬೇಕು.

೧೦. ಮುಖವೂ, ಕಿವಿಗಳೂ, ಕಣ್ಣೂ, ನಾಲಿಗೆಯೂ ಯಾವಾಗ ಚಲಿಸದೆ ನಿಂತುಹೋಗುವುವೋ ಅಂದಿನಿಂದ ಆರು ತಿಂಗಳೊಳಗೆ ಮೃತ್ಯುವುಂಟಾಗುವುದೆಂದು ತಿಳಿಯತಕ್ಕದು.

೧೧. ಎಲೈ ಮಂಗಳಕರಳೇ, ರೌರವಾನುಗತವಾಗಿರುವ ಧ್ವನಿಯು ಯಾವಾಗ ಕೇಳಿಸುವುದಿಲ್ಲವೋ ಅಲ್ಲಿಂದ ಆರು ತಿಂಗಳೊಳಗೆ ಸತ್ಯವಾಗಿಯೂ ಮೃತ್ಯುವು ಪ್ರಾಪ್ತವಾಗುವುದೆಂದು ತಿಳಿಯತಕ್ಕದು.

೧೨. ಸೂರ್ಯ, ಚಂದ್ರ, ಅಗ್ನಿ ಇವರುಗಳ ಉದಯದಿಂದುಂಟಾದ ಬೆಳಕು ಕಾಣದಿದ್ದರೆ ಮತ್ತು ಎಲ್ಲ ವಸ್ತುಗಳೂ ಕಪ್ಪಾಗಿ ಕಂಡರೆ ಅಂತಹವನ ಬದುಕುವಿಕೆಯು ಆರು ತಿಂಗಳು ಮಾತ್ರ.

ವಾಮಹಸ್ತೋ ಯದಾ ದೇವಿ ಸಪ್ತಾಹಂ ಸ್ಪಂದತೇ ಪ್ರಿಯೇ ।
ಜೀವಿತಂ ತು ತದಾ ತಸ್ಯ ಮಾಸಮೇಕಂ ನ ಸಂಶಯಃ ॥ ೧೩ ॥

ಉನ್ಮೀಲಯಂತಿ ಗಾತ್ರಾಣಿ ತಾಲುಕಂ ಶುಷ್ಯತೇ ಯದಾ ।
ಜೀವಿತಂ ತು ತದಾ ತಸ್ಯ ಮಾಸಮೇಕಂ ನ ಸಂಶಯಃ ॥ ೧೪ ॥

ನಾಸಾ ತು ಸ್ರವತೇ ಯಸ್ಯ ತ್ರಿದೋಷೇ ಪಕ್ಷಜೀವಿತಂ ।
ವಕ್ತ್ರಂ ಕಂಠಂ ಚ ಶುಷ್ಯೇತ ಷಣ್ಮಾಸಾಂತೇ ಗತಾಯುಷಃ ॥ ೧೫ ॥

ಸ್ಥೂಲಜಿಹ್ವಾ ಭವೇದ್ಯಸ್ಯ ದ್ವಿಜಾಃ ಕ್ಲಿದ್ಯಂತಿ ಭಾಮಿನಿ ।
ಷಣ್ಮಾಸಾಜ್ಜಾಯತೇ ಮೃತ್ಯುಶ್ಚಿಹ್ನೈಸ್ತೈರುಪಲಕ್ಷಯೇತ್ ॥ ೧೬ ॥

ಅಂಬುತೈಲಘೃತಸ್ಥಂ ತು ದರ್ಪಣೇ ವರವರ್ಣಿನಿ ।
ನ ಪಶ್ಯತಿ ಯದಾತ್ಮಾನಂ ವಿಕೃತಂ ಪಲಮೇವ ಚ ॥ ೧೭ ॥

೧೩. ಎಡಗೈಯು ಒಂದೇಸಮನೆ ಏಳುದಿನ ನಡುಗಿದರೆ ಅವನು ಒಂದೇ ತಿಂಗಳು ಜೀವಿಸಿರುವನು. ಈ ವಿಷಯದಲ್ಲಿ ಸಂಶಯವಿಲ್ಲ.

೧೪. ಶರೀರನೆಲ್ಲವೂ ಊದಿ ಕೆನ್ನೆಯು ಒಣಗಿಹೋದರೆ ಆಗ ಅವನು ಒಂದು ತಿಂಗಳು ಮಾತ್ರ ಜೀವಿಸುವನು.

೧೫. ಮೂಗಿನಲ್ಲಿ ವಿಶೇಷವಾಗಿ ಶ್ಲೇಷ್ಮವು ಸುರಿಯಲು ಪ್ರಾರಂಭಿಸಿದರೆ ಮೂರುರಾತ್ರೆ ಒಂದುಪಕ್ಷ ಮಾತ್ರ ಜೀವಿಸಿರುವನು. ಬಾಯಿ ಮತ್ತು ಕಣ್ಣು ಒಣಗಿ ಹೋದರೆ ಅವನ ಆಯಸ್ಸು ಆರು ತಿಂಗಳು ಮಾತ್ರ.

೧೬. ಯಾವನಿಗೆ ನಾಲಿಗೆಯು ದಪ್ಪವಾಗುವುದೋ, ಹಲ್ಲುಗಳೆಲ್ಲವೂ ಯಾತನೆಯಿಂದ ಕೂಡಿರುವುದೋ ಅವನು ಆರು ತಿಂಗಳಿನೊಳಗಾಗಿ ಮರಣವನ್ನು ಹೊಂದುವನು.

೧೭. ನೀರನ್ನಾಗಲೀ, ಎಣ್ಣೆಯನ್ನಾಗಲೀ, ತುಪ್ಪವನ್ನಾಗಲೀ ಹಚ್ಚಿಕೊಂಡು ಕನ್ನಡಿಯಲ್ಲಿ ನೋಡಿಕೊಳ್ಳಲು ಆಗ ತನ್ನ ಪ್ರತಿಬಿಂಬವು ಕಾಣದಿದ್ದರೆ ಅಥವಾ ವಿಕಾರವಾಗಿ ಕಂಡರೆ ಅವನ ಆಯಸ್ಸು ಆರು ತಿಂಗಳು ಮಾತ್ರ.

ಷಣ್ಮಾಸಾಯುಸ್ಸ ವಿಜ್ಞೇಯಃ ಕಾಲಚಕ್ರಂ ವಿಜಾನತಾ ।
ಅನ್ಯಚ್ಚ ಶೃಣು ದೇವೇಶಿ ಯೇನ ಮೃತ್ಯುರ್ವಿಶುದ್ಧ್ಯತೇ ॥ ೧೮ ॥

ಶಿರೋಹೀನಾಂ ಯದಾ ಛಾಯಾಂ ಸ್ವಕೀಯಾಮುಪಲಕ್ಷಯೇತ್ ।
ಅಥವಾ ಛಾಯಯಾ ಹೀನಂ ಮಾಸಮೇಕಂ ನ ಜೀವತಿ ॥ ೧೯ ॥

ಆಂಗಿಕಾನಿ ಮಯೋಕ್ತಾನಿ ಮೃತ್ಯುಚಿಹ್ನಾನಿ ಪಾರ್ವತಿ ।
ಬಾಹ್ಯಸ್ಥಾನಿ ಬ್ರುವೇ ಭದ್ರೇ ಚಿಹ್ನಾನಿ ಶೃಣು ಸಾಂಪ್ರತಂ ॥ ೨೦ ॥

ರಶ್ಮಿಹೀನಂ ಯದಾ ದೇವಿ ಭವೇತ್ಸೋಮಾರ್ಕಮಂಡಲಂ ।
ದೃಶ್ಯತೇ ಪಾಟಲಾಕಾರಂ ಮಾಸಾರ್ಧೇನ ವಿಪದ್ಯತೇ ॥ ೨೧ ॥

ಅರುಂಧತೀ ಮಹಾಯಾನಮಿಂದುಂ ಲಕ್ಷಣವರ್ಜಿತಂ ।
ಅದೃಷ್ಟತಾರಕೋ ಯೋಽಸೌ ಮಾಸಮೇಕಂ ನ ಜೀವತಿ ॥ ೨೨ ॥

೧೮-೧೯. ಎಲೌ ದೇವೇಶಿಯೇ, ಮೃತ್ಯುವನ್ನು ತಿಳಿಯುವ ಮತ್ತೊಂದು ವಿಷಯವನ್ನು ಕೇಳು. ಯಾವನು ತನ್ನ ನೆರಳನ್ನು ನೋಡಿದಾಗ ತಲೆಯಿಲ್ಲದಂತೆ ಕಾಣುವನೋ ಅಥವಾ ಅವನ ನೆರಳೇ ಅವನಿಗೆ ಕಾಣಿಸುವುದಿಲ್ಲವೋ ಅವನು ಒಂದು ತಿಂಗಳೂ ಸಹ ಬದುಕಿರಲಾರನು.

೨೦. ಎಲೌ ಪಾರ್ವತೀ, ನಾನಿದುವರೆಗೂ ಶರೀರದಲ್ಲಿ ಕಾಣುವ ಮೃತ್ಯು ಚಿಹ್ನೆಗಳನ್ನು ಹೇಳಿದೆನು. ಈಗ ಹೊರಗಿನ ಚಿಹ್ನೆಗಳನ್ನು ಹೇಳುವೆನು ಕೇಳು.

೨೧. ಚಂದ್ರ ಸೂರ್ಯರು ಕಿರಣವಿಲ್ಲದವರಂತೆ ಕಂಡರೆ ಮತ್ತು ಅವರ ಮಂಡಲವು ಬಿಳುಪು ಕೆಂಪು ಬೆರಸಿದ ಬಣ್ಣದಂತೆ ಕಂಡರೆ ಅವನು ಒಂದುಪಕ್ಷದೊಳಗಾಗಿ ಸಾಯುವನು.

೨೨. ಯಾವನಿಗೆ ಅರುಂಧತೀ ನಕ್ಷತ್ರವು ಕಾಣಿಸುವುದಿಲ್ಲವೋ ಮತ್ತು ಚಂದ್ರನ ಮಧ್ಯೆ ಇರುವ ಕಪ್ಪು ಕಾಣಿಸುವುದಿಲ್ಲವೋ ಮತ್ತು ನಕ್ಷತ್ರಗಳಾವುವೂ ಕಾಣಿಸುವುದಿಲ್ಲವೋ ಅವನು ಒಂದು ತಿಂಗಳ ಮೇಲೆ ಜೀವಿಸಿರುವುದಿಲ್ಲ.

ದೃಷ್ಟೇ ಗ್ರಹೇ ಚ ದಿಙ್ಮೋಹಃ ಷಣ್ಮಾಸಾಜ್ಜಾಯತೇ ಧ್ರುವಂ ।
ಉತಥ್ಯಂ ನ ಧ್ರುವಂ ಪಶ್ಯೇದ್ಯದಿ ವಾ ರವಿಮಂಡಲಂ ॥ ೨೩ ॥

ರಾತ್ರೌ ಧನುರ್ಯದಾ ಪಶ್ಯೇನ್ಮಧ್ಯಾಹ್ನೇ ಚೋಲ್ಕಪಾತನಂ ।
ವೇಷ್ಟ್ಯತೇ ಗೃಧ್ರಕಾಕೈಶ್ಚ ಷಣ್ಮಾಸುಯುರ್ನ ಸಂಶಯಃ ॥ ೨೪ ॥

ಋಷಯಃ ಸ್ವರ್ಗಪಂಥಾಶ್ಚ ದೃಶ್ಯಂತೇ ನೈವ ಚಾಂಬರೇ ।
ಷಣ್ಮಾಸಾಯುರ್ವಿಜಾನಿಯಾತ್ಪುರುಷೈಃ ಕಾಲವೇದಿಭಿಃ ॥ ೨೫ ॥

ಅಕಸ್ಮಾದ್ರಾಹುಣಾ ಗ್ರಸ್ತಂ ಸೂರ್ಯಂ ವಾ ಸೋಮಮೇವ ಚ ।
ದಿಕ್ಚಕ್ರಂ ಭ್ರಾಂತವತ್ಪಶ್ಯೇತ್ ಷಣ್ಮಾಸಾನ್ಮ್ರಿಯತೇ ಸ್ಫುಟಂ ॥ ೨೬ ॥

ನಿಲಾಭಿರ್ಮಕ್ಷಿಕಾಭಿಶ್ಚ ಹ್ಯಕಸ್ಮಾದ್ವೇಷ್ಟ್ಯತೇ ಪುಮಾನ್ ।
ಮಾಸಮೇಕಂ ಹಿ ತಸ್ಯಾಯುರ್ಜ್ಞಾತವ್ಯಂ ಪರಮಾರ್ಥತಃ ॥ ೨೭ ॥

೨೩. ಗ್ರಹಗಳು ಕಂಡರೂ ದಿಕ್ಕುತೋಚದಂತಾಗುತ್ತದೆಯೋ ಮತ್ತು ಧ್ರುವ ನಕ್ಷತ್ರವಾಗಲೀ, ಸೂರ್ಯಮಂಡಲವಾಗಲೀ, ಯಾರಿಗೆ ಕಾಣಿಸುವುದಿಲ್ಲವೋ ಅವನು ಆರು ತಿಂಗಳು ಮಾತ್ರ ಜೀವಿಸಿರುತ್ತಾನೆ.

೨೪. ಯಾವನು ರಾತ್ರಿಯಕಾಲದಲ್ಲಿ ಕಾಮನಬಿಲ್ಲನ್ನೂ, ಮಧ್ಯಾಹ್ನದಲ್ಲಿ ಉಲ್ಕಾಪಾತವನ್ನೂ ನೋಡುವನೋ ಮತ್ತು ಹದ್ದು ಮತ್ತು ಕಾಗೆಗಳಿಂದ ಸುತ್ತುವರಿಯಲ್ಪಡುವನೋ ಅವನ ಆಯಸ್ಸು ಆರು ತಿಂಗಳು ಮಾತ್ರ.

೨೫. ಋಷಿಗಳೂ, ಸ್ವರ್ಗದ ದಾರಿಯೂ ಅಂತರಿಕ್ಷದಲ್ಲಿ ಯಾರಿಗೆ ಕಾಣಿಸುವುದಿಲ್ಲವೋ ಅವರ ಆಯಸ್ಸು ಆರು ತಿಂಗಳು ಮಾತ್ರವೆಂದು ತಿಳಿಯತಕ್ಕದು.

೨೬. ಯಾವನು ಸೂರ್ಯನನ್ನೂ, ಚಂದ್ರನನ್ನೂ ರಾಹುಗ್ರಸ್ತರೆಂದು ತಿಳಿಯುವನೋ ಮತ್ತು ಭ್ರಾಂತಿಯಾದವನಂತೆ ದಿಕ್ಕುಗಳನ್ನು ನೋಡುವನೋ ಅವನು ದಿಟವಾಗಿಯೂ ಆರು ತಿಂಗಳೊಳಗೇ ಸಾಯುವನು.

೨೭. ಕಪ್ಪುನೊಣಗಳು ಅಕಸ್ಮಾತ್ತಾಗಿ ಸುತ್ತುಗಟ್ಟಿದರೆ ಅವನ ಆಯುಸ್ಸು ಒಂದೇ ತಿಂಗಳು ಇರುವುದೆಂದು ಸತ್ಯವಾಗಿ ತಿಳಿಯತಕ್ಕದು.

ಗೃಧ್ನಿಕಾಕಃ ಕಪೋತಶ್ಚ ಶಿರಶ್ಚಾಕ್ರಮ್ಯ ತಿಷ್ಠತಿ ।
ಶೀಘ್ರಂ ತು ಮ್ರಿಯತೇ ಜಂತುಮಾಸ್ಯೈಕೇನ ನ ಸಂಶಯಃ ॥ ೨೮ ॥

ಏವಂ ಚಾರಿಷ್ಟಭೇದಸ್ತು ಬಾಹ್ಯಸ್ಥಃ ಸಮುದಾಹೃತಃ ।
ಮಾನುಷಾಣಾಂ ಹಿತಾರ್ಥಾಯ ಸಂಕ್ಷೇಪೇಣ ವದಾಮ್ಯಹಂ ॥ ೨೯ ॥

ಹಸ್ತಯೋರುಭಯೋರ್ದೇವಿ ಯಥಾ ಕಾಲಂ ವಿಜಾನತೇ ।
ವಾಮದಕ್ಷಿಣಯೋರ್ಮಧ್ಯೇ ಪ್ರತ್ಯಕ್ಷಂ ಚೇತ್ಯುದಾಹೃತಂ ॥ ೩೦ ॥

ಏವಂ ಪಕ್ಷೌ ಸ್ಥಿತೌ ದ್ವೌ ತು ಸಮಾಸಾತ್ಸುರಸುಂದರೀ ।
ಶುಚಿರ್ಭೂತ್ವಾ ಸ್ಮರನ್ ದೇವಂ ಸುಸ್ನಾತಃ ಸಂಯತೇಂದ್ರಿಯಃ ॥ ೩೧ ॥

ಹಸ್ತೌ ಪ್ರಕ್ಷಾಲ್ಯ ದುಗ್ಧೇನಾಲಕ್ತಕೇನ ವಿಮರ್ದಯೇತ್ ।
ಗಂಧೈಃ ಪುಷ್ಪೈಃ ಕರೌ ಕೃತ್ವಾ ಮೃಗಯೇಚ್ಚ ಶುಭಾಶುಭಂ ॥ ೩೨ ॥

೨೮. ಹದ್ದು, ಕಾಗೆ, ಪಾರಿವಾಳ ಮುಂತಾದುವುಗಳು ತಲೆಯ ಮೇಲೆ ಬಂದು ಕುಳಿತರೆ ಅವನು ಒಂದು ತಿಂಗಳೊಳಗೇ ಜಾಗ್ರತೆಯಾಗಿ ಸಾಯುವನು.

೨೯. ಈರೀತಿಯಾಗಿ ಕೆಡುಕಾಗುವ ಭೇದಗಳನ್ನೆಲ್ಲಾ ಹೇಳಿದೆನು. ಇವೆಲ್ಲವೂ ಬಾಹ್ಯಚಿಹ್ನೆಗಳು. ಮನುಷ್ಯರ ಹಿತಕ್ಕೋಸ್ಕರವಾಗಿ ಸಂಕ್ಷೇಪವಾಗಿ ಮುಂದಿನ ವಿಷಯಗಳನ್ನು ಹೇಳುವೆನು.

೩೦. ಎಡಗಡೆ ಮತ್ತು ಬಲಗಡೆ ಕೈಗಳ ಮಧ್ಯದಲ್ಲಿ ಕಾಲವನ್ನು ತಿಳಿದು ಕೊಳ್ಳುವ ಮತ್ತು ಅದನ್ನು ಪ್ರತ್ಯಕ್ಷವಾಗಿ ನೋಡುವ ವಿಷಯವನ್ನು ಹೇಳಿ ಯಾಯಿತು.

೩೧. ಎಲೌ ಸುರಸುಂದರಿ, ಹೀಗೆಯೇ ಒಟ್ಟು ಎರಡು ಪಕ್ಷಗಳುಂಟು. ಇದರ ವಿಷಯವನ್ನು ತಿಳಿದುಕೊಳ್ಳಲು ಮನುಷ್ಯನು ಮೊದಲು ಸ್ನಾನವನ್ನು ಮಾಡಿ ಶುಚಿ ಯಾಗಿ ಜಿತೇಂದ್ರಿಯನಾಗಿ ದೇವನನ್ನು ಪ್ರಾರ್ಥಿಸಿಕೊಳ್ಳಬೇಕು.

೩೨. ಕೈಯನ್ನು ಹಾಲಿನಿಂದ ತೊಳೆದುಕೊಂಡು ಅರಗಿನ ರಸದಿಂದ ಕೈಯನ್ನು ಲೇಪಿಸಿಕೊಳ್ಳಬೇಕು. ಅನಂತರ ಗಂಧಪುಷ್ಪಗಳನ್ನು ಕೈಯಲ್ಲಿ ತೆಗೆದುಕೊಂಡು ಶುಭಾಶುಭಗಳನ್ನು ಪರೀಕ್ಷಿಸಬೇಕು.

ಕನಿಷ್ಠಾಮಾದಿತಃ ಕೃತ್ವಾ ಯಾವದಂಗುಷ್ಠಕಂ ಪ್ರಿಯೇ ।
ಪರ್ವತ್ರಯಕ್ರಮೇಣೈವ ಹಸ್ತಯೋರುಭಯೋರಪಿ ॥ ೩೩ ॥

ಪ್ರತಿಪದಾದಿವಿನ್ಯಸ್ಯ ತಿಥಿಂ ಪ್ರತಿಪದಾದಿತಃ ।
ಸಂಪುಟಾಕಾರಹಸ್ತೌ ತು ಪೂರ್ವದಿಙ್ಮುಖಸಂಸ್ಥಿತಃ ॥ ೩೪ ॥

ಸ್ಮರೇನ್ನವಾತ್ಮಕಂ ಮಂತ್ರಂ ಯಾವದಷ್ಟೋತ್ತರಂ ಶತಂ ।
ನಿರೀಕ್ಷಯೇತ್ತತೋ ಹಸ್ತೌ ಪ್ರತಿಪರ್ವಣಿ ಯತ್ನತಃ ॥ ೩೫ ॥

ತಸ್ಮಿನ್ಪರ್ವಣಿ ಸಾ ರೇಖಾ ದೃಶ್ಯತೇ ಭೃಂಗಸನ್ನಿಭಾ ।
ತತ್ತಿಥೌ ಹಿ ಮೃತಿರ್ಜ್ಞೇಯಾ ಕೃಷ್ಣೇ ಶುಕ್ಲೇ ತಥಾ ಪ್ರಿಯೇ ॥ ೩೬ ॥

ಅಧುನಾ ನಾದಜಂ ವಕ್ಷ್ಯೇ ಸಂಕ್ಷೇಪಾತ್ಕಾಲಲಕ್ಷಣಂ ।
ಗಮಾಗಮಂ ವಿದಿತ್ವಾ ತು ಕರ್ಮ ಕುರ್ಯಾಚ್ಛೃಣು ಪ್ರಿಯೇ ॥ ೩೭ ॥

೩೩. ಎರಡು ಕೈಗಳಲ್ಲಿಯೂ ಕಿರುಬೆರಳು ಮೊದಲುಗೊಂಡು ಹೆಬ್ಬೆಟ್ಟಿನ ಪೂರ್ತ ಬೆರಳುಗಳಲ್ಲಿರುವ ಮೂರು ಮೂರು ಪರ್ವ (ಗೆರೆ) ಗಳನ್ನು ಪ್ರತಿಪಥ್‌ತಿಥಿ ಮೊದಲುಗೊಂಡು ಪೌರ್ಣಿಮೆ ಅಥವಾ ಅಮಾವಾಸ್ಯೆಯವರೆಗೂ ಎಣಿಸಬೇಕು. ಒಂದೊಂದು ಗೆರೆಯನ್ನು ಒಂದೊಂದು ತಿಥಿಯಂತೆ ವಿನ್ಯಾಸಮಾಡಬೇಕು.

೩೪-೩೫. ಕೂಡಿಸಿದ ಹಸ್ತಗಳನ್ನು ಸ್ವಲ್ಪ ಬಿಡಿಸಿ ಪೂರ್ವದಿಕ್ಕಿಗೆ ಅಭಿಮುಖ ವಾಗಿ ನಿಂತುಕೊಂಡು ನವಾಕ್ಷರಾತ್ಮಕವಾದ ಮಂತ್ರವನ್ನು ನೂರೆಂಟುಸಾರಿ ಜಪ ಮಾಡಿ ಹಸ್ತವನ್ನು ಪ್ರತಿ ಗೆರೆಯಲ್ಲಿಯೂ ದೃಷ್ಟಿಯನ್ನಿಟ್ಟು ನೋಡಬೇಕು.

೩೬. ಎಲೌ ಪ್ರಿಯಳೇ, ಆರೀತಿ ಎಣಿಸುತ್ತಿರುವಾಗ ಯಾವ ಗೆರೆಯು ದುಂಬಿಯ ಆಕಾರದಂತೆ ಕಾಣಬರುವುದೋ ಆ ಆಕಾರವು ಕಂಡುಬಂದ ಗೆರೆಯು ಯಾವ ತಿಥಿಗೆ ಸೇರಿರುವುದೋ ಆ ತಿಥಿಯಲ್ಲಿ ಶುಕ್ಲಪಕ್ಷವಾಗಲೀ ಕೃಷ್ಣಪಕ್ಷವಾಗಲೀ ಮರಣವುಂಟಾಗುವುದು.

೩೭. ಈಗ ನಾದದಿಂದ ಉಂಟಾಗುವ ಕಾಲಲಕ್ಷಣವನ್ನು ಸಂಕ್ಷೇಪವಾಗಿ ಹೇಳುವೆನು. ಆಗುಹೋಗುಗಳನ್ನು ತಿಳಿದು ಆ ಕಾಲಗಳಲ್ಲಿ ಕೆಲಸಗಳನ್ನು ಮಾಡ ತಕ್ಕದು.

ಆತ್ಮವಿಜ್ಞಾನಂ ಸುಶ್ರೋಣಿ ವಾರಂ ಜ್ಞಾತ್ವಾ ತು ಯತ್ನತಃ ।
ಕ್ಷಣಂ ತ್ರುಟಿರ್ಲವಂ ಚೈವ ನಿಮೇಷಂ ಕಾಷ್ಠಕಾಲಿಕಂ ॥ ೩೮ ॥

ಮುಹೂರ್ತಕಂ ತ್ವಹೋರಾತ್ರಂ ಪಕ್ಷಮಾಸರ್ತುವತ್ಸರಂ ।
ಅಬ್ದಂ ಯುಗಂ ತಥಾ ಕಲ್ಪಂ ಮಹಾಕಲ್ಪಂ ತಥೈವ ಚ ॥ ೩೯ ॥

ಏವಂ ಸ ಹರತೇ ಕಾಲಃ ಪರಿಪಾಟ್ಯಾ ಸದಾಶಿವಃ ।
ವಾಮದಕ್ಷಿಣಮಧ್ಯೇ ತು ಪಥಿತ್ರಯಮಿದಂ ಸ್ಮೃತಂ ॥ ೪೦ ॥

ದಿನಾನಿ ಪಂಚ ಚಾರಭ್ಯ ಪಂಚವಿಂಶದ್ದಿನಾವಧಿ ।
ವಾಮಾಚಾರಗತೌ ನಾದಃ ಪ್ರಮಾಣಂ ಕಥಿತಂ ತವ ॥ ೪೧ ॥

ಭೂತರಂಧ್ರದಿಶಶ್ಚೈವ ಧ್ವಜಶ್ಚ ವರವರ್ಣಿನಿ ।
ವಾಮಚಾರಗತೋ ನಾದಃ ಪ್ರಮಾಣಂ ಕಾಲವೇದಿನಃ ॥ ೪೨ ॥

ಋತೋರ್ವಿಕಾರಭೂತಾಶ್ಚ ಗುಣಾಸ್ತತ್ರೈವ ಭಾಮಿನಿ ।
ಪ್ರಮಾಣಂ ದಕ್ಷಿಣಂ ಪ್ರೋಕ್ತಂ ಜ್ಞಾತವ್ಯಂ ಪ್ರಾಣವೇದಿಭಿಃ ॥ ೪೩ ॥

೩೮-೩೯. ಪ್ರಯತ್ನಪೂರ್ವಕವಾಗಿ ಮರಣಕಾಲದ ವಾರವನ್ನು ತಿಳಿದುಕೊಂಡು ಆತ್ಮವಿಜ್ಞಾನವನ್ನು ಅಭ್ಯಾಸಮಾಡಬೇಕು. ಕ್ಷಣ, ತ್ರುಟಿ, ಲವ, ನಿಮೇಷ, ಕಾಷ್ಠ, ಮುಹೂರ್ತ, ಅಹೋರಾತ್ರ, ಪಕ್ಷ, ಮಾಸ, ಋತು, ಸಂವತ್ಸರ, ಅಬ್ದ, ಯುಗ, ಕಲ್ಪ, ಮಹಾಕಲ್ಪ ಎಂಬ ಕಾಲಗತವಾದ ರೂಪಭೇದಗಳಿಂದ ಸದಾಶಿವನು ಲಯವನ್ನು ಮಾಡುತ್ತಿರುವನು.

೪೦-೪೨. ವಾಮ ದಕ್ಷಿಣಭಾಗಗಳ ಮಧ್ಯಮಾರ್ಗದಲ್ಲಿ ಈ ಮೂರು ಮಾರ್ಗಗಳಿರುವವು. ಐದು ದಿನಗಳನ್ನು ಪ್ರಾರಂಭಿಸಿಕೊಂಡು ಇಪ್ಪತ್ತೈದು ದಿನಗಳವರಿವಿಗೂ, ಎಡಭಾಗದ ಗಮನದಲ್ಲಿ ನಾದದ ಪ್ರಮಾಣವು ಇರತಕ್ಕ ಕ್ರಮವನ್ನು ನಿನಗೆ ಹೇಳಿರುವೆನು. ಕಾಲವನ್ನು ತಿಳಿದವನಿಗೆ ಐದು, ಒಂಭತ್ತು ಮತ್ತು ಒಂದು ಎಂಬ ಸಂಖ್ಯಾಕ್ರಮದಿಂದ ನಾದವು (ವಾಮಚಾರಗತಿಯಲ್ಲಿ) ಎಡಭಾಗದ ಗತಿಯಲ್ಲಿ ಪ್ರಮಾಣವಾಗಿರುವುದು.

೪೩-೪೪ ಪ್ರಾಣವಾಯುವಿನ ಗತಿಯನ್ನು ತಿಳಿದವರು ಆರು, ಐದು, ಮೂರು ಎಂಬ ಸಂಖ್ಯಾಕ್ರಮದಿಂದ ಬಲಭಾಗದ ಗತಿಯನ್ನು ಪ್ರಮಾಣವನ್ನಾಗಿ ತಿಳಿಯು

**ಭೂತಸಂಖ್ಯಾ ಯದಾ ಪ್ರಾಣಾನ್ವಹಂತೇ ಚ ಇಡಾದಯಃ ।**
**ವರ್ಷಸ್ಯಾಭ್ಯಂತರೇ ತಸ್ಯ ಜೀವಿತಂ ಹಿ ನ ಸಂಶಯಃ ॥ ೪೪ ॥**

**ದಶಘಸ್ರಪ್ರವಾಹೇಣ ಹ್ಯಬ್ದಮಾನಂ ಸ ಜೀವತಿ ।**
**ಪಂಚದಶಪ್ರವಾಹೇಣ ಹ್ಯಬ್ದಮೇಕಂ ಗತಾಯುಷಂ ॥ ೪೫ ॥**

**ವಿಂಶದ್ದಿನಪ್ರವಾಹೇಣ ಷಣ್ಮಾಸಂ ಲಕ್ಷಯೇತ್ತದಾ ।**
**ಪಂಚವಿಂಶದ್ದಿನಮಿತಂ ವಹತೇ ವಾಮನಾಡಿಕಾ ॥ ೪೬ ॥**

**ಜೀವಿತಂ ತು ತದಾ ತಸ್ಯ ತ್ರಿಮಾಸಂ ಹಿ ಗತಾಯುಷಃ ।**
**ಷಡ್ವಿಂಶದ್ದಿನಮಾನೇನ ಮಾಸದ್ವಯಮುದಾಹೃತಂ ॥ ೪೭ ॥**

**ಸಪ್ತವಿಂಶದ್ದಿನಮಿತಂ ವಹತೇತ್ವತ್ಯವಿಶ್ರಮಾ ।**
**ಮಾಸಮೇಕಂ ಸಮಾಖ್ಯಾತಂ ಜೀವಿತಂ ವಾಮಗೋಚರೇ ॥ ೪೮ ॥**

ಬೇಕು. ಇಡಾ ಮೊದಲಾದ ನಾಡಿಗಳು, ಐದು ದಿನದ ಸಂಖ್ಯೆಯವರೆಗೂ ಒಂದೇ ಸಮನಾಗಿ ಗಮನವನ್ನು ಹೊಂದಿದ್ದರೆ, ಅವನು ವರ್ಷಕ್ಕಿಂತಲೂ ಹೆಚ್ಚಾಗಿ ಬದುಕುವುದಿಲ್ಲ ಎಂದು ತಿಳಿಯಬೇಕು.

೪೫-೪೭. ಹತ್ತು ದಿನಗಳ ಏಕಾಕಾರವಾದ ಗತಿಯಿದ್ದರೆ ಒಂದು ವರ್ಷದ ವರೆಗೂ ಅವನು ಬದುಕಿರುವನು. ಹದಿನೈದು ದಿನಗಳ ಈ ಪ್ರಕಾರವಾದ ಗತಿಯಿಂದ ಒಂದು ವರ್ಷದ ನಂತರ ಆಯುಸ್ಸು ಮುಗಿಯುವುದು. ಇಪ್ಪತ್ತು ದಿನಗಳೂ ಈ ಪ್ರಕಾರವಾದ ಗತಿಯಿಂದ ಆರು ತಿಂಗಳುಕಾಲ ಬದುಕುವನೆಂದು ತಿಳಿಯತಕ್ಕದ್ದು. ಇಪ್ಪತ್ತೈದು ದಿನಗಳು (ವಾಮಗತ) ಎಡಗಡೆಯ ಶ್ವಾಸನಾಡಿಯು ಒಂದೇಸಮನಾಗಿದ್ದಲ್ಲಿ ಅವನು ಮೂರು ತಿಂಗಳು ಬದುಕುವನೆಂದು ತಿಳಿಯತಕ್ಕದ್ದು. ಇಪ್ಪತ್ತಾರು ದಿನಗಳು ಹೀಗೆಯೇ ಇದ್ದಲ್ಲಿ ಎರಡು ತಿಂಗಳು ಬದುಕುವನೆಂದು ತಿಳಿಯಬೇಕು.

೪೮-೪೯. ಇಪ್ಪತ್ತೇಳು ದಿನಗಳು ಬಹಳ ಶ್ರಮದಿಂದ ಒಂದೇಪ್ರಕಾರವಾಗಿ ವಾಮಪಾರ್ಶ್ವದಲ್ಲಿ ಒಂದರಲ್ಲಿಯೇ ವಾಯುಗತಿಯು ಇದ್ದರೆ ಅವನು ಒಂದು ತಿಂಗಳ ಕಾಲ ಬದುಕುವನೆಂದು ತಿಳಿಯಬೇಕು. ಎಡಭಾಗದ ವಾಯುವಿನ ಗತಿಯ

ಏತತ್ಪ್ರಮಾಣಂ ವಿಜ್ಞೇಯಂ ವಾಮವಾಯುಪ್ರಮಾಣತಃ ।
ಸವ್ಯೇತರೇ ದಿನಾನ್ಯೇವ ಚತ್ವಾರಶ್ಚಾನುಪೂರ್ವಶಃ ॥ ೪೯ ॥

ಚತುಸ್ಸ್ಥಾನೇ ಸ್ಥಿತಾ ದೇವಿ ಷೋಡಶೈತಾಃ ಪ್ರಕೀರ್ತಿತಾಃ ।
ತೇಷಾಂ ಪ್ರಮಾಣಂ ವಕ್ಷ್ಯಾಮಿ ಸಾಂಪ್ರತಂ ಹಿ ಯಥಾರ್ಥತಃ ॥ ೫೦ ॥

ಷಡ್ದಿನಾನ್ಯಾದಿತಃ ಕೃತ್ವಾ ಸಂಖ್ಯಾಯಾಶ್ಚ ಯಥಾವಿಧಿ ।
ಏತದಂತರ್ಗತೇ ಚೈವ ವಾಮರಂಧ್ರೇ ಪ್ರಕಾಶಿತಂ ॥ ೫೧ ॥

ಷಡ್ದಿನಾನಿ ಯದಾರೂಢಂ ದ್ವಿವರ್ಷಂ ಚ ಸ ಜೀವತಿ ।
ಮಾಸಾನಷ್ಟೌ ವಿಜಾನೀಯಾದ್ದಿನಾನ್ಯಷ್ಟ ಚ ತಾನಿ ತು ॥ ೫೨ ॥

ಪ್ರಾಣಃ ಸಪ್ತದಶೇ ಚೈವ ವಿದ್ಧಿ ವರ್ಷಂ ನ ಶಂಶಯಃ ।
ಸಪ್ತಮಾಸಾನ್ವಿಜಾನೀಯಾದ್ದಿನೈಃ ಷಡ್ಭಿರ್ನ ಸಂಶಯಃ ॥ ೫೩ ॥

ಅಷ್ಟಘಸ್ರಪ್ರಭೇದೇನ ದ್ವಿವರ್ಷಂ ಹಿ ಸ ಜೀವತಿ ।
ಚತುರ್ಮಾಸಾ ಹಿ ವಿಜ್ಞೇಯಾಶ್ಚತುರ್ವಿಂಶದ್ದಿನಾವಧಿಃ ॥ ೫೪ ॥

ಪ್ರಮಾಣವು ಈ ಪ್ರಕಾರವಾಗಿ ಇರುವುದು. ಬಲಭಾಗದಲ್ಲಿನ ವಾಯುಗತಿಯು ಕ್ರಮವಾಗಿ ನಾಲ್ಕು ದಿನಗಳೆಂದು ತಿಳಿಯಬೇಕು.

೫೦-೫೨. ನಾಲ್ಕು ಸ್ಥಾನಗಳಲ್ಲಿರುವ ವಾಯುಗತಿಯ ಭೇದಗಳು ಹದಿನಾರು ವಿಧವಾಗಿರುವವು. ಅವುಗಳ ಪ್ರಮಾಣವನ್ನು ಈಗ ಯಥಾರ್ಥವಾಗಿ ಸಂಕ್ಷೇಪದಿಂದ ಹೇಳುವೆನು. ಆರು ದಿನಗಳು ಮೊದಲುಗೊಂಡು, ಶಾಸ್ತ್ರಕ್ರಮವನ್ನು ಅನುಸರಿಸಿರುವ ವಾಯುಗತಿಯೂ ಈ ಆರು ದಿನಗಳ ಮಧ್ಯದಲ್ಲಿ ಎಡಭಾಗದಲ್ಲಿ ಇರುವುದಾದರೆ, ಅದೂ ಆರು ದಿನಗಳೇ ಆಗಿದ್ದರೆ ಎರಡು ವರ್ಷಗಳು ಅವನು ಜೀವಿಸುವನು. ಎಂಟು ದಿನಗಳು ಹೀಗಿದ್ದರೆ ಎಂಟು ತಿಂಗಳುಕಾಲ ಜೀವಂತನಾಗಿರುವನು.

೫೩-೫೪. ಹದಿನೇಳು ದಿನಗಳು ಈ ಪ್ರಕಾರವಾಗಿದ್ದರೆ ವರ್ಷಕಾಲ ಬದಕುವುದರಲ್ಲಿ ಸಂಶಯವಿಲ್ಲ. ಆರು ದಿನಗಳ ಗತಿಯಿಂದ ಏಳು ತಿಂಗಳು ಜೀವಿತಕಾಲವೆಂದು ತಿಳಿಯಬೇಕು. ಎಂಟು ದಿನಗಳಲ್ಲಿ ಬದಲಾಯಿಸಿದರೆ ಎರಡು ವರ್ಷಕಾಲ ಬದುಕುವನು. ಇಪ್ಪತ್ತನಾಲ್ಕು ದಿನಗಳವರಿಗೂ ವಾಯುಗತಿಯು ಹೀಗೆಯೇ ಇದ್ದರೇ ನಾಲ್ಕು ತಿಂಗಳಕಾಲ ಜೀವಿತವೆಂದು ತಿಳಿಯಬೇಕು.

ಯದಾ ನವದಿನಂ ಪ್ರಾಣಾ ವಹಂತ್ಯೇವ ತ್ರಿಮಾಸಕಂ ।
ಮಾಸದ್ವಯಂ ಚ ದ್ವೇ ಮಾಸೇ ದಿನಾ ದ್ವಾದಶ ಕೀರ್ತಿತಾಃ ॥ ೫೫ ॥

ಪೂರ್ವವತ್ಕಥಿತಾ ಯೇ ತು ಕಾಲಂ ತೇಷಾಂ ತು ಪೂರ್ವಕಂ ।
ಅವಾಂತರದಿನಾ ಯೇ ತು ತೇನ ಮಾಸೇನ ಕಥ್ಯತೇ ॥ ೫೬ ॥

ಏಕಾದಶ ಪ್ರವಾಹೇಣ ವರ್ಷಮೇಕಂ ಸ ಜೀವತಿ ।
ಮಾಸಾ ನವ ತಥಾ ಪ್ರೋಕ್ತಾ ದಿನಾನ್ಯಷ್ಟಮಿತಾನ್ಯಪಿ ॥ ೫೭ ॥

ದ್ವಾದಶೇನ ಪ್ರವಾಹೇಣ ವರ್ಷಮೇಕಂ ಸ ಜೀವತಿ ।
ಮಾಸಾನ್ ಸಪ್ತ ವಿಜಾನೀಯಾತ್ ಷಡ್‌ಘಸ್ರಾಂಶ್ಚಾಪ್ಯುದಾಹರೇತ್ ॥ ೫೮ ॥

ನಾಡೀ ಯದಾ ಚ ವಹತಿ ತ್ರಯೋದಶದಿನಾವಧಿ ।
ಸಂವತ್ಸರಂ ಭವೇತ್ತಸ್ಯ ಚತುರ್ಮಾಸಾಃ ಪ್ರಕೀರ್ತಿತಾಃ ॥ ೫೯ ॥

೫೫-೫೬. ಒಂಭತ್ತು ದಿನಗಳು ಪ್ರಾಣವಾಯುವು ಏಕಾಕಾರವಾಗಿ ಹೀಗೆಯೇ ಗತಿಯನ್ನು ಹೊಂದಿದ್ದರೆ ಮೂರು ತಿಂಗಳು ಕಾಲ ಬದುಕುವನು. ಹನ್ನೆರಡು ದಿನಗಳ ಗತಿಯಿಂದ ಎರಡು ತಿಂಗಳು ಕಾಲ ಜೀವಿತವೆಂದು ತಿಳಿಯಬೇಕು. ನಾನು ಹಿಂದೆ ಹೇಳಿರುವ ಕಾಲಮಾನವು ಅವುಗಳ ಮಧ್ಯಗತವಾದ ದಿನಗಳ ಮಾನವೂ ಈಗ ತಿಂಗಳಿನ ಪ್ರಮಾಣದಿಂದ ಹೇಳುವುದಾಗಿರುವುದು. ಎಂದರೆ, ಯಾವ ವಿಷಯದಲ್ಲಿ ಹೇಳಿರುವ ಕಾಲಮಾನವು ಇರುವುದೋ ಇವುಗಳಿಗೆ ದಿನಗಳ ಪ್ರಮಾಣವನ್ನು ಸೇರಿಸಿ ಅಧಿಕವಾಗಿ ಹೇಳುವೆನು.

೫೭-೫೮. ಹನ್ನೊಂದು ದಿನಗಳ ಏಕಾಕಾರವಾದ ಗತಿಯಿಂದ ಒಂದು ವರ್ಷವು ಬದುಕುವನು. ಎಂಟು ದಿನಗಳ ಗತಿಯಿಂದ ಒಂಭತ್ತು ತಿಂಗಳು ಜೀವಿತವನ್ನು ಹೇಳತಕ್ಕದ್ದು. ಹನ್ನೆರಡು ದಿನಗಳ ವಾಯುಗತಿಯಿಂದ ಒಂದು ವರ್ಷಕಾಲ ಬದುಕುವನು. ಆರು ದಿನಗಳ ಗತಿಯಿಂದ ಏಳು ತಿಂಗಳ ಜೀವನವೆಂದು ತಿಳಿಯಬೇಕು.

೫೯. ಹದಿಮೂರು ದಿನಗಳವರೆಗೆ (ನಾಡಿಯು) ವಾಯುಗತಿಯು ಏಕಾಕಾರವಾಗಿದ್ದರೆ, ಒಂದು ವರ್ಷವೂ ನಾಲ್ಕು ತಿಂಗಳು ಬದುಕವನು.

ಚತುರ್ವಿಂಶದ್ದಿನಂ ಶೇಷಂ ಜೀವಿತಂ ಚ ನ ಸಂಶಯಃ ।
ಪ್ರಾಣವಾಹಾ ಯದಾ ವಾಮೇ ಚತುರ್ದಶದಿನಾನಿ ತು ॥ ೬೦ ॥

ಸಂವತ್ಸರಂ ಭವೇತ್ತಸ್ಯ ಮಾಸಾಃ ಷಟ್ ಚ ಪ್ರಕೀರ್ತಿತಾಃ ।
ಚತುರ್ವಿಂಶದ್ದಿನಾನ್ಯೇವ ಜೀವಿತಂ ಚ ನ ಸಂಶಯಃ ॥ ೬೧ ॥

ಪಂಚದಶಪ್ರವಾಹೇಣ ನವ ಮಾಸಾನ್ ಸ ಜೀವಿತಿ ।
ಚತುರ್ವಿಂಶದ್ದಿನಾನ್ಯೇವ ಕಥಿತಂ ಕಾಲವೇದಿಭಿಃ ॥ ೬೨ ॥

ಷೋಡಶಾಹಪ್ರವಾಹೇಣ ದಶಮಾಸಾನ್ಸ ಜೀವತಿ ।
ಚತುರ್ವಿಂಶದ್ದಿನಾಧಿಕ್ಯಂ ಕಥಿತಂ ಕಾಲವೇದಿಭಿಃ ॥ ೬೩ ॥

ಸಪ್ತದಶಪ್ರವಾಹೇಣ ನವಮಾಸೈರ್ಗತಾಯುಷಂ ।
ಅಷ್ಟಾದಶದಿನಾನ್ಯತ್ರ ಕಥಿತಂ ಸಾಧಕೇಶ್ವರಿ ॥ ೬೪ ॥

ವಾಮಚಾರಂ ಯದಾ ದೇವಿ ಹ್ಯಷ್ಟಾದಶದಿನಾವಧಿಃ ।
ಜೀವಿತಂ ಚಾಷ್ಟಮಾಸಂ ತು ಘಸ್ರಾ ದ್ವಾದಶ ಕೀರ್ತಿತಾಃ ॥ ೬೫ ॥

೬೦-೬೧. ಪ್ರಾಣವಾಯುವು ಎಡಗಡೆಯಲ್ಲಿ ಇಪ್ಪತ್ತನಾಲ್ಕು ದಿನಗಳು ಗತಿಯನ್ನು ಹೊಂದಿದ್ದಾದರೆ ಇಪ್ಪತ್ತನಾಲ್ಕು ದಿನಗಳು ಅವನ ಜೀವಿತವು ಉಳಿದಿರುವುದೆಂದು ತಿಳಿಯಬೇಕು. ಮತ್ತು ಅವನಿಗೆ ವರ್ಷವೂ, ಆರುತಿಂಗಳೂ, ಇಪ್ಪತ್ತನಾಲ್ಕು ದಿನಗಳು ಅವನ ಜೀವಿತಕಾಲವೆಂದು ತಿಳಿಯಬೇಕು.

೬೨-೬೩. ಹದಿನೈದು ದಿನಗಳ ಪ್ರಾಣವಾಯುವಿನ ಗತಿಯಿಂದ ಒಂಭತ್ತು ತಿಂಗಳು ಮತ್ತು ಇಪ್ಪತ್ತನಾಲ್ಕುದಿನಗಳು ಅವನ ಜೀವಿತಕಾಲವೆಂದು ತಿಳಿಯಬೇಕು. ಹದಿನಾರು ದಿನಗಳ ಪ್ರಾಣವಾಯುಗತಿಯಿಂದ ಹತ್ತು ತಿಂಗಳೂ ಮತ್ತು ಇಪ್ಪತ್ತನಾಲ್ಕು ದಿನಗಳು ಹೆಚ್ಚಾಗಿ ಬದುಕುವನೆಂದು ಕಾಲಗತಿಯನ್ನು ತಿಳಿದವರು ಹೇಳುವರು.

೬೪-೬೫. ಹದಿನೇಳು ದಿನಗಳ ಗತಿಯಿಂದ ಒಂಭತ್ತುತಿಂಗಳೂ, ಹದಿನೆಂಟು ದಿನಗಳೂ ಅವನ ಆಯುಷ್ಯವೆಂದು ತಿಳಿಯಬೇಕು. ಪ್ರಾಣವಾಯುವು ಎಡಭಾಗದಲ್ಲಿ ಹದಿನೆಂಟು ದಿನಗಳವರೆಗೂ ಒಂದೇಸಮನಾಗಿದ್ದಲ್ಲಿ ಅವನ ಜೀವನವು ಎಂಟುತಿಂಗಳು ಮತ್ತು ಹನ್ನೆರಡು ದಿನಗಳಾಗಿರುವವು.

ಚತುರ್ವಿಂಶದ್ದಿನಾನ್ಯತ್ರ ನಿಶ್ಚಯೇನಾವಧಾರಯ ।
ಪ್ರಾಣವಾಹೋ ಯದಾ ದೇವಿ ತ್ರಯೋವಿಂಶದ್ದಿನಾವಧಿಃ ॥ ೬೬ ॥

ಚತ್ವಾರಃ ಕಥಿತಾ ಮಾಸಾಃ ಷಡ್ದಿನಾನಿ ತಥೋತ್ತರೇ ।
ಚತುರ್ವಿಂಶಪ್ರವಾಹೇಣ ತ್ರೀನ್ಮಾಸಾಂಶ್ಚ ಸ ಜೀವತಿ ॥ ೬೭ ॥

ದಿನಾನ್ಯತ್ರ ದಶಾಷ್ಟೌ ಚ ಸಂಹರತ್ಯೇವ ಚಾರತಃ ।
ಅವಾಂತರದಿನೇ ಯಸ್ತು ಸಂಕ್ಷೇಪಾತ್ತೇ ಪ್ರಕೀರ್ತಿತಾಃ ॥ ೬೮ ॥

ವಾಮಚಾರಃ ಸಮಾಖ್ಯಾತೋ ದಕ್ಷಿಣಂ ಶೃಣು ಸಾಂಪ್ರತಂ ।
ವಿಷ್ವಾವಿಂಶಪ್ರವಾಹೇಣ ತಿಥಿಮಾನೇನ ಜೀವತಿ ॥ ೬೯ ॥

ಪ್ರವಾಹೇಣ ದಶಾಹೇನ ತತ್ಸಂಸ್ಥೇನ ವಿಪದ್ಯತೇ ।
ತ್ರಿಂಶದ್ಧಸ್ರಪ್ರವಾಹೇಣ ಪಂಚಾಹೇನ ವಿಪದ್ಯತೇ ॥ ೭೦ ॥

ಏಕತ್ರಿಂಶದ್ಯದಾ ದೇವಿ ವಹತೇ ಚ ನಿರಂತರಂ ।
ದಿನತ್ರಯಂ ತದಾ ತಸ್ಯ ಜೀವಿತಂ ಹಿ ನ ಸಂಶಯಃ ॥ ೭೧ ॥

೬೬-೬೭. ಪ್ರಾಣವಾಯುವು ಇಪ್ಪತ್ತಮೂರು ದಿನಗಳವರೆಗೂ ಒಂದೇ ಸಮನಾದ ಗತಿಯನ್ನು ಹೊಂದಿದ್ದರೆ ಅವನ ಆಯುಸ್ಸಿನ ಪ್ರಮಾಣವು ಇಪ್ಪತ್ತನಾಲ್ಕು ದಿನಗಳು, ನಾಲ್ಕು ತಿಂಗಳೂ ಮತ್ತು ಆರು ದಿನಗಳೂ ಎಂದು ತಿಳಿಯಬೇಕು.

೬೮-೬೯. ಇಪ್ಪತ್ತನಾಲ್ಕು ದಿನಗಳ ಗತಿಯಿಂದ ಮೂರುತಿಂಗಳು ಮತ್ತು ಹದಿನೆಂಟುದಿನಗಳು ಅವನ ಆಯುಸ್ಸೆಂದು ತಿಳಿಯತಕ್ಕದ್ದು. ಎಡಭಾಗದ ಗತಿಯನ್ನು ಹೇಳಿದ್ದಾಯಿತು. ಇನ್ನುಮುಂದೆ ದಕ್ಷಿಣಭಾಗದ ಗತಿಯನ್ನು ಹೇಳುವೆನು ಅದನ್ನು ಕೇಳು. ದಕ್ಷಿಣಭಾಗದಲ್ಲಿ ಪ್ರಾಣವಾಯುವು ಇಪ್ಪತ್ತೆಂಟು ದಿನಗಳು ಏಕಾಕಾರವಾದ ಗತಿಯನ್ನು ಹೊಂದಿದ್ದರೆ ಹದಿನೈದುದಿನಗಳು ಬದುಕುವನು.

೭೦-೭೧. ಹತ್ತುದಿನಗಳು ಪ್ರಾಣವಾಯುವು ಬಲಭಾಗದಲ್ಲಿ ಗತಿಯನ್ನು ಹೊಂದಿದ್ದರೆ ಹತ್ತುದಿನಗಳಲ್ಲಿಯೇ ಅವನು ವಿಪತ್ತನ್ನು ಹೊಂದುವನು. ಮೂವತ್ತು ದಿನಗಳು ಬಲಭಾಗದಲ್ಲಿ ಗತಿಯನ್ನು ಹೊಂದಿದ್ದರೆ ಅವನು ಐದುದಿನಗಳು ಜೀವಿಸುವನು. ಮೂವತ್ತೊಂದು ದಿನಗಳು ಬಲಭಾಗದ ಗತಿಯನ್ನು ಪ್ರಾಣವಾಯುವು ಹೊಂದಿದ್ದರೆ ಅವನು ಮೂರುದಿನಗಳು ಮಾತ್ರ ಬದುಕುವನು.

ದ್ವಾತ್ರಿಂಶತ್ಪ್ರಾಣಸಂಖ್ಯಾ ಚ ಯದಾ ಹಿ ವಹತೇ ರವಿಃ ।
ತದಾ ತು ಜೀವಿತಂ ತಸ್ಯ ದ್ವಿದಿನಂ ಹಿ ನ ಸಂಶಯಃ ॥ ೭೨ ॥

ದಕ್ಷಿಣಃ ಕಥಿತಃ ಪ್ರಾಣೋ ಮಧ್ಯಸ್ಥಂ ಕಥಯಾಮಿ ತೇ ।
ಏಕಭಾಗಗತೋ ವಾಯುಪ್ರವಾಹೋ ಮುಖಮಂಡಲೇ ॥ ೭೩ ॥

ಧಾವಮಾನಪ್ರವಾಹೇಣ ದಿನಮೇಕಂ ಸ ಜೀವತಿ ।
ಚಕ್ರಮೇತತ್ಪರಾಸೋರ್ಹಿ ಪುರಾವಿದ್ಭಿರುದಾಹೃತಂ ॥ ೭೪ ॥

ಏತತ್ತೇ ಕಥಿತಂ ದೇವಿ ಕಾಲಚಕ್ರಂ ಗತಾಯುಷಃ ।
ಲೋಕಾನಾಂ ಚ ಹಿತಾರ್ಥಾಯ ಕಿಮನ್ಯಚ್ಛ್ರೋತುಮಿಚ್ಛಸಿ ॥ ೭೫ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಕಾಲಜ್ಞಾನವರ್ಣನಂ ನಾಮ ಪಂಚವಿಂಶೋಽಧ್ಯಾಯಃ

೭೨-೭೪. ಬಲಭಾಗದಲ್ಲಿ ಪ್ರಾಣವಾಯುವಿನ ಗತಿಯು ಮೂವತ್ತೆರಡು ದಿನಗಳವರಿಗೆ ಇದ್ದಲ್ಲಿ ಅವನ ಜೀವನವು ಎರಡು ದಿನಗಳು ಮಾತ್ರವಿರುವುದೆಂದು ತಿಳಿಯಬೇಕು. ಬಲಭಾಗದ ಪ್ರಾಣವಾಯುವಿನ ಗತಿಯನ್ನು ಹೇಳಿದ್ದಾಯಿತು. ಇನ್ನು ಮುಂದೆ ಮಧ್ಯಸ್ಥವಾದ ಗತಿಯನ್ನು ಹೇಳುವೆನು. ಬಾಯಿನ ಒಂದುಭಾಗದಲ್ಲಿಯೇ ಅತಿವೇಗದಿಂದ ಪ್ರಾಣವಾಯುವಿನ ಗತಿಯು ಇದ್ದಲ್ಲಿ ಒಂದು ದಿನ ಮಾತ್ರ ಅವನು ಜೀವಿಸಿರುವನು. ಮೃತನಾಗುವವನಿಗೆ ಪ್ರಾಣವಾಯುವಿನ ಗತಿ ಪ್ರಭೇದಗಳನ್ನು ತಿಳಿದವರಾದ ಪ್ರಾಚೀನರು ಹೀಗೆ ಹೇಳಿರುವರು.

೭೫. ಆಯುಸ್ಸು ಮುಗಿದವರ ಆಯುಸ್ಸಿನ ಪ್ರಮಾಣವನ್ನು ಈ ಪ್ರಕಾರವಾಗಿ ನಿನಗೆ ತಿಳಿಸಿರುವೆನು. ಈ ವಿಷಯವನ್ನು ಪ್ರಪಂಚದ ಹಿತಕ್ಕಾಗಿ ಪ್ರಕಟಮಾಡಿ ಹೇಳಿರುವೆನು. ಇನ್ನು ನೀನು ಬೇರೆ ಯಾವುದನ್ನು ಕೇಳಲು ಇಚ್ಛಿಸುತ್ತೀಯೆ? ಅದನ್ನು ಹೇಳುವೆನು.

ಇಲ್ಲಿಗೆ ಶ್ರೀ ಶಿವಪುರಾಣದ ಉಮಾಸಂಹಿತೆಯಲ್ಲಿ ಕಾಲಜ್ಞಾನವರ್ಣನವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಷಡ್ವಿಂಶೋಽಧ್ಯಾಯಃ

॥ ದೇವ್ಯುವಾಚ ॥

ಕಥಿತಂ ತು ತ್ವಯಾ ದೇವ ಕಾಲಜ್ಞಾನಂ ಯಥಾರ್ಥತಃ ।
ಕಾಲಸ್ಯ ವಚನಂ ಬ್ರೂಹಿ ಯಥಾ ತತ್ತ್ವೇನ ಯೋಗಿನಃ ॥ ೧ ॥

ಕಾಲಸ್ತು ಸನ್ನಿಕೃಷ್ಟೋ ಹಿ ವರ್ತತೇ ಸರ್ವಜಂತುಷು ।
ಯಥಾ ಚಾಸ್ಯ ನ ಮೃತ್ಯುಶ್ಚ ವಂಚತೇ ಕಾಲಮಾಗತಂ ॥ ೨ ॥

ತಥಾ ಕಥಯ ಮೇ ದೇವ ಪ್ರೀತಿಂ ಕೃತ್ವಾ ಮಮೋಪರಿ ।
ಯೋಗಿನಾಂ ಚ ಹಿತಾಯ ತ್ವಂ ಬ್ರೂಹಿ ಸರ್ವಸುಖಪ್ರದ ॥ ೩ ॥

### ಇಪ್ಪತ್ತಾರನೆಯ ಅಧ್ಯಾಯವು

೧. ಪಾರ್ವತಿಯು ಪ್ರಶ್ನೆಮಾಡುತ್ತಾಳೆ:—ಎಲೈ ದೇವ, ನೀನಿದುವರೆಗೂ ಯಥಾರ್ಥವಾಗಿ ಕಾಲಜ್ಞಾನವನ್ನು ಹೇಳಿದೆ. ಈಗ ಯೋಗಿಗಳಿಗೆ ಸಂಬಂಧಪಟ್ಟ ಕಾಲಪ್ರಮಾಣಾದಿಗಳನ್ನು ಹೇಳು.

೨. ಕಾಲವೆಂಬುದು ಎಲ್ಲಾ ಪ್ರಾಣಿಗಳಲ್ಲಿಯೂ ಸನ್ನಿಹಿತವಾಗಿಯೇ ಇರುವುದು. ಕಾಲವು ಒದಗಲು ಮೃತ್ಯುವೂ ಕೂಡ ಅದನ್ನು ವಂಚಿಸಲಾರದು.

೩. ಆದುದರಿಂದ ಎಲೈ ದೇವನೇ, ನನ್ನಲ್ಲಿ ಪ್ರೀತಿಯನ್ನಿಟ್ಟು ಯೋಗಿಗಳಿಗೆ ಹಿತವನ್ನುಂಟುಮಾಡಲು ನೀನು ಸರ್ವಸುಖಪ್ರದವಾದ ಕಾಲದ ವಿವರಣೆಯನ್ನು ಹೇಳು ಎನ್ನಲು,

॥ ಶಂಕರ ಉವಾಚ ॥

**ಶೃಣು ದೇವಿ ಪ್ರವಕ್ಷ್ಯಾಮಿ ಪೃಷ್ಟೋಽಹಂ ಯತ್ತ್ವಯಾ ಶಿವೇ ।**
**ಸಮಾಸೇನ ಚ ಸರ್ವೇಷಾಂ ಮಾನುಷಾಣಾಂ ಹಿತಾರ್ಥತಃ ॥ ೪ ॥**

**ಪೃಥಿವ್ಯಾಪಸ್ತಥಾ ತೇಜೋ ವಾಯುರಾಕಾಶಮೇವ ಚ ।**
**ಏತೇಷಾಂ ಹಿ ಸಮಾಯೋಗಃ ಶರೀರಂ ಪಾಂಚಭೌತಿಕಂ ॥ ೫ ॥**

**ಆಕಾಶಸ್ತು ತತೋ ವ್ಯಾಪೀ ಸರ್ವೇಷಾಂ ಸರ್ವಗಃ ಸ್ಥಿತಃ ।**
**ಆಕಾಶೇ ತು ವಿಲೀಯಂತೇ ಸಂಭವಂತಿ ಪುನಸ್ತತಃ ॥ ೬ ॥**

**ವಿಯೋಗೇ ತು ಸದಾ ತಸ್ಯ ಸ್ವಂ ಧಾಮ ಪ್ರತಿಪೇದಿರೇ ।**
**ತಸ್ಯ ನ ಸ್ಥಿರತಾ ಚಾಸ್ತಿ ಸನ್ನಿಪಾತಸ್ಯ ಸುಂದರಿ ॥ ೭ ॥**

೪. ಶಂಕರನು ಹೇಳುವನು :—ಎಲೌ ದೇವಿ, ಸಮಸ್ತ ಮಾನವರ ಹಿತಕ್ಕೋಸ್ಕರವಾಗಿ ನೀನು ಕೇಳಿದ ವಿಷಯವನ್ನು ವಿಸ್ತಾರವಾಗಿ ವಿವರಿಸುವೆನು, ಕೇಳು.

೫. ಮನುಷ್ಯನ ಶರೀರವು ಪೃಥಿವೀ, ನೀರು, ತೇಜಸ್ಸು, ವಾಯು, ಆಕಾಶ ಎಂಬ ಪಂಚಭೂತಗಳಿಂದ ನಿರ್ಮಿತವಾಗಿರುವುದರಿಂದ ಇದು ಪಾಂಚಭೌತಿಕ ಶರೀರವೆನಿಸುವುದು.

೬. ಆ ಪಂಚಭೂತಗಳಲ್ಲಿ ಆಕಾಶವು ಎಲ್ಲೆಲ್ಲೂ ವ್ಯಾಪಿಸಿ ಇರುವುದು. ಇತರ ಭೂತಗಳೆಲ್ಲವೂ ಆಕಾಶದಲ್ಲೇ ಹುಟ್ಟಿ ಆಕಾಶದಲ್ಲೇ ಲೀನವಾಗುತ್ತವೆ.

೭. ಪಂಚಭೂತಗಳಿಂದ ನಿರ್ಮಿತವಾದ ಈ ಶರೀರದಲ್ಲಿ ಅಪ್ಪು ಎಂದರೆ ನೀರಿನ ಅಂಶವು ನಾಶವಾದಲ್ಲಿ ಪೃಥಿವ್ಯಾದಿಗಳೆಲ್ಲವೂ ತಮ್ಮ ತಮ್ಮ ಸ್ಥಾನವನ್ನು ಹೊಂದುವುವು. ಎಂದರೆ ಶರೀರದಲ್ಲಿದ್ದ ಪಂಚಭೂತಗಳು ಪುನಃ ಆಯಾ ಭೂತಗಳಲ್ಲಿಯೇ ಸೇರಿಹೋಗುವವು. ಆದುದರಿಂದ ಈ ಪೃಥವೀ, ಅಪ್, ತೇಜಸ್ಸು, ವಾಯು, ಆಕಾಶ ಇವುಗಳ ಸೇರುವಿಕೆಯು ಸ್ಥಿರವಲ್ಲವು. ಎಂದರೆ ಶರೀರವು ಸ್ಥಿರವಲ್ಲವು.

ಜ್ಞಾನಿನೋಽಪಿ ತಥಾ ತತ್ರ ತಪೋಮಂತ್ರಬಲಾದಪಿ ।
ತೇ ಸರ್ವೇ ಸುವಿಜಾನಂತಿ ಸರ್ವಮೇತನ್ನಸಂಶಯಃ ॥ ೮ ॥

॥ ದೇವ್ಯುವಾಚ ॥

ಖಂ ತೇನ ಯನ್ನಶ್ಯತಿ ಘೋರರೂಪಃ
ಕಾಲಃ ಕರಾಲಸ್ತ್ರಿದಿವೈಕನಾಥಃ ।
ದಗ್ಧಸ್ತ್ವಯಾ ತ್ವಂ ಪುನರೇವ ತುಷ್ಟಃ
ಸ್ತೋತ್ರೈಃ ಸ್ತುತಃ ಸ್ವಾಂ ಪ್ರಕೃತಿಂ ಸ ಲೇಭೇ ॥ ೯ ॥

ತ್ವಯಾ ಸ ಚೋಕ್ತಃ ಕಥಯಾ ಜನಾನಾ-
ಮದೃಷ್ಟರೂಪಃ ಪ್ರಚರಿಷ್ಯಸೀತಿ ।
ದೃಷ್ಟಸ್ತ್ವಯಾ ತತ್ರ ಮಹಾಪ್ರಭಾವಃ
ಪ್ರಭೋರ್ವರಾತ್ತೇ ಪುನರುತ್ಥಿತಶ್ಚ ॥ ೧೦ ॥

ತದದ್ಯ ಭೋಃ ಕಾಲ ಇಹಾಸ್ತಿ ಕಿಂಚಿ-
ನ್ನಿಹನ್ಯತೇ ಯೇನ ವದಸ್ವ ತಸ್ಮೈ ।

೮. ಜ್ಞಾನಿಗಳು ತಮ್ಮ ತಪಸ್ಸಿನ ಬಲದಿಂದಲೂ, ಮಂತ್ರಬಲದಿಂದಲೂ ಈ ಪಾಂಚಭೌತಿಕವು ಸ್ಥಿರವಲ್ಲವೆಂದು ಸಂಶಯವಿಲ್ಲದಂತೆ ಚೆನ್ನಾಗಿ ತಿಳಿದಿರುವರು.

೯. ದೇವಿಯು ಮತ್ತಿಂತೆಂದಳು :—ಆಕಾಶವು ನಾಶವಾಗುವುದೇನೋ ಸರಿ. ಅದಕ್ಕೆಲ್ಲಾ ಕಾಲವೇ ಕಾರಣವು. ಸರ್ವಾಧಾರವಾಗಿ ಘೋರರೂಪವಾಗಿರುವುದು ಆ ಕಾಲವು. ಇಂತಹ ಕಾಲವನ್ನು ನೀನು ಸುಟ್ಟುಹಾಕಿದೆ. ಅನಂತರ ಪುನಃ ತೃಪ್ತನಾಗಿ ನೀನು ಸ್ತೋತ್ರಗಳಿಂದ ಅದನ್ನು ಧ್ಯಾನಿಸಿದೆ. ಅನಂತರ ಆ ಕಾಲವು ಮೊದಲಿನಂತೆಯೇ ಆಯಿತು.

೧೦. ಎಲೈ ಕಾಲನೇ, ನೀನು ಜನಗಳಿಗೆ ಕಾಣಿಸಿಕೊಳ್ಳದಂತೆ ಸಂಚರಿಸು ಎಂದು ಆ ಸಮಯದಲ್ಲಿ ನೀನು ಹೇಳಿದೆಯಷ್ಟೆ. ಮಹಾಪ್ರಭಾವಶಾಲಿಯಾದ ಆ ಕಾಲವು ಆಗ ನಿನಗೆ ಕಾಣಿಸಿಕೊಂಡಿತು. ನಿನ್ನ ವರದ ಮಹಿಮೆಯಿಂದ ಪುನರುದ್ಧಾರವಾಯಿತು. ಇದನ್ನೆಲ್ಲಾ ನನಗೆ ತಿಳಿಸು.

೧೧. ಎಲೈ ಕಾಲಸ್ವರೂಪನಾದ ಮಹೇಶನೇ, ನೀನು ಯೋಗಿವರ್ಯನು. ಪ್ರಭುವು, ಸ್ವತಂತ್ರನು. ಪರೋಪಕಾರದಲ್ಲೇ ಸಿದ್ಧನಾಗಿರುವವನು. ಮಹೇಶನು.

ತ್ವಂ ಯೋಗಿವರ್ಯಃ ಪ್ರಭುರಾತ್ಮತಂತ್ರಃ ।
ಪರೋಪಕಾರಾತ್ತ ತನುರ್ಮಹೇಶ ॥ ೧೧ ॥

॥ ಶಂಕರ ಉವಾಚ ॥

ನ ಹನ್ಯತೇ ದೇವವರೈಸ್ತು ದೈತ್ಯೈಃ
ಸಯಕ್ಷರಕ್ಷೋರಗಮಾನುಷೈಶ್ಚ ।
ಯೇ ಯೋಗಿನೋ ಧ್ಯಾನಪರಾಸ್ಸದೇಹಾ
ಭವಂತಿ ತೇ ಘ್ನಂತಿ ಸುಖೇನ ಕಾಲಂ ॥ ೧೨ ॥

॥ ಸನತ್ಕುಮಾರ ಉವಾಚ ॥

ಏತಚ್ಛ್ರುತ್ವಾ ತ್ರಿಭುವನಗುರೋಃ ಪ್ರಾಹ ಗೌರೀ ವಿಹಸ್ಯ
ಸತ್ಯಂ ತ್ವಂ ಮೇ ವದ ಕಥಮಸೌ ಹನ್ಯತೇ ಯೇನ ಕಾಲಃ ।
ಶಂಭುಸ್ತಾಮಾಹ ಸದ್ಯೋ ಹಿಮಕರವದನೇ ಯೋಗಿನೋ ಯೇ ಕ್ಷಿಪಂತಿ
ಕಾಲವ್ಯಾಲಂ ಸಕಲಮನಘಾಸ್ತಚ್ಛೃಣುಷ್ವೈಕಚಿತ್ತಾ ॥ ೧೩ ॥

ಆದುದರಿಂದ ಕಾಲವು ಏತಕ್ಕಾಗಿ ಉಪಸಂಹರಿಸಲ್ಪಟ್ಟಿತು ? ಪುನಃ ಹೇಗೆ ಉದ್ಧಾರ ವಾಯಿತು ಎಂಬುದನ್ನು ದಯವಿಟ್ಟು ತಿಳಿಸು ಎನ್ನಲು,

೧೨. ಶಂಕರನು ಹೇಳುವನು :—ಕಾಲವನ್ನು ದೇವಶ್ರೇಷ್ಠರೂ, ದೈತ್ಯರೂ, ಯಕ್ಷರೂ, ರಾಕ್ಷಸರೂ, ಉರಗಗಳೂ, ಮನುಷ್ಯರೂ ಯಾರೂ ಕೂಡ ನಾಶಪಡಿಸ ಲಾರರು. ಆದರೆ ಧ್ಯಾನಪರರೂ, ದೇಹಿಗಳೂ ಆದ ಯೋಗಿಗಳು ಮಾತ್ರ ಕಾಲವನ್ನು ಸುಖವಾಗಿ ಕೊಲ್ಲುವರು ಎಂದರೆ, ಸಾಮಾನ್ಯರು ಕಾಲಾಧೀನರು. ಯೋಗಿಗಳು ಕಾಲಾಧೀನರಲ್ಲ.

೧೩. ಈರೀತಿಯಾಡಿದ ಈಶ್ವರನ ಮಾತನ್ನು ಕೇಳಿ ಪಾರ್ವತಿಯು ನಗುತ್ತಾ ಈಶ್ವರನನ್ನು ಕುರಿತು, ಕಾಲವು ಯಾರಿಂದ ಹೇಗೆ ಕೊಲ್ಲಲ್ಪಡುತ್ತದೆ ಎಂಬ ವಿಷಯ ವನ್ನು ಸತ್ಯವಾಗಿಯೂ ನನಗೆ ಹೇಳು ಎಂದಳು. ಅನಂತರ ಈಶ್ವರನು ಪಾರ್ವತಿ ಯನ್ನು ಕುರಿತು ಎಲೌ ಚಂದ್ರಾನನೇ, ಪವಿತ್ರರಾದ ಯೋಗಿಗಳು ಕಾಲವೆಂಬ ಸರ್ಪವನ್ನು ನಾಶಮಾಡುವರು ಆ ವಿಷಯವನ್ನು ಹೇಳುವೆನು. ಒಂದೇ ಮನಸ್ಸಿನಿಂದ ಕೇಳು, ಎಂದು ಹೇಳತೊಡಗಿದನು.

॥ ಶಂಕರ ಉವಾಚ ॥

ಪಂಚಭೂತಾತ್ಮಕೋ ದೇಹಸ್ಸದಾ ಯುಕ್ತಸ್ತು ತದ್ಗುಣೈಃ ।
ಉತ್ಪಾದ್ಯತೇ ವರಾರೋಹೇ ತದ್ವಿಲೀನೋ ಹಿ ಪಾರ್ಥಿವಃ ॥ ೧೪ ॥

ಆಕಾಶಾಜ್ಜಾಯತೇ ವಾಯುರ್ವಾಯೋಸ್ತೇಜಶ್ಚ ಜಾಯತೇ ।
ತೇಜಸೋಽಂಬು ವಿನಿರ್ದಿಷ್ಟಂ ತಸ್ಮಾದ್ಧಿ ಪೃಥಿವೀ ಭವೇತ್ ॥ ೧೫ ॥

ಪೃಥಿವ್ಯಾದೀನಿ ಭೂತಾನಿ ಗಚ್ಛಂತಿ ಕ್ರಮಶಃ ಪರಂ ।
ಧರಾ ಪಂಚಗುಣಾ ಪ್ರೋಕ್ತಾ ಹ್ಯಾಪಶ್ಚೈವ ಚತುರ್ಗುಣಾಃ ॥ ೧೬ ॥

ತ್ರಿಗುಣಂ ಚ ತಥಾ ತೇಜೋ ವಾಯುರ್ದ್ವಿಗುಣ ಏವ ಚ ।
ಶಬ್ದೈಕಗುಣಮಾಕಾಶಂ ಪೃಥಿವ್ಯಾದಿಷು ಕೀರ್ತಿತಂ ॥ ೧೭ ॥

ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋಗಂಧಶ್ಚ ಪಂಚಮಃ ।
ವಿಜಹಾತಿ ಗುಣಂ ಸ್ವಂ ಸ್ವಂ ತದಾ ಭೂತಂ ವಿಪದ್ಯತೇ ॥ ೧೮ ॥

೧೪. ದೇಹವು ಪೃಥಿವ್ಯಾದಿ ಪಂಚಭೂತಗಳಿಂದ ಉಂಟಾಗಿರುವುದು. ಎಂದರೆ ಶರೀರದಲ್ಲಿ ಪಂಚಭೂತಗಳ ಅಂಶಗಳೆಲ್ಲಾ ಸೇರಿರುವವು. ಅವು ಬೇರೆಬೇರೆಯಾದರೆ ಶರೀರವು ನಾಶವಾಗಿ ಪೃಥ್ವಿಯಲ್ಲಿ ಸೇರಿಹೋಗುವುದು.

೧೫. ಆಕಾಶದಿಂದ ವಾಯುವೂ, ವಾಯುವಿನಿಂದ ತೇಜಸ್ಸೂ, ತೇಜಸ್ಸಿನಿಂದ ನೀರೂ, ನೀರಿನಿಂದ ಪೃಥಿವಿಯೂ ಹುಟ್ಟುವುವು: ಈ ವಿಚಾರದಲ್ಲಿ "ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ" ಎಂದು ಶ್ರುತಿ ಇರುವುದು.

೧೬. ಪೃಥ್ವಿಯಲ್ಲಿ ಐದು ಗುಣಗಳಿರುವುವು. ಜಲದಲ್ಲಿ ನಾಲ್ಕು. ಉಳಿದ ಭೂತಗಳಲ್ಲಿ ಕ್ರಮವಾಗಿ ಒಂದೊಂದು ಗುಣವು ಕಡಿಮೆಯಾಗುತ್ತಾಹೋಗುವುವು. ನೀರಿನಲ್ಲಿ ನಾಲ್ಕು ಗುಣಗಳಿರುವವು.

೧೭. ತೇಜಸ್ಸಿನಲ್ಲಿ ಮೂರುಗುಣವೂ, ವಾಯುವಿನಲ್ಲಿ ಎರಡುಗುಣವೂ, ಆಕಾಶದಲ್ಲಿ ಶಬ್ದವೆಂಬ ಒಂದೇ ಗುಣವೂ ಇರುವುದು.

೧೮. ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವು ಐದು ಗುಣಗಳು. ಇವು ಯಾವಾಗ ತಮ್ಮ ತಮ್ಮ ಗುಣಗಳನ್ನು ಬಿಟ್ಟುಬಿಡುವುವೋ ಆಗ ಶರೀರವು ನಾಶ ವಾಗುವುದು.

ಯದಾ ಗುಣಂ ವಿಗೃಹ್ಣಾತಿ ಪ್ರಾದುರ್ಭೂತಂ ತದುಚ್ಯತೇ ।
ಏವಂ ಜಾನೀಹಿ ದೇವೇಶಿ ಪಂಚಭೂತಾನಿ ತತ್ತ್ವತಃ ॥ ೧೯ ॥

ತಸ್ಮಾದ್ಧಿ ಯೋಗಿನಾ ನಿತ್ಯಂ ಸ್ವಸ್ವಕಾಲೇಂಶಜಾ ಗುಣಾಃ ।
ಚಿಂತನೀಯಾಃ ಪ್ರಯತ್ನೇನ ದೇವಿ ಕಾಲಜಿಗೀಷುಣಾ ॥ ೨೦ ॥

॥ ದೇವ್ಯುವಾಚ ॥

ಕಥಂ ಜೇಜೀಯ್ಯತೇ ಕಾಲೋ ಯೋಗಿಭಿರ್ಯೋಗವಿತ್ಪ್ರಭೋ ।
ಧ್ಯಾನೇನ ಚಾಥ ಮಂತ್ರೇಣ ತತ್ಸರ್ವಂ ಕಥಯಸ್ವ ಮೇ ॥ ೨೧ ॥

॥ ಶಂಕರ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ಯೋಗಿನಾಂ ಹಿತಕಾಮ್ಯಯಾ ।
ಪರಜ್ಞಾನಪ್ರಕಥನಂ ನ ದೇಯಂ ಯಸ್ಯ ಕಸ್ಯಚಿತ್ ॥ ೨೨ ॥

೧೯. ಎಲೌ ದೇವಿ, ಯಾವಾಗ ಶಬ್ದಾದಿಗುಣಗಳು ತಮ್ಮ ಗುಣಗಳನ್ನು ಹೊಂದಿಕೊಳ್ಳುವುವೋ ಆಗ ಶರೀರವು ಹುಟ್ಟುವುದು. ಆದುದರಿಂದ ಪಂಚಭೂತಗಳ ಉತ್ಪತ್ತಿಯನ್ನು ಈರೀತಿಯಾಗಿ ತಿಳಿ.

೨೦. ಆದುದರಿಂದ ಕಾಲಜ್ಞರಾದ ಯೋಗಿಗಳು ಆಯಾಕಾಲಗಳಲ್ಲಿ ಪಂಚಭೂತಗಳ ಅಂಶಗಳಿಂದುಂಟಾಗುವ ಗುಣಗಳನ್ನು ಪ್ರಯತ್ನಪೂರ್ವಕವಾಗಿ ತಿಳಿದುಕೊಳ್ಳುವರು.

೨೧. ಪಾರ್ವತಿಯು ಕೇಳುವಳು :—ಯೋಗವಿದನಾದ ಪ್ರಭುವೇ, ಯೋಗಿಗಳು ಕಾಲವನ್ನು ಧ್ಯಾನದಿಂದಲಾಗಲೀ ಮಂತ್ರದಿಂದಲಾಗಲೀ ಹೇಗೆ ಜಯಿಸುವರು ಎಂಬ ವಿಷಯವನ್ನು ನನಗೆ ತಿಳಿಸು ಎನ್ನಲು,

೨೨. ಶಂಕರನು ಹೇಳುವನು :—ಓ ದೇವಿ, ಯೋಗಿಗಳ ಹಿತಕ್ಕೋಸ್ಕರವಾಗಿ ಹೇಳುವೆನು ಕೇಳು. ಪರವಸ್ತುವಿನ ಜ್ಞಾನವನ್ನು ಬೋಧಿಸುವ ಈ ವಿಷಯವನ್ನು ಯೋಗ್ಯರಲ್ಲದ ಯಾರಿಗೂ ಹೇಳಿಕೊಡಬಾರದು.

ಶ್ರದ್ದಧಾನಾಯ ದಾತವ್ಯಂ ಭಕ್ತಿಯುಕ್ತಾಯ ಧೀಮತೇ ।
ಅನಾಸ್ತಿಕಾಯ ಶುದ್ಧಾಯ ಧರ್ಮನಿತ್ಯಾಯ ಭಾಮಿನೀ　　॥ ೨೩ ॥

ಸುಖಾಸನೇನ ಸುಶಯ್ಯಾಯಾಂ ಯೋಗಂ ಯುಂಜೀತ ಯೋಗವಿತ್ ।
ದೀಪಂ ವಿನಾಂಧಕಾರೇ ತು ಪ್ರಜಾಃ ಸುಪ್ತೇಷು ಧಾರಯೇತ್　　॥ ೨೪ ॥

ತರ್ಜನ್ಯಾ ಪಿಹಿತೌ ಕರ್ಣೌ ಪೀಡಯಿತ್ವಾ ಮುಹೂರ್ತಕಂ ।
ತಸ್ಮಾತ್ಸಂಶ್ರೂಯತೇ ಶಬ್ದಸ್ತುದನ್ವಹ್ನಿಸಮುದ್ಭವಃ　　॥ ೨೫ ॥

ಸಂಧ್ಯಾತೋ ಭುಕ್ತಮೇವಂ ಹಿ ಚಾವಸನ್ನಂ ಕ್ಷಣಾದಪಿ ।
ಸರ್ವರೋಗಾನ್ನಿಹಂತ್ಯಾಶು ಜ್ವರೋಪದ್ರವಕಾನ್ಬಹೂನ್　　॥ ೨೬ ॥

ಯಶ್ಚೋಪಲಕ್ಷಯೇನ್ನಿತ್ಯೈರಾಕಾರಂ ಘಟಿಕಾದ್ವಯಂ ।
ಜಿತ್ವಾ ಮೃತ್ಯುಂ ತಥಾ ಕಾಮಂ ಸ್ವೇಚ್ಛಯಾ ಪರ್ಯಟೇದಿಹ　　॥ ೨೭ ॥

---

೨೩. ಎಲೌ ಭಾಮಿನಿ, ಆದರೆ ಶ್ರದ್ಧೆಯುಳ್ಳವನು, ಭಕ್ತಿಯಿಂದ ಕೂಡಿದ ಬುದ್ಧಿವಂತನು, ಆಸ್ತಿಕನು, ಪವಿತ್ರನು ನಿತ್ಯಧರ್ಮವನ್ನು ಪಾಲಿಸುವವನು ಇಂತವರಿಗೆ ಹೇಳಿಕೊಡಬಹುದು.

೨೪. ಈ ಯೋಗವನ್ನು ಅಭ್ಯಾಸಮಾಡಬೇಕಾದರೆ ಹೆಚ್ಚುಕಡಿಮೆಯಿಲ್ಲದೆ ಒಂದೇಸಮವಾದ ಹಾಸಿಗೆಯೇ ಮೊದಲಾದ ಆಸನಗಳಲ್ಲಿ ಕುಳಿತು ನಿಧಾನವಾಗಿ ಉಸಿರನ್ನು ಬಿಡುತ್ತಾ ಮಾಡಬೇಕು. ದೀಪವನ್ನು ಹಚ್ಚದೆ ಕತ್ತಲೆಯಲ್ಲಿ ಜನಗಳು ಮಲಗಿ ನಿಶ್ಶಬ್ದವಾಗಿರುವ ಸಮಯದಲ್ಲಿ ಅಭ್ಯಾಸಕ್ಕೆ ಸರಿಯಾದ ಕಾಲವು.

೨೫. ತರ್ಜನಿಯ ಬೆರಳಿನಿಂದ ಎರಡು ಕಿವಿಗಳನ್ನು ಮುಚ್ಚಿಕೊಂಡು ಒಂದು ಮುಹೂರ್ತ ಅಮುಕಲು ತೇಜಸ್ಸಿನಿಂದ ಹುಟ್ಟಿದ ಒಂದು ವಿಧವಾದ ಶಬ್ದವು ಕೇಳಬರುವುದು.

೨೬. ಈ ರೀತಿಯಾಗಿ ಸಂಧ್ಯಾಕಾಲದಲ್ಲಿ ದಿನವೂ ಮಾಡಿ ಒಂದು ಕ್ಷಣದಲ್ಲಿ ಮುಗಿಸಬೇಕು. ಹೀಗೆ ಮಾಡಿದರೆ ಜ್ವರವೇ ಮೊದಲಾದ ಎಲ್ಲಾ ರೋಗಗಳೂ ಜಾಗ್ರತೆಯಾಗಿ ನಾಶವಾಗುವುವು.

೨೭. ಈರೀತಿಯಾಗಿ ಪ್ರತಿದಿನವೂ ಎರಡು ಘಳಿಗೆಯಕಾಲ ಚಿತ್ತೈಕಾಗ್ರತೆಯಿಂದ ಕೂಡಿ ಅಭ್ಯಾಸಮಾಡಿದರೆ ಮೃತ್ಯುವನ್ನು ಜಯಿಸಿ ಇಷ್ಟಬಂದೆಡೆ ಸಂಚಾರ ಮಾಡಲು ಸಾಮರ್ಥ್ಯವುಂಟಾಗುವುದು.

ಸರ್ವಜ್ಞಸ್ಸರ್ವದರ್ಶೀ ಚ ಸರ್ವಸಿದ್ಧಿಮವಾಪ್ನುಯಾತ್ ।
ಯಥಾ ನದತಿ ಜೀಮೂತೋ ಹಿ ಪ್ರಾವೃಡದ್ಭಿಸ್ಸುಸಂಯುತಃ ॥ ೨೮ ॥

ತಂ ಶ್ರುತ್ವಾ ಮುಚ್ಯತೇ ಯೋಗೀ ಸದ್ಯಃ ಸಂಸಾರಬಂಧನಾತ್ ।
ತತಸ್ಸ ಯೋಗಿಭಿರ್ನಿತ್ಯಂ ಸೂಕ್ಷ್ಮಾತ್ಸೂಕ್ಷ್ಮತರೋ ಭವೇತ್ ॥ ೨೯ ॥

ಏಷ ತೇ ಕಥಿತೋ ದೇವಿ ಶಬ್ದಬ್ರಹ್ಮವಿಧಿಕ್ರಮಃ ।
ಪಲಾಲಮಿವಧಾನ್ಯಾರ್ಥೀ ತ್ಯಜೇದ್ಗ್ರಂಥಮಶೇಷತಃ ॥ ೩೦ ॥

ಶಬ್ದಬ್ರಹ್ಮ ತ್ವಿದಂ ಪ್ರಾಪ್ಯ ಯೇ ಕೇಚಿದನ್ನಕಾಂಕ್ಷಿಣಃ ।
ಘ್ನಂತಿ ತೇ ಮುಷ್ಟಿನಾಕಾಶಂ ಕಾಮಯಂತೇ ಕ್ಷುಧಾಂ ತೃಷಾಂ ॥ ೩೧ ॥

ಜ್ಞಾತ್ವಾ ಪರಮಿದಂ ಬ್ರಹ್ಮ ಸುಖದಂ ಮುಕ್ತಿಕಾರಣಂ ।
ಅಬಾಹ್ಯಮಕ್ಷರಂ ಚೈವ ಸರ್ವೋಪಾಧಿವಿವರ್ಜಿತಂ ॥ ೩೨ ॥

೨೮-೨೯. ಅವನಿಗೆ ಎಲ್ಲಾ ವಿಷಯಗಳೂ ತಿಳಿಯುವವು. ಎಲ್ಲಾ ಪದಾರ್ಥಗಳನ್ನು ನೋಡಲು ಶಕ್ತನಾಗುವನು. ಆ ಯೋಗಿಯು ಆಕಾಶದಲ್ಲಿ ಮೋಡಗಳೊಡನೆ ಸೇರಿ ಆಗುವ ಶಬ್ದದಂತಿರುವ ಈ ನಾದಶಬ್ದವನ್ನು ಕೇಳಿ ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಸೂಕ್ಷ್ಮವೆಂದು ಹೇಳಲ್ಪಡುವ ವಸ್ತುವಿಗಿಂತಲೂ ಅತಿಸೂಕ್ಷ್ಮವಸ್ತುವೆನಿಸುವನು.

೩೦. ಎಲೌ ದೇವಿ, ಶಬ್ದಬ್ರಹ್ಮವಿಧಿಕ್ರಮವನ್ನು ನಾನು ನಿನಗೆ ಈಗ ಹೇಳಿರುವೆನು. ಇದನ್ನು ತಿಳಿದುಕೊಳ್ಳಲಪೇಕ್ಷಿಸುವವನು ಧಾನ್ಯವನ್ನು ಯಾಚಿಸುವವನಿಗೆ ಈರುಳ್ಳಿಯನ್ನು ಕೊಟ್ಟರೆ ಹೇಗೆ ಅವನು ಅದನ್ನು ತ್ಯಜಿಸುವನೋ ಹಾಗೆ ಸಂಸಾರಿಕ ವಿಷಯೋಪಭೋಗಾದಿಗಳನ್ನು ತ್ಯಜಿಸಬೇಕು.

೩೧. ಯಾರು ಶಬ್ದಬ್ರಹ್ಮಜ್ಞಾನವನ್ನು ತಿಳಿದುಕೊಂಡಿರುವರೋ ಅವರು ಅನ್ನವನ್ನು ಅಪೇಕ್ಷಿಸಿದರೆ ತಮ್ಮ ಮುಷ್ಟಿಯಿಂದ ಆಕಾಶವನ್ನು ಗುದ್ದಿ ಹಸಿವನ್ನು ತೃಷೆಯನ್ನೂ ಅಡಗಿಸಿಕೊಳ್ಳಲು ಸಮರ್ಥರಾಗಿರುವರು.

೩೨. ಈ ಶಬ್ದಬ್ರಹ್ಮವನ್ನು ಉತ್ಕೃಷ್ಟವೆಂದೂ, ಸುಖವನ್ನುಂಟುಮಾಡುವುದೆಂದೂ, ಮುಕ್ತಿಗೆ ಕಾರಣವೆಂದೂ, ನಾಶರಹಿತವೆಂದೂ, ಬಾಹ್ಯರಹಿತವೆಂದೂ, ನಾವು

**ಮೋಹಿತಾಃ ಕಾಲಪಾಶೇನ ಮೃತ್ಯುಪಾಶವಶಂ ಗತಾಃ ।**
**ಶಬ್ದಬ್ರಹ್ಮ ನ ಜಾನಂತಿ ಪಾಪಿನಸ್ತೇ ಕುಬುದ್ಧಯಃ ॥ ೩೩ ॥**

**ತಾವದ್ಭವಂತಿ ಸಂಸಾರೇ ಯಾವದ್ಧಾಮ ನ ವಿಂದತೇ ।**
**ವಿದಿತೇ ತು ಪರೇ ತತ್ತ್ವೇ ಮುಚ್ಯತೇ ಜನ್ಮಬಂಧನಾತ್ ॥ ೩೪ ॥**

**ನಿದ್ರಾಲಸ್ಯಂ ಮಹಾವಿಘ್ನಂ ಜಿತ್ವಾ ಶತ್ರುಂ ಪ್ರಯತ್ನತಃ ।**
**ಸುಖಾಸನೇ ಸ್ಥಿತೋ ನಿತ್ಯಂ ಶಬ್ದಬ್ರಹ್ಮಾಭ್ಯಸನ್ನಿತಿ ॥ ೩೫ ॥**

**ಶತವೃದ್ಧಃ ಪುಮಾನ್ ಲಬ್ಧ್ವಾ ಯಾವದಾಯುಸ್ಸಮಭ್ಯಸೇತ್ ।**
**ಮೃತ್ಯುಂಜಯವಪುಸ್ತಸ್ಯ ಆರೋಗ್ಯಂ ವೀರ್ಯವರ್ಧನಂ ॥ ೩೬ ॥**

ಗೋತ್ರಾದಿ ಉಪಾಧಿಗಳಾವವೂ ಇಲ್ಲವೆಂದೂ ಯಾರು ತಿಳಿದುಕೊಳ್ಳುವರೋ, ಅವರು ಕ್ಷುತ್ಪಿಪಾಸಾದಿ ದುಃಖಗಳಿಂದ ರಹಿತರಾಗಿ ನಿಶ್ಚಿಂತೆಯಿಂದಿರುವರು.

೩೩. ಯಾರು ಶಬ್ದಬ್ರಹ್ಮನನ್ನು ತಿಳಿದುಕೊಳ್ಳುವುದಿಲ್ಲವೋ ಅವರು ಪಾಪಿಗಳು. ಕೆಟ್ಟಬುದ್ಧಿಯುಳ್ಳವರು. ಮತ್ತು ಅವರು ಕಾಲನ ಪಾಶದಿಂದ ಬಂಧಿತರಾಗಿ ಮೃತ್ಯುವನ್ನು ಹೊಂದುವರು.

೩೪. ಎಲ್ಲಿಯವರೆಗೆ ಪರತತ್ತ್ವವು ತಿಳಿಯುವುದಿಲ್ಲವೋ ಅಲ್ಲಿಯವರೆಗೂ ಸಂಸಾರದಲ್ಲಿ ಇರುವಿಕೆಯು. ಈ ಪರತತ್ತ್ವಜ್ಞಾನವು ಬರಲು ಸಂಸಾರದಿಂದ ಬಿಡುಗಡೆಯಾಗುವುದು.

೩೫. ಆದುದರಿಂದ ಎಲ್ಲದಕ್ಕೂ ವಿಘ್ನವನ್ನುಂಟುಮಾಡುವ ನಿದ್ರೆ ಮತ್ತು ಆಲಸ್ಯವೆಂಬ ಶತ್ರುವನ್ನು ಪ್ರಯತ್ನಪೂರ್ವಕವಾಗಿ ಜಯಿಸಿ ಸುಖಾಸನದಲ್ಲಿ ಕುಳಿತು ನಿತ್ಯವೂ ಶಬ್ದಬ್ರಹ್ಮವನ್ನು ಅಭ್ಯಾಸಮಾಡಬೇಕು.

೩೬. ನೂರು ವರ್ಷದ ವೃದ್ಧಮನುಷ್ಯನಾದರೂ ತನ್ನ ಆಯುಸ್ಸು ಇರುವವರೆಗೂ ಈ ಶಬ್ದಬ್ರಹ್ಮಯೋಗವನ್ನು ಅಭ್ಯಾಸಮಾಡಿದರೆ ಅವನ ಶರೀರವು ಮೃತ್ಯುವನ್ನು ಜಯಿಸುವುದು. ಅವನು ಆರೋಗ್ಯಶಾಲಿಯಾಗಿಯೂ, ವೀರ್ಯವಂತನಾಗಿಯೂ ಆಗುವನು.

**ಪ್ರತ್ಯಯೋ ದೃಶ್ಯತೇ ವೃದ್ಧೇ ಕಿಂ ಪುನಸ್ತರುಣೇ ಜನೇ ।**
**ನ ಚೋಂಕಾರೋ ನ ಮಂತ್ರೋಽಪಿ ನೈವಂ ಬೀಜಂ ನ ಚಾಕ್ಷರಂ ॥ ೩೭ ॥**

**ಅನಾಹತಮನುಚ್ಚಾರ್ಯಂ ಶಬ್ದಬ್ರಹ್ಮ ಶಿವಂ ಪರಂ ।**
**ಧ್ಯಾಯಂತೇ ದೇವಿ ಸತತಂ ಸುಧಿಯೋ ಯತ್ನತಃ ಪ್ರಿಯೇ ॥ ೩೮ ॥**

**ತಸ್ಮಾಚ್ಛಬ್ದಾ ನವ ಪ್ರೋಕ್ತಾಃ ಪ್ರಾಣವಿದ್ಭಿಸ್ತು ಲಕ್ಷಿತಾಃ ।**
**ತಾನ್ಪ್ರವಕ್ಷ್ಯಾಮಿ ಯತ್ನೇನ ನಾದಸಿದ್ಧಿಮನುಕ್ರಮಾತ್ ॥ ೩೯ ॥**

**ಘೋಷಂ ಕಾಂಸ್ಯಂ ತಥಾ ಶೃಂಗಂ ಘಂಟಾಂ ವೀಣಾದಿವಂಶಜಾನ್ ।**
**ದುಂದುಭಿಃ ಶಂಖಶಬ್ದಂ ತು ನವಮಂ ಮೇಘಗರ್ಜಿತಂ ॥ ೪೦ ॥**

**ನವಶಬ್ದಾನ್ಪರಿತ್ಯಜ್ಯ ತುಂಕಾರಂ ತು ಸಮಭ್ಯಸೇತ್ ।**
**ಧ್ಯಾಯನ್ನೇವಂ ಸದಾ ಯೋಗೀ ಪುಣ್ಯೈಃ ಪಾಪೈರ್ನ ಲಿಪ್ಯತೇ ॥ ೪೧ ॥**

೩೭. ಅಂತಹ ವೃದ್ಧನಿಗೇ ಆ ರೀತಿಯಾದ ಶಾರೀರದ ಬಲವು ಬರಲು ಇನ್ನು ತರುಣರು ಅಭ್ಯಾಸಮಾಡಿದರೆ ಹೇಳಬೇಕಾದುದೇನಿದೆ? ಈ ಶಬ್ದಬ್ರಹ್ಮದ ಮುಂದೆ ಓಂಕಾರವಾಗಲೀ, ಬೀಜಾಕ್ಷರಮಂತ್ರವಾಗಲೀ ಯಾವುದೂ ಇಲ್ಲ.

೩೮. ಉಚ್ಚಾರಮಾಡಲು ಅಸಾಧ್ಯವಾದ ಅನಾಹತವೆಂಬ ಈ ನಾದಬ್ರಹ್ಮವನ್ನು ಜ್ಞಾನಿಗಳು ಪ್ರಯತ್ನಪೂರ್ವಕವಾಗಿ ಯಾವಾಗಲೂ ಧ್ಯಾನಿಸುವರು.

೩೯. ಪ್ರಾಣನಾಡಿಗಳನ್ನು ತಿಳಿದಿರುವ ಜ್ಞಾನಿಗಳು ಹೇಳಿರತಕ್ಕ ಒಂಭತ್ತು ವಿಧವಾದ ಶಬ್ದವನ್ನು ಕ್ರಮವಾಗಿ ನಾನು ನಿನಗೆ ಹೇಳುವೆನು.

೪೦. ಘೋಷ, ಕಾಂಸ್ಯ, ಶೃಂಗ, ಘಂಟಾ, ವೀಣೆ, ಕೊಳಲು, ನಗಾರಿ, ಶಂಖ, ಮೇಘಗರ್ಜನೆ ಇವೇ ಒಂಭತ್ತು ವಿಧವಾದ ನಾದಗಳು.

೪೧. ಈ ಒಂಭತ್ತು ಶಬ್ದಗಳನ್ನೂ ಬಿಟ್ಟು ತುಂಕಾರವನ್ನು ಯಾರು ಅಭ್ಯಾಸಮಾಡಿ ಧ್ಯಾನಮಾಡುವನೋ ಆ ಯೋಗಿಯು ಪುಣ್ಯಪಾಪಗಳಿಂದ ಬಿಡಲ್ಪಡುವನು. ಪುಣ್ಯಪಾಪಗಳು ನಾಶವಾಗಲು ಮೋಕ್ಷವುಂಟುಗುವುದು.

ನ ಶೃಣೋತಿ ಯದಾ ಶೃಣ್ವನ್ ಯೋಗಾಭ್ಯಾಸೇನ ದೇವಿಕೇ ।
ಮ್ರಿಯತೇಽಭ್ಯಸಮಾನಸ್ತು ಯೋಗೀ ತಿಷ್ಠೇದ್ದಿವಾನಿಶಂ ॥ ೪೨ ॥

ತಸ್ಮಾದುತ್ಪದ್ಯತೇ ಶಬ್ದೋ ಮೃತ್ಯುಜಿತ್ಸಪ್ತಭಿರ್ದಿನೈಃ ।
ಸ ವೈ ನವವಿಧೋ ದೇವಿ ತಂ ಬ್ರವೀಮಿಯಥಾರ್ಥತಃ ॥ ೪೩ ॥

ಪ್ರಥಮಂ ನದತೇ ಘೋಷಮಾತ್ಮಶುದ್ಧಿಕರಂ ಪರಂ ।
ಸರ್ವವ್ಯಾಧಿಹರಂ ನಾದಂ ವಶ್ಯಾಕರ್ಷಣಮುತ್ತಮಂ ॥ ೪೪ ॥

ದ್ವಿತೀಯಂ ನದತೇ ಕಾಂಸ್ಯಂ ಸ್ತಂಭಯೇತ್ಪ್ರಾಣಿನಾಂ ಗತಿಂ ।
ವಿಷಭೂತಗ್ರಹಾನ್ಸರ್ವಾನ್ಬಧ್ನೀಯಾನ್ನಾತ್ರ ಸಂಶಯಃ ॥ ೪೫ ॥

ತೃತೀಯಂ ನದತೇ ಶೃಂಗಮಭಿಚಾರಿ ನಿಯೋಜಯೇತ್ ।
ವಿದ್ವಿಡುಚ್ಚಾಟನೇ ಶತ್ರೋರ್ಮರಣೇ ಚ ಪ್ರಯೋಜಯೇತ್ ॥ ೪೬ ॥

೪೨. ಆ ಶಬ್ದವನ್ನು ಕೇಳಲು ಹಗಲುರಾತ್ರಿಗಳಲ್ಲಿ ಅಭ್ಯಾಸಮಾಡಲು ಪ್ರಯತ್ನಿಸಿದರೂ ಯೋಗಾಭ್ಯಾಸ ಬಲದಿಂದ ಯಾವಾಗ ಈ ಶಬ್ದವನ್ನು ಕೇಳುವುದಿಲ್ಲವೋ ಅವನು ಮರಣವನ್ನು ಹೊಂದುವನು.

೪೩. ಯೋಗಾಭ್ಯಾಸಬಲದಿಂದ ಏಳುದಿನಗಳಲ್ಲಿ ಮೃತ್ಯುವನ್ನು ನಾಶಮಾಡುವ ಶಬ್ದವು ಹುಟ್ಟುವುದು. ಅದು ಒಂಭತ್ತು ವಿಧವಾಗಿರುವುದು. ಅದನ್ನು ಹೇಳುವೆನು ಕೇಳು.

೪೪. ಮೊದಲು ಹುಟ್ಟುವುದು ಘೋಷನಾದವು. ಅದು ಉತ್ಕೃಷ್ಟವಾಗಿ ಆತ್ಮಶುದ್ಧಿಯನ್ನುಂಟುಮಾಡುವುದು. ಎಲ್ಲಾ ವ್ಯಾಧಿಗಳನ್ನೂ ನಾಶಮಾಡುವುದು. ಮತ್ತು ವಶೀಕರಣ, ಆಕರ್ಷಣ ಎಂಬ ಸಿದ್ಧಿಗಳನ್ನುಂಟುಮಾಡುವುದು.

೪೫. ಎರಡನೆಯದು ಕಾಂಸ್ಯನಾದವು. ಇದು ಪ್ರಾಣಿಗಳ ಗತಿಯನ್ನು ನಿಲ್ಲಿಸುವುದು. ವಿಷ, ಭೂತ, ಗ್ರಹ ಮುಂತಾದುವುಗಳನ್ನು ನಿಸ್ಸಂಶಯವಾಗಿ ತಡೆಗಟ್ಟುವುದು.

೪೬. ಮೂರನೆಯದು ಶೃಂಗನಾದವು. ಇದನ್ನು ಭಯ ಮುಂತಾದುವುಗಳ ನಾಶಕ್ಕೋಸ್ಕರ ಉಪಯೋಗಿಸಬೇಕು. ಶತ್ರುಗಳನ್ನು ಓಡಿಸುವುದರಲ್ಲಿಯೂ, ಮತ್ತು ಅವರ ಮರಣದಲ್ಲೂ ಉಪಯೋಗಿಸಬೇಕು.

ಘಂಟಾನಾದಂ ಚತುರ್ಥಂ ತು ವದತೇ ಪರಮೇಶ್ವರಃ ।
ಆಕರ್ಷಸ್ಸರ್ವದೇವಾನಾಂ ಕಿಂ ಪುನರ್ಮಾನುಷಾ ಭುವಿ ॥ ೪೭ ॥

ಯಕ್ಷಗಂಧರ್ವಕನ್ಯಾಶ್ಚ ತಸ್ಯಾಕೃಷ್ಟಾ ದದಂತಿ ಹಿ ।
ಯಥೇಪ್ಸಿತಾಂ ಮಹಾಸಿದ್ಧಿಂ ಯೋಗಿನೇ ಕಾಮತೋಽಪಿ ವಾ ॥ ೪೮ ॥

ವೀಣಾ ತು ಪಂಚಮೋ ನಾದಃ ಶ್ರೂಯತೇ ಯೋಗಿಭಿಃ ಸದಾ ।
ತಸ್ಮಾದುತ್ಪದ್ಯತೇ ದೇವಿ ದೂರಾದರ್ಶನಮೇವ ಹಿ ॥ ೪೯ ॥

ಧ್ಯಾಯತೋ ವಂಶನಾದಂ ತು ಸರ್ವತತ್ತ್ವಂ ಪ್ರಜಾಯತೇ ।
ದುಂದುಭಿಂ ಧ್ಯಾಯಮಾನಸ್ತು ಜರಾಮೃತ್ಯುವಿವರ್ಜಿತಃ ॥ ೫೦ ॥

ಶಂಖಶಬ್ದೇನ ದೇವೀಶಿ ಕಾಮರೂಪಂ ಪ್ರಪದ್ಯತೇ ।
ಯೋಗಿನೋ ಮೇಘನಾದೇನ ನ ವಿಪತ್ಸಂಗಮೋ ಭವೇತ್ ॥ ೫೧ ॥

೪೭. ನಾಲ್ಕನೆಯದು ಘಂಟಾನಾದವು. ಇದು ಸರ್ವದೇವತೆಗಳನ್ನೂ ಆಕರ್ಷಿಸುವುದು. ದೇವತೆಗಳನ್ನೇ ಆಕರ್ಷಿಸಲು ಇನ್ನು ಮನುಷ್ಯರ ವಿಷಯವೇನು?

೪೮. ಘಂಟಾನಾದವು ಯಕ್ಷ, ಗಂಧರ್ವ ಮುಂತಾದವರ ಕನ್ನಿಕೆಯರನ್ನೂ ಆಕರ್ಷಿಸುವುದು. ಮತ್ತು ಯೋಗಿಗಳೂ ಇದರಿಂದ ತಮಗಿಷ್ಟವಾದ ಮಹಾಸಿದ್ಧಿಯನ್ನು ಪಡೆಯುವರು.

೪೯. ಐದನೆಯದು ವೀಣಾನಾದವು. ಇದನ್ನು ಯೋಗಿಗಳು ಯಾವಾಗಲೂ ಕೇಳುವರು. ಇದರಿಂದ ದೂರದರ್ಶನ ಸಾಮರ್ಥ್ಯವುಂಟಾಗುವುದು.

೫೦. ಆರನೆಯದು ವಂಶ (ಕೊಳಲು) ನಾದವು. ಇದರಿಂದ ಎಲ್ಲಾ ತತ್ತ್ವದ ವಿಷಯೂ ತಿಳಿಯುತ್ತದೆ. ಏಳನೆಯದು ದುಂದುಭಿನಾದವು. ಇದನ್ನು ಧ್ಯಾನ ಮಾಡಿದರೆ ಮುಪ್ಪು, ಮೃತ್ಯು ಮುಂತಾದುವುಗಳೆಲ್ಲವೂ ನಾಶವಾಗುವುದು.

೫೧. ಎಂಟನೆಯದು ಶಂಖಶಬ್ದವು, ಇದರ ಧ್ಯಾನದಿಂದ ಇಷ್ಟವಾದ ರೂಪವನ್ನು ಹೊಂದಬಹುದು. ಒಂಭತ್ತನೆಯದು ಮೇಘನಾದವು. ಇದರಿಂದ ವಿಪತ್ತುಗಳು ಅಂಟುವುದಿಲ್ಲವು.

ಯಶ್ಚೈಕಮನಸಾ ನಿತ್ಯಂ ತುಂಕಾರಂ ಬ್ರಹ್ಮರೂಪಿಣಂ ।
ಕಿಮಸಾಧ್ಯಂ ನ ತಸ್ಯಾಪಿ ಯಥಾಮತಿ ವರಾನನೇ ॥ ೫೨ ॥

ಸರ್ವಜ್ಞಸ್ಸರ್ವದರ್ಶೀಚ ಕಾಮರೂಪೀ ವ್ರಜತ್ಯಸೌ
ನ ವಿಕಾರೈಃ ಪ್ರಯುಜ್ಯೇತ ಶಿವ ಏವ ನ ಸಂಶಯಃ

ಏತತ್ತೇ ಪರಮೇಶಾನಿ ಶಬ್ದಬ್ರಹ್ಮಸ್ವರೂಪಕಂ ।
ನವಧಾ ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೫೪ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಕಾಲವಂಚನವರ್ಣನಂ ನಾಮ ಷಡ್ವಿಂಶೋಽಧ್ಯಾಯಃ



೫೨. ಯಾರು ಬ್ರಹ್ಮರೂಪಿಯಾಗಿರುವ ತುಂಕಾರವನ್ನು ಒಂದೇ ಮನಸ್ಸಿನಿಂದ ಧ್ಯಾನಮಾಡುವರೋ ಅವರಿಗೆ ಅಸಾಧ್ಯವಾದುದಾವುದಿದೆ?

೫೩. ತುಂಕಾರವನ್ನು ಧ್ಯಾನಮಾಡಿದವನು ಸರ್ವಜ್ಞನೂ, ಎಲ್ಲಾ ವಸ್ತುಗಳನ್ನು ನೋಡಲು ಸಮರ್ಥನೂ, ಇಷ್ಟವಾದ ರೂಪವನ್ನು ಧರಿಸಲು ಶಕ್ತಿಯುಳ್ಳವನೂ ಆಗುವನು. ಅವನು ಯಾವ ವಿಕಾರಗಳಿಗೂ ಸಿಕ್ಕಲಾರನು. ಶಿವರೂಪವೇ ಆಗುವನು.

೫೪. ಎಲೌ ಪರಮೇಶಾನಿ, ಈ ಒಂಭತ್ತು ವಿಧವಾದ ಶಬ್ದಸ್ವರೂಪವನ್ನು ಹೇಳಿದೆನು. ಮತ್ತೇನನ್ನು ಕೇಳಬೇಕೆಂದಿರುವೆ? ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಕಾಲವಂಚನವರ್ಣನವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಸಪ್ತವಿಂಶೋಽಧ್ಯಾಯಃ

॥ ದೇವ್ಯುವಾಚ ॥

**ವಾಯೋಸ್ತು ಪದಮಾಪ್ನೋತಿ ಯೋಗಾಕಾಶಸಮುದ್ಭವಂ ।**
**ತನ್ಮೇ ಸರ್ವಂ ಸಮಾಚಕ್ಷ್ವ ಪ್ರಸನ್ನಸ್ತ್ವಂ ಯದಿ ಪ್ರಭೋ ॥ ೧ ॥**

॥ ಶಂಕರ ಉವಾಚ ॥

**ಪುರಾ ಮೇ ಸರ್ವಮಾಖ್ಯಾತಂ ಯೋಗಿನಾಂ ಹಿತಕಾಮ್ಯಯಾ ।**
**ಕಾಲಂ ಜಿಗಾಯ ವಸ್ಸನ್ಮ್ಯಗ್ವಾಯೋರ್ಲಿಂಗಂ ಯಥಾ ಭವೇತ್ ॥ ೨ ॥**

### ಇಪ್ಪತ್ತೇಳನೆಯ ಅಧ್ಯಾಯವು

೧. ಪಾರ್ವತಿಯು ಪ್ರಶ್ನೆಮಾಡುವಳು:— ಓ ದೇವದೇವ, ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ, ದಯವಿಟ್ಟು ನಾನು ಕೇಳುವ ವಿಷಯವನ್ನು ತಿಳಿಸಬೇಕು. ಯೋಗಾಕಾಶದಿಂದ ಹುಟ್ಟಿದ ನಾದಬ್ರಹ್ಮವು ವಾಯುವಿನ ಸ್ಥಾನವನ್ನು ಹೇಗೆ ಹೊಂದುವುದು ಎಂದರೆ ನಾದಬ್ರಹ್ಮರೂಪವಾದ ಚೈತನ್ಯವು ಪ್ರಾಣವಾಯುವಿನಲ್ಲಿ ಸೇರಿ ಹೇಗೆ ಪ್ರಾಣಿಗಳಿಗೆ ಸಾಮರ್ಥ್ಯವನ್ನುಂಟುಮಾಡುವುದು ? ಇದನ್ನು ದಯವಿಟ್ಟು ತಿಳಿಸು ಎನ್ನಲು,

೨. ಶಂಕರನಿಂತೆಂದನು:— ಪೂರ್ವದಲ್ಲಿ ಯೋಗಿಗಳ ಹಿತಕ್ಕಾಗಿ ನಾನು ಪ್ರಾಣವಾಯುವಿನ ಲಕ್ಷಣಾದಿಗಳನ್ನೂ, ಆ ವಾಯುವಿನ ನಿಯಮನಕ್ರಮವನ್ನೂ ವಿವರಿಸಿ ಹೇಳಿದೆನು.

ತೇನ ಜ್ಞಾತ್ವಾ ದಿನಂ ಯೋಗೀ ಪ್ರಾಣಾಯಾಮಪರಾಸ್ಥಿತಃ ।
ಸ ಜಯತ್ಯಾಗತಂ ಕಾಲಂ ಮಾಸಾರ್ಧೇನೈವ ಸುಂದರಿ ॥ ೩ ॥

ಹೃತ್ಸ್ಥೋ ವಾಯುಸ್ಸದಾ ವಹ್ನೇರ್ದೀಪಕಸ್ಸೋಽನುಪಾವಕಃ ।
ಸ ಬಾಹ್ಯಾಭ್ಯಂತರೇ ವ್ಯಾಪೀ ವಾಯುಸ್ಸರ್ವಗತೋ ಮಹಾನ್ ॥ ೪ ॥

ಜ್ಞಾನವಿಜ್ಞಾನಮುತ್ಸಾಹಃ ಸರ್ವಂ ವಾಯೋಃ ಪ್ರವರ್ತತೇ ।
ಯೇನೇಹ ನಿರ್ಜಿತೋ ವಾಯುಸ್ತೇನ ಸರ್ವಮಿದಂ ಜಗತ್ ॥ ೫ ॥

ಧಾರಣಾಯಾಂ ಸದಾ ತಿಷ್ಠೇಜ್ಜರಾಮೃತ್ಯುಜಿಘಾಂಸಯಾ ।
ಯೋಗೀ ಯೋಗರತಃ ಸಮ್ಯಗ್ಧಾರಣಾಧ್ಯಾನತತ್ಪರಃ ॥ ೬ ॥

ಲೋಹಕಾರೋ ಯಥಾ ಭಸ್ತ್ರಾಮಾಪೂರ್ಯ ಮುಖತೋ ಮುನೇ ।
ಸಾಧಯೇದ್ವಾಯುನಾ ಕರ್ಮ ತದ್ವದ್ಯೋಗೀ ಸಮಭ್ಯಸೇತ್ ॥ ೭ ॥

೩. ಎಲೌ ಸುಂದರಿ, ವಾಯುವಿನ ಚಿಹ್ನೆಗಳೆಲ್ಲವನ್ನೂ ತಿಳಿದುಕೊಂಡಮೇಲೆ ಯೋಗಿಯು ಒಂದು ಸರಿಯಾದ ದಿನದಲ್ಲಿ ಪ್ರಾಣಾಯಾಮ ಮಾಡಲು ತತ್ಪರನಾದರೆ ಆಗ ಅವನು ಒಂದು ಪಕ್ಷದೊಳಗೆ ತನಗೊದಗಿರುವ ಮೃತ್ಯುವನ್ನು ಜಯಿಸಬಲ್ಲನು.

೪. ಹೃದಯದಲ್ಲಿರುವ ವಾಯುವು ಶರೀರದಲ್ಲಿರುವ ವಹ್ನಿಯನ್ನು ಎಂದರೆ ತೇಜಸ್ಸನ್ನು ಉಜ್ವಲಗೊಳಿಸುವುದು. ಅದು ಹೊರಗೂ ಒಳಗೂ ಎಲ್ಲಾ ಕಡೆಯಲ್ಲೂ ವ್ಯಾಪಿಸಿಕೊಂಡು ದೊಡ್ಡದಾಗಿರುವುದು.

೫. ಜ್ಞಾನ, ವಿಜ್ಞಾನ, ಉತ್ಸಾಹ ಇವೆಲ್ಲವೂ ವಾಯುವಿನ ದೆಸೆಯಿಂದಲೇ ಉಂಟಾಗುವುದು. ಯಾರು ಈ ವಾಯುವನ್ನು ಜಯಿಸುವರೋ ಅವರು ಈ ಪ್ರಪಂಚವನ್ನೇ ಜಯಿಸಿದಂತಾಗುವುದು.

೬. ಯೋಗಾಭ್ಯಾಸನಿಷ್ಠನಾದ ಯೋಗಿಯು ಮುಪ್ಪು, ಮರಣ ಇವುಗಳನ್ನು ಜಯಿಸಲಿಚ್ಛೆಯಿದ್ದಲ್ಲಿ ಧಾರಣಧ್ಯಾನಗಳಲ್ಲಿ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಬೇಕು.

೭. ಅಕ್ಕಸಾಲೆಯು ಮೂಷೆಯಲ್ಲಿ ಲೋಹವನ್ನು ತುಂಬಿ ತಿದಿಯಿಂದ ವಾಯುವನ್ನು ಸೇರಿಸುತ್ತಾ ಹೇಗೆ ಲೋಹವನ್ನು ಕರಗಿಸುವನೋ ಹಾಗೆಯೇ ಯೋಗಿಯೂ ಪ್ರಾಣಾಯಾಮಗಳಿಂದ ತನ್ನ ಇಷ್ಟಾರ್ಥಗಳನ್ನು ಸಾಧಿಸಬೇಕು.

ದೇವಸ್ಸಹಸ್ರಕೋ ನೇತ್ರಪಾದಹಸ್ತಸಹಸ್ರಕಃ ।
ಪೃಥ್ವೀಂ ಹಿ ಸರ್ವಮಾವೃತ್ಯ ಸೋಽಗ್ರೇತಿಷ್ಠದ್ದಶಾಂಗುಲಂ ॥ ೮ ॥

ಗಾಯತ್ರೀಂ ಶಿರಸಾ ಸಾರ್ಧಂ ಜಪೇದ್ವ್ಯಾಹೃತಿಪೂರ್ವಿಕಾಂ ।
ತ್ರಿವಾರಮಾಯತಪ್ರಾಣಃ ಪ್ರಾಣಾಯಾಮಸ್ಸ ಉಚ್ಯತೇ ॥ ೯ ॥

ಗತಾಗತಾ ನಿವರ್ತಂತೇ ಚಂದ್ರಸೂರ್ಯಾದಯೋ ಗ್ರಹಾಃ ।
ಅದ್ಯಾಪಿ ನ ನಿವರ್ತಂತ ಯೋಗಧ್ಯಾನಪರಾಯಣಾಃ ॥ ೧೦ ॥

ಶತಮಬ್ದಂ ತಪಸ್ತಪ್ತ್ವಾ ಕುಶಾಗ್ರಾಪಃ ಪಿಬೇದ್ದ್ವಿಜಃ ।
ತದಾಪ್ನೋತಿ ಫಲಂ ದೇವಿ ಪ್ರಾಣಾನಾಂ ಧಾರಣೈಕಯಾ ॥ ೧೧ ॥

ಯೋ ದ್ವಿಜಃ ಕಲ್ಯಮುತ್ಥಾಯ ಪ್ರಾಣಾಯಾಮೈಕಮಾಚರೇತ್ ।
ಸರ್ವಂ ಪಾಪಂ ನಿಹಂತ್ಯಾಶು ಬ್ರಹ್ಮಲೋಕಂ ಸ ಗಚ್ಛತಿ ॥ ೧೨ ॥

---

೮. ವಾಯುವಿಗೆ ಸಹಸ್ರತಲೆಗಳೂ, ಸಹಸ್ರನೇತ್ರಗಳೂ, ಸಹಸ್ರಪಾದಗಳೂ, ಸಹಸ್ರಹಸ್ತಗಳೂ ಇರುವುವು. ವಾಯುವು ಪೃಥ್ವಿಯನ್ನೆಲ್ಲಾ ಆವರಿಸಿಕೊಂಡು ಅಲ್ಲಿಂದಲೂ ಮೇಲೆ ಹತ್ತು ಅಂಗುಲ ಹೆಚ್ಚಾಗಿ ವ್ಯಾಪಿಸಿರುವುದು. ಎಂದರೆ ವಾಯುವು ಪೃಥ್ವಿಯ ಒಳಗೂ ಹೊರಗೂ ಮೇಲೂ, ಎಲ್ಲೆಲ್ಲಿಯೂ ತುಂಬಿಕೊಂಡಿರುವುದು.

೯. ಓಂಕಾರಪೂರ್ವಕವಾಗಿಯೂ ಋಷಿ, ದೇವತಾ, ಛಂದಸ್ಸು ಸಹಿತವಾಗಿಯೂ ಗಾಯತ್ರೀಮಂತ್ರವನ್ನು ಮೂರುಸಾರಿ ಉಚ್ಚಾರಮಾಡಿ ಪ್ರಾಣವಾಯುವನ್ನು ನಿಯಮನಮಾಡುವುದಕ್ಕೆ ಪ್ರಾಣಾಯಾಮವೆಂದು ಹೆಸರು.

೧೦. ಎಷ್ಟೋ ಚಂದ್ರಸೂರ್ಯಾದಿ ಗ್ರಹಗಳೂ ಸಹ ಇದುವರೆಗೆ ಹುಟ್ಟಿರುವರು, ಲಯವಾಗಿಯೂ ಇರುವರು. ಆದರೆ ಪ್ರಾಣಾಯಾಮಪುರಸ್ಸರವಾಗಿ ಯೋಗಧ್ಯಾನದಲ್ಲಿ ಆಸಕ್ತರಾದ ಯೋಗಿಗಳು ಯಾವಾಗಲೂ ಸ್ಥಿರವಾಗಿರುವರು.

೧೧. ಬ್ರಾಹ್ಮಣನು ನೂರುವರ್ಷಗಳಕಾಲ ದರ್ಭೆಯ ಅಗ್ರಭಾಗದ ನೀರನ್ನು ಮಾತ್ರ ಕುಡಿಯುತ್ತಾ ಕಠಿಣವಾದ ತಪಸ್ಸನ್ನು ಮಾಡುತ್ತಿದ್ದರೆ ಪ್ರಾಣವಾಯುವನ್ನು ಧರಿಸುವ ಸಾಮರ್ಥ್ಯವನ್ನು ಹೊಂದುತ್ತಾನೆ.

೧೨. ಯಾವ ಬ್ರಾಹ್ಮಣನು ಅರುಣೋದಯಕ್ಕೆ ಸರಿಯಾಗಿ ಎದ್ದು ದಿನವೂ ಪ್ರಾಣಾಯಾಮವನ್ನು ಮಾಡುವನೋ ಅವನು ತನ್ನ ಸರ್ವಪಾಪಗಳನ್ನು ಕಳೆದುಕೊಂಡು ಬ್ರಹ್ಮಲೋಕವನ್ನು ಪಡೆಯುವನು.

ಯೋऽತಂದ್ರಿತಸ್ಸದೈಕಾಂತೇ ಪ್ರಾಣಾಯಾಮಪರೋ ಭವೇತ್ ।
ಜರಾಂ ಮೃತ್ಯುಂ ವಿನಿರ್ಜಿತ್ಯ ವಾಯುಗಃ ಖೇಚರೀತಿ ಸಃ ॥ ೧೩ ॥

ಸಿದ್ಧಸ್ಯ ಭಜತೇ ರೂಪಂ ಕಾಂತಿಂ ಮೇಧಾಂ ಪರಾಕ್ರಮಂ ।
ಶೌರ್ಯಂ ವಾಯುಸಮೋ ಗತ್ಯಾ ಸೌಖ್ಯಂ ಶ್ಲಾಘ್ಯಂ ವರಂ ಸುಖಂ ॥ ೧೪ ॥

ಏತತ್ಕಥಿತಮಶೇಷಂ ವಾಯೋಸ್ಸಿದ್ಧಿಂ ಯದಾಪ್ನುತೇ ಯೋಗೀ ।
ಯತ್ತೇಜಸೋऽಪಿ ಲಭತೇ ತತ್ತೇ ವಕ್ಷ್ಯಾಮಿ ದೇವೇಶಿ ॥ ೧೫ ॥

ಸ್ಥಿತ್ವಾ ಸುಖಾಸನೇ ಸ್ವೇ ಶೇತೇ ಜನವಚನಹೀನೇ ತು ।
ಶಶಿರವಿಯುತಯಾ ತೇಜಃ ಪ್ರಕಾಶಯನ್ಮಧ್ಯಮೇ ದೇಶೇ ॥ ೧೬ ॥

ವಹ್ನಿಗತಂ ಭ್ರೂಮಧ್ಯೇ ಪ್ರಕಾಶತೇ ಯಸ್ತ್ವತಂದ್ರಿತೋ ಯೋಗೀ ।
ದೀಪ್ತೈರ್ಹೀನಧ್ವಾಂತೇ ಪಶ್ಯೇನ್ನೂನಮಸಂಶಯಂ ಲೋಕೇ ॥ ೧೭ ॥

೧೩. ಯಾವನು ಶ್ರದ್ಧೆಯಿಂದ ಏಕಾಂತದಲ್ಲಿ ಪ್ರಾಣಾಯಾಮವನ್ನು ಮಾಡುವನೋ ಅವನು ಮುಪ್ಪು, ಮೃತ್ಯುಗಳನ್ನು ಜಯಿಸಿ ವಾಯುಮಂಡಲದಲ್ಲಿಯೂ, ಆಕಾಶಮಂಡಲದಲ್ಲಿಯೂ ಸಂಚರಿಸುವನು.

೧೪. ಪ್ರಾಣಾಯಾಮವು ಸಿದ್ಧಿಸಲು ಒಳ್ಳೆಯ ರೂಪವೂ, ಕಾಂತಿಯೂ, ಬುದ್ಧಿಯೂ, ಪರಾಕ್ರಮವೂ, ಶೌರ್ಯವೂ ವೃದ್ಧಿಯಾಗುವುದು. ವಾಯುಸಮವಾದ ವೇಗವುಳ್ಳವನಾಗುವನು. ಉತ್ಕೃಷ್ಟವಾದ ಸುಖವುಂಟಾಗುವುದು.

೧೫. ಎಲೌ ದೇವಿ, ವಾಯುವಿನ ಸಿದ್ಧಿವಿಷಯಗಳನ್ನೆಲ್ಲಾ ಹೇಳಿಯಾಯ್ತು. ಈ ಸಿದ್ಧಿಯನ್ನು ಯಾವ ಯೋಗಿಯು ಹೊಂದುವನೋ ಅವನು ತೇಜಸ್ವಿಯಾಗುವನು. ಆ ವಿಷಯವನ್ನು ಹೇಳುವೆನು ಕೇಳು.

೧೬. ಜನರಹಿತವಾದ ನಿರ್ಮಲಪ್ರದೇಶದಲ್ಲಿ ಸುಖಾಸನವನ್ನು ರಚಿಸಿ ಅದರಲ್ಲಿ ಕುಳಿತು ಪ್ರಾಣಾಯಾಮದಿಂದ ಧಾರಣಾದಿಗಳನ್ನು ಮಾಡಿ ಧ್ಯಾನಾಸಕ್ತನಾದ ಯೋಗಿಯು ಸೂರ್ಯಚಂದ್ರರಿಗೆ ಸಮನಾದ ತೇಜಸ್ಸಿನಿಂದ ಬೆಳಗುವನು.

೧೭. ಯಾವ ಯೋಗಿಯು ಶ್ರದ್ಧೆಯಿಂದ ಕೂಡಿ, ತನ್ನ ಹುಬ್ಬಿನ ಮಧ್ಯದಲ್ಲಿ ದೃಷ್ಟಿಯನ್ನು ಸ್ಥಿರಗೊಳಿಸಿ ಪ್ರಾಣಾಯಾಮ ಪುರಸ್ಸರವಾಗಿ ಧ್ಯಾನಾಸಕ್ತನಾಗುವನೋ

ನೇತ್ರೇ ಕರಶಾಖಾಭಿಃ ಕಿಂಚಿತ್ಸಂಪೀಡ್ಯ ಯತ್ನತೋ ಯೋಗೀ ।
ತಾರಂ ಪಶ್ಯನ್ ಧ್ಯಾಯೇನ್ಮುಹೂರ್ತಮರ್ಧಂ ತಮೇಕಭಾವೋಽಪಿ ॥ ೧೮ ॥

ತತಸ್ತು ತಮಸಿ ಧ್ಯಾಯನ್ ಪಶ್ಯತಿ ಜ್ಯೋತಿರೈಶ್ವರಂ ।
ಶ್ವೇತಂ ರಕ್ತಂ ತಥಾ ಪೀತಂ ಕೃಷ್ಣಮಿಂದ್ರಧನುಷ್ಪ್ರಭಂ ॥ ೧೯ ॥

ಭ್ರುವೋರ್ಮಧ್ಯೇ ಲಲಾಟಸ್ಥಂ ಬಾಲಾರ್ಕಸಮತೇಜಸಂ ।
ತಂ ವಿದಿತ್ವಾ ತು ಕಾಮಾಂಗೀ ಕ್ರೀಡತೇ ಕಾಮರೂಪಧೃಕ್ ॥ ೨೦ ॥

ಕಾರಣಪ್ರಶಮಾವೇಶಂ ಪರಕಾಯಪ್ರವೇಶನಂ ।
ಅಣಿಮಾದಿಗುಣಾವಾಪ್ತಿರ್ಮನಸಾ ಚಾವಲೋಕನಂ ॥ ೨೧ ॥

ಅವನು ಲೋಕದಲ್ಲಿ ದೀಪವಿಲ್ಲದಿದ್ದರೂ, ಗಾಢಾಂಧಕಾರವಾದ ಕತ್ತಲೆಯಲ್ಲಿಯೂ ನೋಡಬಲ್ಲನು.

೧೮. ಕಣ್ಣುಗಳನ್ನು ಕೈಗಳಿಂದ ಉಜ್ಜಿಕೊಂಡು ಪ್ರಯತ್ನಪೂರ್ವಕವಾಗಿ ನಕ್ಷತ್ರಗಳನ್ನು ನೋಡಬೇಕು. ಅರ್ಧಮುಹೂರ್ತಕಾಲ ಒಂದೇ ಮನಸ್ಸಿನಿಂದ ಧ್ಯಾನಮಾಡಬೇಕು.

೧೯. ಅನಂತರ ಕತ್ತಲೆಯಲ್ಲಿ ಧ್ಯಾನಮಾಡುತ್ತಿರಲು ಬಿಳುಪು, ಕೆಂಪು, ಹಳದಿ ಕಪ್ಪು ಮುಂತಾದ ಮಿಶ್ರಬಣ್ಣಗಳಿಂದ ಕೂಡಿರುವ ಕಾಮನಬಿಲ್ಲಿನಂತಿರುವ ಈಶ್ವರನ ಸಂಬಂಧವಾದ ಜ್ಯೋತಿಯು ಕಾಣಬರುವದು.

೨೦. ಎಲೌ ಕಾಮಾಂಗಿ, ಹುಬ್ಬಿನ ನಡುವೆ ಲಲಾಟಪ್ರದೇಶದಲ್ಲಿರುವ ಬಾಲ ಸೂರ್ಯನ ತೇಜಸ್ಸಿಗೆ ಸಮನಾಗಿರುವ ಆ ತೇಜಸ್ಸನ್ನು ಯಾವ ಯೋಗಿ ಪ್ರತ್ಯಕ್ಷೀ ಕರಿಸಿಕೊಳ್ಳುವನೋ ಅವನು ತನಗಿಷ್ಟವಾದ ರೂಪವನ್ನು ಧರಿಸಿ ಕ್ರೀಡಿಸುವನು.

೨೧-೨೨. ಈ ವಿಧವಾದ ಪ್ರಾಣಾಯಾಮಾಭ್ಯಾಸದಿಂದ ಯೋಗಿಗೆ ಮತ್ತೊಂದ ರಲ್ಲಿ ಪ್ರವೇಶಮಾಡುವಿಕೆಯೂ, ಪರಕಾಯಪ್ರವೇಶವೂ, ಅಣಿಮಾದಿಗುಣಗಳ ಪ್ರಾಪ್ತಿಯೂ, ಮನಸ್ಸಿನಿಂದಲೇ ಸಮಸ್ತ ವಿಷಯವನ್ನೂ ತಿಳಿದುಕೊಳ್ಳುವ ಶಕ್ತಿಯೂ

**ದೂರಶ್ರವಣವಿಜ್ಞಾನಮದೃಶ್ಯಂ ಬಹುರೂಪಧೃಕ್ ।**
**ಸಂತತಾಭ್ಯಾಸಯೋಗೇನ ಖೇಚರತ್ವಂ ಪ್ರಜಾಯತೇ ॥ ೨೨ ॥**

**ಶ್ರುತಾಧ್ಯಯನಸಂಪನ್ನಾ ನಾನಾಶಾಸ್ತ್ರವಿಶಾರದಾಃ ।**
**ಜ್ಞಾನಿನೋಽಪಿ ವಿಮುಹ್ಯಂತೇ ಪೂರ್ವಕರ್ಮವಶಾನುಗಾಃ ॥ ೨೩ ॥**

**ಪಶ್ಯಂತೋಽಪಿ ನ ಪಶ್ಯಂತಿ ಶೃಣ್ವಾನಾ ಬಧಿರಾ ಯಥಾ ।**
**ಯಥಾಂಧಾ ಮಾನುಷಾ ಲೋಕೇ ಮೂಢಾಃ ಪಾಪವಿಮೋಹಿತಾಃ ॥ ೨೪ ॥**

**ವೇದಾಹಮೇತಂ ಪುರುಷಂ ಮಹಾಂತಮಾದಿತ್ಯವರ್ಣಂ ತಮಸಃ ಪರ-ಸ್ತಾತ್ ।**
**ತಮೇವಂ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇ ಪ್ರಾಯ-ಣಾಯ ॥ ೨೫ ॥**

ದೂರದ ಶಬ್ದವನ್ನು ಕೇಳುವ ಸಾಮರ್ಥ್ಯವೂ ಯಾರಕಣ್ಣಿಗೂ ಕಾಣಿಸದಂತೆ ಅದೃಶ್ಯವಾಗುವಿಕೆಯೂ, ನಾನಾವಿಧವಾದ ರೂಪವನ್ನು ಧರಿಸುವ ಮತ್ತು ಆಕಾಶದಲ್ಲಿ ಸಂಚಾರಮಾಡುವ ಶಕ್ತಿಯೂ ಸಹ ಬರುವುದು.

೨೩. ಅಧ್ಯಯನಸಂಪನ್ನರೂ, ನಾನಾಶಾಸ್ತ್ರವಿಶಾರದರೂ, ಜ್ಞಾನಿಗಳಾದವರೂ ಸಹ ತಮ್ಮ ಪೂರ್ವಾರ್ಜಿತಕರ್ಮಕ್ಕೆ ವಶರಾಗಿ ಮೋಹಗೊಳ್ಳುವರು.

೨೪. ನೋಡಿಯೂ ಕೂಡ ನೋಡದವರಾಗುವರು. ಕೇಳಿಯೂ ಕೂಡ ಕಿವುಡರಾಗಿರುವರು. ಲೋಕದಲ್ಲಿ ಕುರುಡರಂತೆ ವ್ಯವಹರಿಸುವವರು ಮೂಢರಾಗಿಯೂ, ಪಾಪಿಗಳಾಗಿಯೂ ಆಗುವರು. ಇವಕ್ಕೆಲ್ಲಾ ಪೂರ್ವಾರ್ಜಿತಕರ್ಮವೇ ಕಾರಣವು.

೨೫. ಬಾಹ್ಯಾಂಧಕಾರದಿಂದಲೂ, ಅಜ್ಞಾನಾಂಧಕಾರದಿಂದಲೂ ದೂರನಾಗಿರುವ, ಸೂರ್ಯನಂತೆ ಮಹಾತೇಜಸ್ಸಿನಿಂದ ಬೆಳಗುತ್ತಿರುವ ಪರಮಪುರುಷನನ್ನು ಯಾವನು ಧ್ಯಾನಿಸಿ ತಿಳಿದುಕೊಳ್ಳುವನೋ ಅವನು ಜರಾಮರಣರಹಿತವಾದ ಅಮರತ್ವವನ್ನು ಹೊಂದುವನು. ಮೋಕ್ಷಪ್ರಾಪ್ತಿಗೆ ಪರವಸ್ತುವಿನ ಜ್ಞಾನವಲ್ಲದೆ ಬೇರೆ ಯಾವ ಮಾರ್ಗವೂ ಇರುವುದಿಲ್ಲ.

ಏಷ ತೇ ಕಥಿತಃ ಸಮ್ಯಕ್ ತೇಜಸೋ ವಿಧಿರುತ್ತಮಃ ।
ಕಾಲಂ ಜಿತ್ವಾ ಯಥಾ ಯೋಗೀ ಚಾಮರತ್ವಂ ಪ್ರಪದ್ಯತೇ ॥ ೨೬ ॥

ಪುನಃ ಪರತರಂ ವಕ್ಷ್ಯೇ ಯಥಾ ಮೃತ್ಯುರ್ನ ಜಾಯತೇ ।
ಸಾವಧಾನತಯಾ ದೇವಿ ಶೃಣುಷ್ವೈಕಾಗ್ರಮಾನಸಾ ॥ ೨೭ ॥

ತುರೀಯಾ ದೇವಿ ಭೂತಾನಾಂ ಯೋಗಿನಾಂ ಧ್ಯಾನಿನಾಂ ತಥಾ ।
ಸುಖಾಸನೇ ಯಥಾಸ್ಥಾನಂ ಯೋಗೀ ನಿಯತಮಾನಸಃ ॥ ೨೮ ॥

ಸಮುನ್ನತಶರೀರೋಽಪಿ ಸ ಬಧ್ವಾ ಕರಸಂಪುಟಂ ।
ಚಂಚ್ವಾಕಾರೇಣ ವಕ್ತ್ರೇಣ ಪಿಬನ್ವಾಯುಂ ಶನೈಶ್ಶನೈಃ ॥ ೨೯ ॥

ಪ್ರಸ್ರವಂತಿ ಕ್ಷಣಾದಾಪಃ ತಾಲುಸ್ಥಾ ಜೀವದಾಯಿಕಾಃ ।
ತಾ ಜಿಘ್ರೇದ್ವಾಯುನಾದಾಯಾಮೃತಂ ತಚ್ಛೀತಲಂ ಜಲಂ ॥ ೩೦ ॥

---

೨೬-೨೭. ಎಲೌ ದೇವಿ, ನಿನಗಿದುವರೆಗೂ ತೇಜಸ್ಸಿನ ವಿಧಿಯನ್ನು ಚೆನ್ನಾಗಿ ವಿವರಿಸಿದೆನು. ಮತ್ತು ಯೋಗಿಯಾದವನು ಕಾಲವನ್ನು ಜಯಿಸಿ ಅಮರತ್ವವನ್ನು ಹೊಂದುವ ವಿಷಯವನ್ನೂ ಹೇಳಿದೆನು. ಈಗ ಮೃತ್ಯುವು ಉಂಟಾಗದಿರುವಂತೆ ಆಗಲು ಶ್ರೇಷ್ಠವಾದ ಬೇರೊಂದು ಮಾರ್ಗವನ್ನು ಹೇಳುವೆನು. ಸಾವಧಾನವಾಗಿ ಮನಸ್ಸಿಟ್ಟು ಕೇಳು.

೨೮. ಯೋಗಿಗಳೂ, ನಿಯಮವರ್ತಿಗಳಾದ ಜನರೂ ಸುಖಾಸನದಲ್ಲಿ ಕುಳಿತು ಚಿತ್ತೈಕಾಗ್ರತೆಯಿಂದ ಧ್ಯಾನಮಾಡಿದರೆ ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಮೂರು ಅವಸ್ಥೆಗಳಿಂದಲೂ ಭಿನ್ನವಾದ ತುರೀಯವೆಂಬ ಉತ್ತಮವಾದ ಸಮಾಧ್ಯವಸ್ಥೆಯನ್ನು ಹೊಂದುವರು.

೨೯. ಯೋಗಿಯಾದವನು ಒಳ್ಳೆಯ ಪೀಠದಲ್ಲಿ ಕುಳಿತು ಒಂದೇಮನಸ್ಸಿನಿಂದ ಕೂಡಿ ಶರೀರವನ್ನು ಸ್ವಲ್ಪ ಮೇಲಕ್ಕೆ ಮಾಡಿ ಕೈಗಳನ್ನು ಮುಗಿದುಕೊಂಡು ತುಟಿಗಳನ್ನು ಉದ್ದವಾಗಿ ಕೊಕ್ಕಿನಂತೆ ಮಾಡಿಕೊಂಡು ಮೆಲ್ಲಮೆಲ್ಲಗೆ ವಾಯುವನ್ನು ಪಾನ ಮಾಡಬೇಕು.

೩೦. ಆಗ ಒಂದುಕ್ಷಣದೊಳಗಾಗಿ ತಾಲು (ದವಡೆ) ಸ್ಥಳದಲ್ಲಿರುವ, ಜೀವನಕ್ಕೆ ಆಧಾರವಾದ ನೀರು ಸುರಿಯುತ್ತದೆ. ಆಗ ಈರೀತಿ ವಾಯುವಿನ ದೆಸೆಯಿಂದ ಬಂದ ತಣ್ಣಗಿರುವ ಅಮೃತಮಯವಾದ ನೀರನ್ನು ಮೂಸಿನೋಡಬೇಕು.

ಪಿಬನ್ನನುದಿನಂ ಯೋಗೀ ನ ಮೃತ್ಯುವಶಗೋ ಭವೇತ್ ।
ದಿವ್ಯಕಾಯೋ ಮಹಾತೇಜಾಃ ಪಿಪಾಸಾಕ್ಷುದ್ವಿವರ್ಜಿತಃ ॥ ೩೦ ॥

ಬಲೇನ ನಾಗಸ್ತುರಗೋ ಜವೇನ
ದೃಷ್ಟ್ಯಾ ಸುಪರ್ಣಸ್ಸುಶ್ರುತಿಸ್ತು ದೂರಾತ್ ।
ಆಕುಂಚಿತಾಕುಂಡಲಿಕೃಷ್ಣಕೇಶೋ ।
ಗಂಧರ್ವವಿದ್ಯಾಧರತುಲ್ಯವರ್ಣಃ ॥ ೩೨ ॥

ಜಿವನ್ನರೋ ವರ್ಷಶತಂ ಸುರಾಣಾಂ
ಸುಮೇಧಸಾ ವಾಕ್ಪತಿನಾ ಸಮತ್ವಂ ।
ಏವಂ ಚರನ್ ಖೇಚರತಾಂ ಪ್ರಯಾತಿ ।
ಯಥೇಷ್ಟಚಾರೀ ಸುಖಿತಸ್ಸದೈವ ॥ ೩೩ ॥

ಪುನರನ್ಯತ್ಪ್ರವಕ್ಷ್ಯಾಮಿ ವಿಧಾನಂ ಯತ್ಸುರೈರಪಿ ।
ಗೋಪಿತಂ ತು ಪ್ರಯತ್ನೇನ ತಚ್ಛೃಣಷ್ವ ವರಾನನೇ ॥ ೩೪ ॥

೩೧. ಪ್ರತಿದಿನವೂ ಯೋಗಿಯು ಈರೀತಿಯಾದ ನೀರನ್ನು ಕುಡಿಯುತ್ತಿದ್ದರೆ ಅವನು ಮೃತ್ಯುವಶನಾಗುವುದಿಲ್ಲ. ಮತ್ತು ದಿವ್ಯವಾದ ಶರೀರವೂ ಬರುವುದು. ತೇಜಸ್ವಿಯಾಗುವನು. ಹಸಿವು ಬಾಯಾರಿಕೆಗಳವನಿಗಿರುವುದಿಲ್ಲ.

೩೨. ಅಂತಹ ನೀರನ್ನು ಕುಡಿಯುವವನು ಬಲದಲ್ಲಿ ಆನೆಗೆ ಸಮಾನಾಗಿಯೂ, ವೇಗದಲ್ಲಿ ಕುದುರೆಗೆ ಸಮನಾಗಿಯೂ, ದೃಷ್ಟಿಯಲ್ಲಿ ಗರುಡನಿಗೆ ಸಮನಾಗಿಯೂ ಆಗುವನು. ಮತ್ತು ಬಹು ದೂರದಲ್ಲಿ ಆಗುವ ಶಬ್ದವನ್ನು ಕೇಳಬಲ್ಲನು. ಬಗ್ಗಿರುವ ಗುಂಗುರುಗುಂಗುರಾದ ತಲೆಯ ಕೂದಲುಗಳಿಂದ ಕೂಡಿ ಗಂಧರ್ವ, ವಿದ್ಯಾಧರರಂತೆ ಸುಂದರ ರೂಪವುಳ್ಳವನಾಗುವನು.

೩೩. ಅಂತಹ ಪುರುಷನು ದೇವಮಾನದ ನೂರು ವರ್ಷಗಳು ಜೀವಿಸಿ, ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನಾಗುವನು. ಮತ್ತು ಅಂತರಿಕ್ಷದಲ್ಲಿ ಸಂಚರಿಸುವ ಸಾಮರ್ಥ್ಯವುಳ್ಳವನಾಗುವನು. ತನಗಿಷ್ಟಬಂದ ಕಡೆಗೆ ಯಾವ ತಡೆಯೂ ಇಲ್ಲದೆ ಹೋಗುವನು. ಮತ್ತು ಯಾವಾಗಲೂ ಸುಖಿಯಾಗಿರುವನು.

೩೪. ಎಲೌ ಸುಂದರಮುಖಿಯೇ, ಬ್ರಹ್ಮನಿಗೂ ದೇವತೆಗಳಿಗೂ ಸಹ ತಿಳಿಯದ ಅತಿ ರಹಸ್ಯವಾದ ಗುಟ್ಟಾದ ಮತ್ತೊಂದು ವಿಷಯವನ್ನು ಹೇಳುವೆನು ಕೇಳು.

ಸಮಾಕುಂಚ್ಯಾಭ್ಯಸೇದ್ಯೋಗೀ ರಸನಾಂ ತಾಲುಕಂ ಪ್ರತಿ ।
ಕಿಂಚಿತ್ಕಾಲಾಂತರೇಣೈವ ಕ್ರಮಾತ್ಪ್ರಾಪ್ನೋತಿ ಲಂಬಿಕಾಂ ॥ ೩೫ ॥

ತತಃ ಪ್ರಸ್ರವತೇ ಸಾ ತು ಸಂಸ್ಪೃಷ್ಟ್ವಾ ಶೀತಲಾಂ ಸುಧಾಂ ।
ಪಿಬನ್ನೇವ ಸದಾ ಯೋಗೀ ಸೋಽಮರತ್ವಂ ಹಿ ಗಚ್ಛತಿ ॥ ೩೬ ॥

ರೇಫಾಗ್ರಂ ಲಂಬಕಾಗ್ರಂ ತರತಲಘಟನಂ ಶುಭ್ರಪದ್ಮಸ್ಯ ಬಿಂದೋ-
ಸ್ತೇನಾಕೃಷ್ಟಾ ಸುಧೇಯಂ ಪತತಿ ಪರಪದೇ ದೇವತಾನಂದಕಾರೀ ।
ಸಾರಂ ಸಂಸಾರತಾರಂ ಕೃತಕಲುಷಹರಂ ಕಾಲತಾರಂ ಸತಾರಂ ।
ಯೇನೇದಂ ಪ್ಲಾವಿತಾಂಗಂ ಸ ಭವತಿ ನ ಮೃತಃ ಕ್ಷುತ್ಪಿಪಾಸಾವಿಹೀನಃ
॥ ೩೭ ॥

೩೫. ಯೋಗಾಭ್ಯಾಸಮಾಡುವವನು ನಾಲಿಗೆಯನ್ನು ದವಡೆಯ ಕಡೆಗೆ ಲಂಬಿಸಿ ಸ್ವಲ್ಪಹೊತ್ತು ಅಭ್ಯಾಸಮಾಡಬೇಕು. ಹೀಗೆ ಮಾಡುತ್ತಿದ್ದರೆ ನಾಲಿಗೆಯು ಉದ್ದವಾಗುವುದು.

೩೬. ಅನಂತರ ತಾಲುಜಿಹ್ವೆಗಳ ಸಂಯೋಗದಿಂದ ಶೀತಲವಾದ ಅಮೃತವು ಸುರಿಯುತ್ತದೆ. ಅದನ್ನು ಕುಡಿಯಲು ಯೋಗಿಯು ಮರಣವಿಲ್ಲದವನಾಗುವನು.

೩೭. ರೇಫಾಗ್ರವೆಂದು ಹೆಸರುಳ್ಳ ತೇಜಸ್ಸನ್ನು ದರ್ಶನಮಾಡುವ ಯೋಗವನ್ನೂ, ಕರತಲಘಟನವೆಂಬ ಹೆಸರಿನ ವಾಯುವನ್ನು ಆಕರ್ಷಿಸುವ ಯೋಗವನ್ನೂ, ಲಂಬಿಕಾ ಎಂಬ (ಖೇಚರೀಮುದ್ರೆ) ಯೋಗವನ್ನೂ ಅಭ್ಯಾಸಮಾಡುವಾಗ ಪದ್ಮದಂತೆ ಆಕಾರವುಳ್ಳದ್ದೂ, ಶುಭ್ರವಾದ ವರ್ಣವುಳ್ಳದ್ದೂ ಆದ ಸಹಸ್ರಾರಪದ್ಮ (ಮೆದುಳು) ದಿಂದ ಬಿಂದುರೂಪದಲ್ಲಿ ಅಮೃತವು ಜಿನುಗುತ್ತಿರುವುದು. ಇದು ದೇವತೆಗಳಿಗೂ ಸಹ ಆನಂದವನ್ನುಂಟುಮಾಡುವಂತಹುದು. ಯೋಗಿಗೆ ಶ್ರೇಷ್ಠವಾದ ಇಂತಹ ಅಮೃತಸ್ರಾವವುಂಟಾಗುವುದು. ಈ ಅಮೃತಪಾನದಿಂದ ಸಮಸ್ತ ಪಾಪಗಳೂ ನಾಶವಾಗಿ ಜನ್ಮಮರಣಪ್ರವಾಹರೂಪವಾದ ಸಂಸಾರಬಂಧನವು ನಿಲ್ಲುವುದು. ಈ ಅಮೃತದಿಂದ ಶರೀರವನ್ನು ಸೇವನೆಮಾಡಿದ ಯೋಗಿಯು ಹಸಿವು ಬಾಯಾರಿಕೆ ಮೊದಲಾದ ತೊಂದರೆಗಳಿಲ್ಲದವನಾಗಿ ಮುಕ್ತನಾಗುವನು.

ಏಭಿರ್ಯುಕ್ತಾ ಚತುರ್ಭಿಃ ಕ್ಷಿತಿಧರತನಯೇ ಯೋಗಿಭಿರ್ನೈ ಧರೈಷಾ
ಧೈರ್ಯಾನ್ನಿತ್ಯಂ ಕುತೋಽಂತಃ ಸಕಲಮಪಿ ಜಗದ್ಯತ್ಸುಖಪ್ರಾಪಣಾಯ ।
ಸ್ವಪ್ನೇ ದೇಹೀ ವಿಧತ್ತೇ ಸಕಲಮಪಿ ಸದಾ ಮಾನಯನ್ಯಚ್ಚ ದುಃಖಂ
ಸ್ವರ್ಗೇ ಹ್ಯೇವಂ ಧರಿತ್ರ್ಯಾಃ ಪ್ರಭವತಿ ಚ ತತೋ ವಾ ಸ ಕಿಂಚಿಚ್ಚ-
ತುರ್ಣಾಂ ॥ ೩೮ ॥

ತಸ್ಮಾನ್ಮಂತ್ರೈಸ್ತಪೋಭಿರ್ವ್ರತನಿಯಮಯುತೈರೌಷಧೈರ್ಯೋಗಯುಕ್ತಾ
ಧಾತ್ರೀ ರಕ್ತಾ ಮನುಷ್ಯೈರ್ನಯವಿನಯಯುತೈರ್ಧರ್ಮವಿದ್ಭಿಃ ಕ್ರಮೇಣ ।

೩೮. ಎಲೈ ಪಾರ್ವತಿಯೇ, ಕೇಳು. ಈ ಅಧ್ಯಾಯದ ಹದಿನೈದನೆಯ ಶ್ಲೋಕದಲ್ಲಿ ಹೇಳಿರುವ ತೇಜಸ್ಸಿನ ಸಂಬಂಧವಾದ ಯೋಗ, ಇಪ್ಪತ್ತೊಂಭತ್ತನೆಯ ಶ್ಲೋಕದಲ್ಲಿ ಹೇಳಿರುವ ಕರತಲಘಟನವೆಂಬ ವಾಯುಪಾನಕ್ರಮ, ಮೂವತ್ತೈದನೆಯ ಶ್ಲೋಕದಲ್ಲಿ ಹೇಳಿರುವ ಲಂಬಿಕಾಯೋಗ (ಖೇಚರೀಮುದ್ರೆ) ಮೊದಲು ಹೇಳಿರುವ ಕಾಲವಂಚನಕ್ರಮ ಎಂಬ ಈ ನಾಲ್ಕು ವಿಧವಾದ ಯೋಗಗಳನ್ನು ಈ ಭೂಮಿಯಲ್ಲಿ ಪ್ರತಿದಿನವೂ ಅಭ್ಯಾಸಮಾಡುವವರು ಬಹುವಾಗಿ ಸುಖವನ್ನು ಹೊಂದುವರು. ಇದನ್ನು ಬಿಟ್ಟು ಸುಖಕ್ಕಾಗಿ ಬೇರೆವಿಧವಾಗಿ ಪ್ರಯತ್ನಪಡುವುದು ವ್ಯರ್ಥವು. ಪ್ರಾಣಿಯು ಸ್ವಪ್ನದಲ್ಲಿ ತನ್ನ ದುಃಖವನ್ನು ಗಣನೆಗೆ ತರದೆ ಸಮಸ್ತವೂ ಸುಖವಾಗಿರುವಂತೆ ತಿಳಿಯುವನು. ಸ್ವರ್ಗದಲ್ಲಿಯೂ ಸುಖಾತಿಶಯದಿಂದ ದುಃಖವನ್ನು ಲೆಕ್ಕಿಸದೆ ಇರುವನು. ಇದರಂತೆ ಯೋಗಿಯು ಈ ನಾಲ್ಕುವಿಧವಾದ ಯೋಗವನ್ನು ಅಭ್ಯಾಸಮಾಡಿ ಭೂಮಿಯಲ್ಲಿಯೇ ನಿರತಿಶಯವಾದ ಸುಖವನ್ನು ಹೊಂದಲು ಸಮರ್ಥನಾಗುವನು.

೩೯. ಮಂತ್ರ, ತಪಸ್ಸು, ವ್ರತ, ನಿಯಮ ಇವುಗಳಿಂದ ಕೂಡಿರುವ ಜನರಿಂದಲೂ, ಮೂಲಿಕೆಗಳ ಪ್ರಯೋಗವನ್ನು ತಿಳಿದವರಿಂದಲೂ, ನಯ, ವಿನಯ, ಧರ್ಮಗಳನ್ನು ತಿಳಿದವರಿಂದಲೂ ಈ ಭೂಮಿಯು ತುಂಬಿರುವುದು. ಆದಿದೇವನಾದ ಪರಶಿವನು ಈ ನಾಲ್ಕುವಿಧವಾದ ಯೋಗವನ್ನು ತಿಳಿದವರ ವಿಷಯದಲ್ಲಿ ಚಂಚಲನಾಗಿರುವುದಿಲ್ಲ ಎಂದರೆ ಅವರಿಗೆ ಪ್ರಸನ್ನನಾಗುವನು.

ಭೂತಾನಾಮಾದಿದೇವೋ ನ ಹಿ ಭವತಿ ಚಲಃ ಸಂಯುತೋ ವೈ
ಚುತುರ್ಣಾಂ
ತಸ್ಮಾದೇವಂ ಪ್ರವಕ್ಷ್ಯೇ ವಿಧಿಮನುಗದಿತಂ ಛಾಯಿಕಂ ಯಚ್ಛಿವಾಖ್ಯಂ
|| ೩೯ ||

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಕಾಲವಂಚನಶಿವಪ್ರಾಪ್ತಿವರ್ಣನಂ ನಾಮ ಸಪ್ತವಿಂಶೋಽಧ್ಯಾಯಃ



ಇನ್ನು ಮುಂದೆ ಶುಭಸೂಚಕವಾದ ಛಾಯಾಪುರುಷನ ಲಕ್ಷಣವನ್ನು ಹೇಳುವೆನು, ಕೇಳು.

ಇಲ್ಲಿಗೆ ಶ್ರೀ ಶಿವಪುರಾಣದ ಉಮಾಸಂಹಿತೆಯಲ್ಲಿ ಕಾಲವಂಚನಶಿವಪ್ರಾಪ್ತಿವರ್ಣನ
ವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಅಷ್ಟಾವಿಂಶೋಽಧ್ಯಾಯಃ

॥ ದೇವ್ಯುವಾಚ ॥

ದೇವದೇವ ಮಹಾದೇವ ಕಥಿತಂ ಕಾಲವಂಚನಂ ।
ಶಬ್ದಬ್ರಹ್ಮಸ್ವರೂಪಂ ಚ ಯೋಗಲಕ್ಷಣಮುತ್ತಮಂ ॥ ೧ ॥

ಕಥಿತಂ ತೇ ಸಮಾಸೇನ ಛಾಯಿಕಂ ಜ್ಞಾನಮುತ್ತಮಂ ।
ವಿಸ್ತರೇಣ ಸಮಾಖ್ಯಾಹಿ ಯೋಗಿನಾಂ ಹಿತಕಾಮ್ಯಯಾ ॥ ೨ ॥

॥ ಶಂಕರ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ಛಾಯಾಪುರುಷಲಕ್ಷಣಂ ।
ಯತ್ ಜ್ಞಾತ್ವಾ ಪುರುಷಃ ಸಮ್ಯಕ್ಸರ್ವಪಾಪೈಃ ಪ್ರಮುಚ್ಯತೇ ॥ ೩ ॥

---

## ಇಪ್ಪತ್ತೆಂಟನೆಯ ಅಧ್ಯಾಯವು

೧-೨. ಪಾರ್ವತಿಯು ಪ್ರಶ್ನೆಮಾಡುತ್ತಾಳೆ:—ಎಲೈ ದೇವದೇವನೇ, ನೀನಿದುವರೆಗೂ ಕಾಲವಂಚನೆಯನ್ನೂ, ಶಬ್ದಬ್ರಹ್ಮಸ್ವರೂಪವನ್ನೂ, ಯೋಗಲಕ್ಷಣವನ್ನೂ ವಿಸ್ತಾರವಾಗಿ ಹೇಳಿದೆ. ಈಗ ಯೋಗಿಗಳಿಗೆ ಹಿತವನ್ನುಂಟುಮಾಡುವ ದೃಷ್ಟಿಯಿಂದ ಉತ್ತಮ ಜ್ಞಾನಪ್ರದವಾದ ಛಾಯಾಪುರುಷಲಕ್ಷಣವನ್ನು ಹೇಳು ಎಂದು ಕೇಳಲು,

೩. ಶಂಕರನು ಹೇಳುವನು :—ಎಲೌ ದೇವಿ, ಛಾಯಾಪುರುಷಲಕ್ಷಣವನ್ನು ಹೇಳುವೆನು ಕೇಳು. ಇದನ್ನು ತಿಳಿದವನು ತನ್ನ ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು.

ಸೂರ್ಯಂ ಹಿ ಪೃಷ್ಠತಃ ಕೃತ್ವಾ ಸೋಮಂ ವಾ ವರವರ್ಣಿನಿ ।
ಶುಕ್ಲಾಂಬರಧರಃ ಸ್ರಗ್ವೀ ಗಂಧಧೂಪಾದಿವಾಸಿತಃ ॥ ೪ ॥

ಸಂಸ್ಮರೇನ್ಮೇ ಮಹಾಮಂತ್ರಂ ಸರ್ವಕಾಮಫಲಪ್ರದಂ ।
ನವಾತ್ಮಕಂ ಪಿಂಡಭೂತಂ ಸ್ವಾಂ ಛಾಯಾಂ ಸನ್ನಿರೀಕ್ಷಯೇತ್ ॥ ೫ ॥

ದೃಷ್ಟ್ವಾ ತಾಂ ಪುನರಾಕಾಶೇ ಶ್ವೇತವರ್ಣಸ್ವರೂಪಿಣೀಂ ।
ಸ ಪಶ್ಯತ್ಯೇಕಭಾವಸ್ತು ಶಿವಂ ಪರಮಕಾರಣಂ ॥ ೬ ॥

ಬ್ರಹ್ಮಪ್ರಾಪ್ತಿರ್ಭವೇತ್ತಸ್ಯ ಕಾಲವಿದ್ಭಿರಿತೀರಿತಂ ।
ಬ್ರಹ್ಮಹತ್ಯಾದಿಕೈಃ ಪಾಪೈರ್ಮುಚ್ಯತೇ ನಾತ್ರಸಂಶಯಃ ॥ ೭ ॥

ಶಿರೋಹೀನಂ ಯದಾ ಪಶ್ಯೇತ್ ಷಡ್ಭಿರ್ಮಾಸೈರ್ಭವೇತ್ ಕ್ಷಯಃ ।
ಸಮಸ್ತಂ ವಾಙ್ಮಯಂ ತಸ್ಯ ಯೋಗಿನಸ್ತು ಯಥಾ ತಥಾ ॥ ೮ ॥

---

೪-೫. ಮೊದಲು ಸೂರ್ಯನಾಗಲಿ, ಚಂದ್ರನಾಗಲಿ, ತನ್ನ ಹಿಂದುಗಡೆ ಇರುವಂತೆ ನಿಂತುಕೊಳ್ಳಬೇಕು. ಎಂದರೆ ತನ್ನ ನೆರಳು ತನ್ನ ಮುಂದುಗಡೆ ಬೀಳುವುದು. ಶುಭ್ರವಾದ ವಸ್ತ್ರಗಳನ್ನು ಧರಿಸಿ ಗಂಧಮಾಲ್ಯಾದಿಗಳಿಂದ ಅಲಂಕೃತನಾಗಿ ಸಮಸ್ತ ಇಷ್ಟಾರ್ಥವನ್ನು ಕೊಡುವ ನನ್ನ ಮಂತ್ರವನ್ನು (ಶಿವಪಂಚಾಕ್ಷರೀ) ಸ್ಮರಿಸಿ ಬಳಿಕ ತನ್ನ ಎದುರಾಗಿ ಬಿದ್ದಿರುವ ಛಾಯೆಯನ್ನು (ನೆರಳನ್ನು) ನೋಡಬೇಕು.

೬. ಪುನಃ ಆಕಾಶದಲ್ಲಿ ಶ್ವೇತವರ್ಣಸ್ವರೂಪಿಣಿಯಾಗಿರುವ ಛಾಯೆಯನ್ನು ಒಂದೇಭಾವದಿಂದ ನೋಡಬೇಕು. ಇದು ಮಂಗಳವನ್ನುಂಟುಮಾಡುವುದು.

೭. ಯಾರು ಈರೀತಿಯಾಗಿ ನೋಡುವರೋ ಅವರಿಗೆ ಬ್ರಹ್ಮಸ್ಥಾನವು ಪ್ರಾಪ್ತಿಯಾಗುವುದೆಂದು ಕಾಲಜ್ಞಾನಿಗಳು ಹೇಳುವರು. ಅಂಥವನು ನಿಸ್ಸಂಶಯವಾಗಿ ಬ್ರಹ್ಮಹತ್ಯಾದಿದೋಷಗಳಿಂದ ಮುಕ್ತನಾಗುವನು.

೮. ಛಾಯೆಯನ್ನು ತಲೆಯಿಲ್ಲದಂತೆ ಕಂಡರೆ ಅವನು ಆರು ತಿಂಗಳೊಳಗಾಗಿ ಸಾಯುವನು. ಯೋಗಿಗಳಂತೆ ಸಮಸ್ತ ವಾಙ್ಮಯವೂ ವಶವಾಗುವುದು.

ಶುಕ್ಲೇ ಧರ್ಮಂ ವಿಜಾನೀಯಾತ್ಕೃಷ್ಣೇ ಪಾಪಂ ವಿನಿರ್ದಿಶೇತ್ ।
ರಕ್ತೇ ಬಂಧಂ ವಿಜಾನೀಯಾತ್ಪೀತೇ ವಿದ್ವಿಷಮಾದಿಶೇತ್ ॥ ೯ ॥

ವಿವಾದೋ ಬಂಧುನಾಶಃ ಸ್ಯಾದ್ವಿತುಂಡೇ ಚೈವ ಕ್ಷುದ್ಭಯಂ ।
ವಿಕಟೌ ನಶ್ಯತೇ ಭಾರ್ಯಾ ವಿಜಂಘೇ ಧನಮೇವ ಹಿ ॥ ೧೦ ॥

ಪಾದಾಭಾವೇ ವಿದೇಶಸ್ಸ್ಯಾದಿತ್ಯೇತತ್ಕಥಿತಂ ಮಯಾ ।
ತದ್ವಿಚಾರ್ಯಂ ಪ್ರಯತ್ನೇನ ಪುರುಷೇಣ ಮಹೇಶ್ವರಿ ॥ ೧೧ ॥

ಸಮ್ಯಕ್ತಂ ಪುರುಷಂ ದೃಷ್ಟ್ವಾ ಸಂನಿವೇಶ್ಯಾತ್ಮನಾತ್ಮನಿ ।
ಜಪೇನ್ನವಾತ್ಮಕಂ ಮಂತ್ರಂ ಹೃದಯಂ ಮೇ ಮಹೇಶ್ವರಿ ॥ ೧೨ ॥

ವತ್ಸರೇ ವಿಗತೇ ಮಂತ್ರೀ ತನ್ನಾಸ್ತಿ ಯನ್ನ ಸಾಧಯೇತ್ ।
ಅಣಿಮಾದಿಗುಣಾನಷ್ಟೌ ಖೇಚರತ್ವಂ ಪ್ರಪದ್ಯತೇ ॥ ೧೩ ॥

---

೯. ಶುಕ್ಲಚ್ಛಾಯೆಯು ಧರ್ಮವನ್ನುಂಟುಮಾಡುವುದು. ಕೃಷ್ಣವರ್ಣದ ಛಾಯೆಯು ಪಾಪವನ್ನುಂಟುಮಾಡುವುದು. ರಕ್ತಚ್ಛಾಯೆಯು ಬಂಧನವನ್ನುಂಟುಮಾಡುವುದು. ಹಳದಿಯಬಣ್ಣದ ಛಾಯೆಯು ದ್ವೇಷವನ್ನುಂಟುಮಾಡುವುದು ಮತ್ತು ವಿವಾದವೂ ಬಂಧುನಾಶವೂ ಆಗುವುದು.

೧೦. ಬಾಯಿಯಿಲ್ಲದ ಛಾಯೆಯನ್ನು ಕಂಡರೆ ಹಸಿವಿನ ಭಯವೂ, ಸೊಂಟವಿಲ್ಲದ ನೆರಳನ್ನು ನೋಡಿದರೆ ಭಾರ್ಯಾನಾಶವೂ, ಮಂಡಿಯಿಲ್ಲದ ಛಾಯೆಯನ್ನು ಕಂಡರೆ ಧನನಾಶವೂ ಆಗುವುದು.

೧೧. ಪಾದವಿಲ್ಲದ ಛಾಯೆಯನ್ನು ಕಂಡರೆ ದೇಶಾಂತರವಾಸವು ಪ್ರಾಪ್ತವಾಗುವುದು. ಇವಷ್ಟೇ ನಾನು ಹೇಳಿರುವುದು. ಇನ್ನು ಉಳಿದ ವಿಚಾರಗಳನ್ನು ಪುರುಷನೇ ಪ್ರಯತ್ನಪೂರ್ವಕವಾಗಿ ವಿಚಾರಮಾಡಿ ತಿಳಿದುಕೊಳ್ಳಬೇಕು.

೧೨. ಆರೀತಿಯಾದ ಛಾಯಾಪುರುಷನನ್ನು ನೋಡಿದ ಮೇಲೆ ಆತ್ಮನಲ್ಲಿ ಮನಸ್ಸನ್ನು ಸ್ಥಿರಗೊಳಿಸಿ ನನ್ನ ಹೃದಯಮಂತ್ರವಾದ ರುದ್ರ ಹೃದಯವನ್ನೂ ನವಾತ್ಮಕಮಂತ್ರವನ್ನೂ ಜಪಿಸಬೇಕು.

೧೩. ಒಂದು ಸಂವತ್ಸರದವರಿಗೂ ಈರೀತಿ ಮಾಡಿದರೆ ಸಾಧಕನಿಗೆ ಸಿದ್ಧಿಸದಿರುವ ಇಷ್ಟವಾವುದೂ ಇರುವುದಿಲ್ಲ. ಅಣಿಮಾದ್ಯಷ್ಟೈಶ್ವರ್ಯಗಳನ್ನೂ ಆಕಾಶಗಮನ ಸಾಮರ್ಥ್ಯವನ್ನೂ ಪಡೆಯುವನು.

ಪುನರನ್ಯತ್ಪ್ರವಕ್ಷ್ಯಾಮಿ ಶಕ್ತಿಂ ಜ್ಞಾತುಂ ದುರಾಸದಾಂ ।
ಪ್ರತ್ಯಕ್ಷೇ ದೃಶ್ಯತೇ ಲೋಕೇ ಜ್ಞಾನಿನಾಮಗ್ರತಃ ಸ್ಥಿತಂ ॥ ೧೪ ॥

ಅಜ್ಞೇಯಾ ಲಿಖ್ಯತೇ ಲೋಕೇ ಯಾ ಸರ್ಪೀಕೃತಿಕುಂಡಲೀ ।
ಸಾ ಮಾತ್ರಾ ಯಾನಸಂಸ್ಥಾಪಿ ದೃಶ್ಯತೇ ನ ಚ ಪಠ್ಯತೇ ॥ ೧೫ ॥

ಬ್ರಹ್ಮಾಂಡಮೂರ್ಧ್ನಿ ಗಾ ಯಾ ಚ ಸ್ತುತಾ ವೇದೈಸ್ತು ನಿತ್ಯಶಃ ।
ಜನನೀ ಸರ್ವವಿದ್ಯಾನಾಂ ಗುಪ್ತವಿದ್ಯೇತಿ ಗೀಯತೇ ॥ ೧೬ ॥

ಖೇಚರಾ ಸಾ ವಿನಿರ್ದಿಷ್ಟಾ ಸರ್ವಪ್ರಾಣೇಷು ಸಂಸ್ಥಿತಾ ।
ದೃಶ್ಯಾಽದೃಶ್ಯಾಚಲಾ ನಿತ್ಯಾ ವ್ಯಕ್ತಾವ್ಯಕ್ತಾ ಸನಾತನೀ ॥ ೧೭ ॥

೧೪. ಇನ್ನು ಶಕ್ತಿ ವಿಷಯವನ್ನು ಹೇಳುವೆನು. ಇದನ್ನು ತಿಳಿದುಕೊಳ್ಳಲು ಬಹು ಕಷ್ಟವಾಗಿರುವುದು. ಇದು ಲೋಕದಲ್ಲಿ ಪ್ರತ್ಯಕ್ಷವಾಗಿ ಕಾಣಬರುವುದು ಮತ್ತು ಜ್ಞಾನಿಗಳಿಗೆ ಮಾತ್ರ ಸುಲಭವಾಗಿ ತಿಳಿಯುವುದು.

೧೫. ಆ ಶಕ್ತಿಯೆಂಬುದು ಮನುಷ್ಯರ ನಡುವಿನಲ್ಲಿ ಸರ್ಪಾಕಾರವಾಗಿ ಕುಂಡಲದಂತೆ ಸುತ್ತಿಕೊಂಡಿರುವುದು. ಯೋಗಶಾಸ್ತ್ರದಲ್ಲಿ ಇದಕ್ಕೆ ಕುಂಡಲಿನೀ ಎಂದು ಹೆಸರು. ಅದು ಸಾಮಾನ್ಯಜನರಲ್ಲಿ ಸುಪ್ತಾವಸ್ಥೆಯಲ್ಲಿರುವುದು. ಯೋಗಿಯು ಮಾತ್ರ ಅದನ್ನು ಎಚ್ಚರಗೊಳಿಸಲು ಸಮರ್ಥನಾಗಿರುವನು. ಆರೀತಿ ಪ್ರಬೋಧನ ಮಾಡುವುದರಿಂದ ಯೋಗಿಗೆ ಎಲ್ಲಾ ವಿಷಯಗಳಲ್ಲಿಯೂ ಮಹಾಸಾಮರ್ಥ್ಯ ಉಂಟಾಗುವುದು. ಆ ಶಕ್ತಿಯನ್ನು ಯೋಗಾಭ್ಯಾಸದಿಂದ ನೋಡಬಹುದೇ ವಿನಾ ಅದನ್ನು ವಿವರಿಸಲು ಸಾಧ್ಯವಿಲ್ಲ.

೧೬. ಆ ಶಕ್ತಿಯು ಬ್ರಹ್ಮಾಂಡದಲ್ಲಿ ಮುಖ್ಯವಾಗಿಯೂ, ವೇದಗಳಿಂದ ಸ್ತೋತ್ರ ಮಾಡಲ್ಪಡುವುದಾಗಿಯೂ ಇರುವುದು. ವಿದ್ಯೆಗಳಿಗೆಲ್ಲಾ ಜನನಿಯಾಗಿಯೂ ಇದ್ದು ಗುಪ್ತವಿದ್ಯೆ ಎಂದು ಹೇಳಲ್ಪಡುವುದು.

೧೭. ಇದಕ್ಕೆ ಖೇಚರಾ ಎಂತಲೂ ಹೆಸರು. ಇದು ಎಲ್ಲಾ ಪ್ರಾಣಿಗಳಲ್ಲಿಯೂ ಇರುವುದು. ಇದನ್ನು ಸಾಮಾನ್ಯರು ನೋಡುವುದಕ್ಕಾಗುವುದಿಲ್ಲ. ಯೋಗಿಗಳು ಮಾತ್ರ ನೋಡಬಲ್ಲರು. ಪ್ರಾಣಿಗಳಲ್ಲಿ ಇದು ಯಾವಾಗಲೂ ಇದ್ದೇ ಇರುವುದು. ಕೆಲವು ಸಂದರ್ಭಗಳಲ್ಲಿ ವ್ಯಕ್ತವಾಗಿಯೂ ಕೆಲವು ಸಂದರ್ಭಗಳಲ್ಲಿ ಗೋಚರಿಸದೆಯೂ ಇರುವುದು. ಈ ಶಕ್ತಿಯು ಸನಾತನವಾದುದು. ಇದಕ್ಕೆ ನಾಶವಿಲ್ಲ.

**ಅವರ್ಣಾ ವರ್ಣಸಂಯುಕ್ತಾ ಪ್ರೋಚ್ಯತೇ ಬಿಂದುಮಾಲಿನೀ ।**
**ತಾಂ ಪಶ್ಯನ್ಸರ್ವದಾ ಯೋಗೀ ಕೃತಕೃತ್ಯೋಽಭಿಜಾಯತೇ　　॥ ೧೮ ॥**

**ಸರ್ವತೀರ್ಥಕೃತಸ್ನಾನಾದ್ಭವೇದ್ದಾನಸ್ಯ ಯತ್ಫಲಂ ।**
**ಸರ್ವಯಜ್ಞಫಲಂ ಯಚ್ಚ ಮಾಲಿನ್ಯಾ ದರ್ಶನಾತ್ತದಾ　　॥ ೧೯ ॥**

**ಪ್ರಾಪ್ನೋತ್ಯತ್ರ ನ ಸಂದೇಹಸ್ಸತ್ಯಂ ವೈ ಕಥಿತಂ ಮಯಾ ।**
**ಸರ್ವತೀರ್ಥೇಷು ಯತ್ ಸ್ನಾತ್ವಾ ದತ್ವಾ ದಾನಾನಿ ಸರ್ವಶಃ　　॥ ೨೦ ॥**

**ಸರ್ವೇಷಾಂ ದೇವಿ ಯಜ್ಞಾನಾಂ ಯತ್ಫಲಂ ತಲ್ಲಭೇತ್ಪುಮಾನ್ ।**
**ಕಿಂ ಬಹೂಕ್ತ್ಯಾ ಮಹೇಶಾನಿ ಸರ್ವಾನ್ ಕಾಮಾನ್ ಸಮಶ್ನುತೇ　　॥ ೨೧ ॥**

**ತಸ್ಮಾತ್ ಜ್ಞಾನಂ ಯಥಾ ಯೋಗಮಭ್ಯಸೇತ್ಸತತಂ ಬುಧಃ ।**
**ಅಭ್ಯಾಸಾಜ್ಜಾಯತೇ ಸಿದ್ಧಿರ್ಯೋಗೋಽಭ್ಯಾಸಾತ್ಪ್ರವರ್ಧತೇ　　॥ ೨೨ ॥**

೧೮. ವರ್ಣರಹಿತವಾಗಿಯೂ, ವರ್ಣಸಹಿತವಾಗಿಯೂ ಇದ್ದ ಬಿಂದು ಮಾಲಿನೀ ಎಂದು ಹೆಸರು ಬಂದಿರುವುದು. ಯೋಗಿಯು ಯಾವಾಗಲೂ ಅದನ್ನು ನೋಡುತ್ತಿದ್ದರೆ ಕೃತಕೃತ್ಯನಾಗುವನು.

೧೯. ಈ ಬಿಂದುಮಾಲಿನಿಯ ದರ್ಶನದಿಂದ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದರೆ ಬರುವ ಫಲವೂ, ಯಜ್ಞಗಳೆಲ್ಲವನ್ನೂ ಮಾಡಿದರೆ ಬರುವ ಫಲವೂ ಬರುವುದು.

೨೦. ತೀರ್ಥಗಳಲ್ಲೆಲ್ಲಾ ಸ್ನಾನಮಾಡಿ ದಾನಮಾಡಿದರೆ ಯಾವ ಫಲವು ಬರುವುದೋ ಆ ಫಲವು ಈ ಬಿಂದುಮಾಲಿನಿಯ ದರ್ಶನದಿಂದ ನಿಸ್ಸಂದೇಹವಾಗಿ ಬರುವುದು.

೨೧. ಸರ್ವ ಯಜ್ಞಗಳನ್ನೂ ಮಾಡಿದರೆ ಎಷ್ಟು ಫಲವು ಬರುವುದೋ ಅಷ್ಟು ಫಲವೂ ಬಿಂದುಮಾಲಿನಿಯ ದರ್ಶನದಿಂದುಂಟಾಗುವುದು. ಎಲೌ ಪಾರ್ವತಿ, ಹೆಚ್ಚಿಗೆ ಹೇಳುವುದರಿಂದೇನು ಪ್ರಯೋಜನ? ಅವನ ಇಷ್ಟಾರ್ಥಗಳೆಲ್ಲಾ ನೆರವೇರುವುವು.

೨೨. ಆದರಿಂದ ಜ್ಞಾನವುಂಟಾಗುವುದು. ಪಂಡಿತನಾದವನು ಜ್ಞಾನವನ್ನು ಪಡೆಯಲು ಯೋಗಾಭ್ಯಾಸವನ್ನು ಮಾಡಬೇಕು. ಆ ಅಭ್ಯಾಸದಿಂದ ಸಿದ್ಧಿಯುಂಟಾಗಿ ಯೋಗವು ವೃದ್ಧಿಯನ್ನೈದುವುದು.

ಸಂವಿತ್ತಿರ್ಲಭ್ಯತೇಽಭ್ಯಾಸಾದಭ್ಯಾಸಾನ್ಮೋಕ್ಷಮಶ್ನುತೇ ।
ಅಭ್ಯಾಸಸ್ಸತತಂ ಕಾರ್ಯೋ ಧೀಮತಾ ಮೋಕ್ಷಕಾರಣಂ ॥ ೨೩ ॥

ಇತ್ಯೇತತ್ಕಥಿತಂ ದೇವಿ ಭುಕ್ತಿಮುಕ್ತಿಫಲಪ್ರದಂ ।
ಕಿಮನ್ಯತ್ಪೃಚ್ಛ್ಯತೇ ತತ್ತ್ವಂ ವದ ಸತ್ಯಂ ಬ್ರವೀಮಿ ತೇ ॥ ೨೪ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಬ್ರಹ್ಮಪುತ್ರವಚನಂ ಪರಮಾರ್ಥದಂ ।
ಪ್ರಸನ್ನೋಽಭೂದತಿ ವ್ಯಾಸಃ ಪಾರಾಶರ್ಯೋ ಮುನೀಶ್ವರಃ ॥ ೨೫ ॥

ಸನತ್ಕುಮಾರಂ ಸರ್ವಜ್ಞಂ ಬ್ರಹ್ಮಪುತ್ರಂ ಕೃಪಾನಿಧಿಂ ।
ವ್ಯಾಸಃ ಪರಮಸಂತುಷ್ಟಃ ಪ್ರಣನಾಮ ಮುಹುರ್ಮುಹುಃ ॥ ೨೬ ॥

ತತಸ್ತುಷ್ಟಾವ ತಂ ವ್ಯಾಸಃ ಕಾಲೇಯಸ್ಯ ಮುನೀಶ್ವರಃ ।
ಸನತ್ಕುಮಾರಂ ಮುನಯಃ ಸುರವಿಜ್ಞಾನಸಾಗರಂ ॥ ೨೭ ॥

೨೩. ಯೋಗಾಭ್ಯಾಸದಿಂದ ಜ್ಞಾನವೂ, ಮೋಕ್ಷವೂ ಉಂಟಾಗುವುದು. ಆದುದರಿಂದ ಬುದ್ಧಿವಂತನಾದವನು ಮೋಕ್ಷಕಾರಣವಾದ ಯೋಗಾಭ್ಯಾಸವನ್ನು ಮಾಡಬೇಕು.

೨೪. ಎಲೌ ದೇವಿ, ಇಹಪರಸೌಖ್ಯಗಳನ್ನೂ ಮೋಕ್ಷವನ್ನೂ ಕೊಡುವ ಯೋಗಾಭ್ಯಾಸವಿಷಯವನ್ನು ಹೇಳುವೆನು. ಮತ್ತೇನನ್ನು ಕೇಳಲಿಚ್ಛಿಸುವೆ? ಕೇಳು, ಹೇಳುವೆನು ಎಂದನು.

೨೫-೨೬. ಸೂತಮುನಿ ಇಂತೆಂದನು :—ಬ್ರಹ್ಮಪುತ್ರನಾದ ಸನತ್ಕುಮಾರನು ಹೇಳಿದ, ಪರಮಾರ್ಥವನ್ನುಂಟುಮಾಡುವ ಈ ವಿಷಯವನ್ನು ಕೇಳಿ ಪರಾಶರಪುತ್ರನಾದ ವ್ಯಾಸಮುನಿಯು ಸಂತುಷ್ಟನಾಗಿ, ಬ್ರಹ್ಮಪುತ್ರನೂ ಸರ್ವಜ್ಞನೂ ಆದ ಸನತ್ಕುಮಾರನನ್ನು ಬಾರಿಬಾರಿಗೂ ನಮಸ್ಕರಿಸಿದನು.

೨೭. ಬಳಿಕ ವ್ಯಾಸಮುನಿಯು ಆ ಮುನಿಶ್ರೇಷ್ಠನಾದ ಸನತ್ಕುಮಾರನನ್ನು ಸ್ತೋತ್ರಮಾಡಿದನು. ಋಷಿಗಳೂ ಸಹ ಜ್ಞಾನನಿಧಿಯಾದ ಆ ಸನತ್ಕುಮಾರಮುನಿಯನ್ನು ಪರಿಪರಿಯಾಗಿ ಸ್ತೋತ್ರಮಾಡಿದರು.

॥ ವ್ಯಾಸ ಉವಾಚ ॥

ಕೃತಾರ್ಥೋಽಹಂ ಮುನಿಶ್ರೇಷ್ಠ ಬ್ರಹ್ಮತ್ವಂ ಮೇ ತ್ವಯಾ ಕೃತಂ ।
ನಮಸ್ತೇಽಸ್ತು ನಮಸ್ತೇಽಸ್ತು ಧನ್ಯಸ್ತ್ವಂ ಬ್ರಹ್ಮವಿತ್ತಮ ॥ ೨೮ ॥

॥ ಸೂತ ಉವಾಚ ॥

ಇತಿ ಸ್ತುತ್ವಾ ಸ ಕಾಲೇಯೋ ಬ್ರಹ್ಮಪುತ್ರಂ ಮಹಾಮುನಿಂ ।
ತೂಷ್ಣೀಂ ಬಭೂವ ಸುಪ್ರೀತಃ ಪರಮಾನಂದನಿರ್ಭರಃ ॥ ೨೯ ॥

ಬ್ರಹ್ಮಪುತ್ರಸ್ತಮಾಮಂತ್ರ್ಯ ಪೂಜಿತಸ್ತೇನ ಶೌನಕ ।
ಯಯೌ ಸ್ವಧಾಮ ಸುಪ್ರೀತೋ ವ್ಯಾಸೋಽಪಿ ಪ್ರೀತಮಾನಸಃ ॥ ೩೦ ॥

ಇತಿ ಮೇ ವರ್ಣಿತೋ ವಿಪ್ರಾಃ ಸುಖದಃ ಪರಮಾರ್ಥಯುಕ್ ।
ಸನತ್ಕುಮಾರಕಾಲೇಯಸಂವಾದೋ ಜ್ಞಾನವರ್ಧನಃ ॥ ೩೧ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಛಾಯಾಪುರುಷವರ್ಣನಂ ನಾಮಾಷ್ಟಾವಿಂಶೋಽಧ್ಯಾಯಃ

---

೨೮. ವ್ಯಾಸನಿಂತೆಂದನು :—ಎಲೈ ಮುನಿಶ್ರೇಷ್ಠನೇ, ನಾನು ಕೃತಾರ್ಥನಾದೆನು. ನೀನು ನನ್ನಲ್ಲಿ ಬ್ರಹ್ಮಜ್ಞಾನವನ್ನುಂಟುಮಾಡಿದೆ. ನೀನು ಧನ್ಯನು. ಬ್ರಹ್ಮಜ್ಞಾನಿಯು. ಇಗೋ ನಿನಗೆ ಅನೇಕ ನಮಸ್ಕಾರಗಳು ಎಂದನು.

೨೯. ಈರೀತಿಯಾಗಿ ವ್ಯಾಸನು ಬ್ರಹ್ಮಪುತ್ರನಾದ ಸನತ್ಕುಮಾರನನ್ನು ಪರಮಾನಂದದಿಂದ ಸ್ತೋತ್ರಮಾಡಿ ಸುಮ್ಮನಾದನು.

೩೦. ಎಲೈ ಶೌನಕನೇ, ಅನಂತರ ವ್ಯಾಸನು ಸನತ್ಕುಮಾರನನ್ನು ಪೂಜಿಸಿ ಕಳುಹಿಸಿಕೊಟ್ಟು ಸುಪ್ರೀತನಾಗಿ ತನ್ನ ಮನೆಯನ್ನು ಕುರಿತು ಹೊರಟುಹೋದನು.

೩೧. ಎಲೈ ಬ್ರಾಹ್ಮಣರೇ, ಈರೀತಿಯಾಗಿ ನಾನು ಸನತ್ಕುಮಾರ ಮತು ವ್ಯಾಸನ ಸಂವಾದವನ್ನು ಹೇಳಿರುವೆನು. ಇದರಿಂದ ಜ್ಞಾನವು ಅಧಿಕವಾಗುವುದು. ಇದು ಪರಮಾರ್ಥವನ್ನುಂಟುಮಾಡುವುದು. ಸುಖವನ್ನು ಕೊಡುವುದು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಛಾಯಾಪುರುಷವರ್ಣನವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಏಕೋನತ್ರಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಶ್ರುತಂ ಮೇ ಮಹದಾಖ್ಯಾನಂ ಯತ್ತ್ವಯಾ ಪರಿಕೀರ್ತಿತಂ ।
ಸನತ್ಕುಮಾರಕಾಲೇಯಸಂವಾದಂ ಪರಮಾರ್ಥದಂ ॥ ೧ ॥

ಅತೋಽಹಂ ಶ್ರೋತುಮಿಚ್ಛಾಮಿ ಯಥಾ ಸರ್ಗಸ್ತು ಬ್ರಹ್ಮಣಃ ।
ಸಮುತ್ಪನ್ನಂ ತು ಮೇ ಬ್ರೂಹಿ ಯಥಾ ವ್ಯಾಸಾಚ್ಚ ತೇ ಶ್ರುತಂ ॥ ೨ ॥

॥ ಸೂತ ಉವಾಚ ॥

ಮುನೇ ಶೃಣು ಕಥಾಂ ದಿವ್ಯಾಂ ಸರ್ವಪಾಪಪ್ರಣಾಶಿನೀಂ ।
ಕಥ್ಯಮಾನಾಂ ಮಯಾ ಚಿತ್ರಾಂ ಬಹ್ವರ್ಥಾಂ ಶ್ರುತವಿಸ್ತರಾಂ ॥ ೩ ॥

---

### ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ಶೌನಕಮುನಿಯು ಪ್ರಶ್ನೆಮಾಡುವನು :—ಎಲೈ ಸೂತನೇ, ನೀನು ಸನತ್ಕುಮಾರವ್ಯಾಸರ ಸಂವಾದವೆಂಬ ಮಹತ್ತಾದ ಚರಿತ್ರೆಯನ್ನು ಹೇಳಿದೆ. ಇದು ಪರಮಾರ್ಥಜ್ಞಾನವನ್ನುಂಟುಮಾಡುವುದು.

೨. ಈಗ ನಾನು ಬ್ರಹ್ಮನ ಸೃಷ್ಟಿಯು ಆದ ಬಗೆಯನ್ನೂ, ಅವನು ಹುಟ್ಟಿದ ರೀತಿಯನ್ನೂ ನೀನು ವ್ಯಾಸನಿಂದ ಕೇಳಿದಂತೆ ಕೇಳಬೇಕೆಂದಿರುವೆನು.

೩. ಸೂತನು ಹೇಳಿದನು :—ಎಲೈ ಮುನಿಯೇ, ಕೇಳು. ಪಾಪನಾಶಕವೂ, ಆಶ್ಚರ್ಯಕರವೂ, ನಾನಾರ್ಥಗಳುಳ್ಳದುದೂ, ವೇದಗಳಿಗೆ ಸಮಾನವಾದುದೂ ಆದ ಪುರಾಣಕಥೆಯನ್ನು ಹೇಳುವೆನು.

ಯಶ್ಚೈನಾಂ ಪಾಠಯೇತ್ತಾಂ ಚ ಶೃಣುಯಾದ್ವಾಽಪ್ಯಭೀಕ್ಷ್ಣಶಃ ।
ಸ್ವವಂಶಧಾರಣಂ ಕೃತ್ವಾ ಸ್ವರ್ಗಲೋಕೇ ಮಹೀಯತೇ || ೪ ||

ಪ್ರಧಾನಂ ಪುರುಷೋ ಯತ್ತನ್ನಿತ್ಯಂ ಸದಸದಾತ್ಮಕಂ ।
ಪ್ರಧಾನಪುರುಷೋ ಭೂತ್ವಾ ನಿರ್ಮಮೇ ಲೋಕಭಾವನಃ || ೫ ||

ಸ್ರಷ್ಟಾರಂ ಸರ್ವಭೂತಾನಾಂ ನಾರಾಯಣಪರಾಯಣಂ ।
ತಂ ವೈ ವಿದ್ಧಿ ಮುನಿಶ್ರೇಷ್ಠ ಬ್ರಹ್ಮಾಣಮಮಿತೌಜಸಂ || ೬ ||

ಯಸ್ಮಾದಕಲ್ಪಯತ್ಕಲ್ಪಾಸ್ಸಮಗ್ರಾಶ್ಚ ಚಯೋ ಯತಃ ।
ಭವಂತಿ ಮುನಿಶಾರ್ದೂಲ ನಮಸ್ತಸ್ಮೈ ಸ್ವಯಂಭುವೇ || ೭ ||

ತಸ್ಮೈ ಹಿರಣ್ಯಗರ್ಭಾಯ ಪುರುಷಾಯೇಶ್ವರಾಯ ಚ ।
ನಮಸ್ಕೃತ್ಯ ಪ್ರವಕ್ಷ್ಯಾಮಿ ಭೂಯಃ ಸರ್ಗಮನುತ್ತಮಂ || ೮ ||

೪. ಈ ಕಥೆಯನ್ನು ಓದುವವನೂ, ಕೇಳುವವನೂ ಸಹ ಇಹದಲ್ಲಿ ತನ್ನ ಕುಲವನ್ನು ಉದ್ಧರಿಸಿ ಪರದಲ್ಲಿ ಸ್ವರ್ಗವನ್ನು ಪಡೆಯುವನು.

೫. ಜಗತ್ಕಾರಣವಾದ ಆದಿ ಪ್ರಕೃತಿಯೊಂದಿರುವುದು. ಅದು ಇಂದ್ರಿಯಗಳಿಗೆ ಅಗೋಚರವು. ಪ್ರತ್ಯಕ್ಷವಾದ ಮತ್ತು ಪ್ರತ್ಯಕ್ಷವಲ್ಲದ ಜಗದ್ರೂಪವಾದುದು. ಅದನ್ನು ಪ್ರಧಾನವೆಂದೂ ಹೇಳುವರು. ಪುರಾಣಪುರುಷನಾದ ಈಶ್ವರನು ಆ ಪ್ರಕೃತಿಯ ಸಹಾಯದಿಂದ ಜಗತ್ತನ್ನು ನಿರ್ಮಿಸಿದನು.

೬. ಪ್ರಧಾನವೇ ಸೃಷ್ಟಿಕರ್ತನಾದ ಬ್ರಹ್ಮನಾಯಿತು. ಮಹಾತೇಜಸ್ವಿಯಾದ ಬ್ರಹ್ಮನು ನಾರಾಯಣನ ಅನುಗ್ರಹದಿಂದ ಈ ಜಗತ್ತೆಲ್ಲವನ್ನೂ ಸೃಷ್ಟಿಸಿದನು.

೭-೮. ಯಾರು ಸಮಸ್ತ ಕಲ್ಪಗಳನ್ನೂ ಸೃಷ್ಟಿಮಾಡಿರುವನೋ ಅಂತಹ ಬ್ರಹ್ಮನಿಗೆ ನಮಸ್ಕಾರಗಳು. ಪುರುಷನೂ, ಇಷ್ಟಾರ್ಥದಾಯಕನೂ, ಹಿರಣ್ಯಗರ್ಭನೆಂದು ಹೇಳಲ್ಪಟ್ಟಿರುವವನೂ ಆದ ಪರಬ್ರಹ್ಮನಿಗೆ ನಮಸ್ಕರಿಸಿ ಉತ್ಕೃಷ್ಟವಾದ ಸೃಷ್ಟಿಕ್ರಮವನ್ನು ಹೇಳುವೆನು.

ಬ್ರಹ್ಮಾ ಸ್ರಷ್ಟಾ ಹರಿಃ ಪಾತಾ ಸಂಹರ್ತಾ ಚ ಮಹೇಶ್ವರಃ ।
ತಸ್ಯ ಸರ್ಗಸ್ಯ ನಾನ್ಯೋಽಸ್ತಿ ಕಾಲೇ ಕಾಲೇ ತಥಾ ಗತೇ ॥ ೯ ॥

ಸೋಽಪಿ ಸ್ವಯಂಭೂರ್ಭಗವಾನ್ ಸಿಸೃಕ್ಷುರ್ವಿವಿಧಾಃ ಪ್ರಜಾಃ ।
ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ ॥ ೧೦

ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।
ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ॥ ೧೧ ॥

ಹಿರಣ್ಯವರ್ಣಮಭವತ್ತದಂಡಮುದಕೇಶಯಂ ।
ತತ್ರ ಜಜ್ಞೇ ಸ್ವಯಂ ಬ್ರಹ್ಮಾ ಸ್ವಯಂಭೂರಿತಿ ವಿಶ್ರುತಃ ॥ ೧೨ ॥

ಹಿರಣ್ಯಗರ್ಭೋ ಭಗವಾನುಷಿತ್ವಾ ಪರಿವತ್ಸರಂ ।
ತದಂಡಮಕರೋದ್ದ್ವೈಧಂ ದಿವಂ ಭೂಮಿಂ ಚ ನಿರ್ಮಮೇ ॥ ೧೩ ॥

೯. ಪ್ರಪಂಚವನ್ನು ಬ್ರಹ್ಮನು ಸೃಷ್ಟಿಮಾಡುವನು. ಸೃಷ್ಟಿಸಿದ ಪ್ರಪಂಚವನ್ನು ವಿಷ್ಣುವು ಕಾಪಾಡುವನು. ಮಹೇಶ್ವರನು ಅದನ್ನು ಸಂಹಾರಮಾಡುವನು. ಎಷ್ಟು ಕಾಲಗಳು ಕಳೆದರೂ ಕೂಡ ಆಗುವ ಸೃಷ್ಟಿಯು ಬ್ರಹ್ಮನ ಸೃಷ್ಟಿಗಿಂತ ಬೇರೆ ಇಲ್ಲ.

೧೦. ತಾನೇತಾನಾಗಿ ಹುಟ್ಟಿದ ಭಗವಂತನಾದ ಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಲು ಮೊದಲು ನೀರನ್ನು ಸೃಷ್ಟಿಸಿದನು. ಆ ನೀರನಲ್ಲಿ ತನ್ನ ವೀರ್ಯವನ್ನಿಟ್ಟನು.

೧೧. ಆದಿನರನಾದ ಬ್ರಹ್ಮನಿಂದ ಮೊದಲು ಜನಿಸಿದುದರಿಂದ ಜಲಕ್ಕೆ "ನಾರ" ಎಂದು ಹೆಸರಾಯಿತು. ಆ ನಾರ (ಜಲ) ನಿಧಿಯಲ್ಲಿ ವಾಸಿಸುವುದರಿಂದ ಹರಿಗೆ ನಾರಾಯಣನೆಂದು ಹೆಸರಾಯಿತು.

೧೨. ಬ್ರಹ್ಮನು ನೀರಿನಲ್ಲಿ ವಿಸರ್ಜಿಸಿದ ಆ ವೀರ್ಯವು ಚಿನ್ನದ ಬಣ್ಣವುಳ್ಳ ಗೋಳವಾಯಿತು. ಬ್ರಹ್ಮಾಂಡವಾಯಿತು. ಆ ಬ್ರಹ್ಮಾಂಡದಲ್ಲಿಯೇ ಚತುರ್ಮುಖ ಬ್ರಹ್ಮನು ಜನಿಸಿದನೆಂದು ಕೇಳಿರುವೆವು.

೧೩-೧೪. ಭಗವಂತನಾದ ಹಿರಣ್ಯಗರ್ಭಬ್ರಹ್ಮನು ಆ ಗೋಳದಲ್ಲಿ ಒಂದುವರ್ಷ ಕಾಲವಿದ್ದು ಅದನ್ನು ಸ್ವರ್ಗ, ಭೂಮಿ ಎಂದು ಭಾಗವಾಗಿ ಮಾಡಿದನು. ಮತ್ತು

**ಅಧೋಽಥೋರ್ಧ್ವಪ್ರಯುಕ್ತಾನಿ ಭುವನಾನಿ ಚತುರ್ದಶ ।**
**ತಯೋಶ್ಚೈಕಲಯೋರ್ಮಧ್ಯಮಾಕಾಶಮಸೃಜತ್ಪ್ರಭುಃ ॥ ೧೪ ॥**

**ಅಪ್ಸು ಪರಿಪ್ಲವಾಂ ಪೃಥ್ವೀಂ ದಿಶಶ್ಚ ದಶಧಾ ದಿವಿ ।**
**ತತ್ರ ಕಾಲೇ ಮನೋ ವಾಚಂ ಕಾಮಕ್ರೋಧಾವಥೋ ರತಿಂ ॥ ೧೫ ॥**

**ಮರೀಚಿಮತ್ರ್ಯಂಗಿರಸೌ ಪುಲಸ್ತ್ಯಂ ಪುಲಹಂ ಕ್ರತುಂ ।**
**ವಸಿಷ್ಠ ತುಂ ಮಹಾತೇಜಾಃ ಸೋಽಸೃಜತ್ಸಪ್ತ ಮಾನಸಾನ್ ॥ ೧೬ ॥**

**ಸಪ್ತ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯಂ ಗತಾಃ ।**
**ತತೋಽಸೃಜತ್ಪುನರ್ಬ್ರಹ್ಮಾ ರುದ್ರಾನ್ ಕ್ರೋಧಸಮುದ್ಭವಾನ್ ॥ ೧೭ ॥**

**ಸನತ್ಕುಮಾರಂ ಚ ಋಷಿಂ ಸರ್ವೇಷಾಮಪಿ ಪೂರ್ವಜಂ ।**
**ಸಪ್ತ ಚೈತೇ ಪ್ರಜಾಯಂತೇ ಪಶ್ಚಾದ್ರುದ್ರಾಶ್ಚ ಸರ್ವತಃ ॥ ೧೮ ॥**

ಮೇಲೆ ಏಳು ಲೋಕಗಳನ್ನೂ ಕೆಳಗೆ ಏಳು ಲೋಕಗಳನ್ನೂ ಒಟ್ಟು ಹದಿನಾಲ್ಕು ಲೋಕಗಳನ್ನು ಸೃಷ್ಟಿಮಾಡಿದನು. ಕೆಳಗಿನ ಮತ್ತು ಮೇಲಿನ ಲೋಕಗಳ ಮಧ್ಯೆ ಆಕಾಶವನ್ನು ಸೃಷ್ಟಿಸಿದನು.

೧೫. ನೀರಿನಲ್ಲಿ ತೇಲುತ್ತಿರುವಂತೆ ಪೃಥಿವಿಯನ್ನೂ ಅನಂತರ ಹತ್ತು ದಿಕ್ಕುಗಳನ್ನೂ ಕಾಲ, ಮನಸ್ಸು, ವಾಕ್ಕು, ಕಾಮ, ಕ್ರೋಧ, ಪ್ರೀತಿ ಮುಂತಾದುವುಗಳನ್ನೂ ಸೃಷ್ಟಿಮಾಡಿದನು.

೧೬. ಮರೀಚಿಮುನಿ, ಅತ್ರಿಮುನಿ, ಅಂಗಿರಸ್ಸು, ಪುಲಸ್ತ್ಯಬ್ರಹ್ಮ, ಪುಲಹ, ಕ್ರತು, ವಸಿಷ್ಠಮುನಿಗಳೆಂಬ ಏಳುಜನ ಮಾನಸಕುಮಾರರನ್ನು ಈ ಬ್ರಹ್ಮನು ಸೃಷ್ಟಿಸಿದನು. ಈ ಏಳುಜನ ಬ್ರಹ್ಮಮಾನಸಪುತ್ರರು ನಾರಾಯಣಸ್ವರೂಪರು. ಇವರಿಗೆ "ಬ್ರಹ್ಮಾಣ" ರು ಎಂದೂ ಪುರಾಣಗಳಲ್ಲಿ ಕರೆಯುವರು.

೧೭-೧೮. ಆಮೇಲೆ ಬ್ರಹ್ಮನು ತನ್ನ ಕೋಪದಿಂದ ಕ್ರೋಧಮೂರ್ತಿಯಾದ ರುದ್ರರನ್ನು ಸೃಷ್ಟಿಸಿದನು. ಮತ್ತು ಸನತ್ಕುಮಾರನೆಂಬ ಮಹಾಜ್ಞಾನಿಯನ್ನು ಸೃಷ್ಟಿಸಿದನು. ಇವನು ಎಲ್ಲರಿಗಿಂತಲೂ ಹಿರಿಯನು. ಆ ಮೇಲೆ ಏಳುಜನ ಮಾನಸ ಕುಮಾರರು ಪ್ರಜೆಗಳನ್ನು ಸೃಷ್ಟಿಸಿದರು. ರುದ್ರನೂ ಕೆಲವರನ್ನು ಸೃಷ್ಟಿಸಿದನು.

ಅತಸ್ಸನತ್ಕುಮಾರಸ್ತು ತೇಜಸ್ಸಂಕ್ಷಿಪ್ಯ ತಿಷ್ಠತಿ ।
ತೇಷಾಂ ಸಪ್ತ ಮಹಾವಂಶಾ ದಿವ್ಯಾ ದೇವರ್ಷಿಪೂಜಿತಾಃ ॥ ೧೯ ॥

ಪ್ರಜಾಯಂತೇ ಕ್ರಿಯಾವಂತೋ ಬ್ರಹ್ಮರ್ಷಿಭಿರಲಂಕೃತಾಃ ।
ವಿದ್ಯುತೋಽಶನಿಮೇಘಾಂಶ್ಚ ರೋಹಿತೇಂದ್ರಧನೂಂಷಿ ಚ ॥ ೨೦ ॥

ವಯಾಂಸಿ ಚ ಸಸರ್ಜಾದೌ ಪರ್ಜನ್ಯಂ ಚ ಸಸರ್ಜ ಹ ।
ಋಚೋ ಯಜೂಂಷಿ ಸಾಮಾನಿ ನಿರ್ಮಮೇ ಯಜ್ಞಸಿದ್ಧಯೇ ॥ ೨೧ ॥

ಪೂಜ್ಯಾಂಸ್ತೈರಯಜನ್ ದೇವಾನಿತ್ಯೇವಮನುಶುಶ್ರುಮ ।
ಮುಖಾದ್ದೇವಾನಜನಯತ್ಪಿತ್ರ್ಯಾಂಶ್ಚೈವಾಥ ವಕ್ಷಸಃ ॥ ೨೨ ॥

ಪ್ರಜನಾಚ್ಚ ಮನುಷ್ಯಾನ್ವೈ ಜಘನಾನ್ನಿರ್ಮಮೇಽಸುರಾನ್ ।
ಉಚ್ಚಾವಚಾನಿ ಭೂತಾನಿ ಗಾತ್ರೇಭ್ಯಸ್ತಸ್ಯ ಜಜ್ಞಿರೇ ॥ ೨೩ ॥

೧೯-೨೦. ರುದ್ರಪುತ್ರನಾದ ಸ್ಕಂದ ಮತ್ತು ಸನತ್ಕುಮಾರ ಇವರು ಜಿತೇಂದ್ರಿಯರಾಗಿದ್ದು ಪ್ರಜಾಸೃಷ್ಟಿಯನ್ನು ಮಾಡಲಿಲ್ಲವು. ಮರೀಚಿ ಮೊದಲಾದ ಏಳುಜನ ಮಾನಸಕುಮಾರರಿಂದ ದೇವತೆಗಳು ಮೊದಲಾದ ಏಳು ವಂಶಗಳು ಜನಿಸಿದುವು. ಆ ವಂಶಗಳಲ್ಲಿ ಜಿತೇಂದ್ರಿಯರಾದ ಮಹರ್ಷಿಗಳು ಜನಿಸಿದರು. ಪ್ರಜೆಗಳೆಲ್ಲರೂ ಕರ್ಮನಿಷ್ಠರು. ಅವರಿಂದ ಉತ್ತಮಪ್ರಜೆಗಳು ಜನಿಸಿದುವು.

೨೧. ಆಮೇಲೆ ಬ್ರಹ್ಮನು ಮಿಂಚು, ಸಿಡಿಲು, ಮೇಘ, ನಾನಾಬಣ್ಣದ ಕಾಮನಬಿಲ್ಲು, ವಯಸ್ಸು, ಮಳೆ ಇವುಗಳನ್ನು ಸೃಷ್ಟಿಸಿದನು. ಯಜ್ಞಗಳಿಗಾಗಿ ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಹೊರಗೆಡುಹುವವನಾದನು.

೨೨. ಆ ಪೂಜ್ಯವಾದ ವೇದಗಳಿಂದ ದೇವತೆಗಳು ಪೂಜೆಮಾಡಲ್ಪಡುವರೆಂದು ಪ್ರಸಿದ್ಧವು. ಮುಖದಿಂದ ದೇವತೆಗಳನ್ನೂ ಎದೆಯಿಂದ ಪಿತೃಗಳನ್ನೂ ನಿರ್ಮಿಸಿದನು.

೨೩. ಜನನ ಪ್ರದೇಶದಿಂದ ಮನುಷ್ಯರನ್ನೂ, ಕಟಿಪ್ರದೇಶದಿಂದ ಅಸುರರನ್ನೂ ತನ್ನ ಶರೀರದಿಂದ ಭಯಂಕರವಾದ ಭೂತಗಳನ್ನೂ ಸೃಷ್ಟಿಸಿದನು.

೨೪-೨೫. ಹೀಗೆ ಜಲವನ್ನು ಮೊದಲುಗೊಂಡು ಪ್ರಜೆಗಳ ಸೃಷ್ಟಿಯನ್ನು ಮಾಡಿದರೂ ಪ್ರಜೆಗಳು ಮಾತ್ರ ಮುಂದೆ ಅಭಿವೃದ್ಧಿಯನ್ನು ಹೊಂದಲಿಲ್ಲ. ಆಗ

ಅಪವಸ್ಯ ಪ್ರಜಾಸರ್ಗಂ ಸೃಜತೋ ಹಿ ಪ್ರಜಾಪತೇಃ ।
ಸೃಜ್ಯಮಾನಾಃ ಪ್ರಜಾಶ್ಚೈವ ನಾವರ್ಧಂತ ಯದಾ ತದಾ ॥ ೨೪ ॥

ದ್ವಿಧಾ ಕೃತ್ವಾತ್ಮನೋ ದೇಹಂ ಸ್ತ್ರೀ ಚೈವ ಪುರುಷೋಽಭವತ್ ।
ಸಸೃಜೇಽಥ ಪ್ರಜಾಸ್ಸರ್ವಾ ಮಹಿಮ್ನಾ ವ್ಯಾಪ್ಯ ವಿಶ್ವತಃ ॥ ೨೫ ॥

ವಿರಾಜಮಸೃಜದ್ವಿಷ್ಣುಸ್ಸ ಸೃಷ್ಟಃ ಪುರುಷೋ ವಿರಾಟ್ ।
ದ್ವಿತೀಯಂ ತು ಮನುಂ ವಿದ್ಧಿ ಮನೋರಂತರಮೇವ ಚ ॥ ೨೬ ॥

ಸ ವೈರಾಜಃ ಪ್ರಜಾಸ್ಸರ್ವಾಸ್ಸಸರ್ಜ ಪುರುಷಃ ಪ್ರಭುಃ ।
ನಾರಾಯಣವಿಸರ್ಗಸ್ಯ ಪ್ರಜಾಸ್ತಸ್ಯಾಪ್ಯಯೋನಿಜಾಃ ॥ ೨೭ ॥

ಆಯುಷ್ಮಾನ್ಕೀರ್ತಿಮಾನ್ ಧನ್ಯಃ ಪ್ರಜಾವಾಂಶ್ಚಾಭವತ್ತತಃ ।
ಇತ್ಯೇವಮಾದಿಸರ್ಗಸ್ತೇ ವರ್ಣಿತೋ ಮುನಿಸತ್ತಮ ॥
ಆದಿಸರ್ಗಂ ವಿದಿತ್ವೈವಂ ಯಥೇಷ್ಟಾಂ ಪ್ರಾಪ್ನುಯಾದ್ಗತಿಂ ॥ ೨೮ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಆದಿಸರ್ಗವರ್ಣನಂ ನಾಮ ಏಕೋನತ್ರಿಂಶೋಽಧ್ಯಾಯಃ

---

ಬ್ರಹ್ಮನು ತನ್ನನ್ನು ಎರಡು ಭಾಗವನ್ನಾಗಿ ಮಾಡಿಕೊಂಡನು. ಒಂದುಭಾಗ ಗಂಡಸಾಗಿಯೂ ಮತ್ತೊಂದುಭಾಗ ಸ್ತ್ರೀಯಾಗಿಯೂ ಆದನು. ಅನಂತರ ಪ್ರಜೆಗಳು ವೃದ್ಧಿಯಾಗಿ ವಿಶ್ವವನ್ನೆಲ್ಲಾ ವ್ಯಾಪಿಸಿದರು.

೨೬. ಅನಂತರ ವಿರಾಟ್ಪುರುಷನಾದ ವಿಷ್ಣುವು ವಿರಾಜನೆಂಬ ಪುರುಷನನ್ನು ಸೃಷ್ಟಿಮಾಡಿದನು. ಎರಡನೆಯವನು ಮನುವು.

೨೭. ವಿರಾಟ್ಪುರುಷನ ಮಗನಾದ ಮನುವೂ ಪ್ರಜೆಗಳನ್ನು ಸೃಷ್ಟಿಸಿದನು. ನಾರಾಯಣನ ವಂಶದವನಾದ ಆ ಮನುವಿನ ಪ್ರಜೆಗಳೂ ಅಯೋನಿಜರು, ಮಾನಸ ಪುತ್ರರು. ಸ್ತ್ರೀಸಂಪರ್ಕದಿಂದ ಜನಿಸಿದವರಲ್ಲ.

೨೮. ಈ ಆದಿಸೃಷ್ಟಿಯನ್ನು ಕೇಳಿದವರು ದೀರ್ಘಾಯುಸ್ಸುಳ್ಳವರಾಗುವರು. ಕೀರ್ತಿವಂತರಾಗುವರು. ಪುಣ್ಯವಂತರಾಗುವರು. ಒಳ್ಳೆಯ ಮಕ್ಕಳನ್ನು ಪಡೆಯುವರು. ಪರದಲ್ಲಿ ಉತ್ತಮಗತಿಯನ್ನೈದುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಆದಿಸರ್ಗವರ್ಣನವೆಂಬ
ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

**ಸಂಸೃಷ್ಟಾಸು ಪ್ರಜಾಸ್ವೇವ ಆಪವೋಽಥ ಪ್ರಜಾಪತಿಃ ।**
**ಲೇಭೇ ವೈ ಪುರುಷಃ ಪತ್ನೀಂ ಶತರೂಪಾಮಯೋನಿಜಾಂ ॥ ೧ ॥**

**ಆಪವಸ್ಯ ಮಹಿಮ್ನಾ ತು ದಿವಮಾವೃತ್ಯ ತಿಷ್ಠತಃ ।**
**ಧರ್ಮೇಣೈವ ಮಹಾತ್ಮಾ ಸ ಶತರೂಪಾಪ್ಯಜಾಯತ ॥ ೨ ॥**

**ಸಾ ತು ವರ್ಷಶತಂ ತಪ್ತ್ವಾ ತಪಃ ಪರಮದುಶ್ಚರಂ ।**
**ಭರ್ತಾರಂ ದೀಪ್ತತಪಸಂ ಪುರುಷಂ ಪ್ರತ್ಯಪದ್ಯತ ॥ ೩ ॥**

---

## ಮೂವತ್ತನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಪ್ರಜೇಶ್ವರನಾದ ಮನುವಿಗೆ "ಆಪವ" ನೆಂದೂ ಹೆಸರುಂಟು. ಆ ಮನುವು ಅಯೋನಿಜಳಾದ "ಶತರೂಪಾ" ಎಂಬುವಳನ್ನು ಹೆಂಡತಿಯನ್ನಾಗಿ ಪಡೆದನು.

೨. ಆ ಮನುವಿನ ಧರ್ಮದ ಮಹಿಮೆಯು ಸ್ವರ್ಗವನ್ನೂ ವ್ಯಾಪಿಸಿದ್ದಿತು. ಇಂತಹ ಮನುವಿನ ಧರ್ಮಮಹಿಮೆಯಿಂದಲೇ ಶತರೂಪಾದೇವಿಯು ಜನಿಸಿದಳು.

೩. ಆ ಶತರೂಪಾದೇವಿಯು ನೂರು ವರ್ಷಗಳವರೆಗೆ ಘೋರವಾದ ತಪಸ್ಸನ್ನಾಚರಿಸಿ ಮಹಾತೇಜಸ್ವಿಯಾದ ಪುರುಷನೋರ್ವನನ್ನು ಪತಿಯನ್ನಾಗಿ ಪಡೆದಳು.

**ಸ ವೈ ಸ್ವಾಯಂಭುವೋ ಜಜ್ಞೇ ಪುರುಷೋ ಮನುರುಚ್ಯತೇ ।**
**ತಸ್ಯೈಕಸಪ್ತತಿಯುಗಂ ಮನ್ವಂತರಮಿಹೋಚ್ಯತೇ ॥ ೪ ॥**

**ವೈರಾಜಾತ್ಪುರುಷಾದ್ಧೀರಾ ಶತರೂಪಾ ವ್ಯಜಾಯತ ।**
**ಪ್ರಿಯವ್ರತೋತ್ತಾನಪಾದೌ ವೀರಕಾಯಾಮಜಾಯತಾಂ ॥ ೫ ॥**

**ಕಾಮ್ಯಾ ನಾಮ ಮಹಾಭಾಗಾ ಕರ್ದಮಸ್ಯ ಪ್ರಜಾಪತೇಃ ।**
**ಕಾಮ್ಯಾಪುತ್ರಾಸ್ತ್ರಯಸ್ತ್ವಾಸನ್ ಸಮ್ರಾಟ್ ಸಾಕ್ಷಿರವಿಟ್ಪ್ರಭುಃ ॥ ೬ ॥**

**ಉತ್ತಾನಪಾದೋऽಜನಯತ್ಪುತ್ರಾಂಶ್ಚಕ್ರಸಮಾನ್ ಪ್ರಭುಃ ।**
**ಧ್ರುವಂಚ ತನಯಂ ದಿವ್ಯಮಾತ್ಮಾನಂದಸುವರ್ಚಸಂ ॥ ೭ ॥**

**ಧರ್ಮಸ್ಯ ಕನ್ಯಾ ಸುಶ್ರೋಣೀ ಸುನೀತಿರ್ನಾಮ ವಿಶ್ರುತಾ ।**
**ಉತ್ಪನ್ನಾ ಚಾಪಿ ಧರ್ಮೇಣ ಧ್ರುವಸ್ಯ ಜನನೀ ತಥಾ ॥ ೮ ॥**

೪. ಆ ಪುರುಷನೇ ಸ್ವಾಯಂಭುವಮನುವು. ಅವನ ಮನ್ವಂತರದಲ್ಲಿ ಎಪ್ಪತ್ತೊಂದು ಯುಗಗಳು ಕಳೆದುಹೋಗುವುವು. ಇಂತಹ ಹದಿನಾಲ್ಕು ಮನ್ವಂತರಗಳಿರುವುವು.

೫. ವಿರಾಟ್ಪುರುಷನ ಮಗನಾದ ಮನುವಿನಿಂದ ಶತರೂಪಾದೇವಿಯು ವೀರನೆಂಬ ಕುಮಾರನನ್ನು ಹಡೆದಳು. ಆ ವೀರಕುಮಾರನಿಂದ ಕಾಮ್ಯಾದೇವಿಯು ಪ್ರಿಯವ್ರತ, ಉತ್ತಾನಪಾದರೆಂಬೀರ್ವರು ಮಕ್ಕಳನ್ನು ಹಡೆದಳು.

೬. ಈ ಕಾಮ್ಯಾದೇವಿಯು ಕರ್ದಮನೆಂಬ ಬ್ರಹ್ಮನ ಹಿರಿಯ ಮಗಳು. ಇವಳಿಂದ ಸಾಮ್ರಾಟ್, ಕ್ಷುಕ್ಷಿ, ವಿರಾಟ್, ಪ್ರಭುಗಳೆಂಬ ಇನ್ನೂ ನಾಲ್ಕು ಮಕ್ಕಳು ಜನಿಸಿದರು.

೭. ಉತ್ತಾನಪಾದನಿಗೆ ಇಂದ್ರ ಸಮಾನರಾದ ಅನೇಕ ಮಕ್ಕಳು ಹುಟ್ಟಿದರು. ಮತ್ತು ಆತ್ಮಾನಂದನೂ, ವರ್ಚಸ್ವಿಯೂ ಆದ ಧ್ರುವನೂ ಹುಟ್ಟಿದನು.

೮. ಧರ್ಮನಿಗೆ ಸುಶ್ರೋಣೀ, ಸುನೀತಿ ಎಂಬ ಇಬ್ಬರು ಕನ್ಯೆಯರು ಹುಟ್ಟಿದರು. ಆ ಧರ್ಮನ ಮಗಳಾದ ಸುನೀತಿಯೇ ಧ್ರುವನ ತಾಯಿಯು.

ಧ್ರುವೋ ವರ್ಷಸಹಸ್ರಾಣಿ ತ್ರೀಣಿ ದಿವ್ಯಾನಿ ಕಾನನೇ ।
ತಪಸ್ತೇಪೇ ಸ ಬಾಲಸ್ತು ಪ್ರಾರ್ಥಯನ್ ಸ್ಥಾನಮವ್ಯಯಂ ॥ ೯ ॥

ತಸ್ಮೈ ಬ್ರಹ್ಮಾ ದದೌ ಪ್ರೀತಃ ಸ್ಥಾನಮಾತ್ಮಸಮಂ ಪ್ರಭುಃ ।
ಅಚಲಂ ಚೈವ ಪುರತಃ ಸಪ್ತರ್ಷೀಣಾಂ ಪ್ರಜಾಪತಿಃ ॥ ೧೦ ॥

ತಸ್ಮಾತ್ಪುಷ್ಟಿಶ್ಚ ಧಾನ್ಯಶ್ಚ ಧ್ರುವಾತ್ಪುತ್ರೌ ವ್ಯಜಾಯತಾಂ ।
ಪುಷ್ಟಿರೇವಂ ಸಮುತ್ಥಾಯಾಃ ಪಂಚಪುತ್ರಾನಕಲ್ಮಷಾನ್ ॥ ೧೧ ॥

ರಿಪುಂ ರಿಪುಂಜಯಂ ವಿಪ್ರಂ ವೃಕಲಂ ವೃಷತೇಜಸಂ ।
ರಿಪೋರೇವಂ ಚ ಮಹಿಷೀ ಚಾಕ್ಷುಷಂ ಸರ್ವತೋ ದಿಶಂ ॥ ೧೨ ॥

ಅಜೀಜನತ್ಪುಷ್ಕರಿಣ್ಯಾಂ ವರುಣಂ ಚಾಕ್ಷುಷೋ ಮನುಃ ।
ಮನೋರಜಾಯಂತ ದಶ ನಡ್ವಲಾಯಾಂ ಮಹೌಜಸಃ ॥ ೧೩ ॥

೯. ಧ್ರುವನು ಬಾಲಕನಾಗಿರುವಾಗಲೇ ಮೂರು ದಿವ್ಯಸಹಸ್ರವರ್ಷಗಳು ಕಾಡಿನಲ್ಲಿ ತಪಸ್ಸುಮಾಡಿ ಶಾಶ್ವತವಾದ ಗತಿಯನ್ನು (ಸ್ಥಾನವನ್ನು) ಪ್ರಾರ್ಥಿಸಿದನು.

೧೦. ಅವನ ತಪಸ್ಸಿಗೆ ಸಂತುಷ್ಟನಾದ ಬ್ರಹ್ಮನು ಸಪ್ತಋಷಿಗಳ ಸ್ಥಾನಗಳ ಮೇಲ್ಭಾಗದಲ್ಲಿ ತನಗೆ ಸಮಾನವಾದ ಶಾಶ್ವತವಾದ ಸ್ಥಾನವನ್ನು ಕಲ್ಪಿಸಿಕೊಟ್ಟನು.

೧೧-೧೨. ಆ ಧ್ರುವನಿಗೆ ಪುಷ್ಟಿ ಮತ್ತು ಧಾನ್ಯ ಎಂಬಿಬ್ಬರು ಮಕ್ಕಳು ಹುಟ್ಟಿದರು. ಪುಷ್ಟಿಗೆ ರಿಪು, ರಿಪುಂಜಯ, ವಿಪ್ರ, ವೃಕಲ, ವೃಷತೇಜಸ ಎಂಬ ಐದುಜನ ಮಕ್ಕಳಾದರು. ಆ ರಿಪುವಿನ ಪಟ್ಟಮಹಿಷಿಯಲ್ಲಿ ಚಾಕ್ಷುಷನೆಂಬ ಮಗನು ಹುಟ್ಟಿದನು.

೧೩. ಆ ಚಾಕ್ಷುಷಮನುವಿಗೆ ಪುಷ್ಕರಿಣೀ ಎಂಬುವಳಲ್ಲಿ ವರುಣನೆಂಬ ಮಗನು ಹುಟ್ಟಿದನು. ಮತ್ತು ಅವನ ಹೆಂಡತಿಯಾದ ನಡ್ವಲಾ ಎಂಬುವಳಲ್ಲಿ ಹತ್ತುಜನ ಪರಾಕ್ರಮಿಗಳಾದ ಮಕ್ಕಳು ಹುಟ್ಟಿದರು.

ಕನ್ಯಾಯಾಂ ಹಿ ಮುನಿಶ್ರೇಷ್ಠ ವೈಶ್ಯಜನ್ಮ ಪ್ರಜಾಪತೇಃ ।
ಪುರುರ್ಮಾಸಃ ಶತದ್ಯುಮ್ನಸ್ತಪಸ್ವೀ ಸತ್ಯವಿತ್ಕವಿಃ ॥ ೧೪ ॥

ಅಗ್ನಿಷ್ಟೋಮೋಽತಿರಾತ್ರಶ್ಚಾತಿಮನ್ಯುಸ್ಸುಯಶಾ ದಶ ।
ಪುರೋರಜನಯತ್ಪುತ್ರಾನ್ ಷಡಾಗ್ನೇಯೀ ಮಹಾಪ್ರಭಾನ್ ॥ ೧೫ ॥

ಅಂಗಂ ಸುಮನಸಂ ಖ್ಯಾತಿಂ ಸ್ಮೃತಿಮಂಗಿರಸಂ ಗಯಂ ।
ಅಂಗಾತ್ಸುನೀಥಾ ಭಾರ್ಯಾ ವೈ ವೇನಮೇಕಮಸೂಯತ ॥ ೧೬ ॥

ಅಪಚಾರೇಣ ವೇನಸ್ಯ ಕೋಪಸ್ತೇಷಾಂ ಮಹಾನಭೂತ್ ।
ಹುಂಕಾರೇಣೈವ ತಂ ಜಘ್ನುರ್ಮುನಯೋ ಧರ್ಮತತ್ಪರಾಃ ॥ ೧೭ ॥

ಅಥ ಪ್ರಜಾರ್ಥಮೃಷಯಃ ಪ್ರಾರ್ಥಿತಾಶ್ಚ ಸುನೀಥಯಾ ।
ಸಾರಸ್ವತಾಸ್ತದಾ ತಸ್ಯ ಮಮಂಥುರ್ದಕ್ಷಿಣಂ ಕರಂ ॥ ೧೮ ॥

೧೪. ಎಲೈ ಮುನಿಶ್ರೇಷ್ಠನೇ, ಆ ನಡ್ವಲಾಕನ್ಯೆಯಲ್ಲಿ ಪುರು, ಮಾಸ, ಶತದ್ಯುಮ್ನ, ತಪಸ್ವೀ, ಸತ್ಯವಿತ್, ಕವಿ, ಅಗ್ನಿಷ್ಟೋಮ, ಅತಿರಾತ್ರ, ಅತಿಮನ್ಯು, ಸುಯಶ ಎಂಬ ಹತ್ತುಜನ ಮಕ್ಕಳು ಹುಟ್ಟಿದರು.

೧೫. ಆ ಪುರುವಿಗೆ ಅಂಗ, ಸುಮನಸ, ಖ್ಯಾತಿ, ಸ್ಮೃತಿ, ಅಂಗಿರಸ, ಗಯ ಎಂಬ ಮಹಾ ಪ್ರಭಾವಶಾಲಿಗಳಾದ ಆರುಜನ ಪುತ್ರರು ಹುಟ್ಟಿದರು.

೧೬. ಆ ಅಂಗನಿಗೆ ಸುನೀಥ ಎಂಬ ಹೆಂಡತಿಯಲ್ಲಿ ವೇನನೆಂಬ ಒಬ್ಬನೇ ಮಗನು ಹುಟ್ಟಿದನು. ಅವನ ದುರಾಚಾರಕ್ಕೋಸ್ಕರ ಋಷಿಗಳೆಲ್ಲರೂ ತುಂಬಾ ಕೋಪಗೊಂಡರು.

೧೭-೧೮. ಅನಂತರ ಧರ್ಮಪರರಾದ ಮುನಿಗಳು ಹುಂಕಾರದಿಂದ ಆ ವೇನನನ್ನು ನಾಶಮಾಡಿದರು. ಅನಂತರ ಸುನೀತಿಯು ಮಕ್ಕಳಾಗಬೇಕೆಂದು ಋಷಿಗಳನ್ನು ಬೇಡಿಕೊಂಡಳು. ಆಗ ಸರಸ್ವತಿಯ ಅಂಶದಿಂದ ಹುಟ್ಟಿದ ಮುನಿಗಳು ಆ ವೇನನ ಬಲಗೈಯನ್ನು ಕಡೆದರು.

ವೇನಸ್ಯ ಪಾಣೌ ಮಥಿತೇ ಸಂಭಭೂವ ತತಃ ಪೃಥುಃ ।
ಸ ಧನ್ವೀ ಕವಚೀ ಜಾತಸ್ತೇಜಸಾದಿತ್ಯಸನ್ನಿಭಃ ॥ ೧೯ ॥

ಅವತಾರಸ್ಸ ವಿಷ್ಣೋರ್ಹಿ ಪ್ರಜಾಪಾಲನಹೇತವೇ ।
ಧರ್ಮಸಂರಕ್ಷಣಾರ್ಥಾಯ ದುಷ್ಟಾನಾಂ ದಂಡಹೇತವೇ ॥ ೨೦ ॥

ಪೃಥುರ್ವೈನ್ಯಸ್ತದಾ ಪೃಥ್ವೀಮರಕ್ಷತ್ ಕ್ಷತ್ರಪೂರ್ವಜಃ ।
ರಾಜಸೂಯಾಭಿಷಿಕ್ತಾನಾಮಾದ್ಯಸ್ಸ ವಸುಧಾಪತಿಃ ॥ ೨೧ ॥

ತಸ್ಮಾಚ್ಚೈವ ಸಮುತ್ಪನ್ನೌ ನಿಪುಣೌ ಸೂತಮಾಗಧೌ ।
ತೇನೇಯಂ ಗೌರ್ಮುನಿಶ್ರೇಷ್ಠ ದುಗ್ಧಾ ಸರ್ವಹಿತಾಯ ವೈ ॥ ೨೨ ॥

ಸರ್ವೇಷಾಂ ವೃತ್ತಿದಶ್ಚಾಭೂದ್ದೇವರ್ಷಿಸುರರಕ್ಷಸಾಂ ।
ಮನುಷ್ಯಾಣಾಂ ವಿಶೇಷೇಣ ಶತಯಜ್ಞಕರೋ ನೃಪ ॥ ೨೩ ॥

---

೧೯. ಆ ವೇನನ ಕೈಯನ್ನು ಕಡಿಯಲು ಧನುರ್ಧಾರಿಯೂ, ಕವಚವನ್ನು ತೊಟ್ಟಿರುವನೂ ಆದ ಪೃಥು ಎಂಬುವನು ಹುಟ್ಟಿದನು.

೨೦. ಆ ಪೃಥುವು ವಿಷ್ಣುವಿನ ಅವತಾರವೇ. ವಿಷ್ಣುವು ಪ್ರಜೆಗಳನ್ನು ರಕ್ಷಿಸುವುದಕ್ಕೂ, ಧರ್ಮವನ್ನು ಕಾಪಾಡುವುದಕ್ಕೂ, ದುಷ್ಟರನ್ನು ಶಿಕ್ಷಿಸುವುದಕ್ಕೂ, ಪೃಥು ಚಕ್ರವರ್ತಿಯಾಗಿ ಹುಟ್ಟಿದನು. ವೇನನ ಮಗನಾದ ಪೃಥುವು ಮೊದಲನೆಯ ಕ್ಷತ್ರಿಯನು. ಅವನು ಪೃಥ್ವಿಯನ್ನು ಪಾಲಿಸಿದನು.

೨೧. ರಾಜಸೂಯಯಾಗ ಪೂರ್ವಕವಾಗಿ ಅಭಿಷಿಕ್ತರಾದವರಲ್ಲಿ ಮೊದಲನೆಯ ರಾಜನೆಂದರೆ ಪೃಥುವೇನೆ. ಆವನಿಗೆ ಸೂತ, ಮಾಗಧರೆಂಬ ನಿಪುಣರಾದ ಇಬ್ಬರು ಮಕ್ಕಳು ಹುಟ್ಟಿದರು.

೨೨-೨೩. ಎಲೈ ಮುನಿವರನೇ, ಪ್ರಪಂಚದ ಜನಗಳ ಹಿತಕ್ಕೋಸ್ಕರವಾಗಿ ಗೋರೂಪವಾದ ಪೃಥಿವಿಯನ್ನು ಕರೆದನು. ಆಗ ದೇವ, ಋಷಿ, ರಾಕ್ಷಸ ಎಲ್ಲರಿಗೂ ತಮ್ಮ ತಮ್ಮ ವೃತ್ತಿಯು ಬಂದಿತು. ಪೃಥುವು ನೂರು ಯಜ್ಞಗಳನ್ನು ಮಾಡಿದನು.

ಪೃಥೋಃ ಪುತ್ರೌ ತು ಜಜ್ಞಾತೇ ಧರ್ಮಜ್ಞೌ ಭುವಿ ಪಾರ್ಥಿವೌ ।
ವಿಜಿತಾಶ್ವಶ್ಚ ಹರ್ಯಕ್ಷೋ ಮಹಾವೀರೌ ಸುವಿಶ್ರುತೌ ॥ ೨೪ ॥

ಶಿಖಂಡಿನೀ ಚಾಜನಯತ್ಪುತ್ರಂ ಪ್ರಾಚೀನಬರ್ಹಿಷಂ ।
ಪ್ರಾಚೀನಾಗ್ರಾಃ ಕುಶಾಸ್ತಸ್ಯ ಪೃಥಿವೀತಲಚಾರಿಣಃ ॥ ೨೫ ॥

ಸಮುದ್ರತನಯಾ ತೇನ ಧರ್ಮತಸ್ಸುವಿವಾಹಿತಾ ।
ರೇಜೇಽಧಿಕತರಂ ರಾಜಾ ಕೃತದಾರೋ ಮಹಾಪ್ರಭುಃ ॥ ೨೬ ॥

ಸಮುದ್ರತನಯಾಯಾಸ್ತು ದಶ ಪ್ರಾಚೀನಬರ್ಹಿಷಃ ।
ಬಭೂವುಸ್ತನಯಾ ದಿವ್ಯಾ ಬಹುಯಜ್ಞಕರಸ್ಯ ವೈ ॥ ೨೭ ॥

ಸರ್ವೇ ಪ್ರಾಚೇತಸಾ ನಾಮ್ನಾ ಧನುರ್ವೇದಸ್ಯ ಪಾರಗಾಃ ।
ಅಪೃಥಗ್ಧರ್ಮಚರಣಾಸ್ತೇಽತಪ್ಯಂತ ಮಹತ್ತಪಃ ॥ ೨೮ ॥

೨೪. ಪೃಥುವಿಗೆ ವಿಜಿತಾಶ್ವ, ಹರ್ಯಕ್ಷ ಎಂಬ ಮಹಾವೀರರಾದ ಇಬ್ಬರು ಮಕ್ಕಳು ಹುಟ್ಟಿದರು.

೨೫. ಶಿಖಂಡಿನೀ ಎಂಬ ಹೆಂಡತಿಯಲ್ಲಿ ಪ್ರಾಚೀನಬರ್ಹಿಷನೆಂಬ ಪುತ್ರನು ಹುಟ್ಟಿದನು. ಅವನು ಪೃಥ್ವಿಯಲ್ಲಿ ಸಂಚಾರಮಾಡುತ್ತಿರಲು ದರ್ಭೆಗಳೆಲ್ಲವೂ ಪೂರ್ವಾಭಿಮುಖವಾಗುತ್ತಿದ್ದವು. ಅದರಿಂದ ಅವನಿಗೆ ಆ ಹೆಸರು ಬಂದಿತು.

೨೬. ಆ ಪೃಥುವು ಶಾಸ್ತ್ರೋಕ್ತವಾಗಿ ಸಮುದ್ರನ ಮಗಳನ್ನು ಮದುವೆಯಾದನು. ಅಂತಹ ಹೆಂಡತಿಯನ್ನು ಪಡೆದು ಅಧಿಕವಾಗಿ ಆನಂದಿಸಿದನು.

೨೭. ಆ ಸಮುದ್ರತನಯಳಲ್ಲಿ ಹತ್ತುಜನ ಪ್ರಾಚೀನಬರ್ಹಿಷರೆಂಬ ಮಕ್ಕಳು ಹುಟ್ಟಿದರು. ಅವರು ಅನೇಕ ಯಜ್ಞಗಳನ್ನು ಮಾಡಿದರು.

೨೮. ಅವನ ಮಕ್ಕಳೆಲ್ಲರೂ ಪ್ರಾಚೇತಸರೆಂದು ಹೆಸರಾದರು. ಅವರೆಲ್ಲರೂ ಧನುರ್ವೇದಪಾರಂಗತರು. ಅವರು ಸಂಪೂರ್ಣ ಧರ್ಮವನ್ನಾಚರಿಸಿ ಘೋರವಾದ ತಪಸ್ಸನ್ನಾಚರಿಸಿದರು.

ದಶವರ್ಷಸಹಸ್ರಾಣಿ ಸಮುದ್ರಸಲಿಲೇಶಯಾಃ ।
ರುದ್ರಗೀತಂ ಜಪಂತಶ್ಚ ಶಿವಧ್ಯಾನಪರಾಯಣಾಃ ॥ ೨೯ ॥

ತಪಶ್ಚರತ್ಸು ಪೃಥಿವ್ಯಾಮುಭವಂಶ್ಚ ಮಹೀರುಹಾಃ ।
ಅರಕ್ಷ್ಯಮಾಣಾಯಾಂ ಪೃಥ್ವ್ಯಾಂ ಬಭೂವಾಥ ಪ್ರಜಾಕ್ಷಯಃ ॥ ೩೦ ॥

ತಾನ್ ದೃಷ್ಟ್ವಾ ತು ನಿವೃತ್ತಾಸ್ತೇ ತಪಸೋ ಲಬ್ಧಸದ್ವರಾಃ ।
ಚುಕ್ರುಧುರ್ಮುನಿಶಾರ್ದೂಲ ದಗ್ಧುಕಾಮಾಸ್ತಪೋಬಲಾಃ ॥ ೩೧ ॥

ಪ್ರಾಚೇತಸಾ ಮುಖೇಭ್ಯಸ್ತೇ ಪ್ರಾಸೃಜನ್ನಗ್ನಿಮಾರುತೌ ।
ವೃಕ್ಷಾನುನ್ಮೂಲ್ಯ ವಾಯುಸ್ತಾನದಹದ್ಧವ್ಯವಾಹನಃ ॥ ೩೨ ॥

ವೃಕ್ಷಕ್ಷಯಂ ತತೋ ದೃಷ್ಟ್ವಾ ಕಿಂಚಿಚ್ಛೇಷೇಷು ಶಾಖಿಷು ।
ಉಪಗಮ್ಯಾಬ್ರವೀದೇತಾನ್ರಾಜಾ ಸೋಮಃ ಪ್ರತಾಪವಾನ್ ॥ ೩೩ ॥

೨೯. ಆ ಪ್ರಾಚೇತಸರು ಹತ್ತುಸಹಸ್ರ ವರ್ಷಗಳು ಸಮುದ್ರದ ನೀರಿನಲ್ಲೇ ಇದ್ದು ರುದ್ರಗೀತವನ್ನು ಜಪಿಸುತ್ತಾ ಶಿವಧ್ಯಾನಾಸಕ್ತರಾಗಿದ್ದರು.

೩೦. ಆ ಪ್ರಾಚೇತಸರೆಲ್ಲರೂ ತಪಸ್ಸುಮಾಡುತ್ತಿರಲು ಭೂಮಿಯಲ್ಲೆಲ್ಲಾ ವೃಕ್ಷಗಳು ಹುಟ್ಟಿದವು ಅನಂತರ ಪೃಥುವಿಯನ್ನು ಕಾಪಾಡುವರಾರೂ ಇಲ್ಲದಿರಲು ಪ್ರಜಾಕ್ಷೋಭವು ಮೊದಲಾಯಿತು.

೩೧. ಎಲೈ ಮುನಿವರನೇ, ಅದನ್ನೆಲ್ಲಾ ನೋಡಿ, ತಪಸ್ಸುಮಾಡುತ್ತಿದ್ದ ಪ್ರಾಚೇತಸರು ತಪೋಬಲದಿಂದ ಆ ಮರಗಳನ್ನು ಸುಡಲು ತಪಸ್ಸಿನಿಂದ ಬಹಿರ್ಮುಖರಾಗಿ ಸಿದ್ಧರಾದರು.

೩೨. ಪ್ರಾಚೇತಸರ ಮುಖದಿಂದ ಅಗ್ನಿ, ವಾಯು ಎರಡೂ ಹುಟ್ಟಿದವು. ಅಗ್ನಿಯು ವೃಕ್ಷಗಳನ್ನು ದಹಿಸಿತು. ವಾಯುವು ಬುಡಸಹಿತ ನಾಶಮಾಡಿತು.

೩೩. ಅನಂತರ ವೃಕ್ಷಗಳೆಲ್ಲವೂ ನಾಶವಾದದ್ದನ್ನು ನೋಡಿ, ಅವುಗಳಲ್ಲಿ ಕೆಲವು ವೃಕ್ಷಗಳು ಉಳಿದಿರಲು ಅವುಗಳನ್ನು ಕುರಿತು,

॥ ಸೋಮ ಉವಾಚ ॥

ಕೋಪಂ ಯಚ್ಛತ ರಾಜಾನಸ್ಸರ್ವೇ ಪ್ರಾಚೀನಬರ್ಹಿಷಃ ।
ಅನುಭೂತಾನುಕನ್ಯೇಯಂ ವೃಕ್ಷಾಣಾಂ ವರವರ್ಣಿನೀ ॥ ೩೪ ॥

ಭವಿಷ್ಯಂ ಜಾನತಾ ಸಾ ತು ಧೃತಾ ಗರ್ಭೇಣ ವೈ ಮಯಾ ।
ಭಾರ್ಯಾ ವೋಽಸ್ತು ಮಹಾಭಾಗಾಸ್ಸೋಮವಂಶವಿವರ್ಧಿನೀ ॥ ೩೫ ॥

ಅಸ್ಯಾಮುತ್ಪತ್ಸ್ಯತೇ ವಿದ್ವಾನ್ದಕ್ಷೋ ನಾಮ ಪ್ರಜಾಪತಿಃ ।
ಸೃಷ್ಟಿಕರ್ತಾ ಮಹಾತೇಜಾ ಬ್ರಹ್ಮಪುತ್ರಃ ಪುರಾತನಃ ॥ ೩೬ ॥

ಯುಷ್ಮಾಕಂ ತೇಜಸಾರ್ಧೇನ ಮಮ ಚಾನೇನ ತೇಜಸಾ ।
ಬ್ರಹ್ಮತೇಜಮಯೋ ಭೂಪಃ ಪ್ರಜಾಃ ಸಂವರ್ಧಯಿಷ್ಯತಿ ॥ ೩೭ ॥

ತತಸ್ಸೋಮಸ್ಯ ವಚನಾಜ್ಜಗೃಹುಸ್ತೇ ಪ್ರಚೇತಸಃ ।
ಭಾರ್ಯಾಂ ಧರ್ಮೇಣ ತಾಂ ಪ್ರೀತ್ಯಾ ವೃಕ್ಷಜಾಂ ವರವರ್ಣಿನೀಂ ॥ ೩೮ ॥

೩೪. ಸೋಮನು ಹೇಳಿದನು :—ಎಲೈ ರಾಜರಾದ ಪ್ರಾಚೀನಬರ್ಹಿಷರೇ, ಸುಂದರಿಯಾದ ವೃಕ್ಷಗಳ ಮಗಳಾದ ವರವರ್ಣಿನಿಯನ್ನು ನಾನು ಅನುಭವಿಸಿರುವೆನು.

೩೫. ಎಲೈ ಮಹಾಮಹಿಮರೇ, ಸೋಮವಂಶದಲ್ಲಿ ಹುಟ್ಟಿದ ಆ ಕನ್ಯೆಯು ನಿಮಗೂ ಪತ್ನಿಯಾಗಲಿರುವಳು. ಇದರ ಭವಿಷ್ಯವು ನನಗೆ ತಿಳಿದಿದೆ. ಅವಳೀಗ ನನ್ನಿಂದ ಗರ್ಭಿಣಿಯಾಗಿರುವಳು.

೩೬. ಅವಳಲ್ಲಿ ವಿದ್ವಾಂಸನಾದ ಮತ್ತು ಪ್ರಭಾವಶಾಲಿಯಾದ ದಕ್ಷಪ್ರಜಾಪತಿ ಎಂಬ ಮಗನು ಹುಟ್ಟುವನು. ಅವನು ಸೃಷ್ಟಿಕರ್ತನಾಗಿಯೂ, ಮಹಾತೇಜಸ್ವಿಯಾಗಿಯೂ ಆಗುವನು. ಅವನು ಆದಿಬ್ರಹ್ಮನ ಮಗನು.

೩೭. ನಿಮ್ಮ ಅರ್ಧ ತೇಜಸ್ಸಿನಿಂದಲೂ, ನನ್ನ ತೇಜಸ್ಸಿನಿಂದಲೂ ಕೂಡಿ ಆ ದಕ್ಷಬ್ರಹ್ಮನು ಬ್ರಹ್ಮತೇಜೋಮಯನಾಗಿ ಪ್ರಜೆಗಳನ್ನು ಅಭಿವೃದ್ಧಿಗೊಳಿಸುವನು.

೩೮. ಸೋಮನ ಮಾತಿನಂತೆ ಆ ಪ್ರಾಚೀನಬರ್ಹಿಷರು ವೃಕ್ಷಕನ್ಯೆಯಾದ ವರವರ್ಣಿನಿಯನ್ನು ಧರ್ಮದಿಂದಲೂ, ಪ್ರೀತಿಯಿಂದಲೂ ಮದುವೆಯಾದರು.

ತೇಭ್ಯಸ್ತಸ್ಯಾಸ್ತು ಸಂಜಜ್ಞೇ ದಕ್ಷೋ ನಾಮ ಪ್ರಜಾಪತಿಃ ।
ಸೋಽಪಿ ಜಜ್ಞೇ ಮಹಾತೇಜಾಃ ಸೋಮಸ್ಯಾಂಶೇನ ವೈ ಮುನೇ ॥ ೩೯ ॥

ಅಚರಾಂಶ್ಚ ಚರಾಂಶ್ಚೈವ ದ್ವಿಪದೋಽಥ ಚತುಷ್ಪದಃ ।
ಸಂಸೃಜ್ಯ ಮನಸಾ ದಕ್ಷೋ ಮೈಥುನೀಂ ಸೃಷ್ಟಿಮಾರಭತ್ ॥ ೪೦ ॥

ವೀರಣಸ್ಯ ಸುತಾಂ ನಾಮ್ನಾ ವೀರಣೀ ಸ ಪ್ರಜಾಪತೇಃ ।
ಉಪಯೇಮೆ ಸುವಿಧಿನಾ ಸುಧರ್ಮೇಣ ಪತಿವ್ರತಾಂ ॥ ೪೧ ॥

ಹರ್ಯಶ್ವಾನುಯುತಂ ತಸ್ಯಾಂ ಸುತಾನ್ಪುಣ್ಯಾನಜೀಜನತ್ ।
ತೇ ವಿರಕ್ತಾ ಬಭೂವುಶ್ಚ ನಾರದಸ್ಯೋಪದೇಶತಃ ॥ ೪೨ ॥

ತಚ್ಛ್ರುತ್ವಾ ಸ ಪುನರ್ದಕ್ಷಸ್ಸುಬಲಾಶ್ವಾನಜೀಜನತ್ ।
ನಾಮಾತಸ್ತನಯಾಂಸ್ತಸ್ಯಾಂ ಸಹಸ್ರಪರಿಸಂಖ್ಯಯಾ ॥ ೪೩ ॥

೩೯. ಎಲೈ ಮುನಿಯೇ, ದಕ್ಷಪ್ರಜಾಪತಿಯು ಪ್ರಾಚೀನಬರ್ಹಿಷರ ತೇಜಸ್ಸಿನಿಂದಲೂ, ಸೋಮನ ಅಂಶದಿಂದಲೂ ಹುಟ್ಟಿದನು.

೪೦. ಅಚರಗಳನ್ನೂ, ಚರಗಳನ್ನೂ, ದ್ವಿಪದ (ಎರಡು ಪಾದಗಳುಳ್ಳವು) ಗಳನ್ನೂ, ಚತುಷ್ಪದ (ನಾಲ್ಕು ಪಾದಗಳುಳ್ಳವು) ಗಳನ್ನೂ ಪರಸ್ಪರ ಸೇರಿಸಿ ಮೈಥುನೀ ಸೃಷ್ಟಿ (ಪರಸ್ಪರ ಸೇರಿ ಮಾಡುವ ಸೃಷ್ಟಿ) ಯನ್ನು ಪ್ರಾರಂಭಿಸಿದನು.

೪೧. ಅನಂತರ ದಕ್ಷನು ವೀರಣಪ್ರಜಾಪತಿಯ ಮಗಳಾದ ವೀರಣೀ ಎಂಬುವಳನ್ನು ಶಾಸ್ತ್ರೋಕ್ತವಾಗಿ, ಧರ್ಮಪೂರ್ವಕವಾಗಿಯೂ ಮದುವೆಯಾದನು. ಅವಳು ಪತಿವ್ರತೆಯು.

೪೨. ಆಗ ಅವನಿಗೆ ಹರ್ಯಶ್ವನೇ ಮೊದಲಾದ ಪುಣ್ಯವಂತರಾದ ಮಕ್ಕಳಾದರು. ಅವರೆಲ್ಲರೂ ನಾರದನ ಉಪದೇಶದಿಂದ ವೈರಾಗ್ಯವನ್ನವಲಂಬಿಸಿದರು.

೪೩. ಅದನ್ನು ಕೇಳಿ ದಕ್ಷನು ಪುನಃ ವೀರಣಿಯಲ್ಲಿಯೇ ಸುಬಲನೇ ಮೊದಲಾದ ಸಹಸ್ರಜನ ಪುತ್ರರನ್ನು ಪಡೆದನು.

ತೇಽಪಿ ಭ್ರಾತೃಪಥಾ ಯಾತಾಸ್ತನ್ಮನೇರುಪದೇಶತಃ ।
ನಾಗಮನ್ಪಿತೃಸಾನ್ನಿಧ್ಯಂ ವಿರಕ್ತಾ ಭಿಕ್ಷುಮಾರ್ಗಿಣಃ ॥ ೪೪ ॥

ತಚ್ಛ್ರುತ್ವಾ ಶಾಪಮಾಕ್ರುದ್ಧೋ ಮುನಯೇ ದುಸ್ಸಹಂ ದದೌ
ಕುತ್ರಚಿನ್ನ ಲಭಸ್ವೇತಿ ಸಂಸ್ಥಿತಿಂ ಕಲಹಪ್ರಿಯ ॥ ೪೫ ॥

ಸಾಂತ್ವಿತೋಽಥ ವಿಧಾತ್ರಾ ಹಿ ಸ ಪಶ್ಚಾದಸೃಜತ್ಸ್ತ್ರಿಯಃ ।
ಮಹಾಜ್ವಾಲಾಸ್ವರೂಪೇಣ ಗುಣೈಶ್ಚಾಪಿ ಮುನೀಶ್ವರ ॥ ೪೬ ॥

ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ದ್ವೇ ಚೈವಂ ಬ್ರಹ್ಮಪುತ್ರಾಯ ದ್ವೇ ಚೈವಾಂಗಿರಸೇ ತದಾ ॥ ೪೭ ॥

ದ್ವೇ ಕೃಶಾಶ್ವಾಯ ವಿದುಷೇ ಮುನಯೇ ಮುನಿಸತ್ತಮ ।
ಶಿಷ್ಟಾಸ್ಸೋಮಾಯ ದಕ್ಷೋಽಪಿ ನಕ್ಷತ್ರಾಖ್ಯಾ ದದೌ ಪ್ರಭುಃ ॥ ೪೮ ॥

೪೪. ಅವರೂ ಸಹ ನಾರದ ಮುನಿಯ ಉಪದೇಶದಂತೆ ತಮ್ಮ ಅಣ್ಣಂದಿರ ದಾರಿಯನ್ನೇ ಅನುಸರಿಸಿ ವಿರಕ್ತರಾದ ಭಿಕ್ಷುಗಳಾದರು. ಪುನಃ ತಂದೆಯ ಹತ್ತಿರಕ್ಕೇ ಬರಲಿಲ್ಲ.

೪೫. ಇದರಿಂದ ದಕ್ಷಪ್ರಜಾಪತಿಯು ಅತ್ಯಂತ ಕೋಪಗೊಂಡು ಆ ನಾರದ ಮುನಿಗೆ ಎಲೈ ಕಲಹಪ್ರಿಯನೇ, ನೀನು ಒಂದೇಕಡೆ ಇರದೆ ಸುತ್ತುತ್ತಿರು ಎಂದು ಶಾಪವನ್ನು ಕೊಟ್ಟನು.

೪೬. ಎಲೈ ಮುನಿವರನೇ, ಅನಂತರ ಬ್ರಹ್ಮನು ಸಮಾಧಾನಮಾಡಲು ಆ ದಕ್ಷನು ಮಹಾಜ್ವಾಲಾಸ್ವರೂಪರೂ, ಗುಣವಂತರೂ ಆದ ಸ್ತ್ರೀಯರುಗಳನ್ನು ಸೃಷ್ಟಿಸಿದನು.

೪೭. ಅವರಲ್ಲಿ ಹತ್ತುಜನ ಹೆಣ್ಣುಮಕ್ಕಳನ್ನು ಧರ್ಮನಿಗೂ, ಹದಿಮೂರು ಜನರನ್ನು ಕಶ್ಯಪನಿಗೂ ಕೊಟ್ಟನು. ಇಬ್ಬರನ್ನು ಬ್ರಹ್ಮಪುತ್ರನಿಗೂ, ಪುನಃ ಇಬ್ಬರನ್ನು ಅಂಗಿರಸ್ಸಿಗೂ ಕೊಟ್ಟನು.

೪೮. ಇಬ್ಬರನ್ನು ವಿದ್ವಾಂಸನೂ, ಮುನಿವರನೂ ಆದ ಕೃಶಾಶ್ವನಿಗೂ, ಉಳಿದ ನಕ್ಷತ್ರದ ಹೆಸರುಳ್ಳ ಅಶ್ವಿನಿ ಮುಂತಾದವರನ್ನು ಚಂದ್ರನಿಗೂ ಕೊಟ್ಟನು.

ತಾಭ್ಯೋ ದಕ್ಷಸ್ಯ ಪುತ್ರೀಭ್ಯೋ ಜಾತಾ ದೇವಾಸುರಾದಯಃ ।
ಬಹವಸ್ತನಯಾಃ ಖ್ಯಾತಾಸ್ತೈಃ ಸರ್ವೈಃ ಪೂರಿತಂ ಜಗತ್ ॥ ೪೯ ॥

ತತಃ ಪ್ರಭೃತಿ ವಿಪ್ರೇಂದ್ರ ಪ್ರಜಾ ಮೈಥುನಸಂಭವಾಃ ।
ಸಂಕಲ್ಪಾದ್ದರ್ಶನಾತ್ಸ್ಪರ್ಶಾತ್ಪೂರ್ವೇಷಾಂ ಸೃಷ್ಟಿರುಚ್ಯತೇ ॥ ೫೦ ॥

॥ ಶೌನಕ ಉವಾಚ ॥

ಅಂಗುಷ್ಠಾದ್ಬ್ರಹ್ಮಣೋ ಜಜ್ಞೇ ದಕ್ಷಶ್ಚೋಕ್ತಸ್ತ್ವಯಾ ಪುರಾ ।
ಕಥಂ ಪ್ರಾಚೇತಸತ್ವಂ ಹಿ ಪುನರ್ಲೇಭೇ ಮಹಾತಪಾಃ ॥ ೫೧ ॥

ಏತಂ ಮೇ ಸಂಶಯಂ ಸೂತ ಪ್ರತ್ಯಾಖ್ಯಾತುಂ ತ್ವಮರ್ಹಸಿ ।
ಚಿತ್ರಮೇತತ್ಸ ಸೋಮಸ್ಯ ಕಥಂ ಶ್ವಶುರತಾಂ ಗತಃ ॥ ೫೨ ॥

॥ ಸೂತ ಉವಾಚ ॥

ಉತ್ಪತ್ತಿಶ್ಚ ನಿರೋಧಶ್ಚ ನಿತ್ಯಂ ಭೂತೇಷು ವರ್ತತೇ ।
ಕಲ್ಪೇ ಕಲ್ಪೇ ಭವಂತ್ಯೇತೇ ಸರ್ವೇ ದಕ್ಷಾದಯೋ ಮುನೇ ॥ ೫೩ ॥

---

೪೯. ಆ ದಕ್ಷನ ಹೆಣ್ಣುಮಕ್ಕಳಲ್ಲಿ ದೇವತೆಗಳೂ ಅಸುರರೂ ಹುಟ್ಟಿದರು. ಮತ್ತು ಅನೇಕ ಮಕ್ಕಳು ಹುಟ್ಟಿ ಪ್ರಪಂಚದಲ್ಲೆಲ್ಲಾ ವ್ಯಾಪಿಗಳಾಗಿ ಖ್ಯಾತಿಯನ್ನು ಪಡೆದರು.

೫೦. ಅಂದಿನಿಂದ ಮೈಥುನದಿಂದ ಎಷ್ಟೋ ಪ್ರಜೆಗಳು ಹುಟ್ಟಿದರು. ಇದರ ಹಿಂದಿನ ಸೃಷ್ಟಿಯು ಸಂಕಲ್ಪದಿಂದಲೂ, ದರ್ಶನದಿಂದಲೂ, ಸ್ಪರ್ಶದಿಂದಲೂ ಆದದ್ದು.

೫೧-೫೨. ಶೌನಕನು ಸೂತಪೌರಾಣಿಕನನ್ನು ಪ್ರಶ್ನೆಮಾಡುವನು :—ಎಲೈ ಸೂತನೇ, ನೀನು ಬ್ರಹ್ಮನ ಅಂಗುಷ್ಠದಿಂದ ದಕ್ಷಪ್ರಜಾಪತಿಯು ಹುಟ್ಟಿದನೆಂದು ಹೇಳಿದೆಯಷ್ಟೆ? ಅವನು ಮಹಾತಪಸ್ಸು ಮಾಡಿ ಪ್ರಾಚೇತಸತ್ವವನ್ನು ಹೇಗೆ ಪಡೆದನು ? ಮತ್ತು ದಕ್ಷನು ಚಂದ್ರನಿಗೆ ಮಾವನು ಹೇಗೆ ಆದನು ? ಇದು ಆಶ್ಚರ್ಯಕರವಾದ ವಿಷಯವು. ಈ ಸಂಶಯವನ್ನು ನಿವಾರಿಸು ಎನ್ನಲು,

೫೩. ಸೂತನು ಹೇಳುವನು :—ಪ್ರತಿಯೊಂದು ಕಲ್ಪದಲ್ಲಿಯೂ ಉತ್ಪತ್ತಿಯೂ ಅದರ ನಿರೋಧವೂ ಪ್ರಾಣಿಗಳಲ್ಲಿ ನಿತ್ಯವೂ ಕಂಡುಬರುತ್ತದೆ. ದಕ್ಷಾದಿಗಳೂ ಕೂಡ ಪ್ರತಿಯೊಂದು ಕಲ್ಪದಲ್ಲಿಯೂ ಹುಟ್ಟುವರು.

ಇಮಾಂ ವಿಸೃಷ್ಟಿಂ ದಕ್ಷಸ್ಯ ಯೋ ವಿದ್ಯಾತ್ಸಚರಾಚರಂ ।
ಪ್ರಜಾವಾನಾಯುಷಾ ಪೂರ್ಣಸ್ಸ್ವರ್ಗಲೋಕೇ ಮಹೀಯತೇ　　॥ ೫೪ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಸರ್ಗವರ್ಣನಂ ನಾಮ ತ್ರಿಂಶೋಽಧ್ಯಾಯಃ



೫೪. ಈ ದಕ್ಷ ಪ್ರಜಾಪತಿಯು ಮಾಡಿದ ಚರಾಚರಾತ್ಮಕವಾದ ವಿಸೃಷ್ಟಿಯನ್ನು ಯಾರು ಅರಿಯುವರೋ ಅವರು ಪ್ರಜೆಗಳನ್ನೂ ಪೂರ್ಣವಾದ ಆಯಸ್ಸನ್ನೂ ಪಡೆದು ಸ್ವರ್ಗಲೋಕದಲ್ಲಿ ಸುಖಿಸುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಸರ್ಗವರ್ಣನವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಏಕತ್ರಿಂಶೋಽಧ್ಯಾಯಃ

॥ ಶೌನಕ ಉವಾಚ ॥

ದೇವಾನಾಂ ದಾನವಾನಾಂ ಚ ಗಂಧರ್ವೋರಗರಕ್ಷಸಾಂ ।
ಸೃಷ್ಟಿಂ ತು ವಿಸ್ತರೇಣೇಮಾಂ ಸೂತಪುತ್ರ ವದಾಶು ಮೇ ॥ ೧ ॥

॥ ಸೂತ ಉವಾಚ ॥

ಯದಾ ನ ವವೃಧೇ ಸಾ ತು ವೀರಣಸ್ಯ ಪ್ರಜಾಪತಿಃ ।
ಸುತಾಂ ಸುತಪಸಾ ಯುಕ್ತಾಮಾಹ್ವಯತ್ಸರ್ಗಕಾರಣಾತ್ ॥ ೨ ॥

## ಮೂವತ್ತೊಂದನೆಯ ಅಧ್ಯಾಯವು

೧. ಶೌನಕನು ಸೂತಪುರಾಣಿಕನನ್ನು ಕುರಿತು ಪ್ರಶ್ನೆಮಾಡುವನು :— ಎಲೈ ಸೂತನೇ, ದೇವತೆಗಳು, ದಾನವರು, ಗಂಧರ್ವರು, ಉರಗರು, ರಾಕ್ಷಸರು ಇವರುಗಳ ಸೃಷ್ಟಿಯನ್ನು ವಿಸ್ತಾರವಾಗಿ ನನಗೆ ತಿಳಿಸು ಎನ್ನಲು,

೨. ಸೂತನಿಂತೆಂದನು :—ಯಾವಾಗ ಪ್ರಜೆಗಳು ಅಭಿವೃದ್ಧಿಯನ್ನು ಹೊಂದಲಿಲ್ಲವೋ ಆಗ ದಕ್ಷನು ತಪಸ್ಸು ಮಾಡುತ್ತಿದ್ದ ವೀರಣನ ಮಗಳನ್ನು ಸೃಷ್ಟಿಗೋಸ್ಕರವಾಗಿ ಕರೆದುಕೊಂಡು ಬಂದನು.

ಸ ಮೈಥುನೇನ ಧರ್ಮೇಣ ಸಸರ್ಜ ವಿವಿಧಾಃ ಪ್ರಜಾಃ ।
ತಾಃ ಶೃಣು ತ್ವಂ ಮಹಾಪ್ರಾಜ್ಞ ಕಥಯಾಮಿ ಸಮಾಸತಃ　॥ ೩

ತಸ್ಯಾಂ ಪುತ್ರಸಹಸ್ರಾಣಿ ವೀರಿಣ್ಯಾಂ ಪಂಚ ವೀರ್ಯವಾನ್ ।
ಅಶ್ರಿತ್ಯ ಜನಯಾಮಾಸ ದಕ್ಷ ಏವ ಪ್ರಜಾಪತಿಃ　॥ ೪ ॥

ಏತಾನ್ ಸೃಷ್ಟಾಂಸ್ತು ತಾನ್ ದೃಷ್ಟ್ವಾ ನಾರದಃ ಪ್ರಾಹ ವೈ ಮುನಿಃ
ಸರ್ವಂ ಸ ತು ಸಿಸಮುತ್ಪನ್ನೋ ನಾರದಃ ಪರಮೇಷ್ಠಿನಃ　॥ ೫ ॥

ಶ್ರುತವಾನ್ನಾ ಕಶ್ಯಪಾದ್ವೈ ಪುಂಸಾಂ ಸೃಷ್ಟಿರ್ಭವಿಷ್ಯತಿ ।
ದಕ್ಷಸ್ಯೈವ ದುಹಿತೃಷು ತಸ್ಮಾತ್ತಾನಬ್ರವೀತ್ತು ಸಃ　॥ ೬ ॥

ಅಜಾನಂತಃ ಕಥಂ ಸೃಷ್ಟಿಂ ಬಾಲಿಶಾ ವೈ ಕರಿಷ್ಯಥ ।
ದಿಶಂ ಕಾಂಚಿದಜಾನಂತಸ್ತಸ್ಮಾದ್ವಿಜ್ಞಾಯ ತಾಂ ಭುವಂ　೭ ॥

ಇತ್ಯುಕ್ತಾಃ ಪ್ರಯಯುಃ ಸರ್ವೇ ಆಶಾಂ ವಿಜ್ಞಾತುಮೋಜಸಾ ।
ತದಂತಂ ನ ಹಿ ಸಂಪ್ರಾಪ್ಯ ನ ನಿವೃತ್ತಾಃ ಪಿತೃಗೃಹಂ　॥ ೮ ॥

೩. ದಕ್ಷನು ಅವಳ ಸಂಗದಿಂದ ವಿವಿಧರಾದ ಪ್ರಜೆಗಳನ್ನು ಪಡೆದನು. ಎಲೈ ಮಹಾಜ್ಞಾನಿಯೇ, ಅದನ್ನು ಹೇಳುವೆನು ಕೇಳು.

೪. ಆ ದಕ್ಷನು ಆ ವೀರಣಿಯಲ್ಲಿ ಐದುಸಹಸ್ರ ಜನ ವೀರ್ಯವಂತರಾದ ಪುತ್ರರನ್ನು ಪಡೆದನು.

೫-೭. ಈರೀತಿಯಾಗಿ ಪ್ರಜೆಗಳನ್ನು ಸೃಷ್ಟಿಸಿದುದನ್ನು ನೋಡಿ, ನಾರದನು ಅಲ್ಲಿಗೆ ಬಂದು, ಕಶ್ಯಪಬ್ರಹ್ಮನ ದೆಸೆಯಿಂದ ಪುರುಷರ ಸೃಷ್ಟಿಯಾಗುವುದೆಂದು ತಿಳಿದು ಆ ದಕ್ಷನ ಮಕ್ಕಳನ್ನು ಕುರಿತು, ಏನೂ ತಿಳಿಯದ ಮೂರ್ಖರಾದ ನೀವು ಹೇಗೆ ತಾನೇ ಸೃಷ್ಟಿಮಾಡುವಿರಿ? ಯಾವ ದಿಕ್ಕೂ ನಿಮಗೆ ತಿಳಿಯದು. ಆದುದರಿಂದ ಅದನ್ನು ನೀವು ಮೊದಲು ತಿಳಿದುಕೊಳ್ಳಿರಿ ಎನ್ನಲು,

೮. ನಾರದನ ಮಾತನ್ನು ಕೇಳಿ, ದಕ್ಷನ ಮಕ್ಕಳೆಲ್ಲರೂ ದಿಕ್ಕನ್ನು ತಿಳಿದುಕೊಳ್ಳಲು ಹೊರಟರು. ಆದರೆ ಅವರಿಗೆ ಅದರ ಕೊನೆಯನ್ನು ಮುಟ್ಟಲಾಗಲಿಲ್ಲ. ತಂದೆಯ ಮನೆಗೂ ಅವರು ಹಿಂತಿರುಗಿ ಬರಲಿಲ್ಲ.

ತಜ್ಜ್ಞಾತ್ವಾ ಜನಯಾಮಾಸ ಪುನಃ ಪಂಚಶತಾನ್ಸುತಾನ್ ।
ತಾನುವಾಚ ಪುನಸ್ಸೋಽಪಿ ನಾರದಸ್ಸರ್ವದರ್ಶನಃ ॥ ೯ ॥

॥ ನಾರದ ಉವಾಚ ॥

ಭುವೋ ಮಾನಮಜಾನಂತಃ ಕಥಂ ಸೃಷ್ಟಿಂ ಕರಿಷ್ಯಥ ।
ಸರ್ವೇ ಹಿ ಬಾಲಿಶಾಃ ಕಿಂ ಹಿ ಸೃಷ್ಟಿಂ ಕರ್ತುಂ ಸಮುದ್ಯತಾಃ ॥ ೧೦ ॥

॥ ಸೂತ ಉವಾಚ ॥

ತೇಽಪಿ ತದ್ವಚನಂ ಶ್ರುತ್ವಾ ನಿರ್ಯಾತಾಸ್ಸರ್ವತೋ ದಿಶಂ ।
ಸುಬಲಾಶ್ವಾ ದಕ್ಷಸುತಾ ಹರ್ಯಶ್ವಾ ಇವ ತೇ ಪುರಾ ॥ ೧೧ ॥

ಅನಂತಂ ಪುಷ್ಕರಂ ಪ್ರಾಪ್ಯ ಗತಾಸ್ತೇ ಹಿ ಪರಾಭವಂ ।
ಅದ್ಯಾಪಿ ನ ನಿವರ್ತಂತೇ ಸಮುದ್ರೇಭ್ಯ ಇವಾಪಗಾಃ ॥ ೧೨ ॥

ತದಾ ಪ್ರಭೃತಿ ವೈ ಭ್ರಾತಾ ಭ್ರಾತುರನ್ವೇಷಣೇ ರತಃ ।
ಪ್ರಯಾತೋ ನಶ್ಯತಿ ಮುನೇ ತನ್ನ ಕಾರ್ಯಂ ವಿಪಶ್ಚಿತಾ ॥ ೧೩ ॥

೯. ಅದನ್ನು ತಿಳಿದು ಪುನಃ ದಕ್ಷನು ಐನೂರುಜನ ಪುತ್ರರನ್ನು ಪಡೆದನು. ಪುನಃ ಸರ್ವಜ್ಞನಾದ ನಾರದನು ಅವರನ್ನು ಕುರಿತು ಹೇಳಿದನು.

೧೦. ಭೂಮಿಯ ಪರಿಮಾಣವನ್ನು ತಿಳಿಯದೆ ನೀವು ಹೇಗೆತಾನೇ ಸೃಷ್ಟಿ ಮಾಡುವಿರಿ? ಇನ್ನೂ ನಿಮಗೆ ಹುಡುಗತನ ಬಿಟ್ಟಿಲ್ಲ. ಆದರೂ ಸೃಷ್ಟಿಮಾಡ ಬೇಕೆಂದಿರುವಿರಲ್ಲಾ ಎಂದನು.

೧೧-೧೨. ಸೂತನು ಹೇಳುವನು :—ಅವರೆಲ್ಲರೂ ನಾರದನ ಮಾತನ್ನು ಕೇಳಿ, ದಕ್ಷನ ಹಿಂದಿನ ಮಕ್ಕಳಾದ ಸುಬಲಾಶ್ವ, ಹರ್ಯಶ್ವ ಮುಂತಾದವರಂತೆ ನಾನಾ ದಿಕ್ಕುಗಳಿಗೆ ಹೊರಟುಹೋದರು. ಅನಂತವಾದ ಪುಷ್ಕರವನ್ನು ಹೊಕ್ಕು ಅಲ್ಲಿ ಸೋತುಹೋದರು. ಅವರು ಇಲ್ಲಿಯವರೆಗೂ ಸಮುದ್ರಕ್ಕೆ ಹೋಗಿ ಸೇರಿದ ನದಿಗಳಂತೆ ಹಿಂತಿರುಗಿ ಬರಲೇ ಇಲ್ಲ.

೧೩. ಎಲೈ ಮುನಿಯೇ, ಅಂದು ಮೊದಲು ಮುಂದೆ ಹುಟ್ಟುವ ಅವರ ತಮ್ಮನು ಅವರನ್ನು ಹುಡುಕಲು ಬುದ್ಧಿವಂತನಾದರೆ ಹೋಗಬಾರದು. ಏಕೆಂದರೆ ಅವನು ಆರೀತಿ ಹೋದರೆ ನಾಶವಾಗುತ್ತಾನೆ.

ತಾಂಶ್ಚಾಪಿ ನಷ್ಟಾನ್ವಿಜ್ಞಾಯ ಪುತ್ರಾನ್ದದಕ್ಷಃ ಪ್ರಜಾಪತಿಃ ।
ಸ ಚ ಕ್ರೋಧಾದ್ದದೌ ಶಾಪಂ ನಾರದಾಯ ಮಹಾತ್ಮನೇ ॥ ೧೪ ॥

ಕುತ್ರಚಿನ್ನ ಲಭಸ್ವೇತಿ ಸಂಸ್ಥಿತಿಂ ಕಲಹಪ್ರಿಯ ।
ತವ ಸಾನ್ನಿಧ್ಯತೋ ಲೋಕೇ ಭವೇಚ್ಚ ಕಲಹಸ್ಸದಾ ॥ ೧೫ ॥

ಸಾಂತ್ವಿತೋಽಥ ವಿಧಾತ್ರಾ ಹಿ ಸ ದಕ್ಷಸ್ತು ಪ್ರಜಾಪತಿಃ ।
ಕನ್ಯಾಃ ಷಷ್ಟ್ಯಸೃಜತ್ಪಶ್ಚಾದ್ವೀರಿಣ್ಯಾಮಿತಿ ನಃ ಶ್ರುತಂ ॥ ೧೬ ॥

ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ಸಪ್ತವಿಂಶತಿ ಸೋಮಾಯ ಚತಸ್ರೋಽರಿಷ್ಟನೇಮಿನೇ ॥ ೧೭ ॥

ದ್ವೇ ಚೈವಂ ಬ್ರಹ್ಮಪುತ್ರಾಯ ದ್ವೇ ಚೈವಾಂಗಿರಸೇ ತದಾ ।
ದ್ವೇ ಕೃಶಾಶ್ವಾಯ ವಿದುಷೇ ತಾಸಾಂ ನಾಮಾನಿ ಮೇ ಶೃಣು ॥ ೧೮ ॥

೧೪-೧೫. ಅವರೆಲ್ಲರೂ ನಾಶವಾದದ್ದನ್ನು ಕೇಳಿ, ದಕ್ಷಬ್ರಹ್ಮನು ಬಹು ಕೋಪದಿಂದ ನಾರದನಿಗೆ ಎಲೈ ಕಲಹಪ್ರಿಯನೇ, ನೀನು ಒಂದೇಕಡೆ ಇರದೆ ಸುತ್ತುತ್ತಿರು. ನೀನು ಎಲ್ಲಿ ಹೋಗುವೆಯೋ ಅಲ್ಲಿ ಜಗಳವು ಉಂಟಾಗಲಿ ಎಂದು ಶಾಪವನ್ನು ಕೊಟ್ಟನು.

೧೬. ಅನಂತರ ಬ್ರಹ್ಮನು ದಕ್ಷನನ್ನು ಸಮಾಧಾನಪಡಿಸಲು ಪುನಃ ವೀರಿಣಿಯಲ್ಲಿ ಅರುವತ್ತು ಜನ ಹೆಣ್ಣುಮಕ್ಕಳು ಹುಟ್ಟಿದರೆಂದು ನಾವು ಕೇಳಿರುವೆವು.

೧೭. ಅವರಲ್ಲಿ ಹತ್ತು ಜನರನ್ನು ಧರ್ಮನಿಗೂ, ಹದಿಮೂರು ಜನರನ್ನು ಕಶ್ಯಪನಿಗೂ, ಇಪ್ಪತ್ತೇಳು ಜನರನ್ನು ಚಂದ್ರನಿಗೂ, ನಾಲ್ಕು ಜನರನ್ನು ಅರಿಷ್ಟನೇಮಿ ಎಂಬುವನಿಗೂ ಕೊಟ್ಟನು.

೧೮. ಇಬ್ಬರನ್ನು ಬ್ರಹ್ಮಪುತ್ರನಿಗೂ, ಇಬ್ಬರನ್ನು ಅಂಗಿರಸ್ಸಿಗೂ, ಮತ್ತೆ ಇಬ್ಬರನ್ನು ವಿದ್ವಾಂಸನಾದ ಕೃಶಾಶ್ವನಿಗೂ ಕೊಟ್ಟನು. ಅವರ ಹೆಸರನ್ನು ಹೇಳುವೆನು ಕೇಳು.

ಅರುಂಧತೀ ವಸುರ್ಯಾಮಿರ್ಲಂಬಾ ಭಾನುರ್ಮರುತ್ವತೀ ।
ಸಂಕಲ್ಪಾ ಚ ಮುಹೂರ್ತಾ ಚ ಸಂಧ್ಯಾ ವಿಶ್ವಾ ಚ ವೈ ಮುನೇ ॥ ೧೯ ॥

ಧರ್ಮಪತ್ನ್ಯೋ ಮುನೇ ತ್ವೇತಾಸ್ತಾಸ್ವಪತ್ಯಾನಿ ಮೇ ಶೃಣು ।
ವಿಶ್ವೇದೇವಾಸ್ತು ವಿಶ್ವಾಯಾಸ್ಸಾಧ್ಯಾಸ್ಸಾಂಧ್ಯಾ ವ್ಯಜಾಯತ ॥ ೨೦ ॥

ಮರುತ್ವತ್ಯಾಂ ಮರುತ್ವಂತೋ ವಸೋಸ್ತು ವಸವಸ್ತಥಾ ।
ಭಾನೋಸ್ತು ಭಾನವಸ್ಸರ್ವೇ ಮುಹುರ್ತಾಯಾಂ ಮುಹೂರ್ತಜಾಃ
॥ ೨೧ ॥

ಲಂಬಾಯಾಶ್ಚೈವ ಘೋಷೋಽಥ ನಾಗವೀಥೀ ಚ ಯಾಮಿಜಾ ।
ಪೃಥಿವೀವಿಷಮಸ್ತಸ್ಯಾಮರುಂಧತ್ಯಾಮಜಾಯತ ॥ ೨೨ ॥

ಸಂಕಲ್ಪಾಯಾಸ್ತು ಸತ್ಯಾತ್ಮಾ ಜಜ್ಞೇ ಸಂಕಲ್ಪ ಏವ ಹಿ ।
ಅಯಾದಯೋ ವಸೋಃ ಪುತ್ರಾ ಅಷ್ಟೌ ತಾನ್ ಶೃಣು ಶೌನಕ ॥ ೨೩ ॥

೧೯. ಧರ್ಮನ ಹೆಂಡತಿಯರು ಅರುಂಧತೀ, ವಸು, ಯಾಮಿ, ಲಂಬಾ, ಭಾನು, ಮರುತ್ವತೀ, ಸಂಕಲ್ಪಾ, ಮುಹೂರ್ತಾ, ಸಂಧ್ಯಾ, ವಿಶ್ವಾ ಈ ಹೆಸರಿನವರು.

೨೦. ಇವರಲ್ಲಿ ಹುಟ್ಟಿದ ಮಕ್ಕಳ ಹೆಸರನ್ನು ಕೇಳು. ವಿಶ್ವಾ ಎಂಬುವಳಲ್ಲಿ ವಿಶ್ವೇದೇವತೆಗಳೂ, ಸಂಧ್ಯಾ ಎಂಬುವಳಲ್ಲಿ ಸಾಧ್ಯ ಎಂಬುವರೂ ಹುಟ್ಟಿದರು.

೨೧. ಮರುತ್ವತಿಯಲ್ಲಿ ಮರುತ್ವಂತರೂ, ವಸುವಿನಲ್ಲಿ ವಸುಗಳೂ, ಭಾನುವಿನಲ್ಲಿ ಭಾನವರೂ, ಮುಹೂರ್ತೆಯಲ್ಲಿ ಮುಹೂರ್ತಜರೂ ಹುಟ್ಟಿದರು.

೨೨. ಲಂಬೆಯಲ್ಲಿ ಘೋಷನೂ, ಯಾಮಿಯಲ್ಲಿ ನಾಗವೀಥಿ ಎಂಬುವನೂ, ಅರುಂಧತಿಯಲ್ಲಿ ಪೃಥಿವೀ, ವಿಷಮ ಇವರುಗಳೂ ಹುಟ್ಟಿದರು.

೨೩. ಸಂಕಲ್ಪಾ ಎಂಬುವಳಲ್ಲಿ ಸತ್ಯಾತ್ಮನಾದ ಸಂಕಲ್ಪನೆಂಬುವನು ಹುಟ್ಟಿದನು. ವಸುವಿಗೆ ಅಯನೇ ಮೊದಲಾದ ಎಂಟುಜನ ಪುತ್ರರು ಹುಟ್ಟಿದರು. ಅವರ ಹೆಸರನ್ನು ಹೇಳುವೆನು ಕೇಳು.

ಆಯೋ ಧ್ರುವಶ್ಚ ಸೋಮಶ್ಚ ಧರಶ್ಚೈವಾನಿಲೋಽನಲಃ ।
ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಚ ನಾಮತಃ ॥ ೨೪ ॥

ಆಯುಸ್ಯ ಪುತ್ರೋ ವೈತಂಡಃ ಶ್ರಮಃ ಶಾಂತೋ ಮುನಿಸ್ತಥಾ ।
ಧ್ರುವಸ್ಯ ಪುತ್ರೋ ಭಗವಾನ್ಕಾಲೋ ಲೋಕಪ್ರಭಾವನಃ ॥ ೨೫ ॥

ಸೋಮಸ್ಯ ಭಗವಾನ್ವರ್ಚಾ ವರ್ಚಸ್ವೀ ಯೇನ ಜಾಯತೇ ।
ಧರಸ್ಯ ಪುತ್ರೋ ದ್ರವಿಣೋ ಹುತಹವ್ಯವಹಸ್ತಥಾ ॥ ೨೬ ॥

ಮನೋಹರಾಯಾಶ್ಶಿಶಿರಃ ಪ್ರಾಣೋಽಥ ರಮಣಸ್ತಥಾ ।
ಅನಿಲಸ್ಯ ಶಿವಾ ಭಾರ್ಯಾ ಯಸ್ಯಾಃ ಪುತ್ರಃ ಪುರೋಜವಃ ॥ ೨೭ ॥

ಅವಿಜ್ಞಾತಗತಿಶ್ಚೈವ ದ್ವೌ ಪುತ್ರಾವನಿಲಸ್ಯ ತು ।
ಅಗ್ನಿಪುತ್ರಃ ಕುಮಾರಸ್ತು ಶರಸ್ತಂಬೇ ಶ್ರಿಯಾವೃತೇ ॥ ೨೮ ॥

೨೪. ಆಯು, ಧ್ರುವ, ಸೋಮ, ಧರ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ ಈ ಎಂಟು ಜನರು ವಸುವಿನ ಪುತ್ರರು. ಇವರಿಗೆ ಅಷ್ಟವಸುಗಳೆಂದು ಹೆಸರು.

೨೫. ಆಯುನಿಗೆ ವೈತುಂಡ, ಶ್ರಮ, ಶಾಂತ, ಮುನಿ. ಧ್ರುವನ ಮಗನು ಲೋಕಪ್ರಭಾವಶಾಲಿಯಾದ ಭಗವಾನ್ ಕಾಲನು ಎಂಬ ಮಕ್ಕಳಾದರು.

೨೬. ಸೋಮನಿಗೆ ವರ್ಚನೆಂಬ ಮಗನಾದನು. ಇವನನ್ನು ಉಪಾಸನೆ ಮಾಡಿದವನು ವರ್ಚಸ್ವಿಯಾಗುವನು. ಧರನಿಗೆ ದ್ರವಿಣ ಮತ್ತು ಹುತಹವ್ಯವಹ ಎಂಬುವರು ಮಕ್ಕಳು.

೨೭. ಅನಿಲನಿಗೆ ಮನೋಹರೆ ಎಂಬುವಳಲ್ಲಿ ಶಶಿರ, ಪ್ರಾಣ, ರಮಣ ಎಂಬುವರೂ ಶಿವಾ ಎಂಬುವಳಲ್ಲಿ ಪುರೋಜವನೆಂಬ ಮಗನೂ ಹುಟ್ಟಿದರು.

೨೮. ಅನಲನಿಗೆ ಅವಿಜ್ಞಾತ, ಗತಿ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಅನಲನಿಗೆ ಸಂಪದ್ಯುಕ್ತವಾದ ಶರಸ್ತಂಬದಲ್ಲಿ ಅಗ್ನಿಪುತ್ರನಾದ ಕುಮಾರನೆಂಬ ಮಗನೂ ಹುಟ್ಟಿದನು.

ತಸ್ಯ ಶಾಖೋ ವಿಶಾಖಶ್ಚ ನೈಗಮೇಯಶ್ಚ ಪೃಷ್ಠತಃ ।
ಅಪತ್ಯಂ ಕೃತ್ತಿಕಾನಾಂ ತು ಕಾರ್ತಿಕೇಯ ಇತಿ ಸ್ಮೃತಃ ॥ ೨೯ ॥

ಪ್ರತ್ಯೂಷಸ್ಯ ತ್ವಭೂತ್ಪುತ್ರ ಋಷಿರ್ನಾಮ್ನಾ ತು ದೇವಲಃ ।
ದ್ವೌ ಪುತ್ರೌ ದೇವಲಸ್ಯಾಪಿ ಪ್ರಜಾವಂತೌ ಮನೀಷಿಣೌ ॥ ೩೦ ॥

ಬೃಹಸ್ಪತೇಸ್ತು ಭಗನೀ ವರಸ್ತ್ರೀ ಬ್ರಹ್ಮಚಾರಿಣೀ ।
ಯೋಗಸಿದ್ಧಾ ಜಗತ್ಕೃತ್ಸ್ನಂ ಸಮಂತಾದ್ವ್ಯಚರತ್ತದಾ ॥ ೩೧ ॥

ಪ್ರಭಾಸಸ್ಯ ತು ಸಾ ಭಾರ್ಯಾ ವಸೂನಾಮಷ್ಟಮಸ್ಯ ಚ ।
ವಿಶ್ವಕರ್ಮಾ ಮಹಾಭಾಗ ತಸ್ಯ ಜಜ್ಞೇ ಪ್ರಜಾಪತಿಃ ॥ ೩೨ ॥

ಕರ್ತಾ ಶಿಲ್ಪಸಹಸ್ರಾಣಾಂ ತ್ರಿದಶಾನಾಂ ಚ ವಾರ್ಧಕಿಃ ।
ಭೂಷಣಾನಾಂ ಚ ಸರ್ವೇಷಾಂ ಕರ್ತಾ ಶಿಲ್ಪವತಾಂ ವರಃ ॥ ೩೩ ॥

---

೨೯. ಅವನಿಗೆ ಶಾಖ, ವಿಶಾಖ, ನೈಗಮೇಯ ಎಂಬುವರು ಮಕ್ಕಳು. ಕೃತ್ತಿಕೆಯರಲ್ಲಿ ಕಾರ್ತಿಕೇಯನೆಂಬ ಮಗನು ಹುಟ್ಟಿದನು.

೩೦. ಪ್ರತ್ಯೂಷನಿಗೆ ದೇವಲನೆಂಬ ಋಷಿಯು ಹುಟ್ಟಿದನು. ಆ ದೇವಲನಿಗೆ ಪುತ್ರವಂತರೂ, ಬುದ್ಧಿವಂತರೂ ಆದ ಇಬ್ಬರು ಮಕ್ಕಳು ಹುಟ್ಟಿದರು.

೩೧. ಬೃಹಸ್ಪತಿಯ ತಂಗಿಯೂ, ಶ್ರೇಷ್ಠಸ್ತ್ರೀಯೂ, ಬ್ರಹ್ಮಚಾರಿಣಿಯೂ ಆದ ಯೋಗಸಿದ್ಧಾ ಎಂಬುವಳು ಪ್ರಪಂಚವನ್ನೆಲ್ಲಾ ಸುತ್ತುತ್ತಿದ್ದಳು.

೩೨. ಅವಳು ಪ್ರಭಾಸನಿಗೂ; ಅಷ್ಟವಸುಗಳಿಗೂ ಹೆಂಡತಿಯಾದಳು. ಅವಳಲ್ಲಿ ವಿಶ್ವಕರ್ಮಬ್ರಹ್ಮನು ಹುಟ್ಟಿದನು.

೩೩. ಅವನು ಶಿಲ್ಪಶಾಸ್ತ್ರದಲ್ಲಿ ಚತುರನೂ, ಮರಗೆಲಸದಲ್ಲಿ ನಿಪುಣನೂ, ಭೂಷಣಾದಿಗಳನ್ನು ನಿರ್ಮಿಸುವುದರಲ್ಲಿ ಕುಶಲನೂ ಆಗಿ ದೇವತೆಗಳ ಶಿಲ್ಪಿಶ್ರೇಷ್ಠ ನೆನಿಸಿಕೊಂಡನು.

ಯಸ್ಸರ್ವಾಸಾಂ ವಿಮಾನಾನಿ ದೇವತಾನಾಂ ಚಕಾರ ಹ ।
ಮನುಷ್ಯಾಶ್ಚೋಪಜೀವಂತಿ ಯಸ್ಯ ಶಿಲ್ಪಂ ಮಹಾತ್ಮನಃ ॥ ೩೪ ॥

॥ ಮತಾಂತರಮಾಹ ॥

ರೈವತೋಽಜೋ ಭವೋ ಭೀಮೋ ವಾಮ ಉಗ್ರೋ ವೃಷಾಕಪಿಃ ।
ಅಜೈಕಪಾದಹಿರ್ಬುಧ್ನ್ಯೋ ಬಹುರೂಪೋ ಮಹಾನಿತಿ ॥ ೩೫ ॥

ಸುರೂಪಾ ಯಾಸ್ಪ್ರಸೂತಾಸ್ಯ ಭಾರ್ಯಾ ರುದ್ರಾಂಶ್ಚ ಕೋಟಿಶಃ ।
ತತ್ರೈಕಾದಶಮುಖ್ಯಾಂಸ್ತು ತನ್ನಾಮಾನಿ ಮುನೇ ಶೃಣು ॥ ೩೬ ॥

ಅಜೈಕಪಾದಹಿರ್ಬುಧ್ನ್ಯಸ್ತ್ವಷ್ಟಾ ರುದ್ರಶ್ಚ ವೀರ್ಯವಾನ್ ।
ಹರಶ್ಚ ಬಹುರೂಪಶ್ಚ ತ್ರ್ಯಂಬಕಶ್ಚಾಪರಾಜಿತಃ ॥ ೩೭ ॥

ವೃಷಾಕಪಿಶ್ಚ ಶಂಭುಶ್ಚ ಕಪರ್ದೀ ರೈವತಸ್ತಥಾ ।
ಏಕಾದಶೈತೇ ಕಥಿತಾ ರುದ್ರಾಸ್ತ್ರಿಭುವನೇಶ್ವರಾಃ ॥ ೩೮ ॥

೩೪. ಆ ವಿಶ್ವಕರ್ಮನು ದೇವತೆಗಳ ವಿಮಾನವನ್ನು ನಿರ್ಮಿಸಿದನು. ಅವನು ನಿರ್ಮಿಸಿದ ಶಿಲ್ಪವಿದ್ಯೆಯನ್ನು ಕಲಿತು ಎಷ್ಟೋ ಜನರು ಜೀವಿಸುವರು.

೩೫. ಮತ್ತೆ ಕೆಲವರ ಅಭಿಪ್ರಾಯವು ಈರೀತಿ ಇದೆ:—ಆ ಯೋಗಸಿದ್ಧಳಿಗೆ ರೈವತ, ಅಜ, ಭವ, ಭೀಮ, ವಾಮ, ಉಗ್ರ, ವೃಷಾಕಪಿ, ಅಜೈಕಪಾತ್, ಅಹಿರ್ಬುಧ್ನ್ಯ, ಬಹುರೂಪ, ಮಹಾನ್ ಎಂಬುವರು ಹುಟ್ಟಿದರೆಂದು.

೩೬. ಸುರೂಪಾ ಎಂಬುವಳಲ್ಲಿ ಕೋಟಿರುದ್ರರು ಹುಟ್ಟಿದರು. ಅವರಲ್ಲಿ ಹನ್ನೊಂದುಜನ ಮುಖ್ಯರಾದವರು ಅವರ ಹೆಸರುಗಳನ್ನು ಹೇಳುವೆನು ಕೇಳು.

೩೭-೩೮. ಅಜೈಕಪಾತ್, ಅಹಿರ್ಬುಧ್ನ್ಯ, ತ್ವಷ್ಟಾ, ಹರ, ಬಹುರೂಪ, ತ್ರ್ಯಬಂಕ, ಅಪರಾಜಿತ, ವೃಷಾಕಪಿ, ಶಂಭು, ಕಪರ್ದಿ, ರೈವತ ಇವರೇ ತ್ರಿಭುವನಾಧಿಪತಿಗಳಾದ ಏಕಾದಶರುದ್ರರು.

ಶತಂ ತ್ವೇವಂ ಸಮಾಖ್ಯಾತಂ ರುದ್ರಾಣಾಮಮಿತೌಜಸಂ ।
ಶೃಣು ಕಶ್ಯಪಪತ್ನೀನಾಂ ನಾಮಾನಿ ಮುನಿಸತ್ತಮ ॥ ೩೯ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಸರ್ಗವರ್ಣನಂ ನಾಮೈಕತ್ರಿಂಶೋಽಧ್ಯಾಯಃ



೩೯. ಈರೀತಿಯಾಗಿ ರುದ್ರರ ನೂರುಜನ ಪರಾಕ್ರಮಿಗಳಾದ ಪುತ್ರರನ್ನು ಹೇಳಿದೆನು. ಇನ್ನು ಕಶ್ಯಪನ ಪತ್ನಿಯರ ಹೆಸರನ್ನು ಹೇಳುವೆನು ಕೇಳು.

ಇಲ್ಲಿಗೆ ಶ್ರೀ ಶಿವಪುರಾಣದ ಉಮಾಸಂಹಿತೆಯಲ್ಲಿ ಸರ್ಗವರ್ಣನವೆಂಬ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ದ್ವಾತ್ರಿಂಶೋಽಧ್ಯಾಯಃ

**॥ ಸೂತ ಉವಾಚ ॥**

**ಅದಿತಿರ್ದಿತಿಶ್ಚ ಸುರಸಾರಿಷ್ಟೇಲಾ ದನುರೇವ ಚ ।**
**ಸುರಭಿರ್ವನಿತಾ ಚೇಲಾ ತಾಮ್ರಾ ಕ್ರೋಧವಶಾ ತಥಾ ॥ ೧ ॥**

**ಕದ್ರೂರ್ಮುನಿಶ್ಚ ವಿಪೇಂದ್ರ ತಾಸ್ವಪತ್ಯಾನಿ ಮೇ ಶೃಣು ।**
**ಪೂರ್ವಮನ್ವಂತರೇ ಶ್ರೇಷ್ಠೇ ದ್ವಾದಶಾಸನ್ಸುರೋತ್ತಮಾಃ ॥ ೨ ॥**

**ತುಷಿತಾ ನಾಮ ತೇಽನ್ಯೋನ್ಯಮೂಚುರ್ವೈವಸ್ವತೇಂತರೇ ।**
**ಉಪಸ್ಥಿತೇ ಸುಯಶಸಶ್ಚಾಕ್ಷುಷಸ್ಯಾಂತರೇ ಮನೋಃ ॥ ೩ ॥**

## ಮೂವತ್ತೆರಡನೆಯ ಅಧ್ಯಾಯವು

೧. ಕಶ್ಯಪನಿಗೆ ಅದಿತಿ, ದಿತಿ, ಸುರಸಾ, ಅರಿಷ್ಟೇಲಾ, ದನು, ಸುರಭಿ, ವನಿತಾ, ಇಲಾ, ತಾಮ್ರಾ, ಕ್ರೋಧವಶಾ, ಕದ್ರು, ಮುನಿ ಎಂಬ ಹೆಸರಿನ ಪತ್ನಿಯರಿದ್ದರು. ಅವರ ಮಕ್ಕಳ ಹೆಸರನ್ನು ಹೇಳುವೆನು ಕೇಳು.

೨—೫. ಹಿಂದಿನ ವೈವಸ್ವತಮನ್ವಂತರದಲ್ಲಿ ತುಷಿತರೆಂದು ಪ್ರಸಿದ್ಧರಾದ ಹನ್ನೆರಡುಜನಗಳು ಇದ್ದರು. ಸರ್ವಲೋಕಗಳಿಗೂ ಹಿತವಾಗುವುದಕ್ಕೋಸ್ಕರವಾಗಿ ಪರಸ್ಪರವಾಗಿ ಸಮಾಲೋಚನೆ ಮಾಡಿದರು. ಎಲೈ ಸಹೋದರರೇ, ಮುಂದೆ

ಹಿತಾಯ ಸರ್ವಲೋಕಾನಾಂ ಸಮಾಗಮ್ಯ ಪರಸ್ಪರಂ ।
ಆಗಚ್ಛತಸ್ತು ತಾನೂಚುರದಿತಿಂ ಚ ಪ್ರವಿಶ್ಯ ವೈ ॥ ೪ ॥

ಮನ್ವಂತರೇ ಪ್ರಸೂಯಾಮಸ್ಸತಾಂ ಶ್ರೇಯೋ ಭವಿಷ್ಯತಿ ।
ಏವಮುಕ್ತಾಸ್ತು ತೇ ಸರ್ವೇ ಚಾಕ್ಷುಷಸ್ಯಾಂತರೇ ಮನೋಃ ॥ ೫ ॥

ಮಾರೀಚಾತ್ಕಶ್ಯಪಾಜ್ಜಾತಾಸ್ತೇಽದಿತ್ಯಾಂ ದಕ್ಷಕನ್ಯಯಾ ।
ತತ್ರ ವಿಷ್ಣುಶ್ಚ ಶಕ್ರಶ್ಚ ಜಜ್ಞಾತೇ ಪುನರೇವ ಹಿ ॥ ೬ ॥

ಅರ್ಯಮಾ ಚೈವ ಧಾತಾ ಚ ತ್ವಷ್ಟಾ ಪೂಷಾ ತಥೈವ ಚ ।
ವಿವಸ್ವಾನ್ಸವಿತಾ ಚೈವ ಮಿತ್ರಾವರುಣ ಏವ ಚ ॥ ೭ ॥

ಅಂಶೋ ಭಗಶ್ಚಾತಿತೇಜಾ ಆದಿತ್ಯಾ ದ್ವಾದಶ ಸ್ಮೃತಾಃ ।
ಚಾಕ್ಷುಷಸ್ಯಾಂತರೇ ಪೂರ್ವಮಾಸನ್ಯೇ ತುಷಿತಾಸ್ಸುರಾಃ ॥ ೮ ॥

ಪುರೈವ ತಸ್ಯಾಂತರೇ ತು ಆದಿತ್ಯಾ ದ್ವಾದಶ ಸ್ಮೃತಾಃ ।
ಇತಿ ಪ್ರೋಕ್ತಾನಿ ಕ್ರಮಶೋಽದಿತ್ಯಪತ್ಯಾನಿ ಶೌನಕ ॥ ೯ ॥

ಸಪ್ತವಿಂಶತಿ ಯಾಃ ಪ್ರೋಕ್ತಾಸ್ಸೋಮಪತ್ನ್ಯೋಽಥ ಸುವ್ರತಾಃ ।
ತಾಸಾಮಪತ್ಯಾನ್ಯಭವನ್ ದೀಪ್ತಯೋಽಮಿತತೇಜಸಃ ॥ ೧೦ ॥

---

ಚಾಕ್ಷುಷಮನ್ವಂತರವು ಬರುವುದು. ಅವರಲ್ಲಿ ನಾವೆಲ್ಲರೂ ಅದಿತಿದೇವಿಯನ್ನು ಸೇರಿ ಜನ್ಮವೆತ್ತೋಣ. ಆದರಿಂದ ನಮಗೆ ತುಂಬಾ ಶ್ರೇಯಸ್ಸಾಗುವುದು.

೬—೮. ಹೀಗೆ ಯೋಚಿಸಿಕೊಂಡು ಆ ತುಷಿತರೆಂಬ ದೇವತೆಗಳೆಲ್ಲರೂ ಚಾಕ್ಷುಷಮನ್ವಂತರಲ್ಲಿ ಮರೀಚಿಬ್ರಹ್ಮನ ಮಗನಾದ ಕಶ್ಯಪನಿಂದ ದಕ್ಷಪುತ್ರಿಯಾದ ಅದಿತಿದೇವಿಯಲ್ಲಿ ಮತ್ತೆ ಜನಿಸಿ ವಿಷ್ಣು, ಇಂದ್ರ, ಅರ್ಯಮಾ, ಧಾತಾ, ತ್ವಷ್ಟಾ, ಪೂಷಾ, ವಿವಸ್ವಾನ್, ಸವಿತಾ, ಮಿತ್ರಾವರುಣ, ಅಂಶ, ಭಗ, ಅತಿತೇಜಾ ಎಂಬ ಹನ್ನೆರಡುಜನ ಆದಿತ್ಯರಾದರು.

೯-೧೦. ಎಲೈ ಶೌನಕನೇ, ಈರೀತಿಯಾಗಿ ಕಶ್ಯಪನ ಮಕ್ಕಳನ್ನು ಕ್ರಮವಾಗಿ ಹೇಳಿದೆನು. ಚಂದ್ರನಿಗೆ ಇಪ್ಪತ್ತೇಳುಜನ ಪತ್ನಿಯರಿದ್ದರೆಂದು ಹಿಂದೆ ಹೇಳಿದೆನಷ್ಟೆ. ಅವರಲ್ಲಿ ಅತ್ಯಂತ ತೇಜಸ್ವಿಗಳಾದ ಅನೇಕ ಮಕ್ಕಳು ಹುಟ್ಟಿದರು.

ಅರಿಷ್ಟನೇಮಿಪತ್ನಿ ನಾಮುಪತ್ಯಾನೀಹ ಷೋಡಶ ।
ಬಹುಪುತ್ರಸ್ಯ ವಿದುಷಶ್ಚತಸ್ರೋ ಯಾಸ್ಸುತಾಃ ಸ್ಮೃತಾಃ ॥ ೧೧ ॥

ಕೃಶಾಶ್ವಸ್ಯ ತು ದೇವರ್ಷೇ ದೇವಪ್ರಹರಣಾಃ ಸ್ಮೃತಾಃ ।
ಭಾರ್ಯಾಯಾಮರ್ಚಿಷಿ ಮುನೇ ಧೂಮ್ರಕೇಶಸ್ತಥೈವ ಚ ॥ ೧೨ ॥

ಸ್ವಧಾ ಸತೀ ಚ ದ್ವೌ ಪತ್ನ್ಯೌ ಸ್ವಧಾ ಜ್ಯೇಷ್ಠಾ ಸತೀ ಪರಾ ।
ಸ್ವಧಾಸೂತ ಪಿತ್ರ್ಯಾನ್ ವೇದಮಥರ್ವಾಂಗಿರಸಂ ಸತೀ ॥ ೧೩ ॥

ಏತೇ ಯುಗಸಹಸ್ರಾಂತೇ ಜಾಯಂತೇ ಪುನರೇವ ಹಿ ।
ಸರ್ವದೇವನಿಕಾಯಾಶ್ಚ ತ್ರಯಸ್ತ್ರಿಂಶಸ್ತು ಕಾಮಜಾಃ ॥ ೧೪ ॥

ಯಥಾ ಸೂರ್ಯಸ್ಯ ನಿತ್ಯಂ ಹಿ ಉದಯಾಸ್ತಮಯಾವಿಹ ।
ಏವಂ ದೇವನಿಕಾಯಾಸ್ತೇ ಸಂಭವಂತಿ ಯುಗೇ ಯುಗೇ ॥ ೧೫ ॥

೧೧. ಅರಿಷ್ಟನೇಮಿಯ ಪತ್ನಿಯಲ್ಲಿ ಹದಿನಾರುಜನ ಮಕ್ಕಳಾದರು. ವಿದ್ವಾಂಸನಾದ ಬಹುಪುತ್ರನೆಂಬುವನಿಗೆ ನಾಲ್ಕುಜನ ಮಕ್ಕಳಾದರು.

೧೨. ಎಲೈ ದೇವಋಷಿಯೇ, ಕೃಶಾಶ್ವನಿಗೆ ದೇವಪ್ರಹರಣಾ ಎಂಬ ಮಕ್ಕಳಾದರು. ಅರ್ಚಿ ಎಂಬ ಹೆಂಡತಿಯಲ್ಲಿ ಧೂಮ್ರಕೇಶನೆಂಬ ಮಗನಾದನು.

೧೩. ಸ್ವಧಾ, ಸತೀ ಎಂಬ ಇಬ್ಬರು ಹೆಂಡತಿಯರಿದ್ದರು. ಅವರಲ್ಲಿ ಸ್ವಧಾ ಹಿರಿಯುವಳು. ಸತೀ ಕಿರಿಯುವಳು. ಸ್ವಧಾಗೆ ಪಿತೃಗಳೂ, ವೇದಗಳೂ ಹುಟ್ಟಿದರು. ಸತಿಯು ಅಥರ್ವನನ್ನೂ, ಅಂಗಿರಸ್ಸನ್ನೂ ಪಡೆದಳು.

೧೪. ಇವರೆಲ್ಲರೂ ಸಹಸ್ರಯುಗಗಳ ಕೊನೆಯಲ್ಲಿ ಪುನಃ ಹುಟ್ಟುವರು. ಕಾಮದಿಂದ ಹುಟ್ಟಿರತಕ್ಕ ಮೂವತ್ತುಮೂರುಜನ ದೇವನಿಕಾಯಾ ಎಂಬುವರೂ ಹುಟ್ಟುವರು.

೧೫. ಸೂರ್ಯನಿಗೆ ಉದಯಾಸ್ತಮಯಗಳು ನಿತ್ಯವೂ ಆಗುವಂತೆ ಈ ದೇವನಿಕಾಯಾ ಎಂಬ ದೇವತೆಗಳು ಪ್ರತಿಯುಗದಲ್ಲಿಯೂ ಹುಟ್ಟುವರು.

ದಿತ್ಯಾ ಬಭೂವತುಃ ಪುತ್ರೌ ಕಶ್ಯಪಾದಿತಿ ನಃ ಶ್ರುತಂ ।
ಹಿರಣ್ಯಕಶಿಪುಶ್ಚೈವ ಹಿರಣ್ಯಾಕ್ಷಶ್ಚ ವೀರ್ಯವಾನ್ ॥ ೧೬ ॥

ಸಿಂಹಿಕಾ ಹ್ಯಭವತ್ಕನ್ಯಾ ವಿಪ್ರಚಿತ್ತೇಃ ಪರಿಗ್ರಹಃ ।
ಹಿರಣ್ಯಕಶಿಪೋಃ ಪುತ್ರಾಶ್ಚತ್ವಾರಃ ಪ್ರಥಿತೌಜಸಃ ೧೭

ಅನುಹ್ಲಾದಶ್ಚ ಹ್ಲಾದಶ್ಚ ಸಂಹ್ಲಾದಶ್ಚೈವ ವೀರ್ಯವಾನ್ ।
ಪ್ರಹ್ಲಾದಶ್ಚಾನುಜಸ್ತತ್ರ ವಿಷ್ಣುಭಕ್ತಿವಿಚಾರಧೀಃ ॥ ೧೮ ॥

ಅನುಹ್ಲಾದಸ್ಯ ಸೂರ್ಯಾಯಾಂ ಪುಲೋಮಾ ಮಹಿಷಸ್ತಥಾ ।
ಹ್ಲಾದಸ್ಯ ಧಮನಿರ್ಭಾರ್ಯಾಸೂತ ವಾತಾಪಿಮಿಲ್ವಲಂ । ॥ ೧೯ ॥

ಸಂಹ್ಲಾದಸ್ಯ ಕೃತಿರ್ಭಾರ್ಯಾಸೂತ ಪಂಚಜನಂ ತತಃ ।
ವಿರೋಚನಸ್ತು ಪ್ರಾಹ್ಲಾದಿರ್ದೇವ್ಯಾ ತಸ್ಯಾಭವದ್ಬಲಿಃ ॥ ೨೦ ॥

೧೬. ಕಶ್ಯಪನಿಂದ ದಿತಿಯಲ್ಲಿ ಹಿರಣ್ಯಾಕ್ಷ, ಹಿರಣ್ಯಕಶಿಪು ಎಂಬ ಇಬ್ಬರು ಪರಾಕ್ರಮಿಗಳಾದ ಪುತ್ರರೂ, ಸಿಂಹಿಕೆಯೆಂಬ ಮಗಳೂ ಜನಿಸಿದರು. ಆ ಸಿಂಹಿಕೆಯು ವಿಪ್ರಚಿತ್ತಿ ಎಂಬುವನನ್ನು ಮದುವೆಯಾಗಿದ್ದಳು.

೧೭-೧೮. ಹಿರಣ್ಯಕಶಿಪುವಿಗೆ ಅನುಹ್ಲಾದ, ಹ್ಲಾದ, ಸಂಹ್ಲಾದ, ಪ್ರಹ್ಲಾದ, ಎಂಬ ನಾಲ್ಕುಜನ ಮಕ್ಕಳಿದ್ದರು. ಎಲ್ಲರೂ ಪರಾಕ್ರಮಿಗಳಾಗಿದ್ದರು. ಅವರಲ್ಲಿ ಪ್ರಹ್ಲಾದನು ಕಿರಿಯವನು. ಅವನು ವಿಷ್ಣುಭಕ್ತನಾಗಿದ್ದನು.

೧೯. ಅನುಹ್ಲಾದನಿಗೆ ಸೂರ್ಯಾ ಎಂಬ ಹೆಂಡತಿಯಲ್ಲಿ ಪುಲೋಮ, ಮಹಿಷ ಎಂಬಿಬ್ಬರು ಮಕ್ಕಳಾದರು. ಹ್ಲಾದನಿಗೆ ಧಮನಿ ಎಂಬ ಹೆಂಡತಿಯಲ್ಲಿ ವಾತಾಪಿ, ಇಲ್ವಲ ಎಂಬ ಇಬ್ಬರು ಮಕ್ಕಳಾದರು.

೨೦. ಸಂಹ್ಲಾದನಿಗೆ ಕೃತಿ ಎಂಬ ಹೆಂಡತಿಯಲ್ಲಿ ಐದುಜನ ಮಕ್ಕಳಾದರು. ಪ್ರಹ್ಲಾದನ ಮಗನು ವಿರೋಚನನು. ವಿರೋಚನನ ಪಟ್ಟಮಹಿಷಿಯಲ್ಲಿ ಬಲಿಯು ಹುಟ್ಟಿದನು.

ಬಲೇಃ ಪುತ್ರಶತಂ ತ್ವಾಸೀದಶನಾಯಾಂ ಮುನೀಶ್ವರ ।
ಬಲಿರಾಸೀನ್ಮಹಾಶೈವಃ ಶಿವಭಕ್ತಿಪರಾಯಣಃ ॥ ೨೦ ॥

ದಾನಶೀಲ ಉದಾರಶ್ಚ ಪುಣ್ಯಕೀರ್ತಿಸ್ತಪಾಃ ಸ್ಮೃತಃ ।
ತತ್ಪುತ್ರೋ ಬಾಣನಾಮಾ ಯಸ್ಸೋಽಪಿ ಶೈವವರಸ್ಸುಧೀಃ ।
ಯಸ್ಸಂತೋಷ್ಯ ಶಿವಂ ಸಮ್ಯಗ್ಗಾಣಪತ್ಯಮವಾಪ ಹ ॥ ೨೨ ॥

ಸಾ ಕಥಾ ಶ್ರುತಪೂರ್ವಾ ತೇ ಬಾಣಸ್ಯ ಹಿ ಮಹಾತ್ಮನಃ ।
ಕೃಷ್ಣಂ ಯಸ್ಸಮರೇ ವೀರಸ್ಸುಪ್ರಸನ್ನಂ ಚಕಾರ ಹ ॥ ೨೩ ॥

ಹಿರಣ್ಯಾಕ್ಷಸುತಾಃ ಪಂಚ ಪಂಡಿತಾಸ್ಸುಮಹಾಬಲಾಃ ।
ಕುಕ್ಕುರಃ ಶಕುನಿಶ್ಚೈವ ಭೂತಸಂತಾಪನಸ್ತಥಾ ॥ ೨೪ ॥

ಮಹಾನಾದಶ್ಚ ವಿಕ್ರಾಂತಃ ಕಾಲನಾಭಸ್ತಥೈವ ಚ ।
ಇತ್ಯುಕ್ತಾ ದಿತಿಪುತ್ರಾಶ್ಚ ದನೋಃ ಪುತ್ರಾನ್ಮುನೇ ಶೃಣು ॥ ೨೫ ॥

೨೧. ಆ ಬಲಿಗೆ ಅಶನಾ ಎಂಬ ಪತ್ನಿಯಲ್ಲಿ ನೂರುಜನ ಮಕ್ಕಳಾದರು. ಬಲಿಯು ಮಹಾಶೈವನು. ಶಿವಭಕ್ತಿಪರಾಯಣನು. ದಾನಶೀಲನು. ಉದಾರನು. ಪುಣ್ಯಕೀರ್ತಿಯೂ ಆಗಿದ್ದನು.

೨೨. ಆ ಬಲಿಯ ಮಗನು ಬಾಣನು. ಅವನೂ ಕೂಡ ಶಿವಭಕ್ತಿಯುಳ್ಳ ಶೈವಶ್ರೇಷ್ಠನು. ಅವನು ಭಕ್ತಿಯಿಂದ ಶಿವನನ್ನು ಸಂತುಷ್ಟಿಪಡಿಸಿ ಶಿವನ ಗಣಗಳಲ್ಲಿ ಒಬ್ಬನಾಗಿ ಗಣಗಳಿಗೆ ಅಧಿಪತಿಯಾದನು.

೨೩. ಎಲೈ ಮುನಿಯೇ, ಮಹಾತ್ಮನಾದ ಬಾಣನ ಚರಿತ್ರೆಯನ್ನು ನೀನು ಹಿಂದೆಯೇ ಕೇಳಿರುವೆ. ಅವನು ಯುದ್ಧದಲ್ಲಿ ಕೃಷ್ಣನನ್ನು ಯುದ್ಧಕೌಶಲದಿಂದ ಪ್ರಸನ್ನನಾಗಿ ಮಾಡಿಕೊಂಡ ವಿಷಯವು ಆಶ್ಚರ್ಯವಾದ ಸಂಗತಿಯು.

೨೪-೨೫. ಹಿರಣ್ಯಾಕ್ಷನಿಗೆ ಪಂಡಿತರೂ, ಪರಾಕ್ರಮಿಗಳೂ ಆದ ಕುಕ್ಕುರ, ಶಕುನಿ, ಭೂತಸಂತಾಪನ, ಮಹಾನಾದ, (ವಿಕ್ರಾಂತ) ಕಾಲನಾಭರೆಂಬ ಐದುಜನ ಮಕ್ಕಳಿದ್ದರು. ಇವರೆಲ್ಲರೂ ದಿತಿಯ ಮಕ್ಕಳು. ಇನ್ನು ದನುವಿನ ಮಕ್ಕಳ ಹೆಸರನ್ನು ಹೇಳುವೆನು ಕೇಳು.

ಅಭವನ್ದನುಪುತ್ರಾಶ್ಚ ಶತಂ ತೀವ್ರಪರಾಕ್ರಮಾಃ ।
ಅಯೋಮುಖಶ್ಶಂಬರಶ್ಚ ಕಪೋಲೋ ವಾಮನಸ್ತಥಾ ॥ ೨೬ ॥

ವೈಶ್ವಾನರಃ ಪುಲೋಮಾ ಚ ವಿದ್ರಾವಣಮಹಾಶಿರೌ ।
ಸ್ವರ್ಭಾನುರ್ವೃಷಪರ್ವಾ ಚ ವಿಪ್ರಚಿತ್ತಿಶ್ಚ ವೀರ್ಯವಾನ್ ॥ ೨೭ ॥

ಏತೇ ಸರ್ವೇ ದನೋಃ ಪುತ್ರಾಃ ಕಶ್ಯಪಾದನುಜಜ್ಞಿರೇ ।
ಏಷಾಂ ಪುತ್ರಾನ್ ಶೃಣು ಮುನೇ ಪ್ರಸಂಗಾದ್ವಚ್ಮಿ ತೇಽನಘ ॥ ೨೮ ॥

ಸ್ವರ್ಭಾನೋಸ್ತು ಪ್ರಭಾ ಕನ್ಯಾ ಪುಲೋಮ್ನಸ್ತು ಶಚೀ ಸುತಾ ।
ಉಪದಾನವೀ ಹಯಶಿರಾ ಶರ್ಮಿಷ್ಠಾ ವಾರ್ಷಪರ್ವಣೀ ॥ ೨೯ ॥

ಪುಲೋಮಾ ಪುಲೋಮಿಕಾ ಚೈವ ವೈಶ್ವಾನರಸುತೇ ಉಭೇ ।
ಬಹ್ವಪತ್ಯೇ ಮಹಾವೀರ್ಯೇ ಮಾರೀಚೇಸ್ತು ಪರಿಗ್ರಹಃ ॥ ೩೦ ॥

ತಯೋಃ ಪುತ್ರಸಹಸ್ರಾಣಿ ಷಷ್ಟಿರ್ದಾನವನಂದನಾಃ ।
ಮರೀಚೇರ್ಜನಯಾಮಾಸ ಮಹತಾ ತಪಸಾನ್ವಿತಃ ॥ ೩೧ ॥

೨೬-೨೭. ದನುವಿಗೆ ತೀವ್ರಪ್ರಕಾಕ್ರಮಿಗಳಾದ ನೂರುಜನ ಮಕ್ಕಳಾದರು. ಅಯೋಮುಖ, ಶಂಬರ, ಕಪೋಲ, ವಾಮನ, ವೈಶ್ವಾನರ, ಪುಲೋಮ, ವಿದ್ರಾವಣ, ಮಹಾಶಿರಸ್ಸು, ಸ್ವರ್ಭಾನು, ವೃಷಪರ್ವಾ, ವಿಪ್ರಚಿತ್ತಿ ಇವರೆಲ್ಲರೂ ಕಶ್ಯಪನಿಂದ ದನುವಿನಲ್ಲಿ ಹುಟ್ಟಿದ ಮಕ್ಕಳು.

೨೮-೩೦. ಎಲೈ ಮುನಿಯೇ, ಪ್ರಾಸಂಗಿಕವಾಗಿ ಇವರ ಮಕ್ಕಳ ಹೆಸರನ್ನು ಹೇಳುವೆನು ಕೇಳು. ಸ್ವರ್ಭಾನುವಿನ ಮಗಳು ಪ್ರಭಾ, ಪುಲೋಮ್ನಿಯ ಮಗಳು ಶಚೀ. ಉಪದಾನವೀ, ಹಯಶಿರಾ, ಶರ್ಮಿಷ್ಠರಿ ಇವರು ವೃಷಪರ್ವನ ಹೆಣ್ಣು ಮಕ್ಕಳು. ಪುಲೋಮಾ, ಪುಲೋಮಿಕಾ ಇವರಿಬ್ಬರು ವೈಶ್ವಾನರ ಮಕ್ಕಳು. ಹೆಚ್ಚು ಪುತ್ರರನ್ನುಳ್ಳ ಮಹಾವೀರ್ಯರಾದ ಇವರಿಬ್ಬರು ಕಶ್ಯಪನ ಹೆಂಡತಿಯರು.

೩೧. ಮಹಾತಪಸ್ವಿಯಾದ ಮರೀಚಿಗೆ ಆ ಇಬ್ಬರು ಹೆಂಡತಿಯರಲ್ಲಿ ಅರವತ್ತು ಸಹಸ್ರ ದಾನವಪುತ್ರರನ್ನು ಪಡೆದನು.

ಪೌಲೋಮಾಃ ಕಾಲಖಂಜಾಶ್ಚ ದಾನವಾನಾಂ ಮಹಾಬಲಾಃ ।
ಅವಧ್ಯಾ ದೇವತಾನಾಂ ಚ ಹಿರಣ್ಯಪುರವಾಸಿನಃ ॥ ೩೨ ॥

ಪಿತಾಮಹಪ್ರಸಾದೇನ ಯೇ ಹತಾಃ ಸವ್ಯಸಾಚಿನಾ ।
ಸಿಂಹಿಕಾಯಾಮಥೋತ್ಪನ್ನಾ ವಿಪ್ರಚಿತ್ತೇಸ್ಸುತಾಸ್ತಥಾ ॥ ೩೩ ॥

ದೈತ್ಯದಾನವಸಂಯೋಗಾದ್ಯಾತಾಸ್ತೀವ್ರಪರಾಕ್ರಮಾಃ ।
ಸೈಂಹಿಕೇಯಾ ಇತಿ ಖ್ಯಾತಾಸ್ತ್ರಯೋದಶ ಮಹಾಬಲಾಃ ॥ ೩೪ ॥

ರಾಹುಃ ಶಲ್ಯಃ ಸುಬಲಿನೋ ಬಲಶ್ಚೈವ ಮಹಾಬಲಃ ।
ವಾತಾಪಿರ್ನಮುಚಿಶ್ಚೈವಾಥೇಲ್ವಲಃ ಸ್ವಸೃಪಸ್ತಥಾ ॥ ೩೫ ॥

ಅಜಿಕೋ ನರಕಶ್ಚೈವ ಕಾಲನಾಭಸ್ತಥೈವ ಚ ।
ಶರಮಾಣಶ್ಶರಕಲ್ಪ ಏತೇ ವಂಶವಿವರ್ಧನಾಃ ॥ ೩೬ ॥

ಏಷಾಂ ಪುತ್ರಾಶ್ಚ ಪೌತ್ರಾಶ್ಚ ದನುವಂಶವಿವರ್ಧನಾಃ ।
ಬಹವಶ್ಚ ಸಮುದ್ಭೂತಾಃ ವಿಸ್ತರತ್ವಾನ್ನ ವರ್ಣಿತಾಃ ॥ ೩೭ ॥

---

೩೨. ಪೌಲೋಮ, ಕಾಲಖಂಜ ಎಂಬ ಮಹಾಬಲಶಾಲಿಗಳಾದ ಈ ರಾಕ್ಷಸರು ದೇವತೆಗಳಿಗೆ ಅವಧ್ಯರಾಗಿ ಹಿರಣ್ಯವೆಂಬ ಪಟ್ಟಣದಲ್ಲಿ ವಾಸಮಾಡುತ್ತಿದ್ದರು.

೩೩. ಬ್ರಹ್ಮನ ಅನುಗ್ರಹದಿಂದ ಸವ್ಯಸಾಚಿಯಿಂದ ಯಾವ ದಾನವರು ಕೊಲ್ಲಲ್ಪಟ್ಟರೋ ಅವರೆಲ್ಲರೂ ವಿಪ್ರಚಿತ್ತಿಗೆ ಸಿಂಹಿಕೆಯಲ್ಲಿ ಹುಟ್ಟಿದವರು.

೩೪. ದೈತ್ಯದಾನವರ ಯುದ್ಧದಲ್ಲಿ ಅತ್ಯಂತ ಪರಾಕ್ರಮಿಗಳಾಗಿ ಹೆಸರನ್ನು ಪಡೆದವರು ಹದಿಮೂರುಜನ ಸಿಂಹಿಕೆಯ ಪುತ್ರರು.

೩೫-೩೬. ರಾಹು, ಶಲ್ಯ, ಸುಬಲಿ, ಬಲ, (ಮಹಾಬಲ) ವಾತಾಪಿ, ನಮುಚಿ, ಇಲ್ವಲ, ಸ್ವಸೃಪ, ಅಜಿಕ, ನರಕ, ಕಾಲನಾಭ, ಶರಮಾಣ, ಶರಕಲ್ಪ, ಇವರೆಲ್ಲರೂ ದೈತ್ಯವಂಶವನ್ನು ಬೆಳಸಿದವರು.

೩೭. ಇವರುಗಳ ಪುತ್ರರು, ಪೌತ್ರರು, ಎಲ್ಲರಿಂದಲೂ ದನುವಿನ ವಂಶವು ಬೆಳೆಯಿತು. ಇವರುಗಳಿಂದ ಅನೇಕರು ಹುಟ್ಟಿದರು. ಆ ವಿಷಯವು ಅತಿ ವಿಸ್ತಾರವಾದುದರಿಂದ ಇಲ್ಲಿ ಹೇಳಲಾಗುವುದಿಲ್ಲ.

**ಸಂಹ್ಲಾದಸ್ಯ ತು ದೈತೇಯಾ ನಿವಾತಕವಚಾಃಕುಲೇ ।**
**ಉತ್ಪನ್ನಾ ಮರುತಸ್ತಸ್ಮಿಂಸ್ತಪಸಾ ಭಾವಿತಾತ್ಮನಃ ॥ ೩೮ ॥**

**ಷಣ್ಮುಖಾದ್ಯಾ ಮಹಾಸತ್ತ್ವಾಸ್ತಾಮ್ರಾಯಾಃ ಪರಿಕೀರ್ತಿತಾಃ ।**
**ಕಾಕೀ ಶ್ಯೇನೀ ಚ ಭಾಸೀ ಚ ಸುಗ್ರೀವೀ ಚ ಶುಕೀ ತಥಾ ॥ ೩೯ ॥**

**ಗೃಧ್ರಿಕಾಶ್ವೀ ಹ್ಯುಲೂಕೀ ಚ ತಾಮ್ರಕನ್ಯಾಃ ಪ್ರಕೀರ್ತಿತಾಃ**
**ಕಾಕೀ ಕಾಕಾನಜನಯದುಲೂಕೀ ಪ್ರತ್ಯುಲೂಕಕಾನ್ ॥ ೪೦ ॥**

**ಶ್ಯೇನೀ ಶ್ಯೇನಾಂಸ್ತಥಾ ಭಾಸೀ ಭಾಸಾನ್ ಗೃಧ್ರೀ ತು ಗೃಧ್ರಕಾನ್ ।**
**ಶುಕೀ ಶುಕಾನಜನಯತ್ಸುಗ್ರೀವೀ ಶುಭಪಕ್ಷಿಣಃ ॥ ೪೧ ॥**

**ಅಶ್ವಾನುಷ್ಟ್ರಾನ್ ಗರ್ದಭಾಂಶ್ಚ ತಾಮ್ರಾ ಚ ಕಶ್ಯಪಪ್ರಿಯಾ ।**
**ಜನಯಾಮಾಸ ಚೇತ್ಯೇವಂ ತಾಮ್ರಾವಂಶಃ ಪ್ರಕೀರ್ತಿತಾಃ ॥ ೪೨ ॥**

**ವಿನತಾಯಾಶ್ಚ ಪುತ್ರೌ ದ್ವಾವರುಣೋ ಗರುಡಸ್ತಥಾ ।**
**ಸುಪರ್ಣಃ ಪತತಾಂ ಶ್ರೇಷ್ಠೋ ನಾರುಣಸ್ಸ್ವೇನ ಕರ್ಮಣಾ ॥ ೪೩ ॥**

---

೩೮. ಸಂಹ್ಲಾದನ ಕುಲದಲ್ಲಿ ನಿವಾತಕವಚರೆಂಬ ದೈತ್ಯರು ಹುಟ್ಟಿದರು. ಅವರು ತಪಸ್ಸಿನಿಂದ ಆತ್ಮಜ್ಞಾನಿಗಳಾದರು.

೩೯. ತಾಮ್ರಳಿಗೆ ಷಣ್ಮುಖಾದಿಗಳೇ ಮೊದಲಾದ ಪರಾಕ್ರಮಿಗಳಾದ ಮಕ್ಕಳಾದರು. ಕಾಕೀ, ಶ್ಯೇನೀ, ಭಾಸೀ, ಸುಗ್ರೀವಿ, ಶುಕೀ, ಗೃಧ್ರಿಕಾ, ಅಶ್ವೀ, ಉಲೂಕೀ ಇವರೆಲ್ಲರೂ ತಾಮ್ರಳ ಮಕ್ಕಳು.

೪೦-೪೧. ಕಾಕಿಯು ಕಾಗೆಗಳನ್ನೂ, ಉಲೂಕಿಯು ಗೂಬೆಗಳನ್ನೂ, ಶ್ಯೇನಿಯು ಗಿಡಗಗಳನ್ನೂ, ಭಾಸಿಯು ಭಾಸಗಳನ್ನೂ, ಗೃಧ್ರಿಯು ಹದ್ದುಗಳನ್ನೂ, ಶುಕಿಯು ಗಿಣಿಗಳನ್ನೂ, ಸುಗ್ರಿವಿಯು ಮನೋಹರವಾದ ಪಕ್ಷಿಗಳನ್ನೂ ಪಡೆದರು.

೪೨. ಕಶ್ಯಪನ ಹೆಂಡತಿಯಾದ ತಾಮ್ರಳು ಕುದುರೆಗಳ್ನೂ, ಒಂಟೆಗಳನ್ನೂ, ಕತ್ತೆಗಳನ್ನೂ ಪಡೆದಳು. ಆದುದರಿಂದ ಇವುಗಳೆಲ್ಲವೂ ತ್ರಾಮ್ರಳ ವಂಶದವುಗಳೆಂದು ಪ್ರಸಿದ್ಧಿಯು.

೪೩. ವಿನತಾ ಎಂಬವಳಿಗೆ ಅರುಣ, ಗರುಡ ಎಂಬ ಇಬ್ಬರು ಮಕ್ಕಳಾದರು. ಅವರಲ್ಲಿ ಗರುಡನು ಬಲವಾದ ರೆಕ್ಕೆಗಳುಳ್ಳವನಾದುದರಿಂದ ಹಾರಬಲ್ಲ ಪಕ್ಷಿಗಳಲ್ಲಿ

ಸುರಸಾಯಾಸ್ಸಹಸ್ರಂ ತು ಸರ್ಪಾಣಾಮಮಿತೌಜಸಾಂ ।
ಅನೇಕಶಿರಸಾಂ ತೇಷಾಂ ಖೇಚರಾಣಾಂ ಮಹಾತ್ಮನಾಂ ॥ ೪೪ ॥

ಯೇಷಾಂ ಪ್ರಧಾನಾ ರಾಜಾನಃ ಶೇಷವಾಸುಕಿತಕ್ಷಕಾಃ ।
ಐರಾವತೋ ಮಹಾಪದ್ಮಃ ಕಂಬಲಾಶ್ವತರಾವುಭೌ ॥ ೪೫ ॥

ಐಲಾಪುತ್ರಸ್ತಥಾ ಪದ್ಮಃ ಕರ್ಕೋಟಕಧನಂಜಯೌ ।
ಮಹಾನೀಲಮಹಾಕರ್ಣೌ ಧೃತರಾಷ್ಟ್ರೋ ಬಲಾಹಕಃ ॥ ೪೬ ॥

ಕುಹರಃ ಪುಷ್ಪದಂತಶ್ಚ ದುರ್ಮುಖಸ್ಸುಮುಖಸ್ತಥಾ ।
ಬಹುಶಃ ಖರರೋಮಾ ಚ ಪಾಣಿರಿತ್ಯೇವಮಾದಯಃ ॥ ೪೭ ॥

ಗಣಾಃ ಕ್ರೋಧವಶಾಯಾಶ್ಚ ತಸ್ಯಾಸ್ಸರ್ವೇ ಚ ದಂಷ್ಟ್ರಿಣಃ ।
ಅಂಡಜಾಃ ಪಕ್ಷಿಣೋಽಬ್ಜಾಶ್ಚ ವರಾಯಾಃ ಪಶವೋ ಮತಾಃ ॥ ೪೮ ॥

ಶ್ರೇಷ್ಠನಾದನು. ಅರುಣನಿಗೆ ರೆಕ್ಕೆಗಳಿರಲಿಲ್ಲವಾದುದರಿಂದ ಅವನು ಹಾರಲು ಸಾಮರ್ಥ್ಯವುಳ್ಳವನಾಗಲಿಲ್ಲ.

೪೪. ಸುರಸಳಿಗೆ ಬಲಶಾಲಿಗಳಾದ ಸಾವಿರಾರು ಸರ್ಪಗಳಾದವು. ಅವುಗಳಿಗೆ ಅನೇಕ ತಲೆಗಳಿದ್ದವು. ಕೆಲವು ಆಕಾಶದಲ್ಲಿ ಸಂಚರಿಸುತ್ತಿದ್ದವು.

೪೫-೪೮. ಈ ಸರ್ಪಗಳಲ್ಲಿ ಪ್ರಧಾನರಾದವರು ಕೆಲವರು ಸರ್ಪಗಳಿಗೆ ರಾಜರಾಗಿರುವರು. ಶೇಷ, ವಾಸುಕಿ, ತಕ್ಷಕ, ಐರಾವರ, ಮಹಾಪದ್ಮ, ಕಂಬಲ, ಅಶ್ವತರು, ಐಲಾಪುತ್ರ, ಪದ್ಮ, ಕರ್ಕೋಟಕ, ಧನಂಜಯ, ಮಹಾನೀಲ, ಮಹಾಕರ್ಣ, ಧೃತರಾಷ್ಟ್ರ, ಬಲಾಹಕ, ಕುಹರ, ಪುಷ್ಪದಂತ, ಧುರ್ಮುಖ, ಖರರೋಮಾ, ಪಾಣಿ, ಮುಂತಾದವರು. ಕ್ರೋಧವಶಳಿಗೆ ಕೋರೆಹಲ್ಲುಗಳುಳ್ಳ ಗಣಗಳು ಹುಟ್ಟಿದವು. ವರಾ ಎಂಬುವಳಿಗೆ ಮೊಟ್ಟೆಯಿಂದಾದ ಪಕ್ಷಿಗಳೂ, ನೀರಿನಲ್ಲಿರುವ ಪ್ರಾಣಿಗಳೂ, ಪಶುಗಳೂ ಮಕ್ಕಳಾದರು.

**ಅನಾಯುಷಾಯಾಃ ಪುತ್ರಾಶ್ಚ ಪಂಚಾಶಚ್ಚ ಮಹಾಬಲಾಃ ।**
**ಅಭವನ್ಬಲವೃತ್ರೌ ಚ ವಿಕ್ಷರೋಽಥ ಬೃಹಂಸ್ತಥಾ ॥ ೪೯ ॥**

**ಶಶಾಂಸ್ತು ಜನಯಾಮಾಸ ಸುರಭಿರ್ಮಹಿಷಾಂಸ್ತಥಾ ।**
**ಇಲಾ ವೃಕ್ಷಾನ್ ಲತಾವಲ್ಲೀಸ್ತೃಣಜಾತೀಸ್ತು ಸರ್ವಶಃ ॥ ೫೦ ॥**

**ಖಶಾ ತು ಯಕ್ಷರಕ್ಷಾಂಸಿ ಮುನಿರಪ್ಸರಸಸ್ತಥಾ ।**
**ಅರಿಷ್ಟಾಸೂತ ಸರ್ಪಾಂಶ್ಚ ಪ್ರಭಾವೈರ್ಮಾನವೋತ್ತಮಾನ್ ॥ ೫೧ ॥**

**ಏತೇ ಕಶ್ಯಪದಾಯಾದಾಃ ಕೀರ್ತಿತಾಸ್ತೇ ಮುನೀಶ್ವರಾಃ ।**
**ಯೇಷಾಂ ಪುತ್ರಾಶ್ಚ ಪೌತ್ರಾಶ್ಚ ಶತಶೋಽಥ ಸಹಸ್ರಶಃ ॥ ೫೨ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ**
**ಕಶ್ಯಪವಂಶವರ್ಣನಂ ನಾಮ ದ್ವಾತ್ರಿಂಶೋಽಧ್ಯಾಯಃ**

---

೪೯. ಅನಾಯುಷಾ ಎಂಬುವಳಿಗೆ ಮಹಾಬಲಶಾಲಿಗಳಾದ ಐವತ್ತು ಜನ ಮಕ್ಕಳಾದರು. ಬಲ, ವೃತ್ತಿ, ವಿಕ್ಷರ, ಬೃಹತ್ ಮೊದಲಾದವರು.

೫೦. ಸುರಭಿ ಎಂಬುವಳು ಮೊಲಗಳನ್ನೂ, ಎಮ್ಮೆಗಳನ್ನೂ ಹಡೆದಳು. ಇಲಾ ಎಂಬುವಳು ಮರಗಳನ್ನೂ, ಬಳ್ಳಿಗಳನ್ನೂ, ಹುಲ್ಲುಗಳನ್ನೂ, ಅವುಗಳ ಜಾತಿಗಳನ್ನೂ ಪಡೆದಳು.

೫೧. ಖಶಾ ಎಂಬುವಳು ಯಕ್ಷ, ರಾಕ್ಷಸ ಮುಂತಾದವರನ್ನೂ, ಮುನಿ ಎಂಬುವಳು ಅಪ್ಸರೆಯರನ್ನೂ, ಅರಿಷ್ಟಾ ಎಂಬುವಳು ಮನುಷ್ಯರಂತೆ ಶ್ರೇಷ್ಠರಾದ ಸರ್ಪಗಳನ್ನೂ ಪಡೆದಳು.

೫೨. ಎಲೈ ಮುನಿವರರೇ, ಇವರೆಲ್ಲರೂ ಕಶ್ಯಪನ ವಂಶದವರು. ಇವರುಗಳ ಮಕ್ಕಳು, ಮೊಮ್ಮಕ್ಕಳು ಎಲ್ಲರೂ ಸೇರಿ ನೂರರಷ್ಟು ಸಹಸ್ರರಷ್ಟಾಗುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಕಶ್ಯಪವಂಶವರ್ಣನವೆಂಬ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ಉಮಾಸಂಹಿತಾಯಾಂ
## ತ್ರಯಸ್ತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಏಷ ಮನ್ವಂತರೇ ತಾತ ಸರ್ಗಃ ಸ್ವಾರೋಚಿಷೇ ಸ್ಮೃತಃ ।
ವೈವಸ್ವತೇ ತು ಮಹತಿ ವಾರುಣೇ ವಿತತೇ ಕ್ರತೌ ॥ ೧ ॥

ಜುಹ್ವಾನಸ್ಯ ಬ್ರಹ್ಮಣೋ ವೈ ಪ್ರಜಾಸರ್ಗ ಇಹೋಚ್ಯತೇ ।
ಪೂರ್ವಂ ಯಾನಥ ಬ್ರಹ್ಮರ್ಷೀನುತ್ಪನ್ನಾನ್ಸಪ್ತ ಮಾನಸಾನ್ ॥ ೨ ॥

## ಮೂವತ್ತಮೂರನೆಯ ಅಧ್ಯಾಯವು

೧. ಸೂತಮುನಿಯು ಹೇಳುವನು :—ಎಲೈ ಶೌನಕನೇ, ಹಿಂದೆ ನಾನು ಹೇಳಿದುದೆಲ್ಲವೂ ಸ್ವಾರೋಚಿಷಮನ್ವಂತರದ ಸೃಷ್ಟಿಯ ವಿಷಯವು. ಈಗ ನಾನು ಮಹತ್ತಾದ ವೈವಸ್ವತಮನ್ವಂತರದಲ್ಲಿ ವರುಣ ಸಂಬಂಧವಾದ ಒಂದು ದೊಡ್ಡ ಯಾಗ ಮಾಡುತ್ತಿರುವಾಗ ಬ್ರಹ್ಮನು ಮಾಡಿದ ಪ್ರಜಾಸೃಷ್ಟಿಯನ್ನು ಹೇಳುವೆನು.

೨. ಪೂರ್ವದಲ್ಲಿ ಬ್ರಹ್ಮನು ಹೋಮಮಾಡುತ್ತಿರುವಾಗ ಏಳುಜನ ತನ್ನ ಮಾನಸಪುತ್ರರಾದ ಬ್ರಹ್ಮಋಷಿಗಳನ್ನು ಸೃಷ್ಟಿಮಾಡಿದನಷ್ಟೇ.

ಪುತ್ರಾನ್ಸೈ ಕಲ್ಪಯಾಮಾಸ ಸ್ವಯಮೇವ ಪಿತಾಮಹಃ ।
ತೇಷಾಂ ವಿರೋಧೇ ದೇವಾನಾಂ ದಾನವಾನಾಂ ಮಹಾಖಯೇ ॥ ೩ ॥

ದಿತಿರ್ವಿನಷ್ಟಪುತ್ರಾ ತು ಕಶ್ಯಪಂ ಸಮುಪಸ್ಥಿತಾ ।
ತಾಂ ಕಶ್ಯಪಃ ಪ್ರಸನ್ನಾತ್ಮಾ ಸಮ್ಯಗಾರಾಧಿತಸ್ತಯಾ ॥ ೪ ॥

ವರೇಣ ಛಂದಯಾಮಾಸ ಸಾ ಚ ವವ್ರೇ ವರಂ ತದಾ ।
ಪುತ್ರಮಿಂದ್ರವಧಾರ್ಥಾಯ ಸಮರ್ಥಮಮಿತೌಜಸಂ ॥ ೫ ॥

ಸ ತಸ್ಯೈ ಚ ವರಂ ಪ್ರಾದಾತ್ ಪ್ರಾರ್ಥಿತಂ ಸುಮಹಾತಪಾಃ ।
ಬ್ರಹ್ಮಚರ್ಯಾದಿನಿಯಮಂ ಪ್ರಾಹ ಚೈವ ಶತಂ ಸಮಾಃ ॥ ೬ ॥

ಧಾರಯಾಮಾಸ ಗರ್ಭಂ ತು ಶುಚಿಸ್ನಾ ವರವರ್ಣಿನೀ ।
ಬ್ರಹ್ಮಚರ್ಯಾದಿನಿಯಮಂ ದಿತಿರ್ದಧ್ರೇ ತಥೈವ ವೈ ॥ ೭ ॥

೩. ಅವರಿಗೂ ಮತ್ತು ರಾಕ್ಷಸರಿಗೂ ವಿರೋಧವುಂಟಾಗಲು ದೇವತೆಗಳಿಗೂ, ದಾನವರಿಗೂ ಯುದ್ಧವಾಯಿತು. ಆಗ ದಾನವರೆಲ್ಲ ನಾಶವಾಗಲು ದಿತಿಯು ಪುತ್ರ ಹೀನಳಾಗಿ ಕಶ್ಯಪನ ಹತ್ತಿರಕ್ಕೆ ಹೋಗಿ,

೪-೫. ಕಶ್ಯಪನನ್ನು ಪೂಜಿಸಿ ಪ್ರಾರ್ಥಿಸಲು, ಕಶ್ಯಪನು ಸಂತುಷ್ಟನಾದನು. ಆಗ ತನಗೆ ಇಂದ್ರನನ್ನು ವಧೆಮಾಡುವ ಪರಾಕ್ರಮಿಯಾದ ಪುತ್ರನಾಗಬೇಕೆಂಬ ವರವನ್ನು ಪ್ರಾರ್ಥಿಸಿದಳು.

೬. ಹಾಗೆಯೇ ಆಗಲೆಂದು ಕಶ್ಯಪನು ಅವಳು ಕೇಳಿದ ವರವನ್ನು ಕೊಟ್ಟನು. ಮತ್ತು ಪುತ್ರಪ್ರಾಪ್ತಿಗಾಗಿ ನೂರು ವರ್ಷಗಳವರೆಗೆ ಬ್ರಹ್ಮಚರ್ಯದಿಂದಿರಬೇಕೆಂದು ಹೇಳಿ ಅದರ ನಿಯಮಗಳನ್ನೆಲ್ಲಾ ಉಪದೇಶಿಸಿದನು.

೭. ಆ ಸುಂದರಿಯಾದ ದಿತಿಯು ಶುಚಿರ್ಭೂತಳಾಗಿ ಗರ್ಭವನ್ನು ಧರಿಸಿದಳು. ಕಶ್ಯಪನು ಉಪದೇಶಿಸಿದಂತೆ ಬ್ರಹ್ಮಚರ್ಯಾದಿನಿಯಮಗಳನ್ನು ಪಾಲಿಸುಸುತ್ತಿದ್ದಳು.

ತತಸ್ತ್ವಾಧಾಯ ಸೋಽದಿತ್ಯಾಂ ಗರ್ಭಂ ತಂ ಶಂಸಿತವ್ರತಃ ।
ಜಗಾಮ ಕಶ್ಯಪಸ್ತಪ್ತುಂ ತಪಸ್ಸಂಹೃಷ್ಟಮಾನಸಃ ॥ ೮ ॥

ತಸ್ಯಾಶ್ಛಿದ್ರಾಂತರಂ ಪ್ರೇಪ್ಸುಸ್ಸೋಽಭವತ್ಪಾಕಶಾಸನಃ ।
ಊನವರ್ಷೇ ಶತೇ ಚಾಸ್ಯಾ ದದರ್ಶಾಂತರಮೇವ ಸಃ ॥ ೯ ॥

ಅಕೃತ್ವಾ ಪಾದಯೋಃ ಶೌಚಂ ದಿತಿರ್ವಾಕ್ಶಿರಸ್ತದಾ ।
ನಿದ್ರಾಮಾಹಾರಯಾಮಾಸ ಭಾವಿನೋಽರ್ಥಸ್ಯ ಗೌರವಾತ್ ॥ ೧೦ ॥

ಏತಸ್ಮಿನ್ನಂತರೇ ಶಕ್ರಸ್ತಸ್ಯಾಃ ಕುಕ್ಷಿಂ ಪ್ರವಿಶ್ಯ ಸಃ ।
ವಜ್ರಪಾಣಿಸ್ತು ತಂ ಗರ್ಭಂ ಸಪ್ತಧಾ ಹಿ ನ್ಯಕೃಂತತ ॥ ೧೧ ॥

ಸ ಪಾಟ್ಯಮಾನೋ ಗರ್ಭೋಽಥ ವಜ್ರೇಣ ಪ್ರರುರೋದ ಹ ।
ರುದಂತಂ ಸಪ್ತಧೈಕೈಕಂ ಮಾ ರೋದೀರಿತಿ ತಾನ್ಪುನಃ ॥ ೧೨ ॥

೮. ಅನಂತರ ಕಶ್ಯಪನು ಅದಿತಿಯ ಹತ್ತಿರ ದಿತಿಯ ಗರ್ಭದ ವಿಷಯವನ್ನು ಹೇಳಿ ತಪಸ್ಸುಮಾಡಲು ಸಂತೋಷದಿಂದ ಹೊರಟುಹೋದನು.

೯. ಈ ವಿಷಯವನ್ನು ತಿಳಿದು ಇಂದ್ರನು ಮೋಸದಿಂದ ಅದನ್ನು ನಾಶ ಮಾಡಲು ಸಮಯ ಕಾಯುತ್ತಿದ್ದನು. ತೊಂಭತ್ತೊಂಭತ್ತು ವರ್ಷಗಳವರೆಗೆ ಕಾದರೂ ಸಮಯ ಸಿಕ್ಕಲಿಲ್ಲ. ಕೊನೆಗೊಂದುದಿನ ಅಂತಹ ಸಮಯವೂ ಒದಗಿತು.

೧೦. ಒಂದುದಿನ ದಿತಿಯು ಕಾಲುಗಳನ್ನು ತೊಳೆಯದೆ ಗರ್ಭಭಾರದ ಆಲಸ್ಯದಿಂದ ಪಶ್ಚಿಮದಿಕ್ಕಿಗೆ ತಲೆಯನ್ನು ಹಾಕಿಕೊಂಡು ನಿದ್ರೆಮಾಡುತ್ತಿದ್ದಳು.

೧೧. ದಿತಿಯು ಅಶುಚಿಯಿಂದಿದ್ದ ಇದೇ ಸಮಯದಲ್ಲಿ ಇಂದ್ರನು ದಿತಿಯ ಗರ್ಭವನ್ನು ಹೊಕ್ಕನು. ಮತ್ತು ವಜ್ರಾಯುಧದಿಂದ ಆ ಗರ್ಭವನ್ನು ಏಳು ಚೂರಾಗಿ ಕತ್ತರಿಸಿದನು.

೧೨. ಇಂದ್ರನು ವಜ್ರಾಯುಧದಿಂದ ಕತ್ತರಿಸುತ್ತಿರಲು ಆ ಗರ್ಭವು ಘಟ್ಟಿಯಾಗಿ ಅಳುತ್ತಿತ್ತು. ಹೀಗೆ ಅಳುತ್ತಿರುವ ಅದನ್ನು ನೋಡಿ ಇಂದ್ರನು ಆ ಏಳು ಚೂರುಗಳನ್ನೂ ಅಳಬೇಡ, ಅಳಬೇಡ ಎಂದು ಏಳುಸಾರೆ ಹೇಳಿ, ಅವುಗಳಲ್ಲಿ ಒಂದೊಂದನ್ನೂ ಮತ್ತೆ ಏಳುಭಾಗವಾಗಿ ಕತ್ತರಿಸಿದನು.

ಚಕರ್ತ ವಜ್ರಪಾಣಿಸ್ತಾನ್ನೈವ ಮಮ್ರುಸ್ತಥಾಪಿ ತೇ ।
ತೇ ತಮೂಚುಃ ಪಾತ್ಯಮಾನಾಸ್ಸರ್ವೇ ಪ್ರಾಂಜಲಯೋ ಮುನೆ ॥
ನೋ ಜಿಘಾಂಸಸಿ ಕಿಂ ಶಕ್ರ ಭ್ರಾತರೋ ಮರುತಸ್ತವ ॥ ೧೩ ॥

ಇಂದ್ರೇಣ ಸ್ವೀಕೃತಾಸ್ತೇ ಹಿ ಭ್ರಾತೃತ್ವೇ ಸರ್ವ ಏವ ಚ ।
ತತ್ಯಜುರ್ದೈತ್ಯಭಾವಂ ತೇ ವಿಪ್ರರ್ಷೇ ಶಂಕರೇಚ್ಛಯಾ ॥ ೧೪ ॥

ಮರುತೋ ನಾಮ ತೇ ದೇವಾ ಬಭೂವಸ್ಸುಮಹಾಬಲಾಃ ।
ಖಗಾ ಏಕೋನಪಂಚಾಶತ್ಸಹಾಯಾ ವಜ್ರಪಾಣಿನಃ ॥ ೧೫ ॥

ತೇಷಾಮೇವಪ್ರವೃದ್ಧಾನಾಂ ಹರಿಃ ಪಾದಾತ್ಪ್ರಜಾಪತಿಃ ।
ಕ್ರಮಶಸ್ತಾನಿ ರಾಜ್ಯಾನಿ ಪೃಥುಪೂರ್ವಂ ಶೃಣುಷ್ವ ತತ್ ॥ ೧೬ ॥

ಅರಿಷ್ಟಃ ಪುರುಷೋ ವೀರಃ ಕೃಷ್ಣೋ ಜಿಷ್ಣುಃ ಪ್ರಜಾಪತಿಃ ।
ಪರ್ಜನ್ಯಸ್ತು ಧನಾಧ್ಯಕ್ಷಸ್ತಸ್ಯ ಸರ್ವಮಿದಂ ಜಗತ್ ॥ ೧೭ ॥

---

೧೩. ಅವೆಲ್ಲವೂ ಕೊಲ್ಲುತ್ತಿರುವ ಇಂದ್ರನನ್ನು ಕುರಿತು, ಅಂಜಲಿಬದ್ಧರಾಗಿ ಎಲೈ ಇಂದ್ರನೇ, ನಾವು ನಿನ್ನ ತಮ್ಮಂದಿರಾದ ಮರುತ್ತುಗಳು. ಇಂತಹ ನಮ್ಮನ್ನು ನೀನು ಏಕೆ ಕೊಲ್ಲುವೆ? ಎಂಬುದಾಗಿ ಕೇಳಿದವು.

೧೪. ಆಗ ಇಂದ್ರನು ಆ ಏಳುಭಾಗಗಳನ್ನು ತಮ್ಮಂದಿರೆಂದು ಭಾವಿಸಿದನು. ಎಲೈ ದೇವಋಷಿಯೇ, ಅಂದಿನಿಂದ ಅವರು ಈಶ್ವರನ ಇಚ್ಛೆಯಿಂದ ದೈತ್ಯಭಾವವನ್ನು ಬಿಟ್ಟುಬಿಟ್ಟರು.

೧೫. ಅವರೆಲ್ಲರೂ ಮಹಾಬಲಶಾಲಿಗಳಾದ ಮರುತ್ತಗಳೆಂಬ ದೇವತೆಗಳಾದರು. ಈ ನಲವತ್ತೊಂಭತ್ತುಜನರೂ ಆಕಾಶದಲ್ಲಿ ಸಂಚರಿಸುವವರಾಗಿ ಇಂದ್ರನ ಸಹಾಯಕರಾದರು.

೧೬. ಅವರೆಲ್ಲರೂ ಅಭಿವೃದ್ಧಿಯನ್ನು ಹೊಂದಲು ಇಂದ್ರನು ಅವರುಗಳಿಗೆ ಬೇರೆಬೇರೆಯಾಗಿ ರಾಜ್ಯಗಳನ್ನು ಕೊಟ್ಟನು. ಆ ರಾಜ್ಯಗಳನ್ನು ಹೇಳುವೆನು ಕೇಳು.

೧೭. ಅರಿಷ್ಟ, ಪುರುಷ, ವೀರ, ಕೃಷ್ಣ, ಜಿಷ್ಣು, ಪ್ರಜಾಪತಿ, ಪರ್ಜನ್ಯ, ಧನಾಧ್ಯಕ್ಷ ಇವರೇ ಆ ಏಳುಜನ ಮರುತ್ತಗಳು. ಈ ಜಗತ್ತೆಲ್ಲವೂ ಅವರಿಂದ ವ್ಯಾಪ್ತವಾಗಿರುವುದು.

ಭೂತಸರ್ಗಮಿಮಂ ಸಮ್ಯಗವೋಚಂ ತೇ ಮಹಾಮುನೇ ।
ವಿಭಾಗಂ ಶೃಣು ರಾಜ್ಯಾನಾಂ ಕ್ರಮಶಸ್ತಂ ಬ್ರುವೇಽಧುನಾ ॥ ೧೮ ॥

ಅಭಿಷಿಚ್ಯಾಧಿರಾಜ್ಯೇ ತು ಪೃಥುಂ ವೈನ್ಯಂ ಪಿತಾಮಹಃ ।
ತತಃ ಕ್ರಮೇಣ ರಾಜ್ಯಾನಿ ವ್ಯಾದೇಷ್ಟುಮುಪಚಕ್ರಮೇ ॥ ೧೯ ॥

ದ್ವಿಜಾನಾಂ ವೀರುಧಾಂ ಚೈವ ನಕ್ಷತ್ರಗ್ರಹಯೋಸ್ತಥಾ ।
ಯಜ್ಞಾನಾಂ ತಪಸಾಂ ಚೈವ ಸೋಮಂ ರಾಜ್ಯೇಽಭ್ಯಷೇಚಯತ್ ॥ ೨೦ ॥

ಅಪಾಂ ತು ವರುಣಂ ರಾಜ್ಯೇ ರಾಜ್ಞಾಂ ವೈಶ್ರವಣಂ ಪ್ರಭುಂ ।
ಆದಿತ್ಯಾನಾಂ ತಥಾ ವಿಷ್ಣುಂ ವಸೂನಾಮಥ ಪಾವಕಂ ॥ ೨೧ ॥

ಪ್ರಜಾಪತೀನಾಂ ದಕ್ಷಂ ತು ಮರುತಾಮಥ ವಾಸವಂ ।
ದೈತ್ಯಾನಾಂ ದಾನವಾನಾಂ ಚ ಪ್ರಹ್ಲಾದಮಮಿತೌಜಸಂ ॥ ೨೨ ॥

ವೈವಸ್ವತಂ ಪಿತೄಣಾಂ ಚ ಯಮಂ ರಾಜ್ಯೇಽಭ್ಯಷೇಚಯತ್ ।
ಮಾತೄಣಾಂ ಚ ವ್ರತಾನಾಂ ಚ ಮಂತ್ರಾಣಾಂ ಚ ತಥಾ ಗವಾಂ ॥ ೨೩ ॥

೧೮. ಎಲೈ ಮುನಿಯೇ, ಈ ಭೂತಸೃಷ್ಟಿಯನ್ನು ಚೆನ್ನಾಗಿ ನಿನಗೆ ತಿಳಿಸಿರುವೆನು. ಈಗ ರಾಜ್ಯಗಳ ವಿಭಾಗವನ್ನು ಹೇಳುವೆನು ಕೇಳು.

೧೯. ಬ್ರಹ್ಮನು ಮೊದಲು ರಾಜ್ಯದಲ್ಲಿ ವೇನನ ಮಗನಾದ ಪೃಥುವನ್ನೂ ಅಭಿಷೇಕಮಾಡಿದನು. ಆ ಕ್ರಮದಿಂದ ರಾಜ್ಯಗಳೆಂಬುದಾಗಿ ವ್ಯವಹರಿಸಲ್ಪಟ್ಟವು.

೨೦. ಪಕ್ಷಿಗಳು, ಬಳ್ಳಿಗಳು, ನಕ್ಷತ್ರ, ಗ್ರಹ, ಯಜ್ಞ, ತಪಸ್ಸು ಇವುಗಳಿಗೆ ಸೋಮನನ್ನು ರಾಜನನ್ನಾಗಿ ಅಭಿಷೇಕಮಾಡಿದನು.

೨೧. ನೀರುಗಳಿಗೆ ವರುಣನನ್ನೂ, ರಾಜರುಗಳಿಗೆ ಕುಬೇರನನ್ನೂ, ಆದಿತ್ಯರುಗಳಿಗೆ ವಿಷ್ಣುವನ್ನೂ, ವಸುಗಳಿಗೆ ಅಗ್ನಿಯನ್ನೂ ರಾಜರನ್ನಾಗಿ ಮಾಡಿದನು.

೨೨. ಪ್ರಜಾಪತಿಗಳಿಗೆ ದಕ್ಷನನ್ನೂ, ಮರುತ್ತುಗಳಿಗೆ ಇಂದ್ರನನ್ನೂ, ರಿಗೂ ದಾನವರಿಗೂ ಬಲಶಾಲಿಯಾದ ಪ್ರಹ್ಲಾದನನ್ನೂ ರಾಜನನ್ನಾಗಿ ಮಾಡಿದನು.

೨೩-೨೪. ಪಿತೃಗಳಿಗೆ ವೈವಸ್ವತಯಮನೂ, ಸಪ್ತಮಾತೃಕೆಯರು, ವ್ರತಗಳು, ಮಂತ್ರಗಳು, ಹಸುಗಳು, ಯಕ್ಷ, ರಾಕ್ಷಸ, ಪಾರ್ಥಿವ, ಸರ್ವಭೂತಗಳು,

ಯಕ್ಷಾಣಾಂ ರಾಕ್ಷಸಾನಾಂ ಚ ಪಾರ್ಥಿವಾನಾಂ ತಥೈವ ಚ ।
ಸರ್ವಭೂತಪಿಶಾಚಾನಾಂ ಗಿರಿಶಂ ಶೂಲಪಾಣಿನಂ ॥ ೨೪ ॥

ಶೈಲಾನಾಂ ಹಿಮವಂತಂ ಚ ನದೀನಾಮಥ ಸಾಗರಂ ।
ಮೃಗಾಣಾಮಥ ಶಾರ್ದೂಲಂ ಗೋವೃಷಂ ಚ ಗವಾಮಪಿ ॥ ೨೫ ॥

ವನಸ್ಪತೀನಾಂ ವೃಕ್ಷಾಣಾಂ ವಟಂ ರಾಜ್ಯೇಽಭ್ಯಷೇಚಯತ್ ।
ಇತಿ ದತ್ತಂ ಪ್ರಜೇಶೇನ ರಾಜ್ಯಂ ಸರ್ವತ್ರ ವೈ ಕ್ರಮಾತ್ ॥ ೨೬ ॥

ಪೂರ್ವಸ್ಯಾಂ ದಿಶಿ ಪುತ್ರಂ ತು ವೈರಾಜಸ್ಯ ಪ್ರಜಾಪತೇಃ ।
ಸ್ಥಾಪಯಾಮಾಸ ಸರ್ವಾತ್ಮಾ ರಾಜ್ಯೇ ವಿಶ್ವಪತಿರ್ವಿಭುಃ ॥ ೨೭ ॥

ತಥೈವ ಮುನಿಶಾರ್ದೂಲ ಕರ್ದಮಸ್ಯ ಪ್ರಜಾಪತೇಃ ।
ದಕ್ಷಿಣಸ್ಯಾಂ ತಥಾ ಪುತ್ರಂ ಸುಧನ್ವಾನಮಚೀಕ್ಲೃಪತ್ ॥ ೨೮ ॥

ಪಶ್ಚಿಮಾಯಾಂ ದಿಶಿ ತಥಾ ರಜಸಃ ಪುತ್ರಮಚ್ಯುತಂ ।
ಕೇತುಮಂತಂ ಮಹಾತ್ಮಾನಂ ರಾಜಾನಂ ವ್ಯಾದಿಶತ್ಪ್ರಭುಃ ॥ ೨೯ ॥

---

ಪಿಶಾಚಗಳು ಇವುಗಳಿಗೆ ಶೂಲವನ್ನು ಕೈಯ್ಯಲ್ಲಿ ಧರಿಸಿರುವ ಈಶ್ವರನೂ ರಾಜರಾದರು.

೨೫. ಪರ್ವತಗಳಿಗೆ ಹಿಮವಂತನನ್ನೂ, ನದಿಗಳಿಗೆ ಸಾಗರನನ್ನೂ, ಮೃಗಗಳಿಗೆ ಸಿಂಹವನ್ನೂ, ಹಸುಗಳಿಗೆ ವೃಷಭವನ್ನೂ, ವನಸ್ಪತಿಗೂ ವೃಕ್ಷಗಳಿಗೂ ಆಲದ ಮರವನ್ನೂ ರಾಜರನ್ನಾಗಿ ಮಾಡಿದನು.

೨೬—೩೦. ಈರೀತಿಯಾಗಿ ಕ್ರಮವಾಗಿ ರಾಜ್ಯಗಳನ್ನು ಬ್ರಹ್ಮನು ಕಲ್ಪಿಸಿ ಕೊಟ್ಟನು. ಪೂರ್ವದಿಕ್ಕಿಗೆ ವೈರಾಜಬ್ರಹ್ಮನ ಮಗನನ್ನು ರಾಜನನ್ನಾಗಿ ನೇಮಿಸಿದನು. ದಕ್ಷಿಣದಿಕ್ಕಿಗೆ ಕರ್ದಮಪ್ರಜಾಪತಿಯ ಮಗನಾದ ಸುಧನ್ವನನ್ನೂ, ಪಶ್ಚಿಮದಿಕ್ಕಿಗೆ ರಜಸ್ಸಿನ ಪುತ್ರನಾದ ಮಹಾತ್ಮನಾದ ನಾಶರಹಿತನಾದ ಕೇತುಮಂತನನ್ನೂ, ಉತ್ತರ

**ತಥಾ ಹಿರಣ್ಯರೋಮಾಣಂ ಪರ್ಜನ್ಯಸ್ಯ ಪ್ರಜಾಪತೇಃ ।**
**ಉದೀಚ್ಯಾಂ ದಿಶಿ ರಾಜಾನಂ ದುರ್ಧಷಂ ಸೋಽಭ್ಯಷೇಚಯತ್ ॥ ೩೦ ॥**

**ತಸ್ಯ ವಿಸ್ತರಮಾಖ್ಯಾತಂ ಪೃಥೋರ್ವೈನ್ಯಸ್ಯ ಶೌನಕ**
**ಮಹದ್ಧ್ಯೇತದಧಿಷ್ಠಾನಂ ಪುರಾಣಂ ಪರಿಕೀರ್ತಿತಂ ॥ ೩೧ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ**
**ಸರ್ಗವರ್ಣನಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ**

ದಿಕ್ಕಿಗೆ ದುರ್ಧರ್ಷನಾದ, ಪರ್ಜನ್ಯಪ್ರಜಾಪತಿಯ ಮಗನಾದ ಹಿರಣ್ಯರೋಮನನ್ನೂ ರಾಜರನ್ನಾಗಿ ಮಾಡಿದನು.

೩೧. ಎಲೈ ಶೌನಕನೇ, ವೇನನ ಮಗನಾದ ಪೃಥುವಿನ ಚರಿತ್ರೆಯನ್ನು ವಿಸ್ತಾರವಾಗಿ ಹೇಳಿರುವೆನು. ಇವೆಲ್ಲವೂ ಮಹತ್ತಾಗಿಯೂ ವಿಸ್ತಾರವಾಗಿಯೂ ಹೇಳಲ್ಪಟ್ಟಿರುವ ಗ್ರಂಥಕ್ಕೆ ಪುರಾಣವೆಂದು ಹೆಸರಾಯಿತು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಸರ್ಗವರ್ಣನವೆಂಬ
ಮೂವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಚತುಸ್ತ್ರಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಮನ್ವಂತರಾಣಿ ಸರ್ವಾಣಿ ವಿಸ್ತರೇಣಾನುಕೀರ್ತಯ ।
ಯಾವಂತೋ ಮನವಶ್ಚೈವ ಶ್ರೋತುಮಿಚ್ಛಾಮಿ ತಾನಹಂ ॥ ೧ ॥

॥ ಸೂತ ಉವಾಚ ॥

ಸ್ವಾಯಂಭುವೋ ಮನುಶ್ಚೈವ ತತಃ ಸ್ವಾರೋಚಿಷಸ್ತಥಾ ।
ಉತ್ತಮಸ್ತಾಮಸಶ್ಚೈವ ರೈವತಶ್ಚಾಕ್ಷುಷಸ್ತಥಾ ॥ ೨ ॥

ಏತೇ ಚ ಮನವಃ ಷಟ್ ತೇ ಸಂಪ್ರೋಕ್ತಾ ಮುನಿಪುಂಗವ ।
ವೈವಸ್ವತೋ ಮುನಿಶ್ರೇಷ್ಠ ಸಾಂಪ್ರತಂ ಮನುರುಚ್ಯತೇ ॥ ೩ ॥

## ಮೂವತ್ತನಾಲ್ಕನೆಯ ಅಧ್ಯಾಯವು

೧. ಶೌನಕನು ಸೂತಪುರಾಣಿಕನನ್ನು ಪ್ರಶ್ನೆ ಮಾಡಿದನು:—ಎಲೈ ಸೂತನೇ, ಮನುಗಳು ಎಷ್ಟು ಜನರಿರುವರು ? ಅವರ ವಿಷಯವನ್ನೆಲ್ಲಾ ಕೇಳಬೇಕೆಂದಿರುವೆನು. ಆದುದರಿಂದ ಮನ್ವಂತರಗಳನ್ನೆಲ್ಲಾ ವಿಸ್ತಾರವಾಗಿ ತಿಳಿಸು ಎನ್ನಲು,

೨-೩. ಸೂತನು ಹೇಳುವನು :—ಎಲೈ ಮುನಿಶ್ರೇಷ್ಠನೇ, ಸ್ವಾಯಂಭುವ ಮನು, ಸ್ವಾರೋಚಿಷಮನು, ಉತ್ತಮಮನು, ತಾಮಸಮನು, ರೈವತಮನು, ಚಾಕ್ಷುಷಮನು ಎಂಬುದಾಗಿ ಆರು ಜನ ಮನುಗಳು ಹಿಂದೆ ಕಳೆದುಹೋದರು. ಈಗ ನಡೆಯುತ್ತಿರುವುದು ವೈವಸ್ವತಮನ್ವಂತರವು.

ಸಾವರ್ಣಿಶ್ಚ ಮನುಶ್ಚೈವ ತತೋ ರೋಚ್ಯಸ್ತಥಾಪರಃ ।
ತಥೈವ ಬ್ರಹ್ಮಸಾವರ್ಣಿಶ್ಚತ್ವಾರೋ ಮನವಸ್ತಥಾ ॥ ೪ ॥

ತಥೈವ ಧರ್ಮಸಾವರ್ಣೀ ರುದ್ರಸಾವರ್ಣಿರೇವ ಚ ।
ದೇವಸಾವರ್ಣಿರಾಖ್ಯಾತ ಇಂದ್ರಸಾವರ್ಣಿರೇವ ಚ ॥ ೫ ॥

ಅತೀತಾ ವರ್ತಮಾನಾಶ್ಚ ತಥೈವಾನಾಗತಾಶ್ಚ ಯೇ ।
ಕೀರ್ತಿತಾ ಮನವಶ್ಚಾಪಿ ಮಯ್ಯೈವೇತೇ ಯಥಾ ಶ್ರುತಾ ॥ ೬ ॥

ಮುನೇ ಚತುರ್ದಶೈತಾನಿ ತ್ರಿಕಾಲಾನುಗತಾನಿ ತೇ ।
ಪ್ರೋಕ್ತಾನ್ಯೇಭಿರ್ಮತಃ ಕಲ್ಪೋ ಯುಗಸಾಹಸ್ರಪರ್ಯಯಃ ॥ ೭ ॥

ಋಷೀಂಸ್ತೇಷಾಂ ಪ್ರವಕ್ಷ್ಯಾಮಿ ಪುತ್ರಾನ್ ದೇವಗಣಾಂಸ್ತಥಾ
ಶೃಣು ಶೌನಕ ಸುಪ್ರೀತ್ಯಾ ಕ್ರಮಶಸ್ತಾನ್ಯಶಸ್ವಿನಃ ॥ ೮ ॥

ಮರೀಚಿರತ್ರಿರ್ಭಗವಾನಂಗಿರಾಃ ಪುಲಹಃ ಕ್ರತುಃ ।
ಪುಲಸ್ತ್ಯಶ್ಚ ವಸಿಷ್ಠಶ್ಚ ಸಪ್ತೈತೇ ಬ್ರಹ್ಮಣಸ್ಸುತಾಃ ॥ ೯ ॥

೪-೭. ಮುಂದೆ ಸಾವರ್ಣಿಮನು, ರೌಚ್ಯ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ ಎಂಬ ಏಳು ಜನ ಮನುಗಳು ಮುಂದೆ ಬರುವವರು. ಆದುದರಿಂದ ಹಿಂದೆ ಇದ್ದವರು, ಈಗ ಇರುವವನು, ಮುಂದೆ ಬರುವವರು ಎಲ್ಲರೂ ಸೇರಿ ಒಟ್ಟು ಹದಿನಾಲ್ಕು ಜನ ಮನುಗಳೆಂದು ನಾನು ಕೇಳಿ ತಿಳಿದಿರುವೆನು. ಈ ಭೂತಭವಿಷ್ಯದ್ವರ್ತಮಾನಗಳ ಹದಿನಾಲ್ಕು ಮನ್ವಂತರಗಳ ಕಾಲಪರಿಮಿತಿಯು ಒಂದು ಸಾವಿರ ಯುಗಗಳನ್ನೊಳಗೊಂಡ ಕಲ್ಪವೆನ್ನಿಸುವುದು.

೮. ಅವರ ಕಾಲದ ಋಷಿಗಳನ್ನೂ, ಅವರ ಪುತ್ರರನ್ನೂ, ದೇವಗಣಗಳನ್ನೂ ಕ್ರಮವಾಗಿ ಹೇಳುವೆನು. ಆದರರಿಂದ ಕೇಳು.

೯. ಮರೀಚಿ, ಅತ್ರಿ, ಅಂಗಿರಸ್ಸು, ಪುಲಹ, ಕ್ರತು, ಪುಲಸ್ತ್ಯ, ವಸಿಷ್ಠ ಈ ಏಳು ಜನರೂ ಬ್ರಹ್ಮನ ಮಕ್ಕಳು.

ಉತ್ತರಸ್ಯಾಂ ದಿಶಿ ತಥಾ ಮುನೇ ಸಪ್ತರ್ಷಯಸ್ತಥಾ ।
ಯಾಮಾ ನಾಮ ತಥಾ ದೇವಾ ಆಸನ್ ಸ್ವಾಯಂಭುವೇಂತರೇ ॥ ೧೦ ॥

ಆಗ್ನೀಧ್ರಶ್ಚಾಗ್ನಿಬಾಹುಶ್ಚ ಮೇಧಾ ಮೇಧಾತಿಥಿರ್ವಸುಃ ।
ಜ್ಯೋತಿಷ್ಮಾನ್ ಧೃತಿಮಾರ್ ಹವ್ಯಃ ಸವನಶ್ಶುಭ್ರ ಏವ ಚ ॥ ೧೧ ॥

ಸ್ವಾಯಂಭುವಸ್ಯ ಪುತ್ರಾಸ್ತೇ ಮನೋರ್ದಶ ಮಹಾತ್ಮನಃ ।
ಕೀರ್ತಿತಾ ಮುನಿಶಾರ್ದೂಲ ತತ್ರೇಂದ್ರೋ ಯಜ್ಞ ಉಚ್ಯತೇ ॥ ೧೨ ॥

ಪ್ರಥಮಂ ಕಥಿತಂ ತಾತ ದಿವ್ಯಂ ಮನ್ವಂತರಂ ತಥಾ ।
ದ್ವಿತೀಯಂ ತೇ ಪ್ರವಕ್ಷ್ಯಾಮಿ ತನ್ನಿಬೋಧ ಯಥಾತಥಂ ॥ ೧೩ ॥

ಊರ್ಜಸ್ತಂಭಃ ಪರಸ್ತಂಭ ಋಷಭೋ ವಸುಮಾಂಸ್ತಥಾ ।
ಜ್ಯೋತಿಷ್ಮಾನ್ ದ್ಯುತಿಮಾಂಶ್ಚೈವ ರೋಚಿಷ್ಮಾನ್ ಸಪ್ತಮಸ್ತಥಾ ॥ ೧೪ ॥

ಏತೇ ಮಹರ್ಷಯೋ ಜ್ಞೇಯಾಸ್ತತ್ರೇಂದ್ರೋ ರೋಚನಸ್ತಥಾ ।
ದೇವಾಶ್ಚ ತುಷಿತಾ ನಾಮ ಸ್ಮೃತಾಃ ಸ್ವಾರೋಚಿಷೇಽಂತರೇ ॥ ೧೫ ॥

೧೦, ಎಲೈ ಮುನಿಯೇ, ಸ್ವಾಯಂಭುವಮನ್ವಂತರದಲ್ಲಿ ಉತ್ತರದಿಕ್ಕಿನಲ್ಲಿ ಸಪ್ತಋಷಿಗಳೂ, ಯಾಮಾ ಎಂಬ ದೇವತೆಗಳೂ ಇದ್ದರು.

೧೧-೧೨. ಆಗ್ನೀಧ್ರ, ಅಗ್ನಿಬಾಹು, ಮೇಧಾ, ಮೇಧಾತಿಥಿ, ವಸು, ಷ್ಮಾನ್, ಧೃತಿಮಾರ್, ಹವ್ಯ, ಸವನ, ಶುಭ್ರ ಈ ಹತ್ತು ಜನ ಮಹಾತ್ಮರು ಸ್ವಾಯಂಭುವಮನುವಿನ ಪುತ್ರರು. ಈ ಮನ್ವಂತರದಲ್ಲಿ ಇಂದ್ರನಿಗೆ ಯಜ್ಞನೆಂದು ಹೆಸರು.

೧೩. ಮೊದಲನೆಯದಾದ ಸ್ವಾಯಂಭುವಮನ್ವಂತರವನ್ನು ಹೇಳಿದೆನು. ಈಗ ಎರಡನೆಯ ಸ್ವಾರೋಚಿಷಮನ್ವಂತರವನ್ನು ಹೇಳುವೆನು ಕೇಳು.

೧೪-೧೫. ಸ್ವಾರೋಚಿಷಮನ್ವಂತರದಲ್ಲಿ ಊರ್ಜಸ್ತಂಭ, ಪರಸ್ತಂಭ, ಋಷಭ, ವಸುಮಾನ್, ಜ್ಯೋತಿಷ್ಮಾನ್, ದ್ಯುತಿಮಾನ್, ರೋಚಿಷ್ಮಾನ್ ಎಂಬುವರು ಸಪ್ತಋಷಿಗಳು. ಈ ಮನ್ವಂತರದಲ್ಲಿ ಇಂದ್ರನಿಗೆ ರೋಚನನೆಂದು ಹೆಸರು. ದೇವತೆಗಳು ತುಷಿತಾ ಎಂಬ ಹೆಸರುಳ್ಳವರು.

ಹರಿಘ್ನಸ್ಸುಕೃತಿರ್ಜ್ಯೋತಿರಯೋಮೂರ್ತಿರಯಸ್ಮಯಃ ।
ಪ್ರಥಿತಶ್ಚ ಮನಸ್ಯುಶ್ಚ ನಭಸ್ಸೂರ್ಯಸ್ತಥೈವ ಚ ॥ ೧೬ ॥

ಸ್ವಾರೋಚಿಷಸ್ಯ ಪುತ್ರಾಸ್ತೇ ಮನೋರ್ದಶ ಮಹಾತ್ಮನಃ ।
ಕೀರ್ತಿತಾ ಮುನಿಶಾರ್ದೂಲ ಮಹಾವೀರ್ಯಪರಾಕ್ರಮಾಃ ॥ ೧೭ ॥

ದ್ವಿತೀಯಮೇತತ್ಕಥಿತಂ ಮುನೇ ಮನ್ವಂತರಂ ಮಯಾ ।
ತೃತೀಯಂ ತವ ವಕ್ಷ್ಯಾಮಿ ತನ್ನಿಬೋಧ ಯಥಾತಥಂ ॥ ೧೮ ॥

ವಸಿಷ್ಠಪುತ್ರಾಃ ಸಪ್ತಾಸನ್ ವಾಸಿಷ್ಠಾ ಇತಿ ವಿಶ್ರುತಾಃ ।
ಹಿರಣ್ಯಗರ್ಭಸ್ಯ ಸುತಾ ಊರ್ಜಾ ನಾಮ ಮಹೌಜಸಃ ॥ ೧೯ ॥

ಋಷಯೋಽತ್ರ ಸಮಾಖ್ಯಾತಾಃ ಕೀರ್ತ್ಯಮಾನಾನ್ನಿಬೋಧ ಮೇ ।
ಔತ್ತಮೇಯಾ ಋಷಿಶ್ರೇಷ್ಠ ದಶಪುತ್ರಾ ಮನೋಃ ಸ್ಮೃತಾಃ ॥ ೨೦ ॥

ಇಷ ಊರ್ಜಿತ ಊರ್ಜಶ್ಚ ಮಧುರ್ಮಾಧವ ಏವ ಚ ।
ಶುಚಿಶ್ಶುಕ್ರವಹಶ್ಚೈವ ನಭಸೋ ನಭ ಏವ ಚ ॥ ೨೧ ॥

೧೬-೧೭. ಹರಿಘ್ನ, ಸುಕೃತಿ, ಜ್ಯೋತಿ, ಅಯೋಮೂರ್ತಿ, ಅಯಸ್ಮಯ, ಪ್ರಥಿತ, ಮನಸ್ಯು, ನಭ, ಸೂರ್ಯ ಈ ಹತ್ತು ಜನರೂ ಸ್ವಾರೋಚಿಷಮನುವಿನ ಮಕ್ಕಳು. ಮಹಾಪರಾಕ್ರಮಿಗಳು.

೧೮. ಎಲೈ ಮುನಿಯೇ, ನಾನು ಎರಡನೆಯದಾದ ಸ್ವಾರೋಚಿಷಮನ್ವಂತರವನ್ನು ಹೇಳಿದೆನು. ಈಗ ಮೂರನೆಯದಾದ ಉತ್ತಮಮನ್ವಂತರವನ್ನು ಹೇಳುವೆನು ಕೇಳು.

೧೯-೨೦. ಈ ಉತ್ತಮಮನ್ವಂತರದಲ್ಲಿ ವಸಿಷ್ಠಮಹರ್ಷಿಯ ಏಳು ಜನ ಪುತ್ರರಾದ ವಾಸಿಷ್ಠರೆಂಬುವರೂ ಮತ್ತು ಊರ್ಜಾ ಎಂಬ ಹೆಸರುಳ್ಳ ಮಹಾತೇಜಸ್ವಿಗಳಾದ ಹಿರಣ್ಯಗರ್ಭಬ್ರಹ್ಮನ ಮಕ್ಕಳೂ ಈ ಉತ್ತಮಮನ್ವಂತರದ ಸಪ್ತಋಷಿಗಳು.

೨೧-೨೩. ಎಲೈ ಋಷಿಶ್ರೇಷ್ಠನೇ, ಇಷ, ಉರ್ಜಿತ, ಊರ್ಜ, ಮಧು, ಮಾಧವ, ಶುಚಿ, ಶುಕ್ರವಹ, ನಭಸ, ನಭ, ಋಷಭ ಈ ಹತ್ತು ಜನರು ಉತ್ತಮ

ಋಷಭಸ್ತತ್ರ ದೇವಾಶ್ಚ ಸತ್ಯವೇದಶ್ರುತಾದಯಃ ।
ತತ್ರೇಂದ್ರಸ್ಸತ್ಯಜಿನ್ನಾಮ ತ್ರೈಲೋಕ್ಯಾಧಿಪತಿರ್ಮುನೇ ॥ ೨೨ ॥

ತೃತೀಯಮೇತತ್ಪರಮಂ ಮನ್ವಂತರಮುದಾಹೃತಂ ।
ಮನ್ವಂತರಂ ಚತುರ್ಥಂ ತೇ ಕಥಯಾಮಿ ಮುನೇ ಶೃಣು ॥ ೨೩ ॥

ಗಾರ್ಗ್ಯಃ ಪೃಥುಸ್ತಥಾ ವಾಗ್ಮೀ ಜನ್ಯೋ ಧಾತಾ ಕಪೀನಕಃ ।
ಕಪೀವಾನ್ಸಪ್ತ ಋಷಯ ಸತ್ಯಾ ದೇವಗಣಾಸ್ತಥಾ ॥ ೨೪ ॥

ತತ್ರೇಂದ್ರಸ್ತ್ರಿಶಿಖೋ ಜ್ಞೇಯೋ ಮನುಪುತ್ರಾನ್ಮುನೇ ಶೃಣು ।
ದ್ಯುತಿಪೋತಸ್ಸೌತಪಸ್ಯಸ್ತಪಶ್ಶೂಲಶ್ಚ ತಾಪನಃ ॥ ೨೫ ॥

ತಪೋರತಿರಕಲ್ಮಾಷೋ ಧನ್ವೀ ಖಡ್ಗೀ ಮಹಾನೃಷಿಃ ।
ತಾಮಸಸ್ಯ ಸ್ಮೃತಾ ಏತೇ ದಶ ಪುತ್ರಾ ಮಹವ್ರತಾಃ ॥ ೨೬ ॥

ಮನುವಿನ ಪುತ್ರರು. ಸತ್ಯ, ವೇದ, ಶ್ರುತಿ ಮುಂತಾದವರು ಆಗಿನ ದೇವತೆಗಳು. ಆಗ ಸತ್ಯಜಿತ್ ಎಂಬುವನು ಇಂದ್ರನು. ಅವನು ಮೂರು ಲೋಕಕ್ಕೂ ಅಧಿಪತಿಯು. ಇದು ಮೂರನೆಯ ಮನ್ವಂತರವು. ಇನ್ನು ನಾಲ್ಕನೆಯದಾದ ತಾಮಸ ಮನ್ವಂತರವನ್ನು ಹೇಳುವೆನು, ಕೇಳು.

೨೪. ತಾಮಸಮನ್ವಂತರದಲ್ಲಿ ಗಾರ್ಗ್ಯ, ಪೃಥು, ವಾಗ್ಮೀ, ಜನ್ಯ, ಧಾತಾ, ಕಪೀನಕ, ಕಪೀವಾನ್ ಎಂಬುವರು ಸಪ್ತಋಷಿಗಳು. ಸತ್ಯಾ ಎಂಬ ಹೆಸರುಳ್ಳವರು ದೇವತೆಗಳು.

೨೫-೨೬. ಆಗ ಇಂದ್ರನಿಗೆ ತ್ರಿಶಿಖನೆಂದು ಹೆಸರು. ಎಲೈ ಮುನಿಯೇ, ತಾಮಸಮನುವಿನ ಮಕ್ಕಳನ್ನು ಹೇಳುವೆನು ಕೇಳು. ದ್ಯುತಿಪೋತ, ಸೌತಪಸ್ಯ, ತಪ, ಶೂಲ, ತಾಪನ, ತಪೋರತಿ, ಅಕಲ್ಮಾಷ, ಧನ್ವೀ, ಖಡ್ಗೀ, ಮಹಾನೃಷಿ ಈ ಹತ್ತು ಜನಗಳೂ ತಾಮಸಮನುವಿನ ಮಕ್ಕಳು. ಇವರೆಲ್ಲರೂ ಮಹಾ ವ್ರತನಿಷ್ಠರು.

ತಾಮಸಸ್ಯಾಂತರಂ ಚೈವ ಮನೋರ್ಮೇ ಕಥಿತಂ ತವ ।
ಚತುರ್ಥಂ ಪಂಚಮಂ ತಾತ ಶೃಣು ಮನ್ವಂತರಂ ಪರಂ　　॥ ೨೭ ॥

ದೇವಬಾಹುರ್ಜಯಶ್ಚೈವ ಮುನಿರ್ವೇದಶಿರಾಸ್ತಥಾ ।
ಹಿರಣ್ಯರೋಮಾ ಪರ್ಜನ್ಯ ಊರ್ಧ್ವಬಾಹುಶ್ಚ ಸೋಮಪಾಃ　　॥ ೨೮ ॥

ಸತ್ಯನೇತ್ರರತಾಶ್ಚಾನ್ಯೇ ಏತೇ ಸಪ್ತರ್ಷಯೋಽಪರೇ ।
ದೇವಾಶ್ಚ ಭೂತರಜಸಸ್ತಪಃಪ್ರಕೃತಯಸ್ತಥಾ　　॥ ೨೯ ॥

ತತ್ರೇಂದ್ರೋ ವಿಭುನಾಮಾ ಚ ತ್ರೈಲೋಕ್ಯಾಧಿಪತಿಸ್ತಥಾ ।
ರೈವತಾಖ್ಯೋ ಮನುಸ್ತತ್ರ ಜ್ಞೇಯಸ್ತಾಮಸಸೋದರಃ　　॥ ೩೦ ॥

ಅರ್ಜುನಃ ಪಂಕ್ತಿವಿಂಧ್ಯೋ ವಾ ದಯಾಯಾಸ್ತನಯಾ ಮುನೇ ।
ಮಹತಾ ತಪಸಾ ಯುಕ್ತಾ ಮೇರುಪೃಷ್ಠೇ ವಸಂತಿ ಹಿ　　॥ ೩೧ ॥

ರುಚೇಃ ಪ್ರಜಾಪತೇಃ ಪುತ್ರೋ ರೌಚ್ಯೋ ನಾಮ ಮನುಃ ಸ್ಮೃತಃ ।
ಭೂತ್ಯಾ ಚೋತ್ಪಾದಿತೋ ದೇವ್ಯಾಂ ಭೌತ್ಯೋ ನಾಮಾಭವತ್ಸುತಃ ॥ ೩೨ ॥

೨೭. ತಾಮಸಮನ್ವಂತರವನ್ನು ಹೇಳಿಯಾಯಿತು. ಈಗ ಐದನೆಯ ರೈವತಮನ್ವಂತರವನ್ನು ಹೇಳುವೆನು, ಕೇಳು.

೨೮-೩೧. ರೈವತಮನ್ವಂತರದಲ್ಲಿ ದೇವಬಾಹು, ಜಯ, ವೇದಶಿರ, ಹಿರಣ್ಯ-ರೋಮಾ, ಪರ್ಜನ್ಯ, ಊರ್ಧ್ವಬಾಹು, ಸೋಮಪಾ ಎಂಬ ಸಪ್ತಋಷಿಗಳೂ ಸತ್ಯ ನೇತ್ರ, ರತಾ ಎಂಬ ಮತ್ತೆ ಬೇರೆ ಸಪ್ತಋಷಿಗಳೂ ಇದ್ದರು. ಭೂತರಜಸ, ತಪ, ಪ್ರಕೃತಿ ಮೊದಲಾದವರು ಆಗಿನ ದೇವತೆಗಳು. ವಿಭುವೆಂಬುವನು ತ್ರಿಲೋಕಾಧಿ ಪತಿಯಾದ ಇಂದ್ರನು. ಈ ರೈವತಮನುವು ತಾಮಸಮನುವಿನ ಸಹೋದರನು. ಅರ್ಜುನ, ಪಂಕ್ತಿ, ವಿಂಧ್ಯ ಇವರೆಲ್ಲರೂ ದಯಾ ಎಂಬುವಳ ಮಕ್ಕಳು. ಇವರು ಘೋರವಾದ ತಪಸ್ಸನ್ನು ಮಾಡುತ್ತಾ ಮೇರುಪರ್ವತದ ತಪ್ಪಲಿನಲ್ಲಿ ವಾಸ ಮಾಡುತ್ತಿರುವರು.

೩೨. ರುಚಿಪ್ರಜಾಪತಿಯ ಪುತ್ರನು ರೌಚ್ಯನೆಂಬ ಆರನೆಯ ಮನುವು. ಈ ಮನುವಿಗೆ ಭೂತಿ ಎಂಬುವಳಲ್ಲಿ ಭೌತ್ಯನೆಂಬ ಮಗನು ಹುಟ್ಟಿದನು.

ಅನಾಗತಾಶ್ಚ ಸಪ್ತೈತೇ ಕಲ್ಪೇऽಸ್ಮಿನ್ಮನವಃ ಸ್ಮೃತಾಃ ।
ಅನಾಗತಾಶ್ಚ ಸಪ್ತೈತೇ ಸ್ಮೃತಾ ದಿವಿ ಮಹರ್ಷಯಃ ॥ ೩೩ ॥

ರಾಮೋ ವ್ಯಾಸಸ್ತಥಾತ್ರೇಯೋ ದೀಪ್ತಿಮಾನ್ ಸುಬಹುಶ್ರುತಃ ।
ಭರದ್ವಾಜಸ್ತಥಾ ದ್ರೌಣಿರಶ್ವತ್ಥಾಮಾ ಮಹಾದ್ಯುತಿಃ ॥ ೩೪ ॥

ಗೌತಮಸ್ಯಾತ್ಮಜಶ್ಚೈವ ಶರದ್ವಾನ್ ಗೌತಮಃ ಕೃಪಃ ।
ಕೌಶಿಕೋ ಗಾಲವಶ್ಚೈವ ರುರುಃ ಕಶ್ಯಪ ಏವ ಚ ॥ ೩೫ ॥

ಏತೇ ಸಪ್ತ ಮಹಾತ್ಮಾನೋ ಭವಿಷ್ಯಾ ಮುನಿಸತ್ತಮಾಃ ।
ದೇವಾಶ್ಚಾನಾಗತಾಸ್ತತ್ರ ತ್ರಯಃ ಪ್ರೋಕ್ತಾಃ ಸ್ವಯಂಭುವಾ ॥ ೩೬ ॥

ಮಾರೀಚೇರೇವ ಪುತ್ರಾಸ್ತೇ ಕಶ್ಯಪಸ್ಯ ಮಹಾತ್ಮನಃ ।
ತೇಷಾಂ ವಿರೋಚನಸುತೋ ಬಲಿರಿಂದ್ರೋ ಭವಿಷ್ಯತಿ ॥ ೩೭ ॥

೩೩. ಇದುವರೆಗೂ ಹೇಳಿದ ಆರು ಮನ್ವಂತರಗಳೂ, ಈಗ ನಡೆಯುತ್ತಿರುವ ವೈವಸ್ವತಮನ್ವಂತರವೂ ಸೇರಿ ಏಳು ಮನ್ವಂತರಗಳಾದವು. ಈ ಕಲ್ಪದಲ್ಲಿ ಈ ಏಳು ಮನ್ವಂತರಗಳಲ್ಲದೆ ಮುಂದೆ ನಡೆಯಬೇಕಾದ ಮತ್ತೆ ಏಳು ಮನ್ವಂತರಗಳಿರುವವು. ಅವುಗಳಲ್ಲಿಯೂ ಸಪ್ತರ್ಷಿಗಳೇ ಮೊದಲಾದವರು ಹಿಂದೆ ಹೇಳಿದಂತೆಯೇ ಆಗುವರು.

೩೪-೩೬. ಜಮದಗ್ನಿ ಋಷಿಯ ಮಗನಾದ ಪರಶುರಾಮ, ಅತ್ರಿವಂಶದ ವ್ಯಾಸ, ಭರದ್ವಾಜ ವಂಶೋತ್ಪನ್ನನಾದ ಮಹಾಪ್ರಖ್ಯಾತನಾದ ದೀಪ್ತಿಮಂತ, ದ್ರೋಣಾಚಾರ್ಯನ ಪುತ್ರನೂ ಮಹಾತೇಜಸ್ವಿಯೂ ಆದ ಅಶ್ವತ್ಥಾಮಾ, ಗೌತಮ ಪುತ್ರನಾದ ಶರದ್ವಾನ್, ಕೌಶಿಕ ವಂಶೀಯನಾದ ಗಾಲವ, ಕಾಶ್ಯಪ ವಂಶದ ರುರು, ಈ ಏಳು ಜನ ಮಹಾತ್ಮರೂ ಮುಂದಿನ ಮನ್ವಂತರದ ಸಪ್ತಋಷಿಗಳು.

೩೭. ಮರೀಚಿಯ ಪುತ್ರನಾದ ಕಶ್ಯಪನ ಮೂರುಜನ ಹಿಂದಿನ ಪುತ್ರರೇ ದೇವತೆಗಳು. ಅವರುಗಳಿಗೆ ವಿರೋಚನನ ಮಗನಾದ ಬಲಿಯೇ ಇಂದ್ರನು. ಹೀಗೆಂದು ಬ್ರಹ್ಮನೇ ಹೇಳಿರುವನು.

ವಿಷಂಗಾಶ್ಚಾವನೀವಾಂಶ್ಚ ಸುಮಂತೋ ಧೃತಿಮಾನ್ ವಸುಃ ।
ಸೂರಿಃ ಸುರಾಖ್ಯೋ ವಿಷ್ಣುಶ್ಚ ರಾಜಾ ಸುಮತಿರೇವ ಚ ॥ ೩೮ ॥

ಸಾವರ್ಣೇಶ್ಚ ಮನೋಃ ಪುತ್ರಾ ಭವಿಷ್ಯಾ ದಶ ಶೌನಕ ।
ಇಹಾಷ್ಟಮಂ ಹಿ ಕಥಿತಂ ನವಮಂ ಚಾಂತರಂ ಶೃಣು ॥ ೩೯ ॥

ಪ್ರಥಮಂ ದಕ್ಷಸಾವರ್ಣಿಂ ಪ್ರವಕ್ಷ್ಯಾಮಿ ಮನುಂ ಶೃಣು ।
ಮೇಧಾತಿಥಿಶ್ಚ ಪೌಲಸ್ತ್ಯೋ ವಸುಃ ಕಶ್ಯಪ ಏವ ಚ ॥ ೪೦ ॥

ಜ್ಯೋತಿಷ್ಮಾನ್ಭಾರ್ಗವಶ್ಚೈವ ಧೃತಿಮಾನಂಗಿರಾಸ್ತಥಾ ।
ಸವನಶ್ಚೈವ ವಾಸಿಷ್ಠ ಆತ್ರೇಯೋ ಹವ್ಯ ಏವ ಚ ॥ ೪೧ ॥

ಪುಲಹಸ್ಸಪ್ತ ಇತ್ಯೇತೇ ಋಷಯೋ ರೋಹಿತೇಂತರೇ ।
ದೇವತಾನಾಂ ಗಣಾಸ್ತತ್ರ ತ್ರಯ ಏವ ಮಹಾಮುನೇ ॥ ೪೨ ॥

ದೀಕ್ಷಾಪುತ್ರಸ್ಯ ಪುತ್ರಾಸ್ತೇ ರೋಹಿತಸ್ಯ ಪ್ರಜಾಪತೇಃ ।
ಕೇತುರ್ದೀಪ್ತಕೇತುಃ ಪಂಚಹಸ್ತೋ ನಿರಾಕೃತಿಃ ॥ ೪೩ ॥

೩೮-೩೯. ವಿಷಂಗ, ಅವನೀವಾನ್, ಸುಮಂತ, ಧೃತಿಮಾನ್, ವಸು, ಸೂರಿ, ಸುರ, ವಿಷ್ಣು, ರಾಜಾ, ಸುಮತಿ, ಈ ಹತ್ತು ಜನಗಳೂ ಸಾವರ್ಣಿಮನುವಿನ ಪುತ್ರರು. ಎಂಟನೆಯ ಸಾವರ್ಣಿ ಮನ್ವಂತರವನ್ನು ಹೇಳಿಯಾಯಿತು. ಈಗ ಒಂಭತ್ತನೆಯ ಮನ್ವಂತರವನ್ನು ಹೇಳುವೆನು.

೪೦-೪೧. ಮೊದಲು ದಕ್ಷಸಾವರ್ಣಿ ಮನ್ವಂತರವನ್ನು ಹೇಳುವೆನು, ಕೇಳು. ಪುಲಸ್ತ್ಯವಂಶದ ಮೇಧಾತಿಥಿ, ಕಶ್ಯಪವಂಶದ ವಸು, ಭೃಗುವಂಶದ ಜ್ಯೋತಿಷ್ಮಾನ್, ಬುದ್ಧಿವಂತನಾದ ಅಂಗಿರಸ್ಸು, ವಸಿಷ್ಠವಂಶದ ಸವನ, ಅಗ್ನಿವಂಶದ ಹವ್ಯ ಮತ್ತು ಪುಲಹ ಇವರೇಳು ಜನಗಳೂ ರೋಹಿತಮನ್ವಂತರದ ಸಪ್ತಋಷಿಗಳು.

೪೨-೪೪. ಈ ಮನ್ವಂತರದಲ್ಲಿ ದೇವತೆಗಳ ಗಣಗಳು ಮೂರು. ಧೃಷ್ಟ ಕೇತು, ದೀಪ್ತಕೇತು, ಪಂಚಹಸ್ತ, ನಿರಾಕೃತಿ, ಪೃಥುಶ್ರವಾ, ಭೂರಿದ್ಯುಮ್ನ,

ಪೃಥುಶ್ರವಾ ಭೂರಿದ್ಯುಮ್ನೋ ಋಚೀಕೋ ಬೃಹತೋ ಗಯಃ ।
ಪ್ರಥಮಸ್ಯ ತು ಸಾವರ್ಣೇರ್ನವ ಪುತ್ರಾ ಮಹೌಜಸಃ ॥ ೪೪ ॥

ದಶಮೇ ತ್ವಥ ಪರ್ಯಾಯೇ ದ್ವಿತೀಯಸ್ಯಾಂತರೇ ಮನೋಃ ।
ಹವಿಷ್ಮಾನ್ ಪುಲಹಶ್ಚೈವ ಪ್ರಕೃತಿಶ್ಚೈವ ಭಾರ್ಗವಃ ॥ ೪೫ ॥

ಆಯೋಮುಕ್ತಿಸ್ತಥಾತ್ರೇಯೋ ವಸಿಷ್ಠಶ್ಚಾವ್ಯಯಃ ಸ್ಮೃತಃ ।
ಪೌಲಸ್ತ್ಯಃ ಪ್ರಯತಿಶ್ಚೈವ ಭಾಮಾರಶ್ಚೈವ ಕಶ್ಯಪಃ ॥ ೪೬ ॥

ಅಂಗಿರಾನೇನಸಸ್ಸತ್ಯಃ ಸಪ್ತೈತೇ ಪರಮರ್ಷಯಃ ।
ದೇವತಾನಾಂ ಗಣಾಶ್ಚಾಪಿ ದ್ವಿಷಿಮಂತಶ್ಚ ಯೇ ಸ್ಮೃತಾಃ ॥ ೪೭ ॥

ತೇಷಾಮಿಂದ್ರಃಸ್ಮೃತಃ ಶಂಭುಸ್ತ್ವಯಮೇವ ಮಹೇಶ್ವರಃ ।
ಅಕ್ಷತ್ವಾನುತ್ತಮೌಜಾಶ್ಚ ಭೂರಿಷೇಣಶ್ಚ ವೀರ್ಯವಾನ್ ॥ ೪೮ ॥

ಶತಾನೀಕೋ ನಿರಾಮಿತ್ರೋ ವೃಷಸೇನೋ ಜಯದ್ರಥಃ ।
ಭೂರಿದ್ಯುಮ್ನಃ ಸುವರ್ಚಾರ್ಚಿರ್ದಶ ತ್ವೇತೇ ಮನೋಸ್ಸುತಾಃ ॥ ೪೯ ॥

ಋಚೀಕ, ಬೃಹತ, ಗಯ ಇವರು ದೀಕ್ಷಾಪುತ್ರನಾದ ರೋಹಿತ ಪ್ರಜಾಪತಿಯ ಮಕ್ಕಳು. ಈ ಒಂಬತ್ತು ಜನ ಮಕ್ಕಳೂ ಮಹಾಪರಾಕ್ರಮಶಾಲಿಗಳು.

೪೫-೪೬. ಮೊದಲನೆಯವನಾದ ಸಾವರ್ಣಿಮನುವಿಗೆ ಪರಾಕ್ರಮಿಗಳಾದ ಒಂಬತ್ತು ಜನ ಮಕ್ಕಳು. ಮನುಗಳ ಪರ್ಯಾಯದಿಂದ ಹತ್ತನೆಯವನೂ ಸಾವರ್ಣಿಗಳಲ್ಲಿ ಎರಡನೆಯವನೂ ಆದ ಬ್ರಹ್ಮಸಾವರ್ಣಿಯ ಮನ್ವಂತರದಲ್ಲಿ ಪುಲಹ ವಂಶದ ಹವಿಷ್ಮಾನ್, ಭೃಗುವಂಶದ ಪ್ರಕೃತಿ, ಅತ್ರಿವಂಶದ ಆಯೋಮುಕ್ತಿ, ವಸಿಷ್ಠವಂಶದ ಅವ್ಯಯ, ಪುಲಸ್ತ್ಯವಂಶದ ಪ್ರಯತಿ, ಕಶ್ಯಪವಂಶದ ಭಾಮಾರ, ಅಂಗಿರಾವಂಶದ ಅನೇನಸ ಈ ಏಳು ಜನರೂ ಸಪ್ತರ್ಷಿಗಳು.

೪೭. ಆಗಿನ ದೇವತೆಗಳು ದ್ವಿಷಿಮಂತರೆಂದು ಹೆಸರುಳ್ಳವರು. ಶಂಭುವೇ ಇಂದ್ರನು. ಅವನೇ ಲೋಕಾಧಿಪತಿಯು.

೪೮-೪೯. ಅಕ್ಷತ್ವಾನ್, ಉತ್ತಮೌಜ, ಭೂರಿಷೇಣ, ಶತಾನೀಕ, ನಿರಾಮಿತ್ರ, ವೃಷಸೇನ, ಜಯದ್ರಥ, ಭೂರಿದ್ಯುಮ್ನ, ಸುವರ್ಚಾ, ಅರ್ಚಿ ಈ ಹತ್ತು ಜನರು ಬ್ರಹ್ಮಸಾವರ್ಣಿಯ ಪುತ್ರರು.

ಏಕಾದಶೇ ತು ಪರ್ಯಾಯೇ ತೃತೀಯಸ್ಯಾಂತರೇ ಮನೋಃ ।
ತಸ್ಯಾಪಿ ಸಪ್ತಋಷಯಃ ಕೀರ್ತ್ಯಮಾನಾನ್ನಿಬೋಧ ಮೇ ॥ ೫೦ ॥

ಹವಿಷ್ಮಾನ್ ಕಶ್ಯಪಶ್ಚಾಪಿ ವಪುಷ್ಮಾಂಶ್ಚೈವ ವಾರುಣಃ ।
ಆತ್ರೇಯೋಽಥ ವಸಿಷ್ಠಶ್ಚ ಹ್ಯನಯಸ್ತ್ವಂಗಿರಾಸ್ತಥಾ ॥ ೫೧ ॥

ಚಾರುಧೃಷ್ಯಶ್ಚ ಪೌಲಸ್ತ್ಯೋ ನಿಸ್ಸ್ವರೋಽಗ್ನಿಸ್ತು ತೈಜಸಃ ।
ಸಪ್ತೈತೇ ಋಷಯಃ ಪ್ರೋಕ್ತಾಸ್ತ್ರಯೋ ದೇವಗಣಾಸ್ಸ್ಮೃತಾಃ ॥ ೫೨ ॥

ಬ್ರಹ್ಮಣಸ್ತು ಸುತಾಸ್ತೇ ಹಿ ತ ಇಮೇ ವೈಧೃತಾಃ ಸ್ಮೃತಾಃ ।
ಸರ್ವಗಶ್ಚ ಸುಶರ್ಮಾ ಚ ದೇವಾನೀಕಸ್ತು ಕ್ಷೇಮಕಃ ॥ ೫೩ ॥

ದೃಢೇಷುಃ ಖಂಡಕೋ ದರ್ಶಃ ಕುಹುರ್ಬಾಹೋ ಮನೋಸ್ಸುತಾಃ ।
ಸಾವರ್ಣಸ್ಯ ತು ಪೌತ್ರಾ ವೈ ತೃತೀಯಸ್ಯ ನವ ಸ್ಮೃತಾಃ ॥ ೫೪ ॥

ಚತುರ್ಥಸ್ಯ ತು ಸಾವರ್ಣಋಷೀನ್ ಸಪ್ತ ನಿಬೋಧ ಮೇ ।
ದ್ಯುತಿರ್ವಸಿಷ್ಠಪುತ್ರಶ್ಚ ಆತ್ರೇಯಸ್ಸುತಪಾಸ್ತಥಾ ॥ ೫೫ ॥

೫೦. ಮನುಗಳ ಪರ್ಯಾಯದಿಂದ ಹನ್ನೊಂದನೆಯವನೂ, ಸಾವರ್ಣಿಗಳಲ್ಲಿ ಮೂರನೆಯವನೂ ಆದ ಧರ್ಮಸಾವರ್ಣಿಮನ್ವಂತರದಲ್ಲಿಯೂ ಏಳುಜನ ಋಷಿಗಳಾಗಿರುವರು. ಅವರ ಹೆಸರುಗಳನ್ನು ಹೇಳುವೆನು ಕೇಳು.

೫೧-೫೨. ಕಶ್ಯಪವಂಶದ ಹವಿಷ್ಮಾನ್, ವರುಣವಂಶದ ವಪುಷ್ಮಾನ್, ಅತ್ರಿವಂಶದ ವಸಿಷ್ಠ, ಅಂಗಿರಾವಂಶದ ಅಯನ, ಪುಲಸ್ತ್ಯವಂಶದ ಚಾರುಧೃಷ್ಯ, ಅದೇ ವಂಶದ ನಿಸ್ವರ ಮತ್ತು ಅಗ್ನಿ ಇವರೇಳು ಜನರೂ ಆಗಿನ ಋಷಿಗಳು. ದೇವಗಣಗಳು ಮೂರು.

೫೩-೫೪. ಬ್ರಹ್ಮಪುತ್ರರಾದ ವೈಧೃತಾ ಎಂಬುವರೇ ದೇವತೆಗಳು. ಸರ್ವಗ, ಸುಶರ್ಮಾ, ದೇವಾನೀಕ, ಕ್ಷೇಮಕ, ದೃಢೇಷು ಖಂಡಕ, ದರ್ಶ, ಕುಹು, ಬಾಹು ಈ ಒಂಭತ್ತುಜನರೂ ಮೂರನೆಯ ಧರ್ಮಸಾವರ್ಣಿಮನುವಿನ ಮಕ್ಕಳು.

೫೫-೫೬. ನಾಲ್ಕನೆಯ ಸಾವರ್ಣಿಯಾದ ರುದ್ರಸಾವರ್ಣಿಮನ್ವಂತರದಲ್ಲಿ ವಸಿಷ್ಠನ ಮಗನಾದ ದ್ಯುತಿ, ಆತ್ರೇಯವಂಶದ ಸುತಪ, ತಪೋಮೂರ್ತಿಯಾದ ಅಂಗಿರ,

ಅಂಗಿರಾಸ್ತಪಸೋ ಮೂರ್ತಿಸ್ತಪಸ್ವೀ ಕಶ್ಯಪಸ್ತಥಾ ।
ತಪೋಧನಶ್ಚ ಪೌಲಸ್ತ್ಯಃ ಪುಲಹಶ್ಚ ತಪೋರತಿಃ ॥ ೫೬ ॥

ಭಾರ್ಗವಸ್ಸಪ್ತಮಸ್ತೇಷಾಂ ವಿಜ್ಞೇಯಸ್ತಪಸೋ ನಿಧಿಃ ।
ಪಂಚ ದೇವಗಣಾಃ ಪ್ರೋಕ್ತಾ ಮಾನಸಾ ಬ್ರಹ್ಮಣಸ್ಸುತಾಃ ॥ ೫೭ ॥

ಋತಧಾಮಾ ತದಿಂದ್ರೋ ಹಿ ತ್ರಿಲೋಕೀರಾಜ್ಯಕೃತ್ಸುಖೀ ।
ದ್ವಾದಶೇ ಚೈವ ಪರ್ಯಾಯೇ ಭಾವ್ಯೇ ರೌಚ್ಯಾಂತರೇ ಮುನೇ ॥ ೫೮ ॥

ಅಂಗಿರಾಶ್ಚೈವ ಧೃತಿಮಾನ್ ಪೌಲಸ್ತ್ಯೋ ಹವ್ಯವಾಂಸ್ತು ಯಃ ।
ಪೌಲಹಸ್ತತ್ತ್ವದರ್ಶೀ ಚ ಭಾರ್ಗವಶ್ಚ ನಿರುತ್ಸವಃ ॥ ೫೯ ॥

ನಿಷ್ಪ್ರಪಂಚಸ್ತಥಾತ್ರೇಯೋ ನಿರ್ದೇಹಃ ಕಶ್ಯಪಸ್ತಥಾ ।
ಸುತಪಾಶ್ಚೈವ ವಾಸಿಷ್ಠಸ್ಸಪ್ತೈವೇತೇ ಮಹರ್ಷಯಃ ॥ ೬೦ ॥

ತ್ರಯ ಏವ ಗಣಾಃ ಪ್ರೋಕ್ತಾ ದೇವತಾನಾಂ ಸ್ವಯಂಭುವಾ ।
ದಿವಸ್ಪತಿಸ್ತದಿಂದ್ರೋ ವೈ ವಿಚಿತ್ರಶ್ಚಿತ್ರ ಏವ ಚ ॥ ೬೧ ॥

ಕಶ್ಯಪ, ತಪೋಧನನಾದ ಪೌಲಸ್ತ್ಯ, ತಪಸ್ಸಿನಲ್ಲಿಯೇ ಆಸಕ್ತನಾದ ಪುಲಹ, ಭಾರ್ಗವ ಈ ಏಳುಜನರು ಸಪ್ತಋಷಿಗಳು.

೫೭. ಬ್ರಹ್ಮಮಾನಸಪುತ್ರರೇ ಆಗಿನ ಐದು ದೇವಗಣಗಳು. ಋತುಧಾಮಾ ಎಂಬುವನು ಇಂದ್ರನು. ಅವನು ತ್ರಿಲೋಕಾಧಿಪತಿಯಾಗಿ ಸುಖದಿಂದ ರಾಜ್ಯಭಾರ ಮಾಡುವನು.

೫೮-೬೦. ಮನುಪರ್ಯಾಯದಿಂದ ಹನ್ನೆರಡನೆಯವನಾದ ರೌಚ್ಯಮನ್ವಂತರದಲ್ಲಿ ಅಂಗಿರವಂಶದ ಧೃತಿಮಾನ್, ಪುಲಸ್ತ್ಯವಂಶದ ಹವ್ಯವಾನ್, ಅದೇವಂಶದ ತತ್ವದರ್ಶೀ, ಭೃಗುವಂಶದ ನಿರುತ್ಸವ, ಅತ್ರಿವಂಶದ ನಿಷ್ಪ್ರಪಂಚ, ಕಶ್ಯಪವಂಶದ ನಿರ್ದೇಹ, ವಸಿಷ್ಠವಂಶದ ಸುತಪ ಇವರೇಳುಮಂದಿಯೂ ಸಪ್ತಋಷಿಗಳು.

೬೧-೬೨. ಆಗ ಮೂರೇ ದೇವಗಣಗಳು. ದಿವಸ್ಪತಿ ಎಂಬುವನೇ ಇಂದ್ರನು.

ನಯೋ ಧರ್ಮೋ ಧೃತೋಂಧ್ರಶ್ಚ ಸುನೇತ್ರಃ ಕ್ಷತ್ರವೃದ್ಧಕಃ ।
ನಿರ್ಭಯಸ್ಸುತಪಾ ದ್ರೋಣೋ ಮನೋ ರೌಚ್ಯಸ್ಯ ತೇ ಸುತಾಃ ॥ ೬೨ ॥

ಚತುರ್ದಶೇ ತು ಪರ್ಯಾಯೇ ಸತ್ಯಸ್ಯೈವಾಂತರೇ ಮನೋಃ ।
ಆಗ್ನೀಧ್ರಃ ಕಶ್ಯಪಶ್ಚೈವ ಪೌಲಸ್ತ್ಯೋ ಮಾಗಧಶ್ಚ ಯಃ ॥ ೬೩ ॥

ಭಾರ್ಗವೋಽಪ್ಯತಿವಾಹ್ಯಶ್ಚ ಶುಚಿರಂಗಿರಸಸ್ತಥಾ ।
ಯುಕ್ತಶ್ಚೈವ ತಥಾತ್ರೇಯಃ ಶಾಕ್ರೋ ವಾಸಿಷ್ಠ ಏವ ಚ ॥ ೬೪ ॥

ಅಜಿತಃ ಪುಲಹಶ್ಚೈವ ಹ್ಯಂತ್ಯಾಸ್ಸಪ್ತ ಮಹರ್ಷಯಃ ।
ಪವಿತ್ರಾಶ್ಚಾಕ್ಷುಷಾ ದೇವಾಃ ಶುಚಿರಿಂದ್ರೋ ಭವಿಷ್ಯತಿ ॥ ೬೫ ॥

ಏತೇಷಾಂ ಕಲ್ಯ ಉತ್ಥಾಯ ಕೀರ್ತನಾತ್ಸುಖಮೇಧತೇ ।
ಅತೀತಾನಾಗತಾನಾಂ ವೈ ಮಹರ್ಷೀಣಾಂ ನರೈಸ್ಸದಾ ॥ ೬೬ ॥

ದೇವತಾನಾಂ ಗಣಾಃ ಪ್ರೋಕ್ತಾಶ್ಶೃಣು ಪಂಚ ಮಹಾಮುನೇ ।
ತರಂಗಭೀರುರ್ಬುಧ್ನಶ್ಚ ತನುಗ್ರೋಽನೂಗ್ರ ಏವ ಚ ॥ ೬೭ ॥

ವಿಚಿತ್ರ, ಚಿತ್ರ, ನಯ, ಧರ್ಮ, ಧೃತೋಂಧ್ರ, ಸುನೇತ್ರ, ಕ್ಷತ್ರವೃದ್ಧಕ, ನಿರ್ಭಯ, ಸುತಪಾ ದ್ರೋಣ ಇವರೆಲ್ಲರೂ ರೋಚ್ಯಮನುವಿನ ಮಕ್ಕಳು.

೬೩-೬೪. ಪರ್ಯಾಯದಿಂದ ಹದಿನಾಲ್ಕನೆಯ ಸತ್ಯಮನ್ವಂತರದಲ್ಲಿ ಕಶ್ಯಪ ವಂಶದ ಆಗ್ನೀಧ್ರ, ಪುಲಸ್ತ್ಯವಂಶದ ಮಾಗಧ, ಭೃಗುವಂಶದ ಅತಿವಾಹ್ಯ, ಅಂಗಿರ ವಂಶದ ಶುಚಿ, ಅತ್ರಿವಂಶದ ಯುಕ್ತ, ವಸಿಷ್ಠನ ಮೊಮ್ಮಗನಾದ ಅಜಿತ ಮತ್ತು ಪುಲಹ ಇವರೇಳು ಮುಂದಿಯೂ ಸಪ್ತಋಷಿಗಳು.

೬೫-೬೬. ಆಗಿನ ದೇವತೆಗಳು ಪವಿತ್ರರಾದ ಚಾಕ್ಷುಷರೆಂಬುವರು. ಶುಚಿಯೇ ಇಂದ್ರನು. ಬೆಳಗಿನ ಜಾವದಲ್ಲಿ ಎದ್ದು ಯಾವನು ಈ ಅತೀತಾನಾಗತರಾದ ಮಹರ್ಷಿಗಳ ನಾಮಕೀರ್ತನೆಯನ್ನು ಮಾಡುವನೋ ಅವನಿಗೆ ಸುಖವು ಅಭಿವೃದ್ಧಿಯಾಗುವುದು.

೬೭-೬೮. ಎಲೈ ಮುನಿಯೇ, ಸತ್ಯನ ಮನ್ವಂತರದಲ್ಲಿ ಐದುಜನ ದೇವಗಣ

ಅತಿಮಾನೀ ಪ್ರವೀಣಶ್ಚ ವಿಷ್ಣುಸ್ಸಂಕ್ರಂದನಸ್ತಥಾ ।
ತೇಜಸ್ವೀ ಸುಬಲಶ್ಚೈವ ಸತ್ಯಸ್ಯೈತೇ ಮನೋಸ್ಸುತಾಃ ॥ ೬೮ ॥

ಭೌಮಸ್ಯೈವಾಧಿಕಾರೇ ವೈ ಪೂರ್ವಕಲ್ಪಸ್ತು ಪೂರ್ಯತೇ ।
ಇತ್ಯೇತೇಽನಾಗತಾತೀತಾ ಮನವಃ ಕೀರ್ತಿತಾ ಮಯಾ ॥ ೬೯ ॥

ಉಕ್ತಾಸ್ಸನತ್ಕುಮಾರೇಣ ವ್ಯಾಸಾಯಾಮಿತತೇಜಸಾ ।
ಪೂರ್ಣೇ ಯುಗಸಹಸ್ರಾಂತೇ ಪರಿಪಾಲ್ಯ ಸ್ವಧರ್ಮತಃ ॥ ೭೦ ॥

ಪ್ರಜಾಸ್ಸುತಪಸಾ ಯುಕ್ತಾ ಬ್ರಹ್ಮಲೋಕಂ ವ್ರಜಂತಿ ತೇ ।
ಯುಗಾನಿ ಸಪ್ತತಿಸ್ತ್ವೇಕಂ ಸಾಗ್ರಾಣ್ಯಂತರಮುಚ್ಯತೇ ॥ ೭೧ ॥

ಚತುರ್ದಶೈತೇ ಮನವಃ ಕೀರ್ತಿತಾಃ ಕೀರ್ತಿವರ್ಧನಾಃ ।
ಮನ್ವಂತರೇಷು ಸರ್ವೇಷು ಸಂಹಾರಾಂತೇ ಪುನರ್ಭವಃ ॥ ೭೨ ॥

ಗಳಿರುವರು. ತರಂಗ, ಭೀರು, ಬುಧ್ನ, ತನುಗ್ರ, ಅನೂಗ್ರ, ಅತಿಮಾನೀ, ಪ್ರವೀಣ, ವಿಷ್ಣು, ಸಂಕ್ರಂದನ, ತೇಜಸ್ವೀ, ಸುಬಲ ಇವರೆಲ್ಲರೂ ಸತ್ಯಮನುವಿನ ಮಕ್ಕಳು.

೬೯. ಹಿಂದಿನ ಕಲ್ಪವು ಭೌಮಮನುವಿನ ಅಧಿಕಾರದಲ್ಲಿದ್ದಿತು. ಇವರೆಲ್ಲರೂ ಹಿಂದಿದ್ದ ಮತ್ತು ಮುಂದೆ ಬರುವ ಮನುಗಳು. ಇವರ ವಿಷಯವನ್ನೆಲ್ಲಾ ಹೇಳಿರುವೆನು.

೭೦. ಈ ವಿಷಯಗಳನ್ನೆಲ್ಲಾ ಅತಿತೇಜಸ್ವಿಯಾದ ಸನತ್ಕುಮಾರನು ವ್ಯಾಸನಿಗೆ ತಿಳಿಸಿದನು. ಒಂದುಸಹಸ್ರ ಯುಗವು ಪೂರ್ಣವಾಗಿ ಕಳೆಯುವವರೆಗೂ ಪ್ರಜೆಗಳು ತಮ್ಮ ತಮ್ಮ ಧರ್ಮಗಳನ್ನು ಪರಿಪಾಲಿಸುತ್ತಾ ತಪಸ್ಸನ್ನು ಮಾಡುವವರಾಗಿ ಬ್ರಹ್ಮಲೋಕವನ್ನು ಪಡೆಯುವರು.

೭೧-೭೨. ಎಪ್ಪತ್ತೊಂದು ಯುಗಗಳಿಗೆ ಒಂದು ಮನ್ವಂತರವು ಪೂರ್ತಿಯಾಗುವುದು. ಹಿಂದೆ ಹೇಳಿದವರೇ ಹದಿನಾಲ್ಕುಜನ ಮನುಗಳು. ಈ ಹದಿನಾಲ್ಕು ಮನ್ವಂತರಗಳು ಕಳೆದು ಎಲ್ಲ ಮನುಗಳ ಪ್ರಳಯವಾದನಂತರ ಪುನಃ ಹಿಂದಿನಂತೆಯೇ ಮನುಗಳ ಉತ್ಪತ್ತಿಯಾಗುವುದು.

ನ ಶಕ್ಯಮಂತರಂ ತೇಷಾಂ ವಕ್ತುಂ ವರ್ಷಶತೈರಪಿ ।
ಪೂರ್ಣೇ ಶತಸಹಸ್ರೇ ತು ಕಲ್ಪೋ ನಿಃಶೇಷ ಉಚ್ಯತೇ ॥ ೭೩ ॥

ತತ್ರ ಸರ್ವಾಣಿ ಭೂತಾನಿ ಧಗ್ಧಾನ್ಯಾದಿತ್ಯರಶ್ಮಿಭಿಃ ।
ಬ್ರಹ್ಮಾಣಮಗ್ರತಃ ಕೃತ್ವಾ ಸದಾದಿತ್ಯಗಣೈರ್ಮುನೇ ॥ ೭೪ ॥

ಪ್ರವಿಶಂತಿ ಸುರಶ್ರೇಷ್ಠ ಹರಿಂ ನಾರಾಯಣಂ ಪರಂ ।
ಸ್ರಷ್ಟಾರಂ ಸರ್ವಭೂತಾನಾಂ ಕಲ್ಪಾಂತೇಷು ಪುನಃ ಪುನಃ ॥ ೭೫ ॥

ಭೂಯೋಽಪಿ ಭಗಾವಾನ್ ರುದ್ರಸ್ಸಂಹರ್ತಾ ಕಾಲ ಏವ ಹಿ
ಕಲ್ಪಾಂತೇ ತತ್ಪ್ರವಕ್ಷ್ಯಾಮಿ ಮನೋರ್ವೈವಸ್ವತಸ್ಯ ವೈ ॥ ೭೬ ॥

೭೩. ನೂರು ವರ್ಷಗಳಾದರೂ ಮನ್ವಂತರಗಳ ವಿವರಗಳನ್ನು ಹೇಳಲು ಸಾಧ್ಯವಿಲ್ಲ. ನೂರುಸಾವಿರ ಎಂದರೆ ಒಂದುಲಕ್ಷ ವರ್ಷಗಳು ಪೂರ್ಣವಾಗಲು ಕಲ್ಪವು ಕೊನೆಗಾಣುವುದು. ಆಗ ಎಲ್ಲಾ ಪ್ರಾಣಿಗಳೂ ಸೂರ್ಯನ ರಶ್ಮಿಗಳಿಂದ ಸುಟ್ಟುಹೋಗುವುವು.

೭೪. ಪ್ರಪಂಚವೆಲ್ಲವೂ ನಾಶವಾದನಂತರ ಆದಿತ್ಯರೇ ಮೊದಲಾದ ದೇವಗಣಗಳೆಲ್ಲರೂ ಬ್ರಹ್ಮನನ್ನು ಮುಂದೆ ಮಾಡಿಕೊಂಡು ಪರಮಾತ್ಮನಾದ ನಾರಾಯಣನಲ್ಲಿ ಸೇರಿಹೋಗುವರು.

೭೫. ಆ ನಾರಾಯಣನು ಕಲ್ಪಾಂತದಲ್ಲಿ ಪುನಃ ಪುನಃ ಸರ್ವಪ್ರಾಣಿಗಳನ್ನೂ ಸೃಷ್ಟಿಮಾಡುವನು. ಹಿಂದಿನಂತೆಯೇ ಮತ್ತೆ ಕಾಲಸ್ವರೂಪನಾದ ಭಗವಾನ್ ರುದ್ರನೇ ಎಲ್ಲವನ್ನೂ ಸಂಹಾರಮಾಡುವನು.

೭೬-೭೭. ಮುಂದಿನ ಅಧ್ಯಾಯದಲ್ಲಿ ವೈವಸ್ವತಮನ್ವಂತರವನ್ನು ಹೇಳುವೆನು. ಎಲೈ ಶೌನಕನೇ, ಮನ್ವಂತರದ ಸೃಷ್ಟಿಯೆಲ್ಲವನ್ನೂ ಹೇಳಿಯಾಯಿತು. ಈ ಸೃಷ್ಟಿಯು

**ಅತಿಮಾನೀ ಪ್ರವೀಣಶ್ಚ ವಿಷ್ಣುಸ್ಸಂಕ್ರಂದನಸ್ತಥಾ ।**
**ತೇಜಸ್ವೀ ಸುಬಲಶ್ಚೈವ ಸತ್ಯಸ್ಯೈತೇ ಮನೋಸ್ಸುತಾಃ ॥ ೭೮**

**ಭೌಮಸ್ಯೈವಾಧಿಕಾರೇ ವೈ ಪೂರ್ವಕಲ್ಪಸ್ತು ಪೂರ್ಯತೇ ।**
**ಇತ್ಯೇತೇಽನಾಗತಾತೀತಾ ಮನವಃ ಕೀರ್ತಿತಾ ಮಯಾ ॥ ೭೯ ॥**

**ಉಕ್ತಾಸ್ಸನತ್ಕುಮಾರೇಣ ವ್ಯಾಸಾಯಾಮಿತತೇಜಸಾ ।**
**ಪೂರ್ಣೇ ಯುಗಸಹಸ್ರಾಂತೇ ಪರಿಪಾಲ್ಯ ಸ್ವಧರ್ಮತಃ ॥ ೮೦ ॥**

**ಪ್ರಜಾಸ್ಸುತಪಸಾ ಯುಕ್ತಾ ಬ್ರಹ್ಮಲೋಕಂ ವ್ರಜಂತಿ ತೇ ।**
**ಯುಗಾನಿ ಸಪ್ತತಿಸ್ತ್ವೇಕಂ ಸಾಗ್ರಾಣ್ಯಂತರಮುಚ್ಯತೇ ॥ ೮೧ ॥**

**ಚತುರ್ದಶೈತೇ ಮನವಃ ಕೀರ್ತಿತಾಃ ಕೀರ್ತಿವರ್ಧನಾಃ ।**
**ಮನ್ವಂತರೇಷು ಸರ್ವೇಷು ಸಂಹಾರಾಂತೇ ಪುನರ್ಭವಃ ॥ ೮೨ ॥**

ಗಳಿರುವರು. ತರಂಗ, ಭೀರು, ಬುಧ್ನ, ತನುಗ್ರ, ಅನೂಗ್ರ, ಅತಿಮಾನೀ, ಪ್ರವೀಣ, ವಿಷ್ಣು, ಸಂಕ್ರಂದನ, ತೇಜಸ್ವೀ, ಸುಬಲ ಇವರೆಲ್ಲರೂ ಸತ್ಯಮನುವಿನ ಮಕ್ಕಳು.

೭೯. ಹಿಂದಿನ ಕಲ್ಪವು ಭೌಮಮನುವಿನ ಅಧಿಕಾರದಲ್ಲಿದ್ದಿತು. ಇವರೆಲ್ಲರೂ ಹಿಂದಿದ್ದ ಮತ್ತು ಮುಂದೆ ಬರುವ ಮನುಗಳು. ಇವರ ವಿಷಯವನ್ನೆಲ್ಲಾ ಹೇಳಿರುವೆನು.

೮೦. ಈ ವಿಷಯಗಳನ್ನೆಲ್ಲಾ ಅತಿತೇಜಸ್ವಿಯಾದ ಸನತ್ಕುಮಾರನು ವ್ಯಾಸನಿಗೆ ತಿಳಿಸಿದನು. ಒಂದುಸಹಸ್ರ ಯುಗವು ಪೂರ್ಣವಾಗಿ ಕಳೆಯುವವರೆಗೂ ಪ್ರಜೆಗಳು ತಮ್ಮ ತಮ್ಮ ಧರ್ಮಗಳನ್ನು ಪರಿಪಾಲಿಸುತ್ತಾ ತಪಸ್ಸನ್ನು ಮಾಡುವವರಾಗಿ ಬ್ರಹ್ಮಲೋಕವನ್ನು ಪಡೆಯುವರು.

೮೧-೮೨. ಎಪ್ಪತ್ತೊಂದು ಯುಗಗಳಿಗೆ ಒಂದು ಮನ್ವಂತರವು ಪೂರ್ತಿಯಾಗುವುದು. ಹಿಂದೆ ಹೇಳಿದವರೇ ಹದಿನಾಲ್ಕುಜನ ಮನುಗಳು. ಈ ಹದಿನಾಲ್ಕು ಮನ್ವಂತರಗಳು ಕಳೆದು ಎಲ್ಲ ಮನುಗಳ ಪ್ರಳಯವಾದನಂತರ ಪುನಃ ಹಿಂದಿನಂತೆಯೇ ಮನುಗಳ ಉತ್ಪತ್ತಿಯಾಗುವುದು.

ನ ಶಕ್ಯಮಂತರಂ ತೇಷಾಂ ವಕ್ತುಂ ವರ್ಷಶತೈರಪಿ ।
ಪೂರ್ಣೇ ಶತಸಹಸ್ರೇ ತು ಕಲ್ಪೋ ನಿಃಶೇಷ ಉಚ್ಯತೇ ॥ ೭೩ ॥

ತತ್ರ ಸರ್ವಾಣಿ ಭೂತಾನಿ ದಗ್ಧಾನ್ಯಾದಿತ್ಯರಶ್ಮಿಭಿಃ ।
ಬ್ರಹ್ಮಾಣಮಗ್ರತಃ ಕೃತ್ವಾ ಸದಾದಿತ್ಯಗಣೈರ್ಮುನೇ ॥ ೭೪ ॥

ಪ್ರವಿಶಂತಿ ಸುರಶ್ರೇಷ್ಠ ಹರಿಂ ನಾರಾಯಣಂ ಪರಂ ।
ಸ್ರಷ್ಟಾರಂ ಸರ್ವಭೂತಾನಾಂ ಕಲ್ಪಾಂತೇಷು ಪುನಃ ಪುನಃ ॥ ೭೫ ॥

ಭೂಯೋಽಪಿ ಭಗವಾನ್ ರುದ್ರಸ್ಸಂಹರ್ತಾ ಕಾಲ ಏವ ಹಿ ।
ಕಲ್ಪಾಂತೇ ತತ್ಪ್ರವಕ್ಷ್ಯಾಮಿ ಮನೋರ್ವೈವಸ್ವತಸ್ಯ ವೈ ॥ ೭೬ ॥

೭೩. ನೂರು ವರ್ಷಗಳಾದರೂ ಮನ್ವಂತರಗಳ ವಿವರಗಳನ್ನು ಹೇಳಲು ಸಾಧ್ಯವಿಲ್ಲ. ನೂರುಸಾವಿರ ಎಂದರೆ ಒಂದುಲಕ್ಷ ವರ್ಷಗಳು ಪೂರ್ಣವಾಗಲು ಕಲ್ಪವು ಕೊನೆಗಾಣುವುದು. ಆಗ ಎಲ್ಲಾ ಪ್ರಾಣಿಗಳೂ ಸೂರ್ಯನ ರಶ್ಮಿಗಳಿಂದ ಸುಟ್ಟುಹೋಗುವುವು.

೭೪. ಪ್ರಪಂಚವೆಲ್ಲವೂ ನಾಶವಾದನಂತರ ಆದಿತ್ಯರೇ ಮೊದಲಾದ ದೇವಗಣಗಳೆಲ್ಲರೂ ಬ್ರಹ್ಮನನ್ನು ಮುಂದೆ ಮಾಡಿಕೊಂಡು ಪರಮಾತ್ಮನಾದ ನಾರಾಯಣನಲ್ಲಿ ಸೇರಿಹೋಗುವರು.

೭೫. ಆ ನಾರಾಯಣನು ಕಲ್ಪಾಂತದಲ್ಲಿ ಪುನಃ ಪುನಃ ಸರ್ವಪ್ರಾಣಿಗಳನ್ನೂ ಸೃಷ್ಟಿಮಾಡುವನು. ಹಿಂದಿನಂತೆಯೇ ಮತ್ತೆ ಕಾಲಸ್ವರೂಪನಾದ ಭಗವಾನ್ ರುದ್ರನೇ ಎಲ್ಲವನ್ನೂ ಸಂಹಾರಮಾಡುವನು.

೭೬-೭೭. ಮುಂದಿನ ಅಧ್ಯಾಯದಲ್ಲಿ ವೈವಸ್ವತಮನ್ವಂತರವನ್ನು ಹೇಳುವೆನು. ಎಲೈ ಶೌನಕನೇ, ಮನ್ವಂತರದ ಸೃಷ್ಟಿಯೆಲ್ಲವನ್ನೂ ಹೇಳಿಯಾಯಿತು. ಈ ಸೃಷ್ಟಿಯು

**ಇತಿ ತೇ ಕಥಿತಂ ಸರ್ವಂ ಮನ್ವಂತರಸಮುದ್ಭವಂ ।**
**ವಿಸರ್ಗಂ ಪುಣ್ಯಮಾಖ್ಯಾನಂ ಧನ್ಯಂ ಕುಲವಿವರ್ಧನಂ ॥ ೭೭**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಸರ್ವಮನ್ವಂತರಕೀರ್ತನಂ ನಾಮ ಚತುಸ್ತ್ರಿಂಶೋಽಧ್ಯಾಯಃ**



ಪವಿತ್ರಕರವಾದ ಇತಿಹಾಸವು. ಇದನ್ನು ಕೇಳಿದವರು ಧನ್ಯರಾಗುವರು. ಅವರ ವಂಶವೂ ಅಭಿವೃದ್ಧಿಯಾಗುವುದು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಸರ್ವಮನ್ವಂತರಕೀರ್ತನವೆಂಬ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಪಂಚತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ವಿವಸ್ವಾನ್ ಕಶ್ಯಪಾಜ್ಜಜ್ಞೇ ದಾಕ್ಷಾಯಿಣ್ಯಾಂ ಮಹಾಮುಷೇಃ ।
ತಸ್ಯ ಭಾರ್ಯಾಽಭವತ್ಸಂಜ್ಞಾ ತ್ವಾಷ್ಟ್ರೀ ದೇವೀ ಸುರೇಣುಕಾ ॥ ೧ ॥

ಮುನೇಽಸಹಿಷ್ಣುನಾ ತೇನ ತೇಜಸಾ ದುಸ್ಸಹೇನ ಚ ।
ಭರ್ತೃರೂಪೇಣ ನಾತುಷ್ಯದ್ರೂಪಯೌವನಶಾಲಿನೀ ॥ ೨ ॥

ಆದಿತ್ಯಸ್ಯ ಹಿ ತದ್ರೂಪಮಸಹಿಷ್ಣುಸ್ಸ್ವತೇಜಸಃ ।
ದಹ್ಯಮಾನಾ ತದೋದ್ವೇಗಮಕರೋದ್ವರವರ್ಣಿನೀ ॥ ೩ ॥

## ಮೂವತ್ತೈದನೆಯ ಅಧ್ಯಾಯವು

೧. ಸೂತನು ಹೇಳುವನು :—ಮಹಾಮುಷಿಯಾದ ಕಶ್ಯಪನಿಗೆ ದಾಕ್ಷಾಯಿಣಿಯಲ್ಲಿ ವಿವಸ್ವಾನನು (ಸೂರ್ಯನು) ಹುಟ್ಟಿದನು. ಅವನಿಗೆ ಸುರೇಣುಕಾ ಅಥವಾ ಸಂಜ್ಞಾ ಎಂಬ ಹೆಸರುಳ್ಳ ಪಟ್ಟಮಹಿಷಿ ಇದ್ದಳು. ಅವಳು ತ್ವಷ್ಟುಪ್ರಜಾಪತಿಯ ಮಗಳು.

೨-೩. ಎಲೈ ಮುನಿಯೇ, ಆ ವಿವಸ್ವಂತನ (ಸೂರ್ಯನ) ತೇಜಸ್ಸನ್ನೂ, ಅವನ ರೂಪವನ್ನೂ ತಡೆಯಲಾರದೆ ರೂಪಯೌವನಶಾಲಿಯಾದ ಆ ಸಂಜ್ಞೆಯು ಪತಿಯನ್ನಾಗಿ ಪರಿಗಣಿಸಲು ಇಷ್ಟಪಡಲಿಲ್ಲ. ಆ ಆದಿತ್ಯನ ತೇಜಸ್ಸಿನಿಂದ ದಗ್ಧಳಾಗಿ ಆ ಸುಂದರಿಯು ಉಗ್ವೇಗಗೊಂಡಳು.

ಋಷೇಽಸ್ಯಾಂ ತ್ರೀಣ್ಯಪತ್ಯಾನಿ ಜನಯಾಮಾಸ ಭಾಸ್ಕರಃ ।
ಸಂಜ್ಞಾಯಾಂ ತು ಮನುಃ ಪೂರ್ವಂ ಶ್ರಾದ್ಧದೇವಃ ಪ್ರಜಾಪತಿಃ ॥ ೪ ॥

ಯಮಶ್ಚ ಯಮುನಾ ಚೈವ ಯಮಲೌ ಸಂಬಭೂವತುಃ ।
ಏವಂ ಹಿ ತ್ರೀಣ್ಯಪತ್ಯಾನಿ ತಸ್ಯಾಂ ಜಾತಾನಿ ಸೂರ್ಯತಃ ॥ ೫ ॥

ಸಂವರ್ತುಲಂ ತು ತದ್ರೂಪಂ ದೃಷ್ಟ್ವಾ ಸಂಜ್ಞಾ ವಿವಸ್ವತಃ ।
ಅಸಂಹತೀ ತತಶ್ಛಾಯಾಮಾತ್ಮನಸ್ಸಾಽಸೃಜಚ್ಛುಭಾಂ ॥ ೬ ॥

ಮಾಯಾಮಯೀ ತು ಸಾ ಸಂಜ್ಞಾಮುವಾಚೇದ್ಭಕ್ತಿತಶ್ಶುಭೇ ।
ಕಿಂ ಕರೋಮೀಹ ಕಾರ್ಯಂ ತೇ ಕಥಯಸ್ವ ಶುಚಿಸ್ಮಿತೇ ॥ ೭ ॥

॥ ಸಂಜ್ಞೋವಾಚ ॥

ಅಹಂ ಯಾಸ್ಯಾಮಿ ಭದ್ರಂ ತೇ ಮಮೇವ ಭವನಂ ಪಿತುಃ ।
ತ್ವಯೈತದ್ಭವನೇ ಸತ್ಯಂ ವಸ್ತವ್ಯಂ ನಿರ್ವಿಕಾರತಃ ॥ ೮ ॥

೪-೫. ಎಲೈ ಮುನಿಯೇ, ಆ ಸೂರ್ಯನಿಗೆ ಸಂಜ್ಞಾದೇವಿಯಲ್ಲಿ ಮೊದಲು ಮನುವೂ, ಬಳಿಗ ಶ್ರಾದ್ಧಗಳಿಗೆ ಅಭಿಮಾನಿದೇವನಾದ ಯಮನೂ, ಯಮುನಾ ಎಂಬ ಕನ್ಯೆಯೂ ಹುಟ್ಟಿದರು. ಯಮ ಮತ್ತು ಯಾಮುನಾ ಎಂಬುವರು ಅವಳೀಮಕ್ಕಳು. ಈರೀತಿ ಸೂರ್ಯನಿಗೆ ಮೂವರು ಮಕ್ಕಳಾದರು.

೬. ಸಂಜ್ಞಾದೇವಿಯು ಸೂರ್ಯನ ಗುಂಡಾದ ಆಕಾರವನ್ನು ನೋಡಿ ಸಹಿಸಲಾರದೆ ತನ್ನ ಶರೀರದಿಂದ ಮಂಗಳಕರಳಾದ ಛಾಯೆಯನ್ನು ಸೃಷ್ಟಿಮಾಡಿದಳು.

೭. ಮಾಯಾಮಯಿಯಾದ ಆ ಛಾಯೆಯು ಭಕ್ತಿಯಿಂದ ಸಂಜ್ಞೆಯನ್ನು ಕುರಿತು, ಎಲೌ ಮಂಗಳಕರಳೇ, ಈಗ ನಾನೇನು ಮಾಡಲಿ? ನಾನು ಮಾಡಬೇಕಾದ ಕಾರ್ಯವನ್ನು ತಿಳಿಸು, ಎಂದು ಕೇಳಿದಳು.

೮-೯. ಸಂಜ್ಞೆಯು ಹೇಳಿದಳು:—ಎಲೈ ಶೋಭನಾಂಗಿ, ನಿನಗೆ ಮಂಗಳವಾಗಲಿ. ನಾನು ನಮ್ಮ ತಂದೆಯ ಮನೆಗೆ ಹೋಗುವೆನು. ನೀನು ಈ ಮನೆಯಲ್ಲಿ ಸತ್ಯವಂತಳಾಗಿ ನಿಶ್ಚಿಂತೆಯಿಂದ ಇರು. ಎಲೌ ಸಾಧ್ವಿ, ನೀನು ನನಗೆ ಒಳ್ಳೆಯದನ್ನು

ಇಮೌ ಮೇ ಬಾಲಕೌ ಸಾಧೂ ಕನ್ಯಾ ಚೇಯಂ ಸುಮಧ್ಯಮಾ ।
ಪಾಲನೀಯಾಃ ಸುಖೇನೈವ ಮಮ ಚೇದಿಚ್ಛಸಿ ಪ್ರಿಯಂ　　॥ ೯ ॥

॥ ಛಾಯೋವಾಚ ॥

ಆಕೇಶಗ್ರಹಣಾದ್ದೇವಿ ಸಹಿಷ್ಯೇऽಹಂ ಸುದುಷ್ಕೃತಂ ।
ನಾಖ್ಯಾಸ್ಯಾಮಿ ಮತಂ ತುಭ್ಯಂ ಗಚ್ಛ ದೇವಿ ಯಥಾ ಸುಖಂ　　॥ ೧೦ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಸಾऽಗಮದ್ದೇವೀ ವ್ರೀಡಿತಾ ಸನ್ನಿಧೌ ಪಿತುಃ ।
ಪಿತ್ರಾ ನಿರ್ಭರ್ತ್ಸಿತಾ ತತ್ರ ನಿಯುಕ್ತಾ ಸಾ ಪುನಃ ಪುನಃ　　॥ ೧೧ ॥

ಅಗಚ್ಛದ್ಬಡವಾ ಭೂತ್ವಾಚ್ಛಾದ್ಯ ರೂಪಂ ತತಸ್ಸ್ವಕಂ ।
ಕುರೂಂಸ್ತದೋತ್ತರಾನ್ ಪ್ರಾಪ್ಯ ನೃಣಾಂ ಮಧ್ಯೇ ಚಚಾರ ಹ　　॥ ೧೨ ॥

ಮಾಡಬೇಕೆಂದಿದ್ದರೆ ಈ ನನ್ನ ಇಬ್ಬರು ಗಂಡುಮಕ್ಕಳನ್ನೂ ಒಬ್ಬಳೇ ಆದ ಹೆಣ್ಣು ಮಗುವನ್ನೂ ಚೆನ್ನಾಗಿ ಪೋಷಿಸುತ್ತಾ ಕಾಪಾಡು ಎಂದಳು.

೧೦. ಛಾಯೆಯು ಹೇಳಿದಳು :—ಎಲೌ ದೇವೀ, ನಿನ್ನ ಮಕ್ಕಳು ನನ್ನ ಕೂದಲನ್ನು ಹಿಡಿದೆಳೆದರೂ ಆ ತಪ್ಪನ್ನು ನಾನು ಸಹಿಸುವೆನು. ನಿನಗೆ ಸಹಿತ ಅವರ ತಪ್ಪುಗಳನ್ನು ಹೇಳುವುದಿಲ್ಲ. ನೀನು ಸುಖವಾಗಿ ಪ್ರಯಾಣಮಾಡು ಎಂದಳು.

೧೧. ಛಾಯೆಯು ಈರೀತಿಯಾಗಿ ಹೇಳಲು, ಅನಂತರ ಸಂಜ್ಞೆಯು ನಾಚಿಕೆಯಿಂದ ತನ್ನ ತಂದೆಯ ಸಮೀಪಕ್ಕೆ ಬಂದಳು. ತಂದೆಯು ಇವಳ ವಿಷಯವನ್ನು ತಿಳಿದು ಬಾರಿಬಾರಿಗೂ ಇವಳನ್ನು ನಿಂದಿಸಿದನು.

೧೨. ಆನಂತರ ಸಂಜ್ಞೆಯು ತನ್ನ ರೂಪವನ್ನು ಮರೆಸಿಕೊಂಡು ಹೆಣ್ಣು ಕುದುರೆಯ ರೂಪವನ್ನು ತಾಳಿ ಕುರುದೇಶಗಳಲ್ಲಿಯೂ, ಅವುಗಳ ಉತ್ತರದೇಶಗಳಲ್ಲಿಯೂ ಜನಗಳ ಮಧ್ಯದಲ್ಲಿ ಸಂಚರಿಸುತ್ತಿದ್ದಳು.

ಸಂಜ್ಞಾಂ ತಾಂ ತು ರವಿರ್ಮತ್ವಾ ಛಾಯಾಯಾಂ ಸುಸುತಂ ತದಾ ।
ಜನಯಾಮಾಸ ಸಾವರ್ಣಿಂ ಮನುಂ ವೈ ಸವಿತಾ ಕಿಲ ॥ ೧೩ ॥

ಸಂಜ್ಞಾನುಪ್ರಾರ್ಥಿತಾ ಛಾಯಾ ಸಾ ಸ್ವಪುತ್ರೇಽಪಿ ನಿತ್ಯಶಃ ।
ಚಕಾರಾಭ್ಯಧಿಕಂ ಸ್ನೇಹಂ ನ ತಥಾ ಪೂರ್ವಜೇ ಸುತೇ ॥ ೧೪ ॥

ಅನುಜಶ್ಚಾಕ್ಷಮತನ್ವೈತ್ತು ಯಮಸ್ತಂ ನೈವ ಚಕ್ಷಮೇ ।
ಸ ಸರೋಷಸ್ತು ಬಾಲ್ಯಾಚ್ಚ ಭಾವಿನೋಽರ್ಥಸ್ಯ ಗೌರವಾತ್ ॥ ೧೫ ॥

ಛಾಯಾಂ ಸಂತರ್ಜಯಾಮಾಸ ಯದಾ ವೈವಸ್ವತೋ ಯಮಃ ।
ತಂ ಶಶಾಪ ತತಃ ಕ್ರೋಧಾಚ್ಛಾಯಾ ತು ಕಲುಷೀಕೃತಾ ॥ ೧೬ ॥

ಚರಣಃ ಪತತಾಮೇಷ ತವೇತಿ ಭೃಶರೋಷಿತಃ ।
ಯಮಸ್ತತಃ ಪಿತುಸ್ಸರ್ವಂ ಪ್ರಾಂಜಲಿಃ ಪ್ರತ್ಯವೇದಯತ್ ॥ ೧೭ ॥

೧೩. ಸಂಜ್ಞೆಯು ಈರೀತಿಯಾಗಿರುವುದನ್ನು ಸೂರ್ಯನು ತಿಳಿದುಕೊಂಡನು. ಇದೇ ಸಮಯದಲ್ಲಿ ಸೂರ್ಯನಿಗೆ ಛಾಯೆಯಲ್ಲಿ ಸಾವರ್ಣಿಮನುವೆಂಬ ಶ್ರೇಷ್ಠನಾದ ಮಗನು ಹುಟ್ಟಿದನು.

೧೪. ಸಂಜ್ಞೆಯು ಛಾಯೆಯನ್ನು ತನ್ನ ಪುತ್ರರ ವಿಷಯದಲ್ಲಿ ಪ್ರಾರ್ಥಿಸಿಕೊಂಡಿದ್ದರೂ ಛಾಯೆಯು ಸಂಜ್ಞೆಯ ಪುತ್ರರಿಗಿಂತಲೂ ತನ್ನ ಮಗನನ್ನು ಅಧಿಕವಾಗಿ ಪ್ರೀತಿಸಲು ಪ್ರಾರಂಭಿಸಿದಳು.

೧೫. ಸಾವರ್ಣಿಯು ತನ್ನ ಅಣ್ಣನನ್ನು ಏನಾದರೂ ಅನ್ನುತ್ತಿದ್ದನು. ಅಣ್ಣನಾದ ಯಮನು ಅವನನ್ನು ಅನ್ನಲಾರದೆ ಕೋಪಗೊಳ್ಳುತ್ತಿದ್ದನು. ಅವನು ಬಾಲಕನಾದುದರಿಂದಲೂ ಮುಂದೆ ಉಂಟಾಗುವ ಅಧಿಕವಾದ ಪ್ರಯೋಜನದಿಂದಲೂ ತಮ್ಮನಾದ ಸಾವರ್ಣಿಯನ್ನು ಏನೂ ಅನ್ನುತ್ತಿರಲಿಲ್ಲ.

೧೬-೧೭. ಒಂದುದಿನ ಯಮನು ಛಾಯೆಯನ್ನು ಗದರಿಸಿಕೊಂಡನು. ಅವಳ ಮನಸ್ಸು ಕೆಟ್ಟುಹೋಗಲು ಕೋಪದಿಂದ ನಿನ್ನ ಕಾಲು ಬಿದ್ದುಹೋಗಲಿ ಎಂದು ಶಾಪ ಕೊಟ್ಟಳು. ಅನಂತರ ಯಮನು ತನ್ನ ತಂದೆಯ ಹತ್ತಿರಕ್ಕೆ ಹೋಗಿ ಅಂಜಲಿಬದ್ಧನಾಗಿ ಎಲ್ಲವನ್ನೂ ಹೇಳಿದನು.

ಭೃಶಂ ಶಾಪಭಯೋದ್ವಿಗ್ನಸ್ಸಂಜ್ಞಾವಾಕ್ಯೈರ್ವಿಚೇಷ್ಟಿತಃ ।
ಮಾತ್ರಾ ಸ್ನೇಹೇನ ಸರ್ವೇಷು ವರ್ತಿತವ್ಯಂ ಸುತೇಷು ವೈ　　॥ ೧೮ ॥

ಸ್ನೇಹಮಸ್ಮಾಸ್ವಪಾಕೃತ್ಯ ಕನೀಯಾಂಸಂ ಬಿಭರ್ತಿ ಸಾ ।
ತಸ್ಮಾನ್ಮಯೋದ್ಯತಂ ಪಾದಸ್ತದ್ಭವಾನ್ ಕ್ಷಂತುಮರ್ಹಸಿ　　॥ ೧೯ ॥

ಶಪ್ತೋಽಹಮಸ್ಮಿ ದೇವೇಶ ಜನನ್ಯಾ ತಪತಾಂ ವರ ।
ತವ ಪ್ರಸಾದಾಚ್ಚರಣೋ ನ ಪತೇನ್ಮಮ ಗೋಪತೇ　　॥ ೨೦ ॥

॥ ಸವಿತೋವಾಚ ॥

ಅಸಂಶಯಂ ಪುತ್ರ ಮಹದ್ಭವಿಷ್ಯತ್ಯತ್ರ ಕಾರಣಂ ।
ಯೇನ ತ್ವಾಮಾವಿಶತ್ಕ್ರೋಧೋ ಧರ್ಮಜ್ಞಂ ಸತ್ಯವಾದಿನಂ　　॥ ೨೧ ॥

ನ ಶಕ್ಯತೇ ತನ್ಮಿಥ್ಯಾ ವೈ ಕರ್ತುಂ ಮಾತೃವಚಸ್ತವ ।
ಕೃಮಯೋ ಮಾಂಸಮಾದಾಯ ಗಮಿಷ್ಯಂತಿ ಮಹೀತಲೇ　　॥ ೨೨ ॥

೧೮-೨೦. ಶಾಪಭಯದಿಂದ, ಉದ್ವಿಗ್ನನಾಗಿ ತನ್ನ ತಾಯಿಯಾದ ಸಂಜ್ಞೆಯ ಮಾತಿನಂತೆ ತಂದೆಯ ಹತ್ತಿರಕ್ಕೆ ಹೋಗಿ—ಎಲೈ ಕಿರಣಾಧಿಪತಿಯಾದ ಸೂರ್ಯನೇ, ತಾಯಿಯಾದವಳು ಎಲ್ಲ ಪುತ್ರರಲ್ಲಿಯೂ ಒಂದೇಸಮನಾದ ಪ್ರೀತಿಯನ್ನು ತೋರಿಸಬೇಕು. ಹೀಗಿರುವಲ್ಲಿ ಛಾಯೆಯು ನಮ್ಮನ್ನು ತಿರಸ್ಕರಿಸಿ ಕಿರಿಯವನಾದ ಸಾವರ್ಣಿಯನ್ನು ಮಾತ್ರ ಪ್ರೀತಿಸುತ್ತಿರುವಳು. ಈ ವಿಷಯದಲ್ಲಿ ನಾನು ಪ್ರವರ್ತಿಸಲು ನನ್ನ ಒಂದು ಕಾಲು ಬಿದ್ದುಹೋಗಲೆಂದು ತಾಯಿಯೇ ಶಾಪವನ್ನು ಕೊಟ್ಟಿರುವಳು. ಓ ದೇವನೇ, ನನ್ನನ್ನು ಕ್ಷಮಿಸು. ನಿನ್ನ ಅನುಗ್ರಹದಿಂದ ಕಾಲು ಬಿದ್ದುಹೋಗದಂತೆ ಅನುಗ್ರಹಿಸು ಎಂದನು.

೨೧-೨೨. ಸೂರ್ಯನಿಂತೆಂದನು :—ಎಲೈ ಮಗನೇ, ಧರ್ಮಜ್ಞನೂ, ಸತ್ಯವಾದಿಯೂ ಆದ ನಿನಗೆ ಕೋಪವುಂಟಾಗಲು ಏನೋ ಮಹತ್ತಾದ ಕಾರಣವಿರಬೇಕು. ಇದರಲ್ಲಿ ಸಂದೇಹವಿಲ್ಲ. ನಿನ್ನ ತಾಯಿಯ ವಚನವು ಎಂದೂ ಸುಳ್ಳಾಗುವುದಿಲ್ಲ. ಸುಳ್ಳು ಮಾಡುವುದಕ್ಕೂ ಆಗುವುದಿಲ್ಲ. ನಿನ್ನ ಕಾಲಿನ ಮಾಂಸವನ್ನು ಕ್ರಿಮಿಗಳು ತೆಗೆದುಕೊಂಡು ಭೂಲೋಕಕ್ಕೆ ಹೋಗುವುವು. ಈ ವಾಕ್ಯವು ಸತ್ಯವಾಗಿರುವುದು.

ತದ್ವಾಕ್ಯಂ ಭವಿತಾ ಸತ್ಯಂ ತ್ವಂ ಚ ತ್ರಾತಾ ಭವಿಷ್ಯಸಿ ।
ಕುರು ತಾತ ನ ಸಂದೇಹಂ ಮನಶ್ಚಾಶ್ವಾಸ್ಯ ಸ್ವಂ ಪ್ರಭೋ ॥ ೨೩ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ತನಯಂ ಸೂರ್ಯೋ ಯಮಸಂಜ್ಞಂ ಮುನೀಶ್ವರ ।
ಆದಿತ್ಯಶ್ಚಾಬ್ರವೀತ್ತಾಂ ತು ಛಾಯಾಂ ಕ್ರೋಧಸಮನ್ವಿತಃ ॥ ೨೪ ॥

॥ ಸೂರ್ಯ ಉವಾಚ ॥

ಹೇ ಪ್ರಿಯೇ ಕುಮತೇ ಚಂಡಿ ಕಿಂ ತ್ವಯಾಚರಿತಂ ಕಿಲ ।
ಕಿಂತು ಮೇಽಭ್ಯಧಿಕಃ ಸ್ನೇಹ ಏತದಾಖ್ಯಾತುಮರ್ಹಸಿ ॥ ೨೫ ॥

॥ ಸೂತ ಉವಾಚ ॥

ಸಾ ರವೇರ್ವಚನಂ ಶ್ರುತ್ವಾ ಯಾಥಾತಥ್ಯಂ ನ್ಯವೇದಯತ್ ।
ನಿರ್ದಗ್ಧಾ ಕಾಮರವಿಣಾ ಸ್ವಾಂತಯಾಮಾಸ ವೈ ತದಾ ॥ ೨೬ ॥

॥ ಛಾಯೋವಾಚ ॥

ತವಾತಿತೇಜಸಾ ದಗ್ಧಾ ಇದಂ ರೂಪಂ ನ ಶೋಭತೇ ।
ಅಸಂಹತೀ ಚ ತತ್ಸಂಜ್ಞಾ ವನೇ ವಸತಿ ಶಾದ್ವಲೇ ॥ ೨೭ ॥

---

ಇದರ ರಕ್ಷಕನೂ ನೀನೇ ಆಗುವೆ. ಮಗುವೇ, ಸಂದೇಹಪಡಬೇಡ. ಮನಸ್ಸನ್ನು ಸಮಾಧಾನಮಾಡಿಕೋ ಎಂದನು.

೨೪-೨೫. ಈರೀತಿಯಾಗಿ ಸೂರ್ಯನು ತನ್ನ ಮಗನಾದ ಯಮನನ್ನು ಸಮಾಧಾನಪಡಿಸಿ ಕೋಪದಿಂದ ಛಾಯೆಯನ್ನು ಕುರಿತು, ಎಲೌ ಪ್ರಿಯಳೇ, ನೀನು ಕೆಟ್ಟಬುದ್ಧಿಯುಳ್ಳವಳು, ಚಂಡಿಯು. ನೀನೆಂತಹ ಕೆಲಸವನ್ನು ಮಾಡಿರುವೆ? ನಿನ್ನಲ್ಲಿ ನನಗೆ ಅತಿಶಯವಾದ ಪ್ರೀತಿ ಇದೆ. ನೀನೇತಕ್ಕೆ ಆರೀತಿ ಮಾಡಿದೆ? ಅದನ್ನು ನನಗೆ ತಿಳಿಸು ಎಂದನು.

೨೬. ಆ ಛಾಯೆಯು ಸೂರ್ಯನ ವಚನವನ್ನು ಕೇಳಿ, ನಡೆದ ವಿಷಯವನ್ನೆಲ್ಲಾ ಸತ್ಯವಾಗಿ ಹೇಳಿದಳು. ಕಾಮಾಂಧಳಾದ ಛಾಯೆಯು ಅನಂತರ ಅವನನ್ನು ಸಮಾಧಾನಗೊಳಿಸಿದಳು.

೨೭-೨೮. ಛಾಯೆಯು ಇಂತೆಂದಳು:—ನಿನ್ನ ತೇಜಸ್ಸಿನ ಉಲ್ಬಣವನ್ನು ತಡೆಯಲಾರದೆ ನಿನ್ನ ರೂಪು ಚೆನ್ನಾಗಿಲ್ಲವೆಂದು ಸಂಜ್ಞೆಯು ವನದ ಪೊದರುಗಳಲ್ಲಿ

ಶ್ಲಾಘ್ಯಾ ಯೋಗಬಲೋಪೇತಾ ಯೋಗಮಾಸಾದ್ಯ ಗೋಪತೇ ।
ಅನುಕೂಲಸ್ತು ದೇವೇಶ ಸಂದಿಶ್ಯಾತ್ಮಮಯಂ ಮತಂ ॥ ೨೮ ॥

ರೂಪಂ ನಿವರ್ತಯಾಮ್ಯದ್ಯ ತವ ಕಾಂತಂ ಕರೋಮ್ಯಹಂ ।
ತಚ್ಛ್ರುತ್ವಾಪಗತಕ್ರೋಧೋ ಮಾರ್ತಂಡಸ್ಯ ವಿವಸ್ವತಃ ॥ ೨೯ ॥

॥ ಸೂತ ಉವಾಚ ॥

ಭ್ರಮಿಮಾರೋಪ್ಯ ತತ್ತೇಜಃ ಶಾತಯಾಮಾಸ ವೈ ಮುನಿಃ ।
ತತೋ ವಿಭ್ರಾಜಿತಂ ರೂಪಂ ತೇಜಸಾ ಸಂವೃತೇನ ಚ ॥ ೩೦ ॥

ಕೃತಂ ಕಾಂತತರಂ ರೂಪಂ ತ್ವಷ್ಟ್ರಾ ತಚ್ಛುಭೇ ತದಾ ।
ತತೋಧಿಯೋಗಮಾಸ್ಥಾಯ ಸ್ವಾಂ ಭಾರ್ಯಾಂ ಹಿ ದದರ್ಶ ಹ ॥ ೩೧ ॥

ವಾಸಮಾಡುತ್ತಿರುವಳು. ಯೋಗಬಲದಿಂದ ಶ್ಲಾಘ್ಯವಾದ ತಪಸ್ಸನ್ನು ಮಾಡುತ್ತಿರುವಳು. ಎಲೈ ದೇವೇಶನೇ, ನನ್ನ ಅಭಿಪ್ರಾಯವನ್ನು ತಿಳಿಸುವೆನು. ನಾನೀಗ ನಿನ್ನ ರೂಪವನ್ನು ಬದಲಾಯಿಸಿ ನನಗೆ ಅನುರೂಪವಾಗಿ ಮಾಡಿಕೊಳ್ಳುವಂತೆ ಅನುಮತಿ ಕೊಡು ಎಂದು ಕೇಳಿದಳು. ಅದನ್ನು ಕೇಳಿ ಸೂರ್ಯನ ಕೋಪವು ಶಾಂತವಾಯಿತು.

೨೯. ಅನಂತರ ಕ್ರೋಧವು ಶಾಂತವಾಗಲು ಸೂರ್ಯನನ್ನು ಭ್ರಮಿಯನ್ನು (ಸಾಣೆ) ಹತ್ತಿಸಿ ಅವನ ತೇಜಸ್ಸನ್ನು ಕಡಿಮೆಮಾಡಿದರು.

೩೦. ಅನಂತರ ತ್ವಷ್ಟೃವು ಸೂರ್ಯನನ್ನು ಸಾಣೆಹತ್ತಿಸಿ ಹೆಚ್ಚಾಗಿದ್ದ ತೇಜಸ್ಸನ್ನು ಕಡಿಮೆಮಾಡಿದನು. ಬಳಿಕ ಸೂರ್ಯನು ಪ್ರಕಾಶಮಾನವಾದ ಮತ್ತು ಸುಂದರವಾದ ರೂಪವನ್ನು ಹೊಂದಿ ಪ್ರಕಾಶಿಸತೊಡಗಿದನು.

೩೧. ಅನಂತರ ತನ್ನ ಪತ್ನಿಯಾದ ಸಂಜ್ಞೆಯು ಯೋಗಾಭ್ಯಾಸವನ್ನು ಮಾಡುತ್ತಿದ್ದ ಸ್ಥಳಕ್ಕೆ ಹೋದನು. ಅಲ್ಲಿ ಅವಳು ತನ್ನ ಯೋಗನಿಯಮದಿಂದಲೂ, ತೇಜಸ್ಸಿನಿಂದಲೂ ಪವಿತ್ರಳಾಗಿದ್ದಳು.

ಅಧೃಷ್ಯಾಂ ಸರ್ವಭೂತಾನಾಂ ತೇಜಸಾ ನಿಯಮೇನ ಚ ।
ಸೋಽಶ್ವರೂಪಂ ಸಮಾಸ್ಥಾಯ ಗತ್ವಾ ತಾಂ ಮೈಥುನೇಚ್ಛಯಾ ॥ ೩೨ ॥

ಮೈಥುನಾಯ ವಿಚೇಷ್ಟಂತೀಂ ಪರಪುಂಸೋಽಭಿಶಂಕಯಾ ।
ಮುಖತೋ ನಾಸಿಕಾಯಾಂ ತು ಶುಕ್ರಂ ತದ್ವ್ಯದಧಾನ್ಮುನೇ ॥ ೩೩ ॥

ದೇವೌ ತತಃ ಪ್ರಜಾಯೇತಾಮಶ್ವಿನೌ ಭಿಷಜಾಂ ವರೌ ।
ನಾಸತ್ಯೌ ತೌ ಚ ದಸ್ರೌ ಸ್ಮೃತೌ ದ್ವಾವಶ್ವಿನಾವಪಿ ॥ ೩೪ ॥

ತೌ ತು ಕಾಂತೇನ ರೂಪೇಣ ದರ್ಶಯಾಮಾಸ ಭಾಸ್ಕರಃ ।
ಆತ್ಮಾನಂ ಸಾ ತು ತಂ ದೃಷ್ಟ್ವಾ ಪ್ರಹೃಷ್ಟಾ ಪತಿಮಾದರಾತ್ ॥ ೩೫ ॥

ಪತ್ಯಾ ತೇನ ಗೃಹಂ ಪ್ರಾಗಾತ್ ಸ್ವಂ ಸತೀ ಮುದಿತಾನನಾ ।
ಮುಮುದಾತೇಽಥ ತೌ ಪ್ರೀತ್ಯಾ ದಂಪತೀ ಪೂರ್ವತೋಽಧಿಕಂ ॥ ೩೬ ॥

ಯಮಸ್ತು ಕರ್ಮಣಾ ತೇನ ಭೃಶಂ ಪೀಡಿತಮಾನಸಃ ।
ಧರ್ಮೇಣ ರಂಜಯಾಮಾಸ ಧರ್ಮರಾಜ ಇಮಾಃ ಪ್ರಜಾಃ ॥ ೩೭ ॥

---

೩೨-೩೩. ಸೂರ್ಯನು ಕುದುರೆಯ ರೂಪವನ್ನು ಧರಿಸಿ ಅವಳ ಸಂಗವನ್ನು ಬಯಸಿ ಅಲ್ಲಿಗೆ ಬಂದನು. ಆ ಸಂಜ್ಞೆ-ಯೂ ಮೈಥುನೇಚ್ಛೆಯಿಂದ ತಿರುಗಾಡುತ್ತಿರಲು ಕುದುರೆಯ ರೂಪವನ್ನು ಧರಿಸಿಬಂದ ಸೂರ್ಯನನ್ನು ಪರಪುರುಷನೆಂದು ಶಂಕಿಸಿದಳು. ಆಗ ಸೂರ್ಯನು ಅವಳ ಮುಖದ ಮೂಲಕ ಮೂಗಿನಲ್ಲಿ ತನ್ನ ವೀರ್ಯವನ್ನಿಟ್ಟನು.

೩೪. ಆಗ ಅಶ್ವಿನೀ ದೇವತೆಗಳೆಂಬ ಇಬ್ಬರು ವೈದ್ಯಶ್ರೇಷ್ಠರು ಹುಟ್ಟಿದರು. ಅವರಿಗೆ ನಾಸತ್ಯಾ, ದಸ್ರಾ ಎಂಬುದಾಗಿ ಹೆಸರುಂಟಾಯಿತು.

೩೫. ಅವರಿಬ್ಬರೂ ಮನೋಹರವಾದ ರೂಪವುಳ್ಳವರಾಗಿದ್ದರು. ಸಂಜ್ಞೆಯೂ ಸುಂದರಾಕಾರನಾದ ತನ್ನ ಪತಿಯನ್ನು ನೋಡಿ ಬಹಳ ಸಂತೋಷಪಟ್ಟಳು.

೩೬. ಅನಂತರ ಸಂಜ್ಞೆಯು ಸಂತೋಷದಿಂದ ಸೂರ್ಯನೊಡನೆ ತನ್ನ ಮನೆಗೆ ಬಂದಳು. ಆ ದಂಪತಿಗಳು ಹಿಂದೆ ಇದ್ದುದಕ್ಕಿಂತ ಒಬ್ಬರನ್ನೊಬ್ಬರು ಅಧಿಕವಾಗಿ ಪ್ರೀತಿಸುತ್ತಿದ್ದರು.

೩೭. ಯಮನು ತಾನು ಮಾಡಿದ ಕೆಲಸದಿಂದ ಅತ್ಯಂತ ವ್ಯಥೆಗೊಂಡನು. ಪ್ರಜೆಗಳೆಲ್ಲರನ್ನೂ ಧರ್ಮದಿಂದ ಆಳಿ ಆನಂದದಿಂದಿದ್ದನು.

ಲೇಭೇ ಸ ಕರ್ಮಣಾ ತೇನ ಧರ್ಮರಾಜೋ ಮಹಾದ್ಯುತಿಃ ।
ಪಿತ್ರ್ಯಾಣಾಮಾಧಿಪತ್ಯಂ ಚ ಲೋಕಪಾಲತ್ವಮೇವ ಚ　　॥ ೩೮ ॥

ಮನುಃ ಪ್ರಜಾಪತಿಸ್ತ್ವಾಸೀತ್ ಸಾವರ್ಣಿಸ್ಸ ತಪೋಧನಃ ।
ಭಾವ್ಯಃ ಸ ಕರ್ಮಣಾ ತೇನ ಮನೋಸ್ಸಾವರ್ಣಿಕೇಂತರೇ　　॥ ೩೯ ॥

ಮೇರುಪೃಷ್ಠೇ ತತೋ ಘೋರಮದ್ಯಾಪಿ ಚರತೇ ಪ್ರಭುಃ ।
ಯವೀಯಸೀ ತಯೋರ್ಯಾ ತು ಯಮೀ ಕನ್ಯಾ ಯಶಸ್ವಿನೀ　　॥ ೪೦ ॥

ಅಭವತ್ಸಾ ಸರಿಚ್ಛ್ರೇಷ್ಠಾ ಯಮುನಾ ಲೋಕಪಾವನೀ ।
ಮನುರಿತ್ಯುಚ್ಯತೇ ಲೋಕೇ ಸಾವರ್ಣಿರಿತಿ ಚೋಚ್ಯತೇ　　॥ ೪೧ ॥

ಯ ಇದಂ ಜನ್ಮ ದೇವಾನಾಂ ಶೃಣುಯಾದ್ಧಾರಯೇತ್ತು ವಾ ।
ಆಪದಂ ಪ್ರಾಪ್ಯ ಮುಚ್ಯೇತ ಪ್ರಾಪ್ನುಯಾತ್ಸುಮಹದ್ಯಶಃ　　॥ ೪೨ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಮನ್ವಂತರಕೀರ್ತನೇ ವೈವಸ್ವತವರ್ಣನಂ ನಾಮ ಪಂಚತ್ರಿಂಶೋಽಧ್ಯಾಯಃ

೩೮. ಮಹಾತೇಜಸ್ವಿಯಾದ ಧರ್ಮರಾಜನು (ಯಮನು) ತನ್ನ ಧರ್ಮ ಪ್ರಜಾಪಾಲನೆಯಿಂದ ಪಿತೃಗಳ ರಾಜನಾಗಿಯೂ, ಲೋಕಪಾಲಕನಾಗಿಯೂ ಆದನು.

೩೯. ಸೂರ್ಯಪುತ್ರನಾದ ಸಾವರ್ಣಿಯು ತಪಸ್ಸಿನಲ್ಲಿ ನಿರತನಾಗಿದ್ದನು. ಅವನು ತನ್ನ ತಪಃಕರ್ಮಗಳಿಂದ ಮುಂದಿನ ಮನ್ವಂತರದಲ್ಲಿ ಮನುವಾಗುವನು. ಅವನು ಈಗಲೂ ಮೇರುಪರ್ವತದ ತಪ್ಪಲಿನಲ್ಲಿ ಉಗ್ರವಾದ ತಪಸ್ಸನ್ನು ಮಾಡು ತ್ತಿರುವನು.

೪೦. ಸೂರ್ಯನ ಮಕ್ಕಳಲ್ಲಿ ಕಿರಿಯವಳಾದ ಯಮುನೆಯು ಒಳ್ಳೇ ಕೀರ್ತಿ ವಂತಳಾಗಿ ನದಿಗಳಲ್ಲೆಲ್ಲಾ ಶ್ರೇಷ್ಠಳೆನಿಸಿ ಲೋಕದ ಜನರನ್ನು ಪವಿತ್ರರನ್ನಾಗಿ ಮಾಡುತ್ತಿರುವಳು.

೪೧-೪೨. ಮನುಗಳನ್ನು ಮನು ಎಂಬುದಾಗಿಯೂ, ಸಾವರ್ಣಿ ಎಂಬುದಾ ಗಿಯೂ ಕರೆಯುವರು. ಯಾರು ಈ ದೇವತೆಗಳ ಜನ್ಮವೃತ್ತಾಂತವನ್ನು ಕೇಳುವರೋ ಅವರು ಆಪತ್ತುಗಳಿಂದ ಮುಕ್ತರಾಗಿ ಕೀರ್ತಿಯನ್ನು ಪಡೆಯುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಮನ್ವಂತರಕೀರ್ತನೆಯಲ್ಲಿ ವೈವಸ್ವತವರ್ಣನವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಷಟ್‌ತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಮನೋರ್ವೈವಸ್ವತಸ್ಯಾಸನ್ ಪುತ್ರಾ ವೈ ನವ ತತ್ಸಮಾಃ ।
ಪಶ್ಚಾನ್ಮಹೋನ್ನತಾ ಧೀರಾಃ ಕ್ಷತ್ರಧರ್ಮಪರಾಯಣಾಃ ॥ ೧ ॥

ಇಕ್ಷ್ವಾಕುಃ ಶಿಬಿನಾಭಾಗೌ ಧೃಷ್ಟಃ ಶರ್ಯಾತಿರೇವ ಚ ।
ನರಿಷ್ಯಂತೋಽಥ ನಭಾಗಃ ಕರೂಷಶ್ಚ ಪ್ರಿಯವ್ರತಃ ॥ ೨ ॥

ಅಕರೋತ್ಪುತ್ರಕಾಮಸ್ತು ಮನುರಿಷ್ಟಿಂ ಪ್ರಜಾಪತಿಃ ।
ಅನುತ್ಪನ್ನೇಷು ಪುತ್ರೇಷು ತತ್ರೇಷ್ಟ್ಯಾಂ ಮುನಿಪುಂಗವಃ ॥ ೩ ॥

## ಮೂವತ್ತಾರನೆಯ ಅಧ್ಯಾಯವು

೧–೨. ವೈವಸ್ವತಮನುವಿಗೆ ಇಕ್ಷ್ವಾಕು, ಶಿಬಿ, ನಾಭಾಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಭಾಗ, ಕರೂಷ, ಪ್ರಿಯವ್ರತ ಎಂಬ ಒಂಭತ್ತು ಜನ ಮಕ್ಕಳಿದ್ದರು. ಇವರು ಧೀರರಾಗಿಯೂ, ಕ್ಷತ್ರಧರ್ಮಪರಾಯಣರಾಗಿಯೂ ಇದ್ದರು.

೩–೫. ಮನುಪ್ರಜಾಪತಿಯು ತನಗೆ ಮಕ್ಕಳಿಲ್ಲದಿರಲು, ಮಕ್ಕಳಾಗಬೇಕೆಂದು ಪುತ್ರೇಷ್ಟಿಯೆಂಬ ಒಂದು ಯಾಗವನ್ನು ಮಾಡಿದನು. ಆ ಯಾಗದಲ್ಲಿ ಇಲಾ (ಇಡಾ)

ಸಾ ಹಿ ದಿವ್ಯಾಂಬರಧರಾ ದಿವ್ಯಾಭರಣಭೂಷಿತಾ ।
ದಿವ್ಯಸಂಹನನಾ ಚೈವಮಿಲಾ ಜಜ್ಞೇ ಹಿ ವಿಶ್ರುತಾ ॥ ೪ ॥

ತಾಮಿಡೇತ್ಯೇವ ಹೋವಾಚ ಮನುರ್ದಂಡಧರಸ್ತಥಾ ।
ಅನುಗಚ್ಛಸ್ವ ಮಾಮೇತಿ ತಮಿಡಾ ಪ್ರತ್ಯುವಾಚ ಹ ॥ ೫ ॥

ಧರ್ಮಯುಕ್ತಮಿದಂ ವಾಕ್ಯಂ ಪುತ್ರಕಾಮಂ ಪ್ರಜಾಪತಿಂ ।
॥ ಇಡೋವಾಚ ॥
ಮಿತ್ರಾವರುಣಯೋರಂಶೈರ್ಜಾತಾಸ್ಮಿ ವದತಾಂ ವರ ॥ ೬ ॥

ತಯೋಸ್ಸಕಾಶಂ ಯಾಸ್ಯಾಮಿ ನ ಮೇಽಧರ್ಮೋ ರುಚಿರ್ಭವೇತ್ ।
ಏವಮುಕ್ತ್ವಾ ಸತೀ ಸಾ ತು ಮಿತ್ರಾವರುಣಯೋಸ್ತತಃ ॥ ೭ ॥

ಗತ್ವಾಂತಿಕಂ ವರಾರೋಹಾ ಪ್ರಾಂಜಲಿರ್ವಾಕ್ಯಮಬ್ರವೀತ್ ।
ಅಂಶೈಸ್ತು ಯುವಯೋರ್ಜಾತಾ ಮನುಯಜ್ಞೇ ಮಹಾಮುನೀ ॥ ೮ ॥

ಆಗತಾ ಭವತೋರಂತಿ ಬ್ರೂತಂ ಕಿಂ ಕರವಾಣಿ ವಾಂ ।
ಅನ್ಯಾನ್ಪುತ್ರಾನ್ಸೃಜ ವಿಭೋ ತೈರ್ವಂಶಸ್ತೇ ಭವಿಷ್ಯತಿ ॥ ೯ ॥

ಎಂಬ ದೇವತೆಯು ದಿವ್ಯವಸ್ತ್ರಗಳನ್ನು ಧರಿಸಿ, ದಿವ್ಯಾಲಂಕಾರಭೂಷಿತಳಾಗಿ ಉತ್ಪನ್ನಳಾದಳೆಂದು ಕೇಳಿರುವೆನು. ಆಗ ಮನುವು ಕೈಯಲ್ಲಿ ದಂಡವನ್ನು ಹಿಡಿದು ಪುತ್ರಾಭಿಲಾಷೆಯಿಂದ ಈ ಇಡೆಯನ್ನು ಕುರಿತು, ನನ್ನ ಹಿಂದೆ ಬಾ ಎನ್ನಲು ಆ ಮನುವನ್ನು ಕುರಿತು ಇಡೆಯಿಂತೆಂದಳು.

೬. ಎಲೈ ಮನುವೇ, ನಾನು ಹೇಳುವುದು ಧರ್ಮಯುಕ್ತವಾದುದು. ನಾನು ಮಿತ್ರಾವರುಣರ ಅಂಶದಿಂದ ಹುಟ್ಟಿದವಳು. ನಾನೀಗ ಅವರ ಹತ್ತಿರಕ್ಕೆ ಹೋಗುವೆನು. ನನಗೆ ಅಧರ್ಮದಲ್ಲಿ ಆಸಕ್ತಿ ಇಲ್ಲ.

೭-೯. ಈರೀತಿಯಾಗಿ ಹೇಳಿ ಪತಿವ್ರತೆಯಾದ ಇಡೆಯು ಮಿತ್ರಾವರುಣರ ಸಮೀಪಕ್ಕೆ ಹೋಗಿ ಅಂಜಲಿಬದ್ಧಳಾಗಿ ಎಲೈ ಋಷಿಗಳೇ, ನಾನು ನಿಮ್ಮ ಅಂಶದಿಂದ ಮನುವಿನ ಯಜ್ಞದಲ್ಲಿ ಹುಟ್ಟಿದೆನು. ನಾನೀಗ ನಿಮ್ಮ ಸಮೀಪಕ್ಕೆ ಬಂದಿರುವೆನು. ನಿಮಗೆ ನಾನೇನನ್ನು ಮಾಡಿಕೊಡಲಿ? ವಂಶಾಭಿವೃದ್ಧಿಯಾಗಬೇಕಾಗಿದ್ದಲ್ಲಿ ಬೇರೆ ಬೇರೆ ಪುತ್ರರನ್ನು ಸೃಷ್ಟಿಸಿ, ಅವರುಗಳಿಂದ ಆ ಮನುವಿನ ವಂಶವು ಬೆಳೆಯುವುದು ಎಂದಳು.

॥ ಸೂತ ಉವಾಚ ॥

ತಾಂ ತಥಾವಾದಿನೀಂ ಸಾಧ್ವೀಮಿಡಾಂ ಮನ್ವಧ್ವರೋದ್ಭವಾಂ ।
ಮಿತ್ರಾವರುಣನಾಮಾನೌ ಮುನೀ ಊಚತುರಾದರಾತ್ ॥ ೧೦ ॥

॥ ಮಿತ್ರಾವರುಣಾವೂಚತುಃ ॥

ಅನೇನ ತವ ಧರ್ಮಜ್ಞೇ ಪ್ರಶ್ರಯೇಣ ದಮೇನ ಚ ।
ಸತ್ಯೇನ ಚೈವ ಸುಶ್ರೋಣಿ ಪ್ರೀತೌ ದ್ವಾ ವರವರ್ಣಿನಿ ॥ ೧೧ ॥

ಆವಯೋಸ್ತ್ವಂ ಮಹಾಭಾಗೇ ಖ್ಯಾತಿಂ ಚೈವ ಗಮಿಷ್ಯಸಿ ।
ಮನೋರ್ವಂಶಕರಃ ಪುತ್ರಸ್ತ್ವಮೇವ ಚ ಭವಿಷ್ಯಸಿ ॥ ೧೨ ॥

ಸುದ್ಯುಮ್ನ ಇತಿ ವಿಖ್ಯಾತಸ್ತ್ರಿಷು ಲೋಕೇಷು ವಿಶ್ರುತಃ ।
ಜಗತ್ಪ್ರಿಯೋ ಧರ್ಮಶೀಲೋ ಮನುವಂಶವಿವರ್ಧನಃ ॥ ೧೩ ॥

॥ ಸೂತ ಉವಾಚ ॥

ನಿವೃತ್ತಾ ಸಾ ತು ತಚ್ಛ್ರುತ್ವಾ ಗಚ್ಛಂತೀ ಪಿತುರಂತಿಕೇ ।
ಬುಧೇನಾಂತರಮಾಸಾದ್ಯ ಮೈಥುನಾಯೋಪಮಂತ್ರಿತಾ ॥ ೧೪ ॥

೧೦-೧೩. ಮನುವಿನ ಯಜ್ಞದಲ್ಲಿ ಹುಟ್ಟಿದ ಆ ಇಡಾದೇವಿಯನ್ನು ಕುರಿತು ಮಿತ್ರಾವರುಣರೆಂಬ ಆ ಋಷಿಗಳು ಎಲೌ ಸುಶ್ರೋಣಿ, ನಿನ್ನ ನಮ್ರತೆಯಿಂದಲೂ, ದಮದಿಂದಲೂ, ಸತ್ಯದಿಂದಲೂ, ಧರ್ಮವನ್ನು ತಿಳಿದಿರುವುದರಿಂದಲೂ ನಾವಿಬ್ಬರೂ ಸುಪ್ರೀತರಾಗಿರುವೆವು. ಎಲೈ ಮಹಾಮಹಿಮಳೇ, ನಮ್ಮ ದೆಸೆಯಿಂದ ನೀನು ಖ್ಯಾತಿಯನ್ನು ಹೊಂದುವೆ. ಮನುವಿಗೆ ವಂಶಾಭಿವೃದ್ಧಿಕರನಾದ ಮಗನೂ ನೀನೇ ಆಗುವೆ. ಆ ಪುತ್ರನ ಹೆಸರು ಸುದ್ಯುಮ್ನನೆಂದು ಲೋಕದಲ್ಲಿ ಪ್ರಸಿದ್ಧವಾಗುವುದು. ಅವನು ಧರ್ಮನಿರತನಾಗಿಯೂ, ಜಗತ್ತಿನ ಜನರಿಗೆ ಪ್ರಿಯತಮನಾಗಿಯೂ, ಮನು ವಂಶವನ್ನು ವೃದ್ಧಿಪಡಿಸುವವನೂ ಆಗುವನು ಎಂದರು.

೧೪. ಅನಂತರ ಅವಳು ತನ್ನ ತಂದೆಯ ಹತ್ತಿರಕ್ಕೆ ಹೋಗುತ್ತಿರುವಾಗ ದಾರಿಯಲ್ಲಿ ಚಂದ್ರನ ಮಗನಾದ ಬುಧನು ಅವಳನ್ನು ಸಂಧಿಸಿ, ಆ ಇಡೆಯನ್ನು ರತಿಕ್ರೀಡೆಗಾಗಿ ಕರೆದನು.

ಸೋಮಪುತ್ರಾತ್ತತೋ ಜಜ್ಞೇ ತಸ್ಯಾಂ ರಾಜಾ ಪುರೂರವಾಃ ।
ಪುತ್ರೋऽತಿಸುಂದರಃ ಪ್ರಾಜ್ಞ ಉರ್ವಶೀಪತಿರುನ್ನತಃ ॥ ೧೫ ॥

ಜನಯಿತ್ವಾ ಚ ಸಾ ತತ್ರ ಪುರೂರವಸಮಾದರಾತ್ ।
ಪುತ್ರಂ ಶಿವಪ್ರಸಾದಾತ್ತು ಪುನಸ್ಸುದ್ಯುಮ್ನತಾಂ ಗತಃ ॥ ೧೬ ॥

ಸುದ್ಯುಮ್ನಸ್ಯ ತು ದಾಯಾದಾಸ್ತ್ರಯಃ ಪರಮಧಾರ್ಮಿಕಾಃ ।
ಉತ್ಕಲಶ್ಚ ಗಯಶ್ಚಾಪಿ ವಿನತಾಶ್ವಶ್ಚ ವೀರ್ಯವಾನ್ ॥ ೧೭ ॥

ಉತ್ಕಲಸ್ಯೋತ್ಕಲಾ ವಿಪ್ರಾ ವಿನತಾಶ್ವಸ್ಯ ಪಶ್ಚಿಮಾಃ ।
ದಿಕ್ಪೂರ್ವಾ ಮುನಿಶಾರ್ದೂಲ ಗಯಸ್ಯ ತು ಗಯಾಃ ಸ್ಮೃತಾಃ ॥ ೧೮ ॥

ಪ್ರವಿಷ್ಟೇ ತು ಮನೌ ತಾತ ದಿವಾಕರತನುಂ ತದಾ ।
ದಶಧಾ ತತ್ರ ತತ್ಕ್ಷೇತ್ರಮಕರೋತ್ಪೃಥಿವೀಂ ಮನುಃ ॥ ೧೯ ॥

---

೧೫. ಆಗ ಬುಧನಿಗೆ ಇಡೆಯಲ್ಲಿ ಪುರೂರವಸ್ಸೆಂಬ ಪುತ್ರನು ಹುಟ್ಟಿದನು. ಅವನು ಅತಿಸುಂದರನೂ, ಪ್ರಾಜ್ಞನೂ ಆಗಿದ್ದನು. ಮುಂದೆ ರಾಜನಾದ ಮೇಲೆ ಊರ್ವಶಿ ಎಂಬ ಅಪ್ಸರೆಯನ್ನು ಮದುವೆಯಾದನು.

೧೬. ಈರೀತಿ ಪುರೂರವನನ್ನು ಪಡೆದನಂತರ ಇಡೆಯು ಶಿವನ ಅನುಗ್ರಹದಿಂದ ಸುದ್ಯುಮ್ನನೆಂಬ ಗಂಡಸಾದಳು.

೧೭. ಸುದ್ಯುಮ್ನನಿಗೆ ಉತ್ಕಲ, ಗಯ, ವಿನತಾಶ್ವ ಎಂಬ ಬಲಶಾಲಿಗಳಾದ ಮೂರುಜನ ಪುತ್ರರಾದರು. ಇವರೆಲ್ಲರೂ ಪರಮಧಾರ್ಮಿಕರು.

೧೮. ಉತ್ಕಲನು ಉತ್ಕಲವೆಂಬ ದೇಶವನ್ನು ಆಳತೊಡಗಿದನು. ವಿನತಾಶ್ವನು ಪೂರ್ವಪಶ್ಚಿಮ ದಿಕ್ಕುಗಳ ದೇಶವನ್ನಾಳಿದನು. ಗಯಕುಮಾರನು ಗಯೆಯನ್ನು ಆಳಿದನು.

೧೯. ಮನುವು ತನ್ನ ಅವಸಾನಕಾಲದಲ್ಲಿ ತನ್ನ ರಾಜ್ಯವಾದ ಪೃಥ್ವಿಯನ್ನು ಹತ್ತುಭಾಗವನ್ನಾಗಿ ಮಾಡಿ ತನ್ನ ಮಕ್ಕಳಿಗೆ ಹಂಚಿಕೊಟ್ಟನು.

ಇಕ್ಷ್ವಾಕುಃ ಶ್ರೇಷ್ಠದಾಯಾದೋ ಮಧ್ಯದೇಶಮವಾಪ್ತವಾನ್ ।
ವಸಿಷ್ಠವಚನಾದಾಸೀತ್ಪ್ರತಿಷ್ಠಾನಂ ಮಹಾತ್ಮನಃ ॥ ೨೦ ॥

ಪ್ರತಿಷ್ಠಾಂ ಧರ್ಮರಾಜ್ಯಸ್ಯ ಸುದ್ಯುಮ್ನೋಽಥ ತತೋ ದದೌ ।
ತತ್ಪುರೂರವಸೇ ಪ್ರಾದಾದ್ರಾಜ್ಯಂ ಪ್ರಾಪ್ಯ ಮಹಾಯಶಾಃ ॥ ೨೧ ॥

ಮಾನವೋ ಯೋ ಮುನಿಶ್ರೇಷ್ಠಾಃ ಸ್ತ್ರೀಪುಂಸೋರ್ಲಕ್ಷಣಃ ಪ್ರಭುಃ ।
ನರಿಷ್ಯಂತಾಚ್ಛಕಾಃ ಪುತ್ರಾ ನಭಗಸ್ಯ ಸುತೋಽಭವತ್ ॥ ೨೨ ॥

ಅಂಬರೀಷಸ್ತು ಬಾಹ್ಲೇಯೋ ಬಾಹ್ಲಕಂ ಕ್ಷತ್ರಮಾಪ್ತವಾನ್ ।
ಶರ್ಯಾತೇರ್ಮಿಥುನಂ ತ್ವಾಸೀದಾನರ್ತೋ ನಾಮ ವಿಶ್ರುತಃ ॥ ೨೩ ॥

ಪುತ್ರಸ್ಸುಕನ್ಯಾ ಕನ್ಯಾ ಚ ಯಾ ಪತ್ನೀ ಚ್ಯವನಸ್ಯ ಹಿ ।
ಆನರ್ತಸ್ಯ ಹಿ ದಾಯಾದೋ ರೈಭ್ಯೋ ನಾಮ ಸ ರೈವತಃ ॥ ೨೪ ॥

---

೨೦. ಹಿರಿಯಮಗನಾದ ಇಕ್ಷ್ವಾಕುವಿಗೆ ಮಧ್ಯದೇಶವನ್ನು ಕೊಟ್ಟನು. ಅದನ್ನು ಪಡೆದು ಅವನು ಅಲ್ಲಿ ರಾಜ್ಯಭಾರಮಾಡಿಕೊಂಡಿದ್ದನು.

೨೧-೨೨. ಸುದ್ಯುಮ್ನನು ಇಲಾದೇವಿಯ ಅಂಶವಾದ್ದರಿಂದ ಮತ್ತು ಪುರುಷ ಭಾವವು ಅವನಲ್ಲಿಲ್ಲದ್ದರಿಂದ ಅವನಿಗೆ ರಾಜ್ಯವು ಲಭಿಸಲಿಲ್ಲ. ಆದರೆ ಕುಲಪುರೋಹಿತ ನಾದ ವಸಿಷ್ಠಮುನಿಯ ಮಾತಿನಂತೆ ಆ ಸುದ್ಯುಮ್ನನು ಪ್ರತಿಷ್ಠಾನಗರವನ್ನು ಪಡೆದು ಅಲ್ಲಿ ಧರ್ಮದಿಂದ ರಾಜ್ಯವಾಳುತ್ತಿದ್ದನು. ಆಮೇಲೆ ಆ ರಾಜ್ಯವನ್ನು ಸುದ್ಯುಮ್ನನು ಪುರೂರವನಿಗೆ ಕೊಟ್ಟನು. ಎಲೈ ಮುನಿಶ್ರೇಷ್ಠರೇ, ಆ ಸುದ್ಯುಮ್ನನು ಸ್ತ್ರೀಪುರುಷ ರೀರ್ವರ ಲಕ್ಷಣಗಳಿಂದಲೂ ಕೂಡಿದ್ದನು.

೨೩. ನರಿಷ್ಯಂತನಿಗೆ ಶಕಾ ಎಂಬ ಪುತ್ರರಾದರು. ನಭಗನಿಗೆ ಅಂಬರೀಷ ನೆಂಬ ಮಗನು. ಅವನು ಬಾಹ್ಲಕವೆಂಬ ದೇಶವನ್ನು ಪಡೆದು ಬಾಹ್ಲೇಯನೆನಿ ಸಿದನು. ಶರ್ಯಾತಿಗೆ ಅವನ ಹೆಂಡತಿಯಲ್ಲಿ ಆನರ್ತನೆಂಬ ಹೆಸರುಳ್ಳ ಮಗನಾದನು.

೨೪. ಶರ್ಯಾತಿಗೆ ಆನರ್ತನೆಂಬ ಪುತ್ರನಲ್ಲದೆ ಸುಕನ್ಯಾ ಎಂಬ ಮಗಳೂ ಆದಳು. ಆ ಸುಕನ್ಯೆಯೇ ಚ್ಯವನಮಹರ್ಷಿಯ ಪತ್ನಿಯು. ಆನರ್ತನಿಗೆ ರೈಭ್ಯ ನೆಂಬ ಪುತ್ರನಿದ್ದನು. ಅವನಿಗೆ ರೈವತನೆಂತಲೂ ಹೆಸರು.

ಆನರ್ತವಿಷಯೇ ಯಸ್ಯ ಪುರೀ ನಾಮ ಕುಶಸ್ಥಲೀ ।
ಮಹಾದಿವ್ಯಾ ಸಪ್ತಪುರೀಮಧ್ಯೇ ಯಾ ಸಪ್ತಮಾ ಮತಾ ॥ ೨೫ ॥

ತಸ್ಯ ಪುತ್ರಶತಂ ತ್ವಾಸೀತ್ಕಕುದ್ಮೀ ಜ್ಯೇಷ್ಠ ಉತ್ತಮಃ ।
ತೇಜಸ್ವೀ ಸುಬಲಃ ಶೂರೋ ಧರ್ಮಿಷ್ಠೋ ಬ್ರಹ್ಮಪಾಲಕಃ ॥ ೨೬ ॥

ಕಕುದ್ಮಿನಸ್ತು ಸಂಜಾತಾ ರೇವತೀ ನಾಮ ಕನ್ಯಕಾ ।
ಮಹಾಲಾವಣ್ಯಸಂಯುಕ್ತಾ ದಿವ್ಯಲಕ್ಷ್ಮೀರಿವಾಪರಾ ॥ ೨೭ ॥

ಪ್ರಷ್ಟುಂ ಕನ್ಯಾವರಂ ರಾಜಾ ಕಕುದ್ಮೀ ಕನ್ಯಯಾ ಸಹ ।
ಬ್ರಹ್ಮಲೋಕೇ ವಿಧೇಸ್ಸವ್ಯಕ್ಸರ್ವಾಧೀಶೋ ಜಗಾಮ ಹ ॥ ೨೮ ॥

ಆವರ್ತಮಾನೇ ಗಾಂಧರ್ವೇ ಸ್ಥಿತೋ ಲಬ್ಧಕ್ಷಣಃ ಕ್ಷಣಂ ।
ಶುಶ್ರಾವ ತತ್ರ ಗಾಂಧರ್ವಂ ನರ್ತನಂ ಬ್ರಹ್ಮಣೋಽಂತಿಕೇ ॥ ೨೯ ॥

೨೫. ಆನರ್ತನಿಗೆ ಕುಶಸ್ಥಲೀ ಎಂಬ ಪ್ರಸಿದ್ಧವಾದ ಪಟ್ಟಣವಿತ್ತು. ಇದು ಪ್ರಸಿದ್ಧವಾದ ಸಪ್ತನಗರಿಗಳಲ್ಲಿ ಏಳನೆಯದು.

೨೬. ಆ ಆನರ್ತನಿಗೆ ನೂರುಜನ ಮಕ್ಕಳು. ಅವರಲ್ಲಿ ಕಕುದ್ಮಿ ಎಂಬುವನು ಹಿರಿಯವನು. ಅವನು ತೇಜಸ್ವಿಯೂ, ಬಲಶಾಲಿಯೂ ಮತ್ತು ಧರ್ಮಿಷ್ಠನೂ, ಬ್ರಹ್ಮಪಾಲಕನೂ ಆಗಿದ್ದನು.

೨೭. ಕಕುದ್ಮಿಗೆ ರೇವತೀ ಎಂಬ ಮಗಳಿದ್ದಳು. ಅವಳು ಮಹಾಲಾವಣ್ಯವತಿಯಾಗಿ ಸಾಕ್ಷಾಲ್ಲಕ್ಷ್ಮಿಯೋಪಾದಿಯಲ್ಲಿದ್ದಳು.

೨೮. ರೇವತಿಗೆ ವರನನ್ನು ಹುಡುಕಲು ಕಕುದ್ಮಿಯು ರೇವತಿಯನ್ನು ಜೊತೆಯಲ್ಲಿ ಕರೆದುಕೊಂಡು ಬ್ರಹ್ಮಲೋಕಕ್ಕೆ ಹೋದನು.

೨೯. ಅಲ್ಲಿ ಗಂಧರ್ವರೆಲ್ಲರೂ ಸುತ್ತಿಕೊಂಡಿದ್ದರು. ಕಕುದ್ಮಿಯು ಒಂದು ಕ್ಷಣಕಾಲದವರೆಗೆ ಬ್ರಹ್ಮನ ಹತ್ತಿರ ನಡೆಯುತ್ತಿರುವ ಗಂಧರ್ವರ ನರ್ತನವನ್ನೂ ಸಂಗೀತಾದಿಗಳನ್ನೂ ಕೇಳುತ್ತಿದ್ದನು.

ಮುಹೂರ್ತಭೂತಂ ತತ್ಕಾಲೇ ಗತಂ ಬಹುಯುಗಂ ತದಾ ।
ನ ಕಿಂಚಿದ್ಬುಬುಧೇ ರಾಜಾ ಕಕುದ್ಮೀ ಮುನಯಸ್ಸ ತು ॥ ೩೦ ॥

ತದಾಸೌ ವಿಧಿಮಾನಮ್ಯ ಸ್ವಾಭಿಪ್ರಾಯಂ ಕೃತಾಂಜಲಿಃ ।
ನ್ಯವೇದಯದ್ವಿನೀತಾತ್ಮಾ ಬ್ರಹ್ಮಣೇ ಪರಮಾತ್ಮನೇ ॥ ೩೧ ॥

ತದಭಿಪ್ರಾಯಮಾಕರ್ಣ್ಯ ಸ ಪ್ರಹಸ್ಯ ಪ್ರಜಾಪತಿಃ ।
ಕಕುದ್ಮಿನಂ ಮಹಾರಾಜಂ ಸಮಾಭಾಷ್ಯ ಸಮಬ್ರವೀತ್ ॥ ೩೨ ॥

॥ ಬ್ರಹ್ಮೋವಾಚ ॥

ಶೃಣು ರಾಜನ್ರೈಭ್ಯಸುತ ಕಕುದ್ಮಿನ್ಪೃಥಿವೀಪತೇ ।
ಮದ್ವಚಃ ಪ್ರೀತಿತಸ್ಸತ್ಯಂ ಪ್ರವಕ್ಷ್ಯಾಮಿ ವಿಶೇಷತಃ ॥ ೩೩ ॥

ಕಾಲೇನ ಸಂಹೃತಾಸ್ತೇ ವೈ ವರಾ ಯೇ ತೇ ಕೃತಾ ಹೃದಿ ।
ನ ತದ್ಗೋತ್ರಂ ಹಿ ತತ್ರಾಸ್ತಿ ಕಾಲಸ್ಸರ್ವಸ್ಯ ಭಕ್ಷಕಃ ॥ ೩೪ ॥

೩೦. ಎಲೈ ಮುನಿಗಳೇ, ಬ್ರಹ್ಮನ ಒಂದು ಮುಹೂರ್ತಕಾಲದಲ್ಲಿ ಅನೇಕ ಯುಗಗಳು ಕಳೆದುಹೋಗುತ್ತಿದ್ದವು. ಆ ಕಕುದ್ಮಿರಾಜನು ಅಲ್ಲಿ ನಡೆಯುತ್ತಿರುವುದನ್ನು ನೋಡುತ್ತಾ ನಿಂತಿರಲು ಬೇರೆ ವಿಷಯದಲ್ಲಿ ಅವನ ಗಮನವೇ ಹೋಗದೆ ಸುಮ್ಮನೆ ನಿಂತಿದ್ದನು. ಎಷ್ಟು ಕಾಲವು ಕಳೆದುಹೋಯಿತೆಂಬುವುದು ತಿಳಿಯಲಿಲ್ಲ.

೩೧. ಅನಂತರ ಕಕುದ್ಮಿಯು ಅಂಜಲಿಬದ್ಧನಾಗಿ ವಿನಯದಿಂದ ತನ್ನ ಅಭಿಪ್ರಾಯವನ್ನೆಲ್ಲ ಪರಮಾತ್ಮನಾದ ಬ್ರಹ್ಮನಲ್ಲಿ ವಿಜ್ಞಾಪಿಸಿದನು.

೩೨. ಬ್ರಹ್ಮನು ಕಕುದ್ಮಿಯ ಅಭಿಪ್ರಾಯನ್ನು ತಿಳಿದು ನಗುತ್ತಾ ಮಹಾರಾಜನಾದ ಅವನನ್ನು ಕುರಿತು,

೩೩. ಎಲೈ ರೈಭ್ಯಪುತ್ರನಾದ ಕಕುದ್ಮಿಯೇ, ನಾನೀಗ ಹೇಳುವ ವಿಷಯವನ್ನು ಆದರದಿಂದ ಕೇಳು.

೩೪. ನೀನು ಯಾರುಯಾರನ್ನು ವರನೆಂಬುದಾಗಿ ಮನಸ್ಸಿನಲ್ಲಿ ನಿಶ್ಚಯಿಸಿದ್ದೆಯೋ ಅವರೆಲ್ಲರೂ ಸತ್ತುಹೋದರು. ಮೃತ್ಯುವು ಎಲ್ಲರನ್ನೂ ನಾಶಮಾಡುವುದು. ಅದಕ್ಕೆ ಗೋತ್ರಾದಿಗಳಾವುವೂ ತಡೆಯಿಲ್ಲ. ನಿನ್ನ ಪಟ್ಟಣವನ್ನು ದುಷ್ಟರಾದ ರಾಕ್ಷಸರು ನಾಶಮಾಡಿರುವರು.

ತ್ವತ್ಪ್ರೀರ್ಯಾಪಿ ಹತಾನ್ಯಪುಣ್ಯಜನ್ಯೈಸ್ಸಾ ರಾಕ್ಷಸೈರ್ನೃಪ ।
ಅಷ್ಟಾವಿಂಶದ್ವಾಪರೇಽದ್ಯ ಕೃಷ್ಣೇನ ನಿರ್ಮಿತಾ ಪುನಃ ॥ ೩೫ ॥

ಕೃತಾ ದ್ವಾರಾವತೀ ನಾಮ್ನಾ ಬಹುದ್ವಾರಾ ಮನೋರಮಾ ।
ಭೋಜವೃಷ್ಣ್ಯಂಧಕೈರ್ಗುಪ್ತಾ ವಾಸುದೇವಪುರೋಗಮೈಃ ॥ ೩೬ ॥

ತದ್ಗಚ್ಛ ತತ್ರ ಪ್ರೀತಾತ್ಮಾ ವಾಸುದೇವಾಯ ಕನ್ಯಕಾಂ ।
ಬಲದೇವಾಯ ದೇಹಿ ತ್ವಮಿಮಾಂ ಸ್ವತನಯಾಂ ನೃಪ ॥ ೩೭ ॥

॥ ಸೂತ ಉವಾಚ ॥

ಇತ್ಯಾದಿಷ್ಟೋ ನೃಪೋಽಯಂ ತಂ ನತ್ವಾ ತಾಂ ಚ ಪುರೀಂ ಗತಃ ।
ಗತಾನ್ಬಹೂನ್ಯುಗಾನ್ ಜ್ಞಾತ್ವಾ ವಿಸ್ಮಿತಃ ಕನ್ಯಯಾ ಯುವಾ ॥ ೩೮ ॥

ತತಸ್ತು ಯುವತೀಂ ಕನ್ಯಾಂ ತಾಂ ಚ ಸ್ವಾಂ ಸುವಿಧಾನತಃ ।
ಕೃಷ್ಣಭ್ರಾತ್ರೇ ಬಲಾಯಾಶು ಪ್ರಾದಾತ್ತತ್ರ ಸ ರೇವತೀಂ ॥ ೩೯ ॥

೩೫-೩೬. ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಕೃಷ್ಣನಿಂದ ದ್ವಾರಾವತೀ ಎಂಬ ಪಟ್ಟಣವು ನಿರ್ಮಿತವಾಗಿರುವುದು. ಆ ಪಟ್ಟಣಕ್ಕೆ ಅನೇಕ ದ್ವಾರಗಳಿರುವುವು. ಅದು ಬಲು ರಮ್ಯವಾಗಿರುವುದು. ಅಲ್ಲಿ ಭೋಜ, ವೃಷ್ಣಿ, ಅಂಧಕ ಮುಂತಾದ ಯದುವಂಶದ ನಾಯಕರೂ, ವಸುದೇವನ ಮಗನಾದ ಕೃಷ್ಣನೇ ಮೊದಲಾದವರೂ ಆ ದ್ವಾರಾವತಿಯನ್ನು ರಕ್ಷಿಸುತ್ತಾ ಅಲ್ಲಿ ವಾಸವಾಗಿರುವರು.

೩೭. ಎಲೈ ರಾಜನೇ, ಕೇಳು. ಆದುದರಿಂದ ನೀನು ಆ ದ್ವಾರಾವತಿಗೆ ಹೋಗಿ ವಸುದೇವನ ಮಗನಾದ ಬಲದೇವನಿಗೆ ನಿನ್ನ ಮಗಳನ್ನು ಸಂತೋಷದಿಂದ ಕೊಡು ಎಂದನು.

೩೮-೩೯. ಸೂತನು ಹೇಳುವನು :—ಆ ಕಕುದ್ಮಿರಾಜನು ಬ್ರಹ್ಮನನ್ನು ನಮಸ್ಕರಿಸಿ ಅವನ ಮಾತಿನಂತೆ ಆ ದ್ವಾರಾವತಿಗೆ ಬಂದನು. ಅಷ್ಟುಹೊತ್ತಿಗೆ ಆಗಲೇ ಅನೇಕ ಯುಗಗಳು ಕಳೆದುಹೋಗಿದ್ದವು. ಇದನ್ನು ನೋಡಿ ಕಕುದ್ಮಿಗೆ ಬಲು ಆಶ್ಚರ್ಯವಾಯಿತು. ಅನಂತರ ತನ್ನ ಮಗಳೊಡನೆ ದ್ವಾರಾವತಿಯನ್ನು ಪ್ರವೇಶಿಸಿ ಯುವತಿಯಾದ ರೇವತಿಯನ್ನು ಕೃಷ್ಣನ ಅಣ್ಣನಾದ ಬಲರಾಮನಿಗೆ ಕೊಟ್ಟು ವಿವಾಹ ಮಾಡಿದನು.

ತತೋ ಜಗಾಮ ಶಿಖರಂ ಮೇರೋರ್ದಿವ್ಯಂ ಮಹಾಪ್ರಭುಃ ।
ಶಿವಮಾರಾಧಯಾಮಾಸ ಸ ನೃಪಸ್ತಪಸಿ ಸ್ಥಿತಃ ॥ ೪೦ ॥

॥ ಋಷಯ ಊಚುಃ ॥

ತತ್ರ ಸ್ಥಿತೋ ಬಹುಯುಗಂ ಬ್ರಹ್ಮಲೋಕೇ ಸ ರೇವತಃ ।
ಯುವೈವಾಗಾನ್ಮರ್ತ್ಯಲೋಕಮೇತನ್ನಃ ಸಂಶಯೋ ಮಹಾನ್ ॥ ೪೧ ॥

॥ ಸೂತ ಉವಾಚ ॥

ನ ಜರಾ ಕ್ಷುತ್ಪಿಪಾಸಾ ವಾ ವಿಕಾರಾಸ್ತತ್ರ ಸಂತಿ ವೈ ।
ಅಪಮೃತ್ಯುರ್ನ ಕೇಷಾಂಚಿನ್ಮನಯೋ ಬ್ರಹ್ಮಣೋಽಂತಿಕೇ ॥ ೪೨ ॥

ಅತೋ ನ ರಾಜಾ ಸಂಪ್ರಾಪ ಜರಾಂ ಮೃತ್ಯುಂ ಚ ಸಾ ಸುತಾ ।
ಸ ಯುವೈವಾಗತಸ್ತತ್ರ ಸಂಮಂತ್ರ್ಯ ತನಯಾವರಂ ॥ ೪೩ ॥

೪೦. ಅನಂತರ ಮಹಾರಾಜನಾದ ಕಕುದ್ಮಿಯು ಮೇರುಪರ್ವತದ ಶಿಖರಕ್ಕೆ ಹೋಗಿ ಅಲ್ಲಿ ಈಶ್ವರನನ್ನು ಧ್ಯಾನಮಾಡುತ್ತಾ ತಪಸ್ಸಿನಲ್ಲೇ ತಲ್ಲೀನನಾಗಿದ್ದನು.

೪೧. ಋಷಿಗಳು ಪ್ರಶ್ನೆಮಾಡುವರು :—ಎಲೈ ಸೂತನೇ, ಆ ರೇವತನ ಮಗನಾದ ಕಕುದ್ಮಿಯು ಬ್ರಹ್ಮಲೋಕದಲ್ಲಿ ಅನೇಕ ಯುಗಗಳು ಕಳೆಯುವವರೆಗೂ ಇದ್ದನಷ್ಟೆ? ಆದರೂ ಭೂಲೋಕಕ್ಕೆ ಹಿಂತಿರುಗಿ ಬಂದಾಗ ಯುವಕನಾಗಿಯೇ ಇದ್ದನೆಂಬ ವಿಷಯದಲ್ಲಿ ನಮಗೆ ಸಂದೇಹವಾಗಿರುವುದು ಎಂದರು.

೪೨. ಸೂತನು ಹೇಳುವನು :—ಎಲೈ ಋಷಿಗಳಿರಾ, ಬ್ರಹ್ಮಲೋಕದಲ್ಲಿರುವವರಿಗೆ ಮುಪ್ಪು, ಹಸಿವು, ಬಾಯಾರಿಕೆಗಳು ಅಥವಾ ಮತ್ತಾವವಿಧವಾದ ವಿಕಾರಗಳೂ, ಅಪಮೃತ್ಯುವೂ ಇರುವುದಿಲ್ಲ.

೪೩. ಆದಕಾರಣ ಕಕುದ್ಮಿರಾಜನು ಮುಪ್ಪನ್ನಾಗಲೀ, ಮೃತ್ಯುವನ್ನಾಗಲೀ ಹೊಂದಲಿಲ್ಲ. ಅವನ ಮಗಳೂ ಅಷ್ಟೇ. ಆದುದರಿಂದಲೇ ಅವನು ತರುಣನಾಗಿಯೇ ತನ್ನ ಮಗಳನ್ನು ಕರೆದುಕೊಂಡು ಭೂಲೋಕಕ್ಕೆ ಬಂದನು.

ಗತ್ವಾ ದ್ವಾರಾವತೀಂ ದಿವ್ಯಾಂ ಪುರೀಂ ಕೃಷ್ಣವಿನಿರ್ಮಿತಾಂ ।
ವಿವಾಹಂ ಕಾರಯಾಮಾಸ ಕನ್ಯಾಯಾಃ ಸ ಬಲೇನ ಹಿ ॥ ೪೪ ॥

ತಸ್ಯ ಪುತ್ರಶತಂ ತ್ವಾಸೀದ್ಧಾರ್ಮಿಕಸ್ಯ ಮಹಾಪ್ರಭೋಃ ।
ಕೃಷ್ಣಸ್ಯಾಪಿ ಸುತಾ ಜಾತಾ ಬಹುಸ್ತ್ರೀಭ್ಯೋಽಮಿತಾಸ್ತತಃ ॥ ೪೫ ॥

ಅನ್ವವಾಯೋ ಮಹಾಂಸ್ತತ್ರ ದ್ವಯೋರಪಿ ಮಹಾತ್ಮನೋಃ ।
ಕ್ಷತ್ರಿಯಾ ದಿಕ್ಷು ಸರ್ವಾಸು ಗತಾ ಹೃಷ್ಟಾಸ್ಸುಧಾರ್ಮಿಕಾಃ ॥ ೪೬ ॥

ಇತಿ ಪ್ರೋಕ್ತೋ ಹಿ ಶರ್ಯಾತೇರ್ವಂಶೋಽನ್ಯೇಷಾಂ ವದಾಮ್ಯಹಂ ।
ಮಾನವಾನಾಂ ಹಿ ಸಂಕ್ಷೇಪಾಚ್ಛೃಣುತಾದರತೋ ದ್ವಿಜಾಃ ॥ ೪೭ ॥

ನಾಭಾಗೋ ದಿಷ್ಟಪುತ್ರೋಽಭೂತ್ಸ ತು ಬ್ರಾಹ್ಮಣತಾಂ ಗತಃ ।
ಸ್ವಕ್ಷತ್ರವಂಶಂ ಸಂಸ್ಥಾಪ್ಯ ಬ್ರಹ್ಮಕರ್ಮಭಿರಾವೃತಃ ॥ ೪೮ ॥

೪೪. ಬಳಿಕ ಆ ಕಕುದ್ಮಿಯು ಕೃಷ್ಣನಿಂದ ನಿರ್ಮಿತವಾದ ಮನೋಹರವಾದ ದ್ವಾರಾವತಿಗೆ ಹೋಗಿ ರೇವತಿಯನ್ನು ಬಲರಾಮನಿಗೆ ಕೊಟ್ಟು ವಿವಾಹಮಾಡಿದನು.

೪೫. ಬಲರಾಮನಿಗೆ ನೂರುಜನ ಮಕ್ಕಳಾದರು. ಕೃಷ್ಣನಿಗೂ ಅನೇಕ ಸ್ತ್ರೀಯರಲ್ಲಿ ಅನೇಕ ಮಕ್ಕಳಾದರು.

೪೬. ಮಹಾತ್ಮರಾದ ಕೃಷ್ಣಬಲರಾಮರ ವಂಶವು ದೊಡ್ಡದಾಗಿ ಬೆಳೆಯಿತು. ಇವರ ಆಳ್ವಿಕೆಯಲ್ಲಿ ಎಲ್ಲ ದಿಕ್ಕುಗಳಲ್ಲಿರುವ ಕ್ಷತ್ರಿಯರು ಪರಮಧಾರ್ಮಿಕರಾಗಿ ಸಂತೋಷದಿಂದಿರುತ್ತಿದ್ದರು.

೪೭. ಎಲೈ ಬ್ರಾಹ್ಮಣಶ್ರೇಷ್ಠರೇ, ಇದುವರೆಗೂ ಶರ್ಯಾತಿಯ ವಂಶವನ್ನು ಹೇಳಿದೆನು. ಇನ್ನು ಮನುಪುತ್ರರ ವಂಶವನ್ನು ಸಂಕ್ಷೇಪವಾಗಿ ಹೇಳುವೆನು. ಪ್ರೀತಿಯಿಂದ ಕೇಳಿರಿ.

೪೮. ನಾಭಾಗನು ದಿಷ್ಟಪುತ್ರನು. ಅವನು ತನ್ನ ಕ್ಷತ್ರಿಯಜಾತಿಯನ್ನು ಬಿಟ್ಟು ಬ್ರಾಹ್ಮಣಕರ್ಮಗಳನ್ನೇ ಮಾಡುತ್ತಾ ಬ್ರಾಹ್ಮಣನಾದನು.

ಧೃಷ್ಟಾದ್ಧಾರ್ಷ್ಟಮಭೂತ್ ಕ್ಷತ್ರಂ ಬ್ರಹ್ಮಭೂಯಂ ಗತಂ ಕ್ಷಿತೌ ।
ಕರೂಷಸ್ಯ ತು ಕಾರೂಷಾಃ ಕ್ಷತ್ರಿಯಾ ಯುದ್ಧದುರ್ಮದಾಃ ॥ ೪೯ ॥

ನೃಗೋ ಯೋ ಮನುಪುತ್ರಸ್ತು ಮಹಾದಾತಾ ವಿಶೇಷತಃ ।
ನಾನಾವಸೂನಾಂ ಸುಪ್ರೀತ್ಯಾ ವಿಪ್ರೇಭ್ಯಶ್ಚ ಗವಾಂ ತಥಾ ॥ ೫೦ ॥

ಗೋದಾನವ್ಯತ್ಯಯಾದ್ಯಸ್ತು ಸ್ವಕುಬುದ್ಧ್ಯಾ ಸ್ವಪಾಪತಃ ।
ಕೃಕಲಾಸತ್ವಮಾಪನ್ನಃ ಶ್ರೀಕೃಷ್ಣೇನ ಸಮುದ್ಧೃತಃ ॥ ೫೧ ॥

ತಸ್ಯೈಕೋಽಭೂತ್ಸುತಃ ಶ್ರೇಷ್ಠಃ ಪ್ರಯಾತಿರ್ಧರ್ಮವಿತ್ತಥಾ ।
ಇತಿ ಶ್ರುತಂ ಮಯಾ ವ್ಯಾಸಾತ್ತತ್ಪ್ರೋಕ್ತಂ ಹಿ ಸಮಾಸತಃ ॥ ೫೨ ॥

ಪೃಷಧ್ರಸ್ತು ಮನೋಃ ಪುತ್ರೋ ಗೋಪಾಲೋ ಗುರುಣಾ ಕೃತಃ ।
ಪಾಲಯಾಮಾಸ ಗಾ ಯತ್ತೋ ರಾತ್ರ್ಯಾಂ ವೀರಾಸನವ್ರತಃ ॥ ೫೩ ॥

---

೪೯. ಧೃಷ್ಟನ ಆಳ್ವಿಕೆಯಲ್ಲಿ ಕ್ಷತ್ರಿಯರು ಪರಾಕ್ರಮಶಾಲಿಗಳಾಗಿಯೂ ಬ್ರಹ್ಮಜ್ಞಾನಿಗಳಾಗಿಯೂ ಭೂಮಿಯಲ್ಲಿ ಆದರು. ಕರೂಷನ ವಂಶದವರಾದ ಕಾರೂಷರೆಲ್ಲರೂ ಯುದ್ಧದಿಂದ ಮದಿಸಿದ ವೀರಕ್ಷತ್ರಿಯರಾಗಿದ್ದರು.

೫೦. ಮನುಪುತ್ರನಾದ ನೃಗ ಎಂಬುವನು ಮಹಾ ದಾನಿಯಾಗಿದ್ದನು. ಅವನು ಅನೇಕ ದ್ರವ್ಯಗಳನ್ನೂ, ಹಸುಗಳನ್ನೂ ಪ್ರೀತಿಯಿಂದ ಬ್ರಾಹ್ಮಣರಿಗೆ ದಾನ ಮಾಡಿದನು.

೫೧. ಆ ನೃಗನು ಗೋದಾನ ವ್ಯತ್ಯಾಸಮಾಡಿದುದರಿಂದಲೂ, ತನ್ನ ಕೆಟ್ಟ ಬುದ್ಧಿಯಿಂದಲೂ ಉಂಟಾದ ಪಾಪದಿಂದ ಹಲ್ಲಿಯ ಜನ್ಮವನ್ನು ಪಡೆದನು. ಅವನನ್ನು ಶ್ರೀಕೃಷ್ಣನು ಉದ್ಧಾರಮಾಡಿದನು.

೫೨. ಅವನಿಗೆ ಪ್ರಯಾತಿ ಎಂಬ ಶ್ರೇಷ್ಠನೂ, ಧರ್ಮಜ್ಞನೂ ಆದ ಪುತ್ರನಿದ್ದನೆಂದು ವ್ಯಾಸನಿಂದ ನಾನು ಕೇಳಿರುವೆನು. ಅದನ್ನು ನಿಮಗೆ ಹೇಳಿರುವೆನು.

೫೩. ಮನುಪುತ್ರನಾದ ಪೃಷಧ್ರನೆಂಬುವನು ತಂದೆಯಿಂದ ನಿಯುಕ್ತನಾಗಿ ಗೋವುಗಳನ್ನು ಪಾಲಿಸುತ್ತಿದ್ದನು. ಅವನು ರಾತ್ರಿಯ ಸಮಯದಲ್ಲಿ ವೀರಾಸನವನ್ನು ಹಾಕಿಕೊಂಡು ನಿದ್ದೆಮಾಡದೆ ಹಸುಗಳನ್ನು ರಕ್ಷಿಸುತ್ತಿದ್ದನು.

ಸ ಏಕದಾಗತಂ ಗೋಷ್ಠೇ ವ್ಯಾಘ್ರಂ ಗಾ ಹಿಂಸಿತುಂ ಬಲೀ ।
ಶ್ರುತ್ವಾ ಗೋಕ್ರಂದನಂ ಬುದ್ಧೋ ಹಂತುಂ ತಂ ಖಡ್ಗಧೃಗ್ಯಯೌ ॥ ೫೪ ॥

ಅಜಾನನ್ನ ಹನದ್ಬಭ್ರೋಃ ಶಿರಶ್ಶಾರ್ದೂಲಶಂಕಯಾ ।
ನಿಶ್ಚಕ್ರಾಮ ಸಭೀರ್ವ್ಯಾಘ್ರೋ ದೃಷ್ಟ್ವಾ ತಂ ಖಡ್ಗಿನಂ ಪ್ರಭುಂ ॥ ೫೫ ॥

ಮನ್ಯಮಾನೋ ಹತಂ ವ್ಯಾಘ್ರಂ ಸ್ವಸ್ಥಾನಂ ಸ ಜಗಾಮ ಹ ।
ರಾತ್ರ್ಯಾಂ ತಸ್ಯಾಂ ಭ್ರಮಾಪನ್ನೋ ವರ್ಷವಾತವಿನಷ್ಟಧೀಃ ॥ ೫೬ ॥

ವ್ಯುಷ್ಟಾಯಾಂ ನಿಶಿ ಚೋತ್ಥಾಯ ಪ್ರಗೇ ತತ್ರ ಗತೋ ಹಿ ಸಃ ।
ಅದ್ರಾಕ್ಷೀತ್ಸ ಹತಾಂ ಬಭ್ರುಂ ನ ವ್ಯಾಘ್ರಂ ದುಃಖಿತೋಽಭವತ್ ॥ ೫೭ ॥

ಶ್ರುತ್ವಾ ತದ್ವೃತ್ತಮಾಜ್ಞಾಯ ತಂ ಶಶಾಪ ಕೃತಾಗಸಂ ।
ಅಕಾಮತೋ ವಿಚಾರ್ಯೇತಿ ಶೂದ್ರೋ ಭವ ನ ಕ್ಷತ್ರಿಯಃ ॥ ೫೮ ॥

೫೪. ಒಂದಾನೊಂದು ದಿನ ಹಸುವನ್ನು ತಿನ್ನಲು ಕೊಟ್ಟಿಗೆಯೊಳಕ್ಕೆ ಒಂದು ಹುಲಿಯು ಬಂದಿತು. ಹಸುವು ಕೂಗಿಕೊಳ್ಳುವುದನ್ನು ಕೇಳಿ, ಎಚ್ಚರಗೊಂಡು ಅಲ್ಲಿದ್ದ ಹುಲಿಯನ್ನು ನೋಡಿ ಅದನ್ನು ಕೊಲ್ಲಲು ಕತ್ತಿಯನ್ನು ಹಿಡಿದು ಮುನ್ನುಗ್ಗಿದನು.

೫೫. ಅವನು ಕತ್ತಲೆಯಲ್ಲಿ ಕಾಣದೆ ಮುಂಗಸಿಯ ತಲೆಯನ್ನು ಹುಲಿ ಎಂಬುದಾಗಿ ತಿಳಿದುಕೊಂಡು ಕತ್ತರಿಸಿದನು. ಖಡ್ಗವನ್ನು ಹಿಡಿದುಕೊಂಡು ಬಂದ ಇವನನ್ನು ನೋಡಿ ಆ ಹುಲಿಯು ಹೆದರಿ ಓಡಿಹೋಯಿತು.

೫೬. ಹುಲಿಯು ಸತ್ತುಹೋಯಿತು ಎಂದು ನಿರ್ಧರಿಸಿ ತನ್ನ ಮನೆಗೆ ಬಂದನು. ಆದರೆ ಆ ರಾತ್ರಿಯಲ್ಲಿ ಮಳೆ, ಗಾಳಿಯ ಕಾರಣದಿಂದ ಅವನು ಭ್ರಮೆಹೊಂದಿದ್ದನು. ನಿಜವಾಗಿಯೂ ಹುಲಿಯನ್ನು ಕೊಂದಿರಲಿಲ್ಲ.

೫೭. ರಾತ್ರಿಯು ಕಳೆಯಲು ಪ್ರಾತಃಕಾಲದಲ್ಲಿ ಎದ್ದು ಕೊಟ್ಟಿಗೆಯ ಹತ್ತಿರಕ್ಕೆ ಹೋಗಿ ನೋಡಿದನು. ಅಲ್ಲಿ ಮುಂಗಸಿಯು ಸತ್ತುಬಿದ್ದಿತ್ತೇ ಹೊರತು ಹುಲಿಯು ಹತವಾಗಿರಲಿಲ್ಲ. ಅದನ್ನು ನೋಡಿ ಬಲು ದುಃಖಗೊಂಡನು.

೫೮-೫೯. ಈ ವಿಷಯವನ್ನು ಕೇಳಿ, ಅವನ ಕುಲಗುರುವು ಕೋಪಗೊಂಡು

ಏವಂ ಶಪ್ತಸ್ತು ಗುರುಣಾ ಕುಲಾಚಾರ್ಯೇಣ ಕೋಪತಃ ।
ನಿಸ್ಸೃತಶ್ಚ ಪೃಷಧ್ರಸ್ತು ಜಗಾಮ ವಿಪಿನಂ ಮಹತ್ ॥ ೫೯ ॥

ನಿರ್ವಿಣ್ಣಃ ಸ ತು ಕಷ್ಟೇನ ವಿರಕ್ತೋಽಭೂತ್ಸ ಯೋಗವಾನ್ ।
ವನಾಗ್ನೌ ದಗ್ಧದೇಹಶ್ಚ ಜಗಾಮ ಪರಮಾಂ ಗತಿಂ ॥ ೬೦ ॥

ಕವಿಃ ಪುತ್ರೋ ಮನೋಃ ಪ್ರಾಜ್ಞಃ ಶಿವಾನುಗ್ರಹತೋಽಭವತ್ ।
ಇಹ ಭುಕ್ತ್ವಾ ಸುಖಂ ದಿವ್ಯಂ ಮುಕ್ತಿಂ ಪ್ರಾಪ ಸುದುರ್ಲಭಾಂ ॥ ೬೧ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಮನುನವಪುತ್ರವಂಶವರ್ಣನಂ ನಾಮ ಷಟ್‌ತ್ರಿಂಶೋಽಧ್ಯಾಯಃ



ತಪ್ಪುಮಾಡಿದ ಅವನಿಗೆ ನೀನು ಶೂದ್ರನಾಗು ಎಂಬುದಾಗಿ ಶಾಪವನ್ನು ಕೊಟ್ಟನು. ಅನಂತರ ಆ ಪೃಷಧ್ರನು ಶಪಿಸಲ್ಪಟ್ಟು ದೊಡ್ಡ ಕಾಡಿಗೆ ಹೊರಟುಹೋದನು.

೬೦. ಅವನು ಕಾಡಿನಲ್ಲಿ ಬಲು ಕಷ್ಟಪಟ್ಟು ಬೇಜಾರಿನಿಂದ ವಿರಕ್ತನಾದನು. ಕಾಡ್ಕಿಚ್ಚಿನಲ್ಲಿ ಸಿಕ್ಕಿ ದಗ್ಧನಾಗಿ ಉತ್ತಮವಾದ ಗತಿಯನ್ನು ಪಡೆದನು.

೬೧. ಮನುವಿನ ಮತ್ತೊಬ್ಬ ಮಗನು ಕವಿ ಎಂಬುವನು. ಅವನು ಜ್ಞಾನಿಯಾಗಿದ್ದನು. ಈಶ್ವರನ ಅನುಗ್ರಹದಿಂದ ಈ ಲೋಕದಲ್ಲಿ ಸುಖಗಳನ್ನೆಲ್ಲಾ ಅನುಭವಿಸಿ ಅನಂತರ ದುರ್ಲಭವಾದ ಮುಕ್ತಿಯನ್ನೂ ಪಡೆದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಮನುನವಪುತ್ರವಂಶವರ್ಣನೆ
ವೆಂಬ ಮೂವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಸಪ್ತತ್ರಿಂಶೋಽಧ್ಯಾಯಃ

ಸೂತ ಉವಾಚ ॥

ಪೂರ್ವತಸ್ತು ಮನೋರ್ಜಜ್ಞೇ ಇಕ್ಷ್ವಾಕುರ್ಘ್ರಾಣತಸ್ಸುತಃ ।
ತಸ್ಯ ಪುತ್ರಶತಂ ತ್ವಾಸೀದಿಕ್ಷ್ವಾಕೋರ್ಭೂರಿದಕ್ಷಿಣಂ ॥ ೧ ॥

ತೇಷಾಂ ಪುರಸ್ತಾದಭವನ್ನಾರ್ಯಾವರ್ತೇ ನೃಪಾ ದ್ವಿಜಾಃ ।
ತೇಷಾಂ ವಿಕುಕ್ಷಿರ್ಜ್ಯೇಷ್ಠಸ್ತು ಸೋಽಯೋಧ್ಯಾಯಾ ನೃಪೋಽಭವತ್ ॥ ೨ ॥

### ಮೂವತ್ತೇಳನೆಯ ಅಧ್ಯಾಯವು

೧. ಸೂತನಿಂತೆಂದನು :—ವೈವಸ್ವತಮನುವಿಗೆ ಇಕ್ಷ್ವಾಕುವೆಂಬ ಪುತ್ರನಿದ್ದನು. ಅವನಿಗೆ ನೂರುಜನ ಮಕ್ಕಳಿದ್ದರು. ಅವರು ಬಹಳ ದಾನಶೀಲರಾಗಿದ್ದರು.

೨. ಆ ಇಕ್ಷ್ವಾಕುವಿನ ಮುಂದಿನ ರಾಜರೆಲ್ಲಾ ಆರ್ಯಾವರ್ತನಲ್ಲಿ ಆಳಿದರು. ಅವರಲ್ಲಿ ಮೊದಲನೆಯವನು ವಿಕುಕ್ಷಿ ಎಂಬುವನು. ಅವನು ಅಯೋಧ್ಯೆಯ ರಾಜನಾಗಿದ್ದನು.

ತತ್ಕರ್ಮ ಶೃಣು ತತ್ಪ್ರೀತ್ಯಾ ಯಜ್ಜಾತಂ ವಂಶತೋ ವಿಧೇಃ ।
ಶ್ರಾದ್ಧಕರ್ಮಣಿ ಚೋದ್ದಿಷ್ಟೋ ಹ್ಯಕೃತೇ ಶ್ರಾದ್ಧಕರ್ಮಣಿ ॥ ೩ ॥

ಭಕ್ಷಯಿತ್ವಾ ಶಶಂ ಶೀಘ್ರಂ ಶಶಾದತ್ವಮತೋ ಗತಃ ।
ಇಕ್ಷ್ವಾಕುಣಾ ಪರಿತ್ಯಕ್ತಶ್ಶಶಾದೋ ವನಮಾವಿಶತ್ ॥ ೪ ॥

ಇಕ್ಷ್ವಾಕೌ ಸಂಸ್ಥಿತೇ ರಾಜಾ ವಸಿಷ್ಠವಚನಾದಭೂತ್ ।
ಶಕುನಿಪ್ರಮುಖಾಸ್ತಸ್ಯ ಪುತ್ರಾಃ ಪಂಚದಶ ಸ್ಮೃತಾಃ ॥ ೫ ॥

ಉತ್ತರಾಪಥದೇಶಸ್ಯ ರಕ್ಷಿತಾರೋ ಮಹೀಕ್ಷಿತಃ ।
ಅಯೋಧಸ್ಯ ತು ದಾಯಾದಃ ಕಕುತ್ಸ್ಥೋ ನಾಮ ವೀರ್ಯವಾನ್ ॥ ೬ ॥

ಅರಿನಾಭಃ ಕಕುತ್ಸ್ಥಸ್ಯ ಪೃಥುರೇತಸ್ಯ ವೈ ಸುತಃ ।
ವಿಷ್ಟರಾಶ್ವಃ ಪೃಥೋಃ ಪುತ್ರಸ್ತಸ್ಮಾದಿಂದ್ರಃ ಪ್ರಜಾಪತಿಃ ॥ ೭ ॥

೩-೪. ವಿಧಿವಶದಿಂದ ಅವನಿಗುಂಟಾದ ಗತಿಯನ್ನು ಹೇಳುವೆನು, ಕೇಳು. ಒಂದುದಿನ ಶ್ರಾದ್ಧಮಾಡಬೇಕಾಗಿರುವಾಗ ಶ್ರಾದ್ಧಮಾಡುವುದಕ್ಕೆ ಮೊದಲೇ ಹಸಿವಿನಿಂದ ಬಳಲಿ ಶ್ರಾದ್ಧಕ್ಕಾಗಿ ಸಿದ್ಧಗೊಳಿಸಿದ್ದ ಮೊಲವನ್ನು ಭಕ್ಷಿಸಿದನು. ಅದರಿಂದ ಅವನಿಗೆ ಶಶಾದನೆಂದು (ಮೊಲವನ್ನು ತಿನ್ನುವವನು) ಹೆಸರಾಯಿತು. ಇದನ್ನು ನೋಡಿ, ತಂದೆಯಾದ ಇಕ್ಷ್ವಾಕುವು ಅವನನ್ನು ಓಡಿಸಲು ಅವನು ವನಕ್ಕೆ ಹೊರಟು ಹೋದನು.

೫. ವಸಿಷ್ಠನ ಮಾತಿನಂತೆ ಇಕ್ಷ್ವಾಕುವು ರಾಜ್ಯವಾಳುತ್ತಿರಲು ಅವನಿಗೆ ಶಕುನಿಯೇ ಮೊದಲಾದ ಹದಿನೈದುಜನ ಪುತ್ರರಾದರು.

೬. ಉತ್ತರದಿಕ್ಕಿನ ದೇಶಕ್ಕೆ ರಾಜನು ಅಯೋಧನೆಂಬುವನು. ಅವನಿಗೆ ಪರಾಕ್ರಮಿಯಾದ ಕಕುತ್ಸ್ಥನೆಂಬ ಮಗನಿದ್ದನು.

೭. ಕಕುತ್ಸ್ಥನಿಗೆ ಅರಿನಾಭನೆಂಬ ಮಗನೂ, ಅರಿನಾಭನಿಗೆ ಪೃಥು ಎಂಬುವನೂ, ಆ ಪೃಥುವಿಗೆ ವಿಷ್ಟರಾಶ್ವನೆಂಬುವನೂ ಅವನಿಗೆ ಪ್ರಜಾಧಿಪತಿಯಾದ ಇಂದ್ರನೂ ಮಕ್ಕಳು.

ಇಂದ್ರಸ್ಯ ಯುವನಾಶ್ವಸ್ತು ಶ್ರಾವಸ್ತಸ್ಯ ಪ್ರಜಾಪತಿಃ ।
ಜಜ್ಞೇ ಶ್ರಾವಸ್ತಕಃ ಪ್ರಾಜ್ಞ ಶ್ರಾವಸ್ತೀ ಯೇನ ನಿರ್ಮಿತಾ ॥
ಶ್ರಾವಸ್ತಸ್ಯ ತು ದಾಯಾದೋ ಬೃಹದಶ್ವೋ ಮಹಾಯಶಾಃ ॥ ೮ ॥

ಯುವನಾಶ್ವಸ್ಸುತಸ್ತಸ್ಯ ಕುವಲಾಶ್ವಶ್ಚ ತತ್ಸುತಃ ।
ಸ ಹಿ ದುಂಧುವದಾದ್ಭೂತೋ ದುಂಧುಮಾರೋ ನೃಪೋತ್ತಮಃ ॥ ೯ ॥

ಕುವಲಾಶ್ವಸ್ಯ ಪುತ್ರಾಣಾಂ ಶತಮುತ್ತಮಧನ್ವಿನಾಂ ।
ಬಭೂವಾಥ ಪಿತಾ ರಾಜ್ಯೇ ಕುವಲಾಶ್ವಂ ನ್ಯಯೋಜಯತ್ ॥ ೧೦ ॥

ಪುತ್ರಸಂಕ್ರಾಮಿತಶ್ರೀಕೋ ವನಂ ರಾಜಾ ಸಮಾವಿಶತ್ ।
ತಮುತ್ತಂಕೋಽಥ ರಾಜರ್ಷಿಃ ಪ್ರಯಾಂತಂ ಪ್ರತ್ಯವಾರಯತ್ ॥ ೧೧ ॥

೮. ಇಂದ್ರನಿಗೆ ಯುವನಾಶ್ವನೆಂಬ ಮಗನೂ, ಶ್ರಾವಸ್ತನಿಗೆ ಪ್ರಜಾಪತಿಯೂ ಮಕ್ಕಳು. ಪ್ರಾಜ್ಞನಾದ ಆ ಶ್ರಾವಸ್ತಕನು ಶ್ರಾವಸ್ತಿ ಎಂಬ ನಗರವನ್ನು ನಿರ್ಮಿಸಿದನು.

೯. ಶ್ರಾವಸ್ತಕನಿಗೆ ಮಹಾಯಶಸ್ವಿಯಾದ ಬೃಹದಶ್ವನೆಂಬ ಪುತ್ರನಿದ್ದನು. ಆ ಬೃಹದಶ್ವನಿಗೆ ಯುವನಾಶ್ವನೂ, ಆ ಯುವನಾಶ್ವನಿಗೆ ಕುವಲಾಶ್ವನೆಂಬುವನೂ ಮಕ್ಕಳು.

೧೦. ಆ ಕುವಲಾಶ್ವನು ಧುಂಧುವೆಂಬುವನನ್ನು ವಧೆಮಾಡಿದುದರಿಂದ ಅವನಿಗೆ ಧುಂಧುಮಾರನೆಂದು ಹೆಸರಾಯಿತು. ಆ ಕುವಲಾಶ್ವನಿಗೆ ಉತ್ತಮಧನುರ್ಧರರಾದ ನೂರುಜನ ಪುತ್ರರಿದ್ದರು.

೧೧. ಅನಂತರ ಕುವಲಾಶ್ವನ ತಂದೆಯು ರಾಜ್ಯದಲ್ಲಿ ಕುವಲಾಶ್ವನನ್ನು ನೇಮಿಸಿ ರಾಜ್ಯಲಕ್ಷ್ಮಿಯನ್ನು ಅವನಿಗೆ ಕೊಟ್ಟು ತಾನು ತಪಸ್ಸಿಗಾಗಿ ಕಾಡಿಗೆ ಹೊರಟುಹೋಗಬೇಕೆಂದಿರುವಲ್ಲಿ ಉತ್ತಂಕನೆಂಬ ರಾಜರ್ಷಿಯು ವನಕ್ಕೆ ತೆರಳಲಿದ್ದ ಕುವಲಾಶ್ವನ ತಂದೆಯನ್ನು ತಡೆದು,

॥ ಉತ್ತಂಕ ಉವಾಚ ॥

ಭವತಾ ರಕ್ಷಣಂ ಕಾರ್ಯಂ ಪೃಥಿವ್ಯಾ ಧರ್ಮತಃ ಶೃಣು ।
ತ್ವಯಾ ಹಿ ಪೃಥಿವೀ ರಾಜನ್ರಕ್ಷ್ಯಮಾಣಾ ಮಹಾತ್ಮನಾ ॥ ೧೨ ॥

ಭವಿಷ್ಯತಿ ನಿರುದ್ವಿಗ್ನಾ ನಾರಣ್ಯಂ ಗಂತುಮರ್ಹಸಿ ।
ಮಮಾಶ್ರಮಸಮೀಪೇ ತು ಹಿಮೇಷು ಮರುಧನ್ವಸು ॥ ೧೩ ॥

ಸಮುದ್ರವಾಲುಕಾಪೂರ್ಣೇ ದಾನವೋ ಬಲದರ್ಪಿತಃ ।
ದೇವತಾನಾಮವಧ್ಯೋ ಹಿ ಮಹಾಕಾಯೋ ಮಹಾಬಲಃ ॥ ೧೪ ॥

ಅಂತರ್ಭೂಮಿಗತಸ್ತತ್ರ ವಾಲುಕಾಂತರ್ಹಿತಃ ಸ್ಥಿತಃ ।
ರಾಕ್ಷಸಸ್ಯ ಮಧೋಃ ಪುತ್ರೋ ಧುಂಧುನಾಮಾ ಸುದಾರುಣಃ ॥ ೧೫ ॥

ಶೇತೇ ಲೋಕವಿನಾಶಾಯ ತಪ ಆಸ್ಥಾಯ ದಾರುಣಂ ।
ಸಂವತ್ಸರಸ್ಯ ಪರ್ಯಂತೇ ಸ ನಿಶ್ವಾಸಂ ವಿಮುಂಚತಿ ॥ ೧೬ ॥

ಯದಾ ತದಾ ಭೂಶ್ಚಲತಿ ಸಶೈಲವನಕಾನನಾ ।
ಸವಿಸ್ಫುಲಿಂಗಂ ಸಾಂಗಾರಂ ಸಧೂಮಮಪಿ ಸಾರುಣಂ ॥ ೧೭ ॥

೧೨. ಎಲೈ ರಾಜನೇ, ಮಹಾತ್ಮನಾದ ನೀನು ಪೃಥಿವಿಯನ್ನು ಧರ್ಮದಿಂದ ಪಾಲಿಸು. ನೀನು ಪೃಥಿವಿಯನ್ನು ರಕ್ಷಿಸಿದರೆ ಪೃಥಿವಿಯು ಭಯರಹಿತಳಾಗುವಳು. ಆದುದರಿಂದ ನೀನು ಕಾಡಿಗೆ ಹೋಗಬೇಡ.

೧೩-೧೫. ನನ್ನ ಆಶ್ರಮದ ಸಮೀಪದಲ್ಲಿ ಹಿಮದಿಂದ ಕೂಡಿರುವ ಮರು ಪ್ರದೇಶವುಂಟು. ಅಲ್ಲಿ ಸಮುದ್ರದ ಮರಳು ತುಂಬಿರುವುದು. ಆ ಸ್ಥಳದಲ್ಲಿ ಭೂಮಿಯ ಒಳಗಡೆ ಮಧುವೆಂಬ ರಾಕ್ಷಸನ ಮಗನಾದ ಧುಂಧುವೆಂಬ ರಾಕ್ಷಸನು ಭಯಂಕರವಾಗಿ ತಪಸ್ಸುಮಾಡುತ್ತಾ ಲೋಕವಿನಾಶಕ್ಕೋಸ್ಕರವಾಗಿ ಮಲಗಿರುವನು. ಅವನು ಮಹಾಬಲಶಾಲಿಯು. ಅವನಿಗೆ ದೊಡ್ಡ ಶರೀರವಿರುವುದು. ದೇವತೆಗಳೂ ಸಹ ಅವನನ್ನು ಕೊಲ್ಲಲಾರರು.

೧೬-೧೭. ಅವನು ವರ್ಷದ ಕೊನೆಯಲ್ಲಿ ನಿಶ್ವಾಸವನ್ನು ಬಿಡುವನು. ಆ ನಿಶ್ವಾಸವಾಯುವು ಕಿಡಿಗಳುಳ್ಳದ್ದಾಗಿಯೂ ಅಗ್ನಿ, ಹೊಗೆಗಳಿಂದ ಕೂಡಿಕೊಂಡು ಕೆಂಪಾಗಿ ಭಯಂಕರವಾಗಿರುವುದು. ಆ ನಿಶ್ವಾಸವಾಯುವನ್ನು ಬಿಡಲು ಪರ್ವತ, ಅರಣ್ಯಸಹಿತವಾಗಿ ಭೂಮಿಯು ಚಲಿಸುವುದು.

ತೇನ ರಾಜನ್ನಶಕ್ನೋಽಮಿ ತಸ್ಮಿನ್ ಸ್ಥಾತುಂ ಸ್ವ ಆಶ್ರಮೇ ।
ತಂ ವಾರಯ ಮಹಾಬಾಹೋ ಲೋಕಾನಾಂ ಹಿತಕಾಮ್ಯಯಾ ॥ ೧೮ ॥

ಲೋಕಾಸ್ಸ್ವಸ್ಥಾ ಭವಂತ್ವದ್ಯ ತಸ್ಮಿನ್ನಿನಿಹಿತೇ ತ್ವಯಾ ।
ತ್ವಂ ಹಿ ತಸ್ಯ ವಧಾಯೈವ ಸಮರ್ಥಃ ಪೃಥಿವೀಪತೇ ॥ ೧೯ ॥

ವಿಷ್ಣುನಾ ಚ ವರೋ ದತ್ತೋ ಮಹಾನ್ಪೂರ್ವಯುಗೇಽನಘ ।
ತೇಜಸಾ ಸ್ವೇನ ತೇ ವಿಷ್ಣುಸ್ತೇಜ ಆಪ್ಯಾಯಯಿಷ್ಯತಿ ॥ ೨೦ ॥

ಪಾಲನೇ ಹಿ ಮಹಾನ್ ಧರ್ಮಃ ಪ್ರಜಾನಾಮಿಹ ದೃಶ್ಯತೇ ।
ನ ತಥಾ ದೃಶ್ಯತೇಽರಣ್ಯೇ ಮಾ ತೇಽಭೂದ್ಬುದ್ಧಿರೀದೃಶೀ ॥ ೨೧ ॥

ಈದೃಶೋ ನ ಹಿ ರಾಜೇಂದ್ರ ಕ್ವಚಿದ್ಧರ್ಮಃ ಪ್ರವಿದ್ಯತೇ ।
ಪ್ರಜಾನಾಂ ಪಾಲನೇ ಯಾದೃಕ್ ಪುರಾ ರಾಜರ್ಷಿಭಿಃ ಕೃತಃ ॥ ೨೨ ॥

೧೮-೧೯. ಎಲೈ ರಾಜನೇ, ಆರೀತಿ ಇರುವುದರಿಂದ ನಾನು ನನ್ನ ಆಶ್ರಮದಲ್ಲಿರಲಾರೆನು. ಲೋಕಕ್ಕೆ ಹಿತವಾಗುವ ದೃಷ್ಟಿಯಿಂದ ಆ ರಾಕ್ಷಸನನ್ನು ನೀನು ನಾಶಮಾಡು. ಅವನು ಸತ್ತುಹೋದರೆ ಜನಗಳೆಲ್ಲರೂ ಸುಖವಾಗಿರುತ್ತಾರೆ. ಆ ರಾಕ್ಷಸನನ್ನು ಕೊಲ್ಲಲು ರಾಜನಾದ ನೀನೇ ಸಮರ್ಥನು.

೨೦. ಎಲೈ ಪುಣ್ಯಶಾಲಿಯೇ, ಪೂರ್ವಯುಗದಲ್ಲಿ ವಿಷ್ಣುವು ತಾನೇ ತನ್ನ ತೇಜಸ್ಸಿನಿಂದ ಲೋಕವನ್ನು ಸಂತೋಷಪಡಿಸುವೆನೆಂದು ವರವನ್ನು ಕೊಟ್ಟಿರುವನು. ಅಲ್ಲದೆ ಪ್ರಜಾಪಾಲನೆಯೇ ರಾಜರಿಗೆ ಮುಖ್ಯವಾದ ಧರ್ಮವು.

೨೧-೨೨. ಅರಣ್ಯದಲ್ಲಿ ಈರೀತಿಯಾದುದು ಕಾಣುವುದಿಲ್ಲ. ಅದಕ್ಕೋಸ್ಕರ ನಿನ್ನ ಬುದ್ಧಿಯು ಅರಣ್ಯದಲ್ಲಿರುವಂತೆ ಆಗಬಾರದು. ಪೂರ್ವದಲ್ಲಿ ರಾಜರ್ಷಿಗಳು ಪ್ರಜಾಪಾಲನೆಯೇ ಮುಖ್ಯವಾದ ಧರ್ಮವೆಂದು ಅದಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿರುವರು ಅದಕ್ಕಿಂತಲೂ ರಾಜರಿಗೆ ಹೆಚ್ಚಿನ ಧರ್ಮವಿಲ್ಲ.

ಸ ಏವಮುಕ್ತೋ ರಾಜರ್ಷಿರುತ್ತಂಕೇನ ಮಹಾತ್ಮನಾ ।
ಕುವಲಾಶ್ವಃ ಸುತಂ ಪ್ರಾದಾತ್ತಸ್ಮೈ ಧುಂಧುನಿವಾರಣೇ ॥ ೨೩ ॥

ಭಗವನ್ನ್ಯಸ್ತಶಸ್ತ್ರೋಽಹಮಯಂ ತು ತನಯೋ ಮಮ ।
ಭವಿಷ್ಯತಿ ದ್ವಿಜಶ್ರೇಷ್ಠ ಧುಂಧುಮಾರೋ ನ ಸಂಶಯಃ ॥ ೨೪ ॥

ಇತ್ಯುಕ್ತ್ವಾ ಪುತ್ರಮಾದಿಶ್ಯ ಯಯೌ ಸ ತಪಸೇ ನೃಪಃ ।
ಕುವಲಾಶ್ವಶ್ಚ ಸೋತ್ತಂಕೋ ಯಯೌ ಧುಂಧುವಿನಿಗ್ರಹೇ ॥ ೨೫ ॥

ತಮಾವಿಶತ್ತದಾ ವಿಷ್ಣುರ್ಭಗವಾಂಸ್ತೇಜಸಾ ಪ್ರಭುಃ ।
ಉತ್ತಂಕಸ್ಯ ನಿಯೋಗಾದ್ವೈ ಲೋಕಾನಾಂ ಹಿತಕಾಮ್ಯಯಾ ॥ ೨೬ ॥

ತಸ್ಮಿನ್ಪ್ರಯಾತೇ ದುರ್ಧರ್ಷೇ ದಿವಿ ಶಬ್ದೋ ಮಹಾನಭೂತ್ ।
ಏಷ ಶ್ರೀಮಾನ್ನೃಪಸುತೋ ಧುಂಧುಮಾರೋ ಭವಿಷ್ಯತಿ ॥ ೨೭ ॥

---

೨೩. ಈರೀತಿಯಾದ ಉತ್ತಂಕನ ಮಾತನ್ನು ಕೇಳಿ, ರಾಜರ್ಷಿಯು ತನ್ನ ಮಗನಾದ ಕುವಲಾಶ್ವನನ್ನು ಧುಂಧುವಿನ ನಾಶಕ್ಕೋಸ್ಕರ ಉತ್ತಂಕನೊಡನೆ ಕಳುಹಿಸಿ ಕೊಟ್ಟನು.

೨೪. ಎಲೈ ಪೂಜ್ಯನೇ, ನನ್ನ ಮಗನು ಶಸ್ತ್ರಸನ್ನದ್ಧನಾಗಿರುವನು. ಇವನು ಧುಂಧುವನ್ನು ನಿಶ್ಚಯವಾಗಿ ನಾಶಮಾಡುವನು. ಸಂಶಯಪಡಬೇಡ ಎಂದು ಹೇಳಿ ಆ ರಾಜನು ಪುತ್ರನನ್ನು ಕಳುಹಿಸಿ ತಾನು ತಪಸ್ಸಿಗೆ ಹೊರಟುಹೋದನು.

೨೫. ಉತ್ತಂಕನೊಡನೆ ಕುವಲಾಶ್ವನು ದುಂಧುವನ್ನು ಕೊಲ್ಲಲು ಹೊರಟನು. ಭಗವಂತನಾದ ವಿಷ್ಣುವು ತೇಜಸ್ಸಿನೋಡನೆ ಅವನಲ್ಲಿ ಪ್ರವೇಶಮಾಡಿದನು.

೨೬. ಉತ್ತಂಕನ ಅಪ್ಪಣೆಯಿಂದಲೂ, ಜನಗಳಿಗೆ ಹಿತವನ್ನುಂಟುಮಾಡಬೇಕೆಂತಲೂ ಆ ದುರ್ಧರ್ಷನಾದ ಕುವಲಾಶ್ವನು ಹೊರಡಲಾಗಿ ಆಕಾಶದಲ್ಲಿ ಮಹಾಶಬ್ದ ವುಂಟಾಯಿತು.

೨೭-೨೮. ಆಕಾಶದಲ್ಲಿ ದೇವತೆಗಳೆಲ್ಲರೂ ಸೇರಿ ರಾಜನ ಮಗನಾದ ಈತನು ಧುಂಧುಮಾರನಾಗುವನು ಎಂಬುದಾಗಿ ದಿವ್ಯಮಾಲಿಕೆಗಳಿಂದ ಪೂಜಿಸುತ್ತಾ ಜಯ,

ದಿವ್ಯೈರ್ಮಾಲ್ಯೈಶ್ಚ ತಂ ದೇವಾಸ್ಸಮಂತಾತ್ಸಮವಾರಯನ್ ।
ಪ್ರಶಂಸಾಂ ಚಕ್ರಿರೇ ತಸ್ಯ ಜಯ ಜೀವೇತಿ ವಾದಿನಃ ॥ ೨೮ ॥

ಸ ಗತ್ವಾ ಜಯುತಾಂ ಶ್ರೇಷ್ಠಸ್ತನಯೈಸ್ಸಹ ಪಾರ್ಥಿವಃ ।
ಸಮುದ್ರಂ ಖನಯಾಮಾಸ ವಾಲುಕಾರ್ಣವಮಧ್ಯತಃ ॥ ೨೯ ॥

ನಾರಾಯಣಸ್ಯ ವಿಪ್ರರ್ಷೇಸ್ತೇಜಸಾಪ್ಯಾಯಿತಸ್ತು ಸಃ ।
ಬಭೂವ ಸುಮಹಾತೇಜಾ ಭೂಯೋ ಬಲಸಮನ್ವಿತಃ ॥ ೩೦ ॥

ತಸ್ಯ ಪುತ್ರೈಃ ಖನದ್ಭಿಸ್ತು ವಾಲುಕಾಂತರ್ಗತಸ್ತು ಸಃ ।
ಧುಂಧುರಾಸಾದಿತೋ ಬ್ರಹ್ಮನ್ ದಿಶಮಾಶ್ರಿತ್ಯ ಪಶ್ಚಿಮಾಂ ॥ ೩೧ ॥

ಮುಖಜೇನಾಗ್ನಿನಾ ಕ್ರೋಧಾಲ್ಲೋಕಾನ್ಸಂವರ್ತಯನ್ನಿವ ।
ವಾರಿ ಸುಸ್ರಾವ ವೇಗೇನ ವಿಧೋಃ ಕಧಿರಿವೋದಯೇ ॥ ೩೨ ॥

---

ಜಯ, ಜೀವ, ಜೀವ ಎಂಬುದಾಗಿ ಜಯಶಬ್ದವನ್ನು ಮಾಡುತ್ತಾ ಪ್ರಶಂಸೆ ಮಾಡಿದರು.

೨೯. ಆ ವೀರಶ್ರೇಷ್ಠನಾದ ಕುವಲಾಶ್ವನು ತನ್ನ ಮಕ್ಕಳೊಡನೆ ಆ ಪ್ರದೇಶಕ್ಕೆ ಹೋಗಿ ಅಲ್ಲಿ ಮರಳಿನಿಂದ ತುಂಬಿದ್ದ ಸಮುದ್ರವನ್ನು ಅಗೆಯಲು ಪ್ರಾರಂಭಿಸಿದನು.

೩೦. ಆ ಕುವಲಾಶ್ವನು ಮೊದಲೇ ಬಲಿಷ್ಠನು. ಶ್ರೀಮನ್ನಾರಾಯಣನ ತೇಜಸ್ಸಿನಿಂದ ಮತ್ತೂ ಬಲಿಷ್ಠನಾದನು.

೩೧. ಕುವಲಾಶ್ವನ ಮಕ್ಕಳು ಭೂಮಿಯನ್ನು ಅಗೆಯುತ್ತಿರಲು ಧುಂಧುವು ಆ ಮರಳಿನ ಮಧ್ಯದಲ್ಲಿ ಪಶ್ಚಿಮದಿಕ್ಕಿಗೆ ಮುಖಮಾಡಿಕೊಂಡು ಲೋಕಗಳನ್ನು ಸಂಹರಿಸುವಂತೆ ಅಗ್ನಿಯನ್ನು ಮುಖದಿಂದುಗುಳುತ್ತಾ ಮಲಗಿದ್ದನು.

೩೨. ಅನಂತರ ಧುಂಧುವು ಚಂದ್ರೋದಯದಲ್ಲಿ ಸಮುದ್ರವು ಉಕ್ಕುವಂತೆ ನೀರನ್ನು ವೇಗವಾಗಿ ಸುರಿಸಿದನು. ಬಳಿಕ ತನ್ನ ಮುಖಾಗ್ನಿಯಿಂದ ಕುವಲಾಶ್ವನ ನೂರುಜನ ಮಕ್ಕಳನ್ನು ಸುಟ್ಟುಹಾಕಿದನು.

ತತೋऽನಲೈರಭಿಹತಂ ದಗ್ಧಂ ಪುತ್ರಶತಂ ಹಿ ತತ್ ।
ತ್ರಯ ಏವಾವಶಿಷ್ಟಾಶ್ಚ ತೇಷು ಮಧ್ಯೇ ಮುನೀಶ್ವರ ॥ ೩೩ ॥

ತತಸ್ಸ ರಾಜಾ ವಿಪ್ರೇಂದ್ರ ರಾಕ್ಷಸಂ ತಂ ಮಹಾಬಲಂ ।
ಆಸಸಾದ ಮಹಾತೇಜಾ ಧುಂಧುಂ ವಿಪ್ರವಿನಾಶಿನಂ ॥ ೩೪ ॥

ತಸ್ಯ ವಾರಿಮಯಂ ವೇಗಮಾಪೀಯ ಸ ನರಾಧಿಪಃ ।
ವಹ್ನಿಬಾಣೇನ ವಹ್ನಿಂ ತು ಶಮಯಾಮಾಸ ವಾರಿಣಾ ॥ ೩೫ ॥

ತಂ ನಿಹತ್ಯ ಮಹಾಕಾಯಂ ಬಲೇನೋದಕರಾಕ್ಷಸಂ ।
ಉತ್ತಂಕಸ್ಯೇಕ್ಷಯಾಮಾಸ ಕೃತಂ ಕರ್ಮ ನರಾಧಿಪಃ ॥ ೩೬ ॥

ಉತ್ತಂಕಸ್ತು ವರಂ ಪ್ರಾದಾತ್ತಸ್ಮೈ ರಾಜ್ಞೇ ಮಹಾಮುನೇ ।
ಅದದಚ್ಚಾಕ್ಷಯಂ ವಿತ್ತಂ ಶತ್ರುಭಿಶ್ಚಾಪರಾಜಯಂ ॥ ೩೭ ॥

ಧರ್ಮೇ ಮತಿಂ ಚ ಸತತಂ ಸ್ವರ್ಗೇ ವಾಸಂ ತಥಾಕ್ಷಯಂ ।
ಪುತ್ರಾಣಾಂ ಚಾಕ್ಷಯಂ ಲೋಕಂ ರಕ್ಷಸಾ ಯೇ ತು ಸಂಹತಾಃ ॥ ೩೮ ॥

೩೩-೩೪. ಆ ನೂರು ಮಕ್ಕಳಲ್ಲಿ ಮೂರುಜನರು ಮಾತ್ರ ಉಳಿದರು. ಎಲೈ ಬ್ರಾಹ್ಮಣನೇ, ಅನಂತರ ಪರಾಕ್ರಮಿಯಾದ ಆ ಕುವಲಾಶ್ವರಾಜನು ಧುಂಧುವನ್ನು ಕೊಲ್ಲಲೋಸುಗ ಮಹಾಪರಾಕ್ರಮಿಯಾದ ಅವನ ಸಮಾಪಕ್ಕೆ ಬಂದನು.

೩೫-೩೬. ಅನಂತರ ಆ ಕುವಲಾಶ್ವನು ಆಗ್ನೇಯಾಸ್ತ್ರದಿಂದ ಆ ನೀರಿನ ವೇಗವನ್ನೂ ವಾರುಣಾಸ್ತ್ರದಿಂದ ಅವನ ಮುಖದ ಅಗ್ನಿಯನ್ನೂ ನಾಶಮಾಡಿ ದೊಡ್ಡ ಶರೀರವುಳ್ಳ ಆ ರಾಕ್ಷಸನನ್ನು ಕೊಂದನು. ಇದೆಲ್ಲವನ್ನೂ ಆ ಉತ್ತಂಕಮುನಿಗೆ ತೋರಿಸಿದನು.

೩೭-೩೮. ಉತ್ತಂಕನು ಕುವಲಾಶ್ವನಿಗೆ ಅಕ್ಷಯವಾದ ದ್ರವ್ಯವನ್ನೂ ಮತ್ತು ಶತ್ರುಗಳಿಂದ ಪರಾಭವವಿಲ್ಲದಿರುವಿಕೆಯನ್ನೂ, ಅನುಗ್ರಹಿಸಿ ಧರ್ಮಬುದ್ಧಿಯನ್ನೂ, ಅಕ್ಷಯವಾದ ಸ್ವರ್ಗವಾಸವನ್ನೂ ಕೊಟ್ಟನು. ಆ ರಾಕ್ಷಸನ ಅಗ್ನಿಗೆ ಸಿಕ್ಕಿ ಸತ್ತು ಹೋದ ಅವನ ಮಕ್ಕಳಿಗೆ ಅಕ್ಷಯವಾದ ಲೋಕವು ಪ್ರಾಪ್ತವಾಗುವಂತೆ ವರವನ್ನೂ ಕೊಟ್ಟನು.

ತಸ್ಯ ಪುತ್ರಾಸ್ತ್ರಯಶ್ಶಿಷ್ಟಾ ದೃಢಾಶ್ವೋ ಜ್ಯೇಷ್ಠ ಉಚ್ಯತೇ ।
ಹಂಸಾಶ್ವಕಪಿಲಾಶ್ವೌ ಚ ಕುಮಾರೌ ತತ್ಕನೀಯಸೌ　　॥ ೩೯ ॥

ಧೌಂಧುಮಾರಿರ್ದೃಢಾಶ್ವೋ ಯೋ ಹರ್ಯಶ್ವಸ್ತಸ್ಯ ಚಾತ್ಮಜಃ ।
ಹರ್ಯಶ್ವಸ್ಯ ನಿಕುಂಭೋಽಭೂತ್ಪುತ್ರೋ ಧರ್ಮರತಃ ಸದಾ　　॥ ೪೦ ॥

ಸಂಹತಾಶ್ವೋ ನಿಕುಂಭಸ್ಯ ಪುತ್ರೋ ರಣವಿಶಾರದಃ
ಅಕ್ಷಾಶ್ವಶ್ಚ ಕೃತಾಶ್ವಶ್ಚ ಸಂಹತಾಶ್ವಸುತೋಽಭವತ್　　॥ ೪೧ ॥

ತಸ್ಯ ಹೈಮವತೀ ಕನ್ಯಾ ಸತಾಂ ಮಾನ್ಯಾ ವೃಷದ್ವತೀ ।
ವಿಖ್ಯಾತಾ ತ್ರಿಷು ಲೋಕೇಷು ಪುತ್ರಸ್ತಸ್ಯಾಃ ಪ್ರಸೇನಜಿತ್　　॥ ೪೨ ॥

ಲೇಭೇ ಪ್ರಸೇನಜಿದ್ಭಾರ್ಯಾಂ ಗೌರೀಂ ನಾಮ ಪತಿವ್ರತಾಂ ।
ಅಭಿಶಪ್ತಾ ತು ಸಾ ಭರ್ತ್ರಾ ನದೀ ಸಾ ಬಾಹುದಾ ಕೃತಾ　　॥ ೪೩ ॥

೩೯. ಕುವಲಾಶ್ವನ ಉಳಿದ ಪುತ್ರರು ದೃಢಾಶ್ವ, ಹಂಸಾಶ್ವ, ಕಪಿಲಾಶ್ವರೆಂಬ ಮೂರುಜನ ಮಾತ್ರ. ಅವರಲ್ಲಿ ದೃಢಾಶ್ವನು ಜ್ಯೇಷ್ಠನು. ಹಂಸಾಶ್ವ, ಕಪಿಲಾಶ್ವರು ಕಿರಿಯವರು. ಹರ್ಯಶ್ವನೆಂಬುವನು ದೃಢಾಶ್ವನ ಮಗನು.

೪೦. ಹರ್ಯಶ್ವನಿಗೆ ಧರ್ಮರತನಾದ ನಿಕುಂಭನೆಂಬುವನು ಮಗನು. ಆ ನಿಕುಂಭನಿಗೆ ಸಂಹತಾಶ್ವನೆಂಬ ಯುದ್ಧವಿಶಾರದನಾದ ಮಗನಿದ್ದನು.

೪೧. ಸಂಹತಾಶ್ವನಿಗೆ ಅಕ್ಷಾಶ್ವ, ಕೃತಾಶ್ವರೆಂಬ ಇಬ್ಬರು ಪುತ್ರರೂ, ಹೇಮವತೀ, ವೃಷದ್ವತೀ ಎಂಬ ಕನ್ಯೆಯರೂ ಇದ್ದರು. ಆ ವೃಷದ್ವತಿಯು ಸತ್ಪುರುಷರಿಂದ ಮಾನ್ಯಳಾಗಿದ್ದನು.

೪೨. ಆ ವೃಷದ್ವತಿಗೆ ಪ್ರಸೇನಜಿತ್ ಎಂಬ ಮಗನಾದನು. ಅವನು ಮೂರು ಲೋಕದಲ್ಲಿಯೂ ಹೆಸರಾದವನು. ಅವನಿಗೆ ಗೌರೀ ಎಂಬ ಹೆಸರುಳ್ಳ ಪತಿವ್ರತೆಯಾದ ಹೆಂಡತಿ ಇದ್ದಳು.

೪೩. ಆ ಗೌರಿಯು ಕಾರಣಾಂತರದಿಂದ ಗಂಡನಿಂದ ಶಪಿಸಲ್ಪಟ್ಟು ಬಾಹುದಾ ಎಂಬ ನದೀರೂಪಳಾದಳು. ಆ ಪ್ರಸೇನಜಿತನಿಗೆ ಯುವನಾಶ್ವನೆಂಬ ಮಗನಾದನು. ಅವನು ರಾಜನು.

ತಸ್ಯ ಪುತ್ರೋ ಮಹಾನಾಸೀದ್ಯುವನಾಶ್ವೋ ಮಹೀಪತಿಃ ।
ಮಾಂಧಾತಾ ಯುವನಾಶ್ವಸ್ಯ ತ್ರಿಷು ಲೋಕೇಷು ವಿಶ್ರುತಃ ॥ ೪೪ ॥

ತಸ್ಯ ಚೈತ್ರರಥೀ ಭಾರ್ಯಾ ಶಶಬಿಂದುಸುತಾಽಭವತ್ ।
ಪತಿವ್ರತಾ ಚ ಜ್ಯೇಷ್ಠಾ ಚ ಭ್ರಾತೄಣಾಮಯುತಂ ಚ ಸಃ ॥ ೪೫ ॥

ತಸ್ಯಾಮುತ್ಪಾದಯಾಮಾಸ ಮಾಂಧಾತಾ ದ್ವೌ ಸುತೌ ತದಾ ।
ಪುರುಕುತ್ಸಂ ಚ ಧರ್ಮಜ್ಞಂ ಮುಚುಕುಂದಂ ಚ ಧಾರ್ಮಿಕಂ ॥ ೪೬ ॥

ಪುರುಕುತ್ಸಸುತಸ್ತ್ವಾಸೀದ್ವಿದ್ವಾಂಸ್ತ್ರಯ್ಯಾರುಣಿಃ ಕವಿಃ ।
ತಸ್ಯ ಸತ್ಯವ್ರತೋ ನಾಮ ಕುಮಾರೋಽಭೂನ್ಮಹಾಬಲೀ ॥ ೪೭ ॥

ಪಾಣಿಗ್ರಹಣಮಂತ್ರಾಣಾಂ ವಿಘ್ನಂ ಚಕ್ರೇ ಮಹಾತ್ಮಭಿಃ ।
ಯೇನ ಭಾರ್ಯಾ ಹೃತಾ ಪೂರ್ವಂ ಕೃತೋದ್ವಾಹಃ ಪರಸ್ಯ ವೈ ॥ ೪೮ ॥

೪೪-೪೫. ಯುವನಾಶ್ವನಿಗೆ ಮಾಂಧಾತನೆಂಬುವನು ಮಗನು. ಅವನು ಮೂರುಲೋಕದಲ್ಲಿಯೂ ಪ್ರಸಿದ್ಧನು. ಅವನಿಗೆ ಚೈತ್ರರಥೀ ಎಂಬ ಪತ್ನಿಯಿದ್ದಳು. ಅವಳು ಶಶಿಬಿಂದು ಎಂಬುವನ ಮಗಳು. ಪತಿವ್ರತೆಯು ಮತ್ತು ಹಿರಿಯಮಗಳು. ಅವಳಿಗೆ ಹತ್ತುಸಾವಿರ ತಮ್ಮಂದಿರು ಇದ್ದರು.

೪೬. ಆ ಚೈತ್ರರಥಿಯಲ್ಲಿ ಮಾಂಧಾತನಿಗೆ ಧರ್ಮಜ್ಞನಾದ ಪುರುಕುತ್ಸ, ಧಾರ್ಮಿಕನಾದ ಮುಚುಕುಂದ ಎಂಬ ಇಬ್ಬರು ಪುತ್ರರು ಹುಟ್ಟಿದರು.

೪೭. ಪುರುಕುತ್ಸನಿಗೆ ತ್ರಯ್ಯಾರುಣಿ ಎಂಬ ಮಗನಾದನು. ಅವನು ವಿದ್ವಾಂಸನೂ, ಕವಿಯೂ ಆಗಿದ್ದನು. ಅವನಿಗೆ ಸತ್ಯವ್ರತನೆಂಬ ಮಗನಾದನು. ಅವನು ಮಹಾಬಲಶಾಲಿಯು.

೪೮. ಆ ಸತ್ಯವ್ರತನ ಮದುವೆಯ ಕಾಲದಲ್ಲಿ ಪಾಣಿಗ್ರಹಣಮಂತ್ರಕ್ಕೆ ಕೆಲವು ಮಹಾತ್ಮರು ವಿಘ್ನಮಾಡಿ ಆ ಕನ್ಯೆಯನ್ನು ಮತ್ತೊಬ್ಬ ಪುರುಷನಿಗೆ ಕೊಟ್ಟು ವಿವಾಹಮಾಡಿದರು.

ಬಲಾತ್ಕಾಮಾಚ್ಚ ಮೋಹಾಚ್ಚ ಸಂಹರ್ಷಾಚ್ಚ ಮದೋತ್ಕಟಾತ್ ।
ಜಹಾರ ಕನ್ಯಾಂ ಕಾಮಾಚ್ಚ ಕಸ್ಯಚಿತ್ಪುರವಾಸಿನಃ ॥ ೪೯ ॥

ಅಧರ್ಮಸಂಗಿನಂ ತಂ ತು ರಾಜಾ ತ್ರಯ್ಯಾರುಣಿಸ್ತ್ಯಜನ್ ।
ಅಪಧ್ವಂಸೇತಿ ಬಹುಶೋಽವದತ್ಕ್ರೋಧಸಮನ್ವಿತಃ ॥ ೫೦ ॥

ಪಿತರಂ ಸೋಽಬ್ರವೀನ್ಮುಕ್ತಃ ಕ್ವ ಗಚ್ಛಾಮೀತಿ ವೈ ತದಾ ।
ವಸ ಶ್ವಪಾಕನಿಕಟೇ ರಾಜಾ ಪ್ರಾಹೇತಿ ತಂ ತದಾ ॥ ೫೧ ॥

ಸ ಹಿ ಸತ್ಯವ್ರತಸ್ತೇನ ಶ್ವಪಾಕಾವಸಥಾಂತಿಕೇ ।
ಪಿತ್ರಾ ತ್ಯಕ್ತೋಽವಸದ್ವೀರೋ ಧರ್ಮಪಾಲೇನ ಭೂಭುಜಾ ॥ ೫೨ ॥

ತತಸ್ತ್ರಯ್ಯಾರುಣೀ ರಾಜಾ ವಿರಕ್ತಃ ಪುತ್ರಕರ್ಮಣಾ ।
ಸ ಶಂಕರತಪಃ ಕರ್ತುಂ ಸರ್ವಂ ತ್ಯಕ್ತ್ವಾ ವನಂ ಯಯೌ ॥ ೫೩ ॥

೪೯. ಆ ಸತ್ಯವ್ರತನು ಕಾಮದಿಂದಲೂ, ಮೋಹದಿಂದಲೂ, ಹರ್ಷಾಧಿಕ್ಯದಿಂದಲೂ, ಅತ್ಯಂತ ಮದದಿಂದಲೂ ಆ ಊರಿನಲ್ಲಿರುವ ಯಾವುದೋ ಓರ್ವ ಹುಡುಗಿಯನ್ನು ಅಪಹರಿಸಿದನು. ಈರೀತಿ ಅಧರ್ಮಪ್ರವರ್ತಕನಾದ ಸತ್ಯವ್ರತನನ್ನು ರಾಜನಾದ ತ್ರಯ್ಯಾರುಣಿಯು ಬಿಟ್ಟುಬಿಟ್ಟನು.

೫೦. ತ್ರಯ್ಯಾರುಣಿಯು ಕೋಪಗೊಂಡು 'ಅಪಧ್ವಂಸ' ಎಂಬುದಾಗಿ ಅನೇಕಬಾರಿ ಬೈದನು. ಬಿಡಲ್ಪಟ್ಟ ಆ ಸತ್ಯವ್ರತನು ತಂದೆಯನ್ನು ಕುರಿತು ನಾನೆಲ್ಲಿಗೆ ಹೋಗಲಿ ಎಂಬುದಾಗಿ ಕೇಳಿದನು.

೫೧. ರಾಜನು ಮಗನನ್ನು ಕುರಿತು, ನೀನು ನಾಯಿಯ ಮಾಂಸವನ್ನು ಬೇಯಿಸುವವರ ಹತ್ತಿರ ವಾಸಮಾಡು ಎಂದು ಹೇಳಿದನು. ಅಂತೆಯೇ ಸತ್ಯವ್ರತನು ಶ್ವಪಾಕರ ಹತ್ತಿರ ವಾಸಮಾಡಲು ಪ್ರಾರಂಭಿಸಿದನು.

೫೨. ಧರ್ಮವನ್ನು ಪಾಲಿಸುತ್ತಿದ್ದ ತ್ರಯ್ಯಾರುಣೀ ರಾಜನಿಂದ ಸತ್ಯವ್ರತನು ಬಿಡಲ್ಪಟ್ಟನು. ಅನಂತರ ರಾಜನು ಪುತ್ರನ ಈ ಕರ್ಮದಿಂದ ವಿರಕ್ತನಾದನು.

೫೩. ಅನಂತರ ರಾಜನು ಈಶ್ವರನನ್ನು ಕುರಿತು ತಪಸ್ಸುಮಾಡಲು ರಾಜ್ಯಕೋಶಾದಿಗಳೆಲ್ಲವನ್ನೂ ಬಿಟ್ಟು ವನಕ್ಕೆ ತೆರಳಿದನು. ಈ ಅಧರ್ಮದಿಂದ ತ್ರಯ್ಯಾರುಣಿಯ ದೇಶದಲ್ಲಿ ಇಂದ್ರನು ಮಳೆಗರೆಯಲಿಲ್ಲ.

ತತಸ್ತಸ್ಯ ಸ್ವವಿಷಯೇ ನಾವರ್ಷತ್ಪಾಕಶಾಸನಃ ।
ಸಮಾ ದ್ವಾದಶ ವಿಪ್ರರ್ಷೇ ತೇನಾಧರ್ಮೇಣ ವೈ ತದಾ ॥ ೫೪ ॥

ದಾರಾಂಸ್ತಸ್ಯ ತು ವಿಷಯೇ ವಿಶ್ವಾಮಿತ್ರೋ ಮಹಾತಪಾಃ ।
ಸಂತ್ಯಜ್ಯ ಸಾಗರಾನೂಪೇ ಚಚಾರ ವಿಪುಲಂ ತಪಃ ॥ ೫೫ ॥

ತಸ್ಯ ಪತ್ನೀ ಗಲೇ ಬದ್ಧ್ವಾ ಮಧ್ಯಮಂ ಪುತ್ರಮೌರಸಂ ।
ಶೇಷಸ್ಯ ಭರಣಾರ್ಥಾಯ ವ್ಯಾಕ್ರೀಣಾದ್ಗೋಶತೇನ ಚ ॥ ೫೬ ॥

ತಾಂ ತು ದೃಷ್ಟ್ವಾ ಗಲೇ ಬದ್ಧಂ ವಿಕ್ರೀಣಂತೀಂ ಸ್ವಮಾತ್ಮಜಂ ।
ಮಹರ್ಷಿಪುತ್ರಂ ಧರ್ಮಾತ್ಮಾ ಮೋಚಯಾಮಾಸ ತಂ ತದಾ ॥ ೫೭ ॥

ಸತ್ಯವ್ರತೋ ಮಹಾಬಾಹುರ್ಭರಣಂ ತಸ್ಯ ಚಾಕರೋತ್ ।
ವಿಶ್ವಾಮಿತ್ರಸ್ಯ ತುಷ್ಟ್ಯರ್ಥಮನುಕ್ರೋಶಾರ್ಥಮೇವ ಚ ॥ ೫೮ ॥

೫೪-೫೫. ಎಲೈ ವಿಪ್ರರ್ಷಿಯೇ, ಕೇಳು. ಆ ಅಧರ್ಮಾಚರಣೆಯಿಂದ ಹನ್ನೆರಡು ವರ್ಷಗಳಕಾಲ ಮಳೆಯೇ ಬೀಳಲಿಲ್ಲ. ಆ ತ್ರಯ್ಯಾರುಣಿಯ ದೇಶದಲ್ಲಿ ಮಹಾತಪಸ್ವಿಯಾದ ವಿಶ್ವಾಮಿತ್ರನೆಂಬ ಋಷಿಯು ತನ್ನ ಹೆಂಡತಿಯನ್ನು ಬಿಟ್ಟು ಬಿಟ್ಟು, ಸಮುದ್ರದ ಸಮೀಪದಲ್ಲಿ ಕಠಿಣವಾದ ತಪಸ್ಸನ್ನು ಮಾಡಿದನು.

೫೬. ಆ ಋಷಿಯ ಹೆಂಡತಿಯು ಜೀವನವನ್ನು ನಡೆಸಲು ಸಾಧ್ಯವಿಲ್ಲದೆ ಮಧ್ಯದ ಮಗನನ್ನು ಕುತ್ತಿಗೆಯಲ್ಲಿ ಕಟ್ಟಿ ಇತರ ಮಕ್ಕಳ ಪೋಷಣೆಗೋಸ್ಕರ ನೂರು ಹಸುವಿಗೆ ಮಾರಲುದ್ಯುಕ್ತಳಾದಳು. (ಹಿಂದಿನ ಕಾಲದಲ್ಲಿ ಮಾರುವ ವಸ್ತುವನ್ನು ಕತ್ತಿನಲ್ಲಿ ಕಟ್ಟಿಕೊಂಡು ಮಾರುವ ರೂಢಿಯಿದ್ದಿತು.)

೫೭-೫೮. ಈರೀತಿಯಾಗಿ ಮಗನನ್ನು ಕುತ್ತಿಗೆಯಲ್ಲಿ ಕಟ್ಟಿಕೊಂಡು ಮಾರುತ್ತಿರುವ ಆ ಹೆಂಗಸನ್ನು ನೋಡಿ ಧರ್ಮಾತ್ಮನಾದ ಸತ್ಯವ್ರತನು ವಿಶ್ವಾಮಿತ್ರನಿಗೆ ಪ್ರೀತಿಯನ್ನುಂಟುಮಾಡುವುದಕ್ಕಾಗಿಯೂ, ಅವನ ಅನುಗ್ರಹವನ್ನು ಸಂಪಾದಿಸಿಕೊಳ್ಳುವುದಕ್ಕಾಗಿಯೂ ಆ ಋಷಿಪುತ್ರನನ್ನು ವಿಕ್ರಯದಿಂದ ಬಿಡಿಸಿ ಅವನ ಜೀವನವನ್ನು ನಡೆಸಿದನು.

ತದಾರಭ್ಯ ಸ ಪುತ್ರಸ್ತು ವಿಶ್ವಾಮಿತ್ರಸ್ಯ ವೈ ಮುನೇಃ ।
ಅಭವದ್ಗಾಲವೋ ನಾಮ ಗಲಬಂಧಾನ್ಮಹಾತಪಾಃ ॥ ೫೯ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಮನುವಂಶವರ್ಣನಂ ನಾಮ ಸಪ್ತತ್ರಿಂಶೋಽಧ್ಯಾಯಃ



೫೯. ಅಂದಿನಿಂದ ಆ ಪುತ್ರನು ವಿಶ್ವಾಮಿತ್ರನಿಗೆ ಸೇರಿದವನಾದನು. ಆ ಪುತ್ರನನ್ನು ಅವನ ತಾಯಿಯು ಕುತ್ತಿಗೆಯನ್ನು ಕಟ್ಟಿದುದರಿಂದ ಅವನಿಗೆ ಗಾಲವನೆಂದು ಹೆಸರಾಯಿತು. (ಗಲಬಂಧಾತ್ ಗಾಲವ ಎಂಬುದಾಗಿ ವ್ಯುತ್ಪತ್ತಿಯು.)

ಇಲ್ಲಿಗೆ ಶ್ರೀ ಶಿವಪುರಾಣದ ಉಮಾಸಂಹಿತೆಯಲ್ಲಿ ಮನುವಂಶವರ್ಣನವೆಂಬ
ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಅಷ್ಟತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಸತ್ಯವ್ರತಸ್ತು ತದ್ಭಕ್ತ್ಯಾ ಕೃಪಯಾ ಚ ಪ್ರತಿಜ್ಞಯಾ ।
ವಿಶ್ವಾಮಿತ್ರಕಲತ್ರಂ ಚ ಪೋಷಯಾಮಾಸ ವೈ ತದಾ ॥ ೧ ॥

ಹತ್ವಾ ಮೃಗಾನ್ ವರಾಹಾಂಶ್ಚ ಮಹಿಷಾಂಶ್ಚ ವನೇಚರಾನ್ ।
ವಿಶ್ವಾಮಿತ್ರಾಶ್ರಮಾಭ್ಯಾಶೇ ತನ್ಮಾಂಸಂ ಚಾಕ್ಷಿಪನ್ಮುನೇ ॥ ೨ ॥

ತೀರ್ಥಂ ಗಾಂ ಚೈವ ರಾತ್ರಂ ಚ ತಥೈವಾಂತಃಪುರಂ ಮುನಿಃ ।
ಯಾಜ್ಯೋಪಾಧ್ಯಾಯಸಂಯೋಗಾದ್ವಸಿಷ್ಠಃ ಪರ್ಯರಕ್ಷತ ॥ ೩ ॥

---

## ಮೂವತ್ತೆಂಟನೆಯ ಅಧ್ಯಾಯವು

೧. ಸೂತನಿಂತೆಂದನು:—ಸತ್ಯವ್ರತನು ಭಕ್ತಿಯಿಂದಲೂ, ಕರುಣೆಯಿಂದಲೂ, ಪ್ರತಿಜ್ಞೆಯಿಂದಲೂ ವಿಶ್ವಾಮಿತ್ರನ ಹೆಂಡತಿಯನ್ನು ಕಾಪಾಡುತ್ತಿದ್ದನು.

೨. ಎಲೈ ಮುನಿಯೇ, ಆ ಸತ್ಯವ್ರತನು ಜಿಂಕೆಗಳನ್ನೂ, ಹಂದಿಗಳನ್ನೂ, ಎಮ್ಮೆಗಳನ್ನೂ, ಕಾಡಿನ ಅನೇಕ ಪ್ರಾಣಿಗಳನ್ನೂ ಕೊಂದು ವಿಶ್ವಾಮಿತ್ರನ ಆಶ್ರಮದ ಹತ್ತಿರ ಅವುಗಳ ಮಾಂಸಗಳನ್ನು ಹಾಕುತ್ತಿದ್ದನು.

೩. ಈರೀತಿ ಸತ್ಯವ್ರತನು ಅರಣ್ಯದಲ್ಲಿ ವಾಸಮಾಡುತ್ತಿದ್ದಾಗ ಕುಲಪುರೋಹಿತನಾದ ವಸಿಷ್ಠನು ಆ ರಾಜ್ಯದ ತೀರ್ಥಸ್ಥಾನಗಳನ್ನೂ, ಹಸುಗಳನ್ನೂ, ಅಂತಃಪುರವನ್ನೂ ರಕ್ಷಿಸುತ್ತಿದ್ದನು.

ಸತ್ಯವ್ರತಸ್ಯ ವಾಕ್ಯಾದ್ವಾ ಭಾವಿನೋಽರ್ಥಸ್ಯ ವೈ ಬಲಾತ್ ।
ವಸಿಷ್ಠೋಽಭ್ಯಧಿಕಂ ಮನ್ಯುಂ ಧಾರಯಾಮಾಸ ನಿತ್ಯಶಃ ॥ ೪ ॥

ಪಿತ್ರಾ ತು ತಂ ತದಾ ರಾಷ್ಟ್ರಾತ್ಪರಿತ್ಯಕ್ತಂ ಸ್ವಮಾತ್ಮಜಂ ।
ನ ವಾರಯಾಮಾಸ ಮುನಿರ್ವಸಿಷ್ಠಃ ಕಾರಣೇನ ಚ ॥ ೫ ॥

ಪಾಣಿಗ್ರಹಣಮಂತ್ರಾಣಾಂ ನಿಷ್ಠಾ ಸ್ಯಾತ್ಸಪ್ತಮೇ ಪದೇ ।
ನ ಚ ಸತ್ಯವ್ರತಸ್ತಸ್ಯ ತಮುಪಾಂಶುಮಬುಧ್ಯತ ॥ ೬ ॥

ತಸ್ಮಿನ್ಸ ಪರಿತೋಷಾಯ ಪಿತುರಾಸೀನ್ಮಹಾತ್ಮನಃ ।
ಕುಲಸ್ಯ ನಿಷ್ಕೃತಿರ್ವಿಪ್ರ ಕೃತವಾನ್ಸ್ಯೈ ಭವೇದಿತಿ ॥ ೭ ॥

೪. ಸತ್ಯವ್ರತನು ಆಡುವ ಮಾತುಗಳಿಂದಲೋ ಮುಂದಾಗಬೇಕೆಂದಿರುವ ಕಾರ್ಯಬಲದಿಂದಲೋ ಯಾವಾಗಲೂ ಸತ್ಯವ್ರತನ ವಿಚಾರದಲ್ಲಿ ದ್ವೇಷಬುದ್ಧಿಯನ್ನಿಟ್ಟುಕೊಂಡಿದ್ದನು.

೫. ಆದುದರಿಂದ ತಂದೆಯು ರಾಜ್ಯದಿಂದ ಮಗನನ್ನು ಓಡಿಸಿದಾಗ ವಸಿಷ್ಠನು ತನ್ನ ಕಾರ್ಯದಿಂದ ತಡೆಯಬಹುದಾಗಿದ್ದರೂ ತಡೆಯಲಿಲ್ಲ.

೬. ವಿವಾಹಕಾಲದಲ್ಲಿ ನಡೆಯುವ ಪಾಣಿಗ್ರಹಣಮಂತ್ರಗಳಲ್ಲಿಯೂ ಸಪ್ತಪದಿ ಎಂಬ ಮಂತ್ರೋಚ್ಚಾರಣೆಮಾಡುವಾಗ ಹೇಳುವ ಏಳನೆಯದಾದ "ಸಪ್ತ ಸಪ್ತಭ್ಯೋ ಹೋತ್ರಾಭ್ಯೋ ವಿಷ್ಣುಸ್ತ್ವಾನ್ವೇತು" ಎಂಬ ಮಂತ್ರದಲ್ಲಿ ಸತ್ಯವ್ರತನಿಗೆ ವಿಶೇಷವಾದ ಗೌರವವಿರಲಿಲ್ಲ. ಏಕೆಂದರೆ ಆ ಮಂತ್ರದಿಂದ ವಿವಾಹವು ಪೂರ್ತಿಯಾಗುವುದು. ಹಿಂದೆ ಸತ್ಯವ್ರತನ ವಿವಾಹದಲ್ಲಿ ಕೆಲವರು ಈ ಮಂತ್ರಕ್ಕೆ ವಿಘ್ನವನ್ನು ಮಾಡಿ ಕನ್ಯೆಯನ್ನು ಬೇರೊಬ್ಬನಿಗೆ ಮದುವೆಮಾಡಿದರೆಂದು ಹಿಂದೆಯೇ ಹೇಳಿರುವುದು.

೭-೮. ತಂದೆಯನ್ನು ಸಂತೋಷಪಡಿಸುವುದಕ್ಕಾಗಿಯೂ, ಕುಲಕ್ಕೆ ಅಪಕೀರ್ತಿಯನ್ನು ಕಳೆದುಕೊಳ್ಳುವುದಕ್ಕಾಗಿಯೂ ಸತ್ಯವ್ರತನು ಕಾಡಿಗೆ ಹೊರಟಾಗ ವಸಿಷ್ಠನು ಅವನಿಗೆ ರಾಜ್ಯಾಭಿಷೇಕಮಾಡುವೆನೆಂದು ಹೇಳಿ ಹೋಗಬೇಡವೆಂದು ತಡೆಯಬಹು

**ನ ತಂ ವಸಿಷ್ಠೋ ಭಗವಾನ್ ಪಿತ್ರಾ ತ್ಯಕ್ತಂ ನ್ಯವಾರಯತ್ ।**
**ಅಭಿಷೇಕ್ಷ್ಯಾಮ್ಯಹಂ ಪುತ್ರಮಸ್ಯಾಂ ನೈವಾಬ್ರವೀನ್ಮುನಿಃ ॥ ೮ ॥**

**ಸ ತು ದ್ವಾದಶವರ್ಷಾಣಿ ದೀಕ್ಷಾಂ ತಾಮುದ್ವಹದ್ಬಲೀ ।**
**ಅವಿದ್ಯಮಾನೇ ಮಾಂಸೇ ತು ವಸಿಷ್ಠಸ್ಯ ಮಹಾತ್ಮನಃ ॥ ೯ ॥**

**ಸರ್ವಕಾಮದುಹಾಂ ದೋಗ್ಧ್ರೀಂ ದದರ್ಶ ಸ ನೃಪಾತ್ಮಜಃ ।**
**ತಾಂ ವೈ ಕ್ರೋಧಾಚ್ಚ ಲೋಭಾಚ್ಚ ಶ್ರಮಾದ್ವೈ ಚ ಕ್ಷುಧಾನ್ವಿತಃ ॥ ೧೦ ॥**

**ದಶಧರ್ಮಗತೋ ರಾಜಾ ತಾಂ ಜಘಾನ ಸ ವೈ ಮುನೇ ।**
**ಸ ತಂ ಮಾಂಸಂ ಸ್ವಯಂ ಚೈವ ವಿಶ್ವಾಮಿತ್ರಸ್ಯ ಚಾತ್ಮಜಂ ॥ ೧೧ ॥**

**ಭೋಜಯಾಮಾಸ ತಚ್ಛ್ರುತ್ವಾ ವಸಿಷ್ಠೋ ಹ್ಯಸ್ಯ ಚುಕ್ರುಧೇ ।**
**ಉವಾಚ ಚ ಮುನಿಶ್ರೇಷ್ಠಸ್ತಂ ತದಾ ಕ್ರೋಧಸಂಯುತಃ ॥ ೧೨ ॥**

॥ ವಸಿಷ್ಠ ಉವಾಚ ॥

**ಪಾತಯೇಯಮಹಂ ಕ್ರೂರಂ ತವ ಶಂಕುಮಯೋಮಯಂ**
**ಯದಿ ತೇ ದ್ವಾವಿಮೌ ಶಂಕೂ ನಸ್ಯೇತಾಂ ವೈ ಕೃತೌ ಪುರಾ ॥ ೧೩ ॥**

ದಾಗಿತ್ತು. ಆದರೆ ವಸಿಷ್ಠನು ಹಾಗೆ ಮಾಡಲಿಲ್ಲ. ಇದರಿಂದ ಸತ್ಯವ್ರತನಿಗೆ ವಸಿಷ್ಠನ ಮೇಲೆ ಕೋಪವಿದ್ದೇ ಇತ್ತು.

೯-೧೦. ಬಲಶಾಲಿಯಾದ ಆ ಸತ್ಯವ್ರತನು ಹನ್ನೆರಡು ವರ್ಷಗಳಕಾಲ ದೀಕ್ಷೆಯನ್ನು ವಹಿಸಿ ವಿಶ್ವಾಮಿತ್ರನ ಪತ್ನಿಗೆ ಆಹಾರವನ್ನು ಒದಗಿಸುತ್ತಾ ವ್ರತನನ್ನು ಪಾಲಿಸಿದನು. ಹೀಗಿರಲು, ಒಂದುದಿನ ಮಾಂಸವು ಸಿಕ್ಕದೇ ಹೋಗಲು ಸಮಸ್ತ ವಸ್ತುವನ್ನೂ ಒದಗಿಸುವ ವಸಿಷ್ಠನ ಕಾಮಧೇನುವನ್ನು ನೋಡಿ ಅದನ್ನು ಕೊಂದನು.

೧೧-೧೨. ಆದರ ಮಾಂಸದಿಂದ ತಾನೂ, ವಿಶ್ವಾಮಿತ್ರನ ಮಗನೂ, ಊಟ ಮಾಡಿದರು. ಈ ವಿಷಯವನ್ನು ಕೇಳಿ ವಸಿಷ್ಠನು ಸತ್ಯವ್ರತನ ಮೇಲೆ ಸಿಟ್ಟುಗೊಂಡು ಅವನನ್ನು ಕುರಿತು ಇಂತೆಂದನು.

೧೩-೧೪. ವಸಿಷ್ಠಮುನಿಯು ಹೇಳಿದನು :—ಎಲೈ ಕ್ರೂರ, ನೀನು ಈಗ ಈ ಎರಡು ಪಾಪಗಳನ್ನು ಮಾಡದೇ ಇದ್ದಿದ್ದರೆ ನಿನ್ನ ಮೊದಲಿನ ಪಾಪವನ್ನು ಹೋಗಲಾಡಿಸುತ್ತಿದ್ದೆನು. ನೀನು ತಂದೆಗೆ ದುಃಖವನ್ನುಂಟುಮಾಡಿದುದು, ಗುರುವಿನ

**ಪಿತುಶ್ಚಾಪರಿತೋಷೇಣ ಗುರೋರ್ದೋಗ್ಧ್ರೀವಧೇನ ಚ ।**
**ಅಪ್ರೋಕ್ಷಿತೋಪಯೋಗಾಚ್ಚ ತ್ರಿವಿಧಸ್ತೇ ವ್ಯತಿಕ್ರಮಃ ॥ ೧೪ ॥**

**ತ್ರಿಶಂಕುರಿತಿ ಹೋವಾಚ ತ್ರಿಶಂಕುರಿತಿ ಸ ಸ್ಮೃತಃ ।**
**ವಿಶ್ವಾಮಿತ್ರಸ್ತು ದಾರಾಣಾಮಾಗತೋ ಭರಣೇ ಕೃತೇ ॥ ೧೫ ॥**

**ತೇನ ತಸ್ಮೈ ವರಂ ಪ್ರಾದಾನ್ಮುನಿಃ ಪ್ರೀತಸ್ತ್ರಿಶಂಕವೇ ।**
**ಛಂದ್ಯಮಾನೋ ವರೇಣಾಥ ವರಂ ವವ್ರೇ ನೃಪಾತ್ಮಜಃ ॥ ೧೬ ॥**

**ಅನಾವೃಷ್ಟಿಭಯೇ ಚಾಸ್ಮಿನ್ ಜಾತೇ ದ್ವಾದಶವಾರ್ಷಿಕೇ ।**
**ಅಭಿಷಿಚ್ಯ ಪಿತೂ ರಾಜ್ಯೇ ಯಾಜಯಾಮಾಸ ತಂ ಮುನಿಃ ॥ ೧೭ ॥**

**ಮಿಷತಾಂ ದೇವತಾನಾಂ ಚ ವಸಿಷ್ಠಸ್ಯ ಚ ಕೌಶಿಕಃ ।**
**ಸಶರೀರಂ ತದಾ ತಂ ತು ದಿವಮಾರೋಹಯತ್ಪ್ರಭುಃ ॥ ೧೮ ॥**

---

ಹಸುವನ್ನು ಕೊಂದುದು, ಪರರ ವಸ್ತುವನ್ನು (ಸ್ತ್ರೀಯನ್ನು) ಉಪಯೋಗಿಸಿದುದು (ಅಥವಾ ಅಪವಿತ್ರವಾದ ಆಹಾರವನ್ನು ಸೇವಿಸುವುದು.) ಈ ಮೂರು ಪಾಪಗಳನ್ನು ಆಚರಿಸಿರುವೆ. ಹೀಗೆ ನೀನು ಮೂರು ಪಾಪಗಳನ್ನಾಚರಿಸಿದುದರಿಂದ ನಿನ್ನನ್ನು ತ್ರಿಶಂಕು (ಮೂರು ಪಾಪಗಳನ್ನಾಚರಿಸಿದವನು) ವೆಂದು ಹೆಸರಿಟ್ಟು ಜನರು ಕರೆಯಲಿ ಎಂದನು. ಅದರಿಂದ ಮುಂದೆ ಅವನಿಗೆ ತ್ರಿಶಂಕುವೆಂದು ಹೆಸರಾಯಿತು.

೧೫-೧೬. ಹನ್ನೆರಡು ವರ್ಷಗಳವರೆಗೆ ವಿಶ್ವಾಮಿತ್ರನ ಪತ್ನೀಪುತ್ರರನ್ನು ಆ ತ್ರಿಶಂಕುವು ಕಾಪಾಡಿದುದರಿಂದ ಆ ಮುನಿಯು ಸಂತಸಗೊಂಡು ಅವನಿಗೆ ಬೇಕಾದ ವರವನ್ನು ಕೊಟ್ಟನು. ಆಗ ತ್ರಿಶಂಕುವು ತಾನು ಈ ಮಾನುಷಶರೀರದಿಂದಲೇ ಸ್ವರ್ಗಕ್ಕೆ ಹೋಗುವಂತೆ ಅನುಗ್ರಹಿಸಬೇಕೆಂದು ವರವನ್ನು ವಿಶ್ವಾಮಿತ್ರನೊಡನೆ ಕೇಳಿಕೊಂಡನು.

೧೭. ಹನ್ನೆರಡು ವರ್ಷದ ಆ ಬರಗಾಲವು ಕಳೆಯಲು ತ್ರಿಶಂಕುರಾಜನನ್ನು ಅವನ ತಂದೆಯ ರಾಜ್ಯದಲ್ಲಿ ವಿಶ್ವಾಮಿತ್ರಮುನಿಯು ಪ್ರತಿಷ್ಠಿಸಿ ಮಾನುಷಶರೀರ ದಿಂದಲೇ ಸ್ವರ್ಗವನ್ನು ಪಡೆಯಲೋಸುಗ ಯಾಗವನ್ನು ಮಾಡಿಸಿದನು.

೧೮. ಮಹಾತಪಸ್ವಿಯಾದ ಆ ವಿಶ್ವಾಮಿತ್ರನು ತ್ರಿಶಂಕುವನ್ನು ಮನುಷ್ಯ ಶರೀರದಿಂದಲೇ ದೇವತೆಗಳು ಮತ್ತು ವಸಿಷ್ಠಮುನಿಯು ಇವರೆಲ್ಲರೂ ನೋಡುತ್ತಿದ್ದಂತೆಯೇ ಸ್ವರ್ಗಕ್ಕೆ ಏರಿಸಿದನು.

ತಸ್ಯ ಸತ್ಯರಥಾ ನಾಮ ಭಾರ್ಯಾ ಕೇಕಯವಂಶಜಾ ।
ಕುಮಾರಂ ಜನಯಾಮಾಸ ಹರಿಶ್ಚಂದ್ರಮಕಲ್ಮಷಂ ॥ ೧೯ ॥

ಸ ವೈ ರಾಜಾ ಹರಿಶ್ಚಂದ್ರೋ ತ್ರೈಶಂಕವ ಇತಿ ಸ್ಮೃತಃ ।
ಆಹರ್ತಾ ರಾಜಸೂಯಸ್ಯ ಸಮ್ರಾಡಿತಿ ಹ ವಿಶ್ರುತಃ ॥ ೨೦ ॥

ಹರಿಶ್ಚಂದ್ರಸ್ಯ ಹಿ ಸುತೋ ರೋಹಿತೋ ನಾಮ ವಿಶ್ರುತಃ ।
ರೋಹಿತಸ್ಯ ವೃಕಃ ಪುತ್ರೋ ವೃಕಾದ್ಬಾಹುಸ್ತು ಜಜ್ಞಿವಾನ್ ॥ ೨೧ ॥

ಹೈಹಯಾಸ್ತಾಲಜಂಘಾಶ್ಚ ನಿರಸ್ಯಂತಿ ಸ್ಮ ತಂ ನೃಪಂ ।
ನಾತ್ಯರ್ಥ ಧಾರ್ಮಿಕೋ ವಿಪ್ರಃ ಸ ಹಿ ಧರ್ಮಪರೋಽಭವತ್ ॥ ೨೨ ॥

ಸಗರಂ ಸಸುತಂ ಬಾಹುರ್ಜಜ್ಞೇ ಸಹಗರೇಣ ವೈ ।
ಔರ್ವಸ್ಯಾಶ್ರಮಮಾಸಾದ್ಯ ಭಾರ್ಗವೇಣಾಭಿರಕ್ಷಿತಃ ॥ ೨೩ ॥

---

೧೯. ಆ ತ್ರಿಶಂಕುವಿಗೆ ಕೇಕಯ ರಾಜನ ಮಗಳಾದ ಸತ್ಯರಥಾದೇವಿ ಎಂಬ ಹೆಂಡತಿಯಿದ್ದಳು. ಅವಳು ಸತ್ಯಪ್ರತಿಜ್ಞನಾದ ಹರಿಶ್ಚಂದ್ರನೆಂಬ ಕುವರನನ್ನು ಹಡೆದಳು.

೨೦. ಆ ಹರಿಶ್ಚಂದ್ರನು ಚಕ್ರವರ್ತಿಯಾಗಿದ್ದು ರಾಜಸೂಯಯಾಗವನ್ನು ಮಾಡಿದನು.

೨೧. ಹರಿಶ್ಚಂದ್ರನಿಗೆ ರೋಹಿತನೆಂಬ ಪ್ರಸಿದ್ಧನಾದ ಮಗನಾದನು. ಆ ರೋಹಿತನಿಗೆ ವೃಕನೂ, ಆ ವೃಕನಿಗೆ ಬಾಹುವೂ ಮಕ್ಕಳು.

೨೨. ಆ ಬಾಹುರಾಜನನ್ನು ಹೈಹಯರು ಮತ್ತು ತಾಲಜಂಘರೆಂಬ ಶತ್ರುಗಳು ಜಯಿಸಿ ರಾಜ್ಯ ಬಿಡಿಸಿ ಓಡಿಸಿದರು. ಆ ರಾಜನಿಗೆ ಇಬ್ಬರು ಹೆಂಡಿರಿದ್ದರು. ಅವರಲ್ಲೋರ್ವಳು ಗರ್ಭವತಿಯಾಗಿದ್ದು ಅದರ ರಕ್ಷಣೆಗಾಗಿ ಔರ್ವ ಮುನಿಯ ಆಶ್ರಮಕ್ಕೆ ತೆರಳಿದಳು.

೨೩-೨೪. ಬಾಹುರಾಜನಿಗೆ ಮಗನಾದ ಸಗರರಾಜನು ಜನಿಸಿದನು. ಅವನ ತಾಯಿಯು ಗರ್ಭವತಿಯಾಗಿದ್ದಾಗ ಅವಳ ಸವತಿಯು ಅಸೂಯೆಯಿಂದ ಗರ (ವಿಷ) ವನ್ನು ಗರ್ಭನಾಶಕ್ಕಾಗಿ ಉಣಿಸಿದ್ದಳು. ಆದರೂ ಓರ್ವ ಮುನಿಯ ಅನುಗ್ರಹದಿಂದ

ಆಗ್ನೇಯಮಸ್ತ್ರಂ ಲಬ್ಧ್ವಾ ಚ ಭಾರ್ಗವಾತ್ಸಗರೋ ನೃಪಃ ।
ಜಿಗಾಯ ಪೃಥಿವೀಂ ಹತ್ವಾ ತಾಲಜಂಘಾನ್ಸಹೈಹಯಾನ್ ॥ ೨೪ ॥

ಶಕಾನ್ಬಹೂದಕಾಂಶ್ಚೈವ ಪಾರದಾಂತಗಣಾನ್ ಖಶಾನ್ ।
ಸುಧರ್ಮಂ ಸ್ಥಾಪಯಾಮಾಸ ಶಶಾಸ ನೃಷತಃ ಕ್ಷಿತಿಂ ॥ ೨೫ ॥

॥ ಶೌನಕ ಉವಾಚ ॥

ಸ ವೈ ಗರೇಣ ಸಹಿತಃ ಕಥಂ ಜಾತಸ್ತು ಕ್ಷತ್ರಿಯಾತ್ ।
ಜಿತವಾನೇತದಾಚಕ್ಷ್ವ ವಿಸ್ತರೇಣ ಹಿ ಸೂತಜ ॥ ೨೬ ॥

॥ ಸೂತ ಉವಾಚ ॥

ಪರೀಕ್ಷಿತೇನ ಸಂಪೃಷ್ಟೋ ವೈಶಂಪಾಯನ ಏವ ಚ ।
ಯದಾಚಷ್ಟ ಸ್ಮ ತದ್ವಕ್ಷ್ಯೇ ಶೃಣುಷ್ವೈಕಮನಾ ಮುನೇ ॥ ೨೭ ॥

ಗರ್ಭನಾಶವಾಗದೆ ಕುಮಾರನು ಗರ (ವಿಷ) ದ ಚಿಹ್ನೆಯುಳ್ಳವನಾಗಿಯೇ ಜನಿಸಿದನು. ಆದುದರಿಂದ ಅವನಿಗೆ " ಸಗರ " ನೆಂದು ಹೆಸರಾಯಿತು. ಹೀಗೆ ಭಾರ್ಗವ (ಔರ್ವ) ಮುನಿಯಿಂದ ರಕ್ಷಿಸಲ್ಪಟ್ಟು ಆ ಸಗರನು ಆ ಮುನಿಯಿಂದ ಆಗ್ನೇಯಾಸ್ತ್ರವನ್ನು ಪಡೆದು ಅದರಿಂದ ತನ್ನ ಶತ್ರುಗಳಾದ ಹೈಹಯರಾಜರನ್ನೂ ತಾಲಜಂಘರನ್ನೂ ಜಯಿಸಿದನು.

೨೫. ಅನಂತರ ಬಾಹುವು ತಾಲಜಂಘ, ಹೈಹಯ, ಶಕ, ಬಹೂದಕ, ಪಾರ ದಾಂತಗಣ, ಖಶ ಮುಂತಾದ ಪಂಗಡಗಳನ್ನು ನಾಶಮಾಡಿ ಪೃಥಿವಿಯನ್ನು ಗೆದ್ದನು. ಪೃಥಿವಿಯಲ್ಲಿ ಸದ್ಧರ್ಮವನ್ನು ಸ್ಥಾಪಿಸಿ ಭೂಮಿಯನ್ನು ಪಾಲಿಸಿದನು.

೨೬. ಶೌನಕನು ಪ್ರಶ್ನೆಮಾಡುವನು :—ಎಲೈ ಸೂತನೇ, ಕ್ಷತ್ರಿಯನ ದೆಸೆ ಯಿಂದ ಸಗರನು ವಿಷದೊಡನೆ ಯಾವರೀತಿ ಹುಟ್ಟಿದನು ಮತ್ತು ಅದನ್ನು ಯಾವ ರೀತಿ ಜಯಿಸಿದನು ಎಂಬ ವಿಷಯವನ್ನು ವಿಸ್ತಾರವಾಗಿ ತಿಳಿಸು ಎಂದನು.

೨೭. ಸೂತನು ಹೇಳುವನು :---ಎಲೈ ಮುನಿಯೇ, ಹಿಂದೆ ಇದೇ ವಿಷಯ ವನ್ನು ಪರೀಕ್ಷಿತರಾಜನು ವೈಶಂಪಾಯನನ್ನು ಕೇಳಿದನು. ಆಗ ವೈಶಂಪಾಯನನು ಹೇಳಿದ ವಿಷಯವನ್ನೇ ಹೇಳುವೆನು. ಒಂದೇ ಮನಸ್ಸಿನಿಂದ ಕೇಳು.

॥ ಪರೀಕ್ಷಿತ ಉವಾಚ ॥

ಕಥಂ ಸ ಸಗರೋ ರಾಜಾ ಗರೇಣ ಸಹಿತೋ ಮುನೇ ।
ಜಾತಸ್ಸ ಜಘ್ನಿವಾನ್ಭೂಪಾನೇತದಾಖ್ಯಾತುಮರ್ಹಸಿ ॥ ೨೮ ॥

॥ ವೈಶಂಪಾಯನ ಉವಾಚ ॥

ಬಾಹೋರ್ವ್ಯಸನಿನಸ್ತಾತ ಹೃತಂ ರಾಜ್ಯಮಭೂತ್ಕಿಲ ।
ಹೈಹಯೈಸ್ತಾಲಜಂಘೈಶ್ಚ ಶಕೈಸ್ಸಾರ್ಧಂ ವಿಶಾಂಪತೇ ॥ ೨೯ ॥

ಯವನಾಃ ಪಾರದಾಶ್ಚೈವ ಕಾಂಭೋಜಾಃ ಪಾಹ್ಲವಾಸ್ತಥಾ ।
ಬಹೂದಕಾಶ್ಚ ಪಂಚೈವ ಗಣಾಃ ಪ್ರೋಕ್ತಾಶ್ಚ ರಾಕ್ಷಸಾಂ ॥ ೩೦ ॥

ಏತೇ ಪಂಚಗಣಾ ರಾಜನ್ ಹೈಹಯಾರ್ಥೇಷು ರಾಕ್ಷಸಾಂ ।
ಕೃತ್ವಾ ಪರಾಕ್ರಮಾನ್ ಬಾಹೋ ರಾಜ್ಯಂ ತೇಭ್ಯೋ ದದುರ್ಬಲಾತ್ ॥ ೩೧ ॥

ಹೃತರಾಜ್ಯಸ್ತತೋ ರಾಜಾ ಸ ವೈ ಬಾಹುರ್ವನಂ ಯಯೌ ।
ಪತ್ನ್ಯಾ ಚಾನುಗತೋ ದುಃಖೀ ಸ ವೈ ಪ್ರಾಣಾನವಾಸೃಜತ್ ॥ ೩೨ ॥

೨೮. ಪರೀಕ್ಷಿತರಾಜನು ಪ್ರಶ್ನೆ ಮಾಡಿದನು :—ಎಲೈ ಮುನಿಯೇ, ರಾಜನಾದ ಸಗರನು ಹೇಗೆ ವಿಷದೊಡನೆ ಹುಟ್ಟಿದನು ? ಹೇಗೆ ರಾಜರುಗಳನ್ನು ಗೆದ್ದನು ಎಂಬ ವಿಷಯವನ್ನು ನನಗೆ ಹೇಳಬೇಕು ಎನ್ನಲು,

೨೯-೩೧. ವೈಶಂಪಾಯನನು ಹೇಳಿದನು :—ಎಲೈ ಬ್ರಾಹ್ಮಣೋತ್ತಮರೇ, ಬಾಹುರಾಜನು ಕಾಮುಕನಾಗಿದ್ದು ರಾಜ್ಯಕಾರ್ಯದಲ್ಲಿ ಹೆಚ್ಚು ಗಮನಕೊಡದಿದ್ದುದರಿಂದ ಹೈಹಯರೂ, ತಾಲಜಂಘರೂ, ಶಕರೂ ಸಹ ಅವನ ರಾಜ್ಯವನ್ನು ಅಪಹರಿಸಿದರಷ್ಟೆ. ಆಗ ಯವನರು, ಪಾರದರು, ಕಾಂಭೋಜರಾಜರು, ಪಹ್ಲವರು, ಶಕರು ಈ ಐದು ಗಣ (ಗುಂಪು-ಜಾತಿ) ದ ರಾಜರು ಹೈಹಯ ರಾಜರಿಗೆ ಸಹಾಯವಾಗಿ ಯುದ್ಧಮ್ಮಾಡಿದರು.

೩೨. ಆಗ ರಾಜ್ಯವನ್ನು ಕಳೆದುಕೊಂಡು ಬಾಹುರಾಜನು ದುಃಖಿತನಾಗಿ ಹೆಂಡತಿಯೊಡನೆ ವನಕ್ಕೆ ಹೋದನು. ಕೊನೆಗೆ ದುಃಖದಿಂದ ಅಲ್ಲಿಯೇ ಪ್ರಾಣಬಿಟ್ಟನು.

ಪತ್ನೀ ಯಾ ಯಾದವೀ ತಸ್ಯ ಸಗರ್ಭಾ ಪೃಷ್ಠತೋ ಗತಾ ।
ಸಪತ್ನ್ಯಾ ಚ ಗರಸ್ತಸ್ಯೈ ದತ್ತಃ ಪೂರ್ವಸುತೇರ್ಷಯಾ　　॥ ೩೩ ॥

ಸಾ ತು ಭರ್ತುಶ್ಚಿತಾಂ ಕೃತ್ವಾ ಜ್ವಲನಂ ಚಾವರೋಹತ ।
ಔರ್ವಸ್ತಾಂ ಭಾರ್ಗವೋ ರಾಜನ್ ಕಾರುಣ್ಯಾತ್ಸಮವಾರಯತ್　　॥ ೩೪ ॥

ತಸ್ಯಾಶ್ರಮೇ ಸ್ಥಿತಾ ರಾಜ್ಞೀ ಗರ್ಭರಕ್ಷಣಹೇತವೇ ।
ಸಿಷೇವೇ ಮುನಿವರ್ಯಂ ತಂ ಸ್ಮರಂತೀ ಶಂಕರಂ ಹೃದಾ　　॥ ೩೫ ॥

ಏಕದಾ ಖಲು ತದ್ಗರ್ಭೋ ಗರೇಣೈವ ಸಹ ಚ್ಯುತಃ ।
ಸುಮುಹೂರ್ತೇ ಸುಲಗ್ನೇ ಚ ಪಂಚೋಚ್ಚಗ್ರಹಸಂಯುತೇ　　॥ ೩೬ ॥

ತಸ್ಮಿಂಲ್ಲಗ್ನೇ ಚ ಬಲಿನಿ ಸರ್ವಥಾ ಮುನಿಸತ್ತಮ ।
ವ್ಯಜಾಯತ ಮಹಾಬಾಹುಸ್ಸಗರೋ ನಾಮ ಪಾರ್ಥಿವಃ　　॥ ೩೭ ॥

೩೩. ಆ ಬಾಹುವಿನ ಪತ್ನಿಯಾದ ಯಾದವೀದೇವಿಯು ಗರ್ಭವತಿಯಾಗಿದ್ದು ಕಾಡಿಗೆ ಅವನೊಡನೆ ಅವಳೂ ತೆರಳಿದಳು. ಈ ಮೊದಲು ಅವಳ ಸವತಿಯು ಅಸೂಯೆಯಿಂದ ಅವಳಿಗೆ ವಿಷವನ್ನು ಮೋಸದಿಂದ ಉಣ್ಣಿಸಿದ್ದಳು.

೩೪. ಕಾಡಿನಲ್ಲಿ ಪತಿಯು ಮರಣಹೊಂದಲು ಆ ಯಾದವಿಯು ಚಿತೆಯನ್ನು ರಚಿಸಿ ತಾನೂ ಅದರಲ್ಲಿ ಬಿದ್ದು ಪತಿಯೊಡನೆ ಸಹಗಮನಮಾಡುವುದಕ್ಕೆ ಸಿದ್ಧಳಾದಳು. ಆಗ ಭಾರ್ಗವಮುನಿಯು ಕರುಣೆಯಿಂದ ಸಹಗಮನಮಾಡದಂತೆ ಅವಳನ್ನು ತಡೆದನು.

೩೫. ಔರ್ವನ ಆಶ್ರಮದಲ್ಲಿ ಆ ರಾಣಿಯು ಗರ್ಭರಕ್ಷಣೆಗೋಸ್ಕರ ಇರುತ್ತಾ ಈಶ್ವರನನ್ನು ಧ್ಯಾನಿಸುತ್ತಾ ಔರ್ವಋಷಿಯನ್ನು ಸೇವಿಸುತ್ತಿದ್ದಳು.

೩೬-೩೭. ಒಂದಾನೊಂದು ದಿವಸ ವಿಷದೊಡನೆ ಆ ಗರ್ಭವು ಬಿದ್ದಿತು. ಒಳ್ಳೆಯ ಮುಹೂರ್ತದಲ್ಲಿ, ಒಳ್ಳೆಯ ಲಗ್ನದಲ್ಲಿ, ಸೂರ್ಯಾದಿ ಐದು ಗ್ರಹಗಳೂ ಉಚ್ಚಸ್ಥಾನದಲ್ಲಿರುವಾಗ, ಇಂತಹ ಬಲಿಯಾದ ಲಗ್ನದಲ್ಲಿ ಸಗರನು ಹುಟ್ಟಿದನು.

ಔರ್ವಸ್ತು ಜಾತಕರ್ಮಾದಿ ತಸ್ಯ ಕೃತ್ವಾ ಮಹಾತ್ಮನಃ ।
ಅಧ್ಯಾಪ್ಯ ವೇದಶಾಸ್ತ್ರಾಣಿ ತತೋಽಸ್ತ್ರಂ ಪ್ರತ್ಯಪಾದಯತ್ ॥ ೩೮ ॥

ಆಗ್ನೇಯಂ ತಂ ಮಹಾಭಾಗೋ ಹ್ಯಮರ್ತ್ಯೈರಪಿ ದುಸ್ಸಹಂ ।
ಜಗ್ರಾಹ ವಿಧಿನಾ ಪ್ರೀತ್ಯಾ ಸಗರೋಽಸೌ ನೃಪೋತ್ತಮಃ ॥ ೩೯ ॥

ಸ ತೇನಾಸ್ತ್ರಬಲೇನೈವ ಬಲೇನ ಚ ಸಮನ್ವಿತಃ ।
ಹೈಹಯಾನ್ವಿಜಘಾನಾಶು ಸಂಕ್ರುದ್ಧೋಽಸ್ತ್ರಬಲೇನ ಚ ॥ ೪೦ ॥

ಆಜಹಾರ ಚ ಲೋಕೇಷು ಕೀರ್ತಿಂ ಕೀರ್ತಿಮತಾಂ ವರಃ ।
ಧರ್ಮಂ ಸಂಸ್ಥಾಪಯಾಮಾಸ ಸಗರೋಽಸೌ ಮಹೀತಲೇ ॥ ೪೧ ॥

ತತಶ್ಶಕಾಸ್ಸಯವನಾಃ ಕಾಂಭೋಜಾ ಪಾಹ್ಲವಾಸ್ತಥಾ ।
ಹನ್ಯಮಾನಾಸ್ತದಾ ತೇ ತು ವಸಿಷ್ಠಂ ಶರಣಂ ಯಯುಃ ॥ ೪೨ ॥

ವಸಿಷ್ಠೋ ವಚನಂ ಕೃತ್ವಾ ಸಮಯೇನ ಮಹಾದ್ಯುತಿಃ ।
ಸಗರಂ ವಾರಯಾಮಾಸ ತೇಷಾಂ ದತ್ವಾಭಯಂ ನೃಪಂ ॥ ೪೩ ॥

೩೮-೩೯. ಔರ್ವನು ಸಗರನಿಗೆ ಜಾತಕರ್ಮಾದಿಗಳನ್ನು ಮಾಡಿದನು. ಅನಂತರ ವೇದಗಳನ್ನೂ, ಶಾಸ್ತ್ರಗಳನ್ನೂ ಕಲಿಸಿ ಅಸ್ತ್ರವನ್ನು ಉಪದೇಶಿಸಿದನು. ದೇವತೆಗಳಿಗೂ ದುರ್ಲಭವಾದ ಆಗ್ನೇಯಾಸ್ತ್ರವನ್ನು ವಿಧಿಪೂರ್ವಕವಾಗಿ ಪ್ರೀತಿಯಿಂದ ಸಗರನಿಗೆ ಉಪದೇಶಮಾಡಿದನು.

೪೦. ಅನಂತರ ಸಗರನು ರಾಜನಾಗಿ ಅಸ್ತ್ರಬಲದಿಂದಲೂ ತನ್ನ ಬಲದಿಂದಲೂ ಕೂಡಿ ಹೈಯರನ್ನು ಬಹಳ ಕೋಪದಿಂದ ನಾಶಮಾಡಿದನು.

೪೧. ಕೀರ್ತಿವಂತರಲ್ಲಿ ಶ್ರೇಷ್ಠನಾದ ಆ ಸಗರನ ಕೀರ್ತಿಯು ಲೋಕಗಳಲ್ಲೆಲ್ಲಾ ಹರಡಿತು. ಸಗರನು ಭೂಮಿಯಲ್ಲಿ ಧರ್ಮವನ್ನು ಸ್ಥಾಪನೆಮಾಡಿದನು.

೪೨-೪೩. ಅನಂತರ ಸಗರನು ಪಂಚಗಣದವರಾದ ಶಕ, ಯವನ, ಕಾಂಭೋಜ, ಪಾಹ್ಲವ ಇವರುಗಳ ಮೇಲೆ ಬಿದ್ದನು. ಅವನಿಂದ ಕೊಲ್ಲಲ್ಪಡುವವರಾಗಿ ಅವರೆಲ್ಲರೂ ವಸಿಷ್ಠನನ್ನು ಮರೆಹೊಕ್ಕರು. ವಸಿಷ್ಠನು ಅವರಿಗೆಲ್ಲಾ ಅಭಯವನ್ನು ಕೊಟ್ಟು ಸಗರನನ್ನು ಯುದ್ಧದಿಂದ ತಡೆಗಟ್ಟಿದನು.

ಸಗರಸ್ಸ್ವಾಂ ಪ್ರತಿಜ್ಞಾಂ ತು ಗುರೋರ್ವಾಕ್ಯಂ ನಿಶಮ್ಯ ಚ ।
ಧರ್ಮಂ ಜಘಾನ ತೇಷಾಂ ವೈ ಕೇಶಾನ್ಯತ್ವಂ ಚಕಾರ ಹ ॥ ೪೪ ॥

ಅರ್ಧಂ ಶಕಾನಾಂ ಶಿರಸೋ ಮುಂಡಂ ಕೃತ್ವಾ ವ್ಯಸರ್ಜಯತ್ ।
ಯವನಾನಾಂ ಶಿರಸ್ಸರ್ವಂ ಕಾಂಭೋಜಾನಾಂ ತಥೈವ ಚ ॥ ೪೫ ॥

ಪಾರದಾ ಮುಂಡಕೇಶಾಶ್ಚ ಪಾಹ್ಲವಾಃ ಶ್ಮಶ್ರುಧಾರಿಣಃ ।
ನಿಸ್ಸ್ವಾಧ್ಯಾಯವಷಟ್ಕಾರಾ ಕೃತಾಸ್ತೇನ ಮಹಾತ್ಮನಾ ॥ ೪೬ ॥

ಜಿತಾ ಚ ಸಕಲಾ ಪೃಥ್ವೀ ಧರ್ಮತಸ್ತೇನ ಭೂಭುಜಾ ।
ಸರ್ವೇ ತೇ ಕ್ಷತ್ರಿಯಾಸ್ತಾತ ಧರ್ಮಹೀನಾಃ ಕೃತಾಃ ಪುರಾ ॥ ೪೭ ॥

ಸ ಧರ್ಮವಿಜಯೀ ರಾಜಾ ವಿಜಿತ್ವೇಮಾಂ ವಸುಂಧರಾಂ ।
ಅಶ್ವಂ ಸಂಸ್ಕಾರಯಾಮಾಸ ವಾಜಿಮೇಧಾಯ ಪಾರ್ಥಿವಃ ॥ ೪೮ ॥

೪೪. ಸಗರನು ಗುರುಗಳು ಮಾಡಿರುವ ಪ್ರತಿಜ್ಞಾವಾಕ್ಯವನ್ನು ಕೇಳಿ ಶತ್ರುಗಳ ಕೂದಲುಗಳನ್ನು ವ್ಯತ್ಯಾಸಮಾಡುವ ಮೂಲಕ ಅವರ ಧರ್ಮವನ್ನು ನಾಶ ಮಾಡಿದನು.

೪೫-೪೬. ಶಕರುಗಳ ತಲೆಯನ್ನು ಅರ್ಧಬೋಳಿಸಿ ಓಡಿಸಿದನು. ಯವನರ ಮತ್ತು ಕಾಂಭೋಜರ ತಲೆಯೆಲ್ಲವನ್ನೂ ಬೋಳಿಸಿ ಓಡಿಸಿದನು. ಪಾರದರ ತಲೆಯೆಲ್ಲವನ್ನೂ ಬೋಳಿಸಿ, ಪಾಹ್ಲವರ ಮೀಸೆಗಳನ್ನು ಮಾತ್ರ ಬಿಟ್ಟು ತಲೆಯೆಲ್ಲವನ್ನೂ ಬೋಳಿಸಿ ಓಡಿಸಿದನು. ಮಹಾತ್ಮನಾದ ಸಗರನು ಅವರೆಲ್ಲರನ್ನೂ ವೇದಬಾಹಿರರನ್ನಾಗಿ ಮಾಡಿದನು.

೪೭-೪೮. ಧರ್ಮದಿಂದ ಸಗರನು ಪ್ರಪಂಚವನ್ನೆಲ್ಲಾ ಜಯಿಸಿದನು. ಎಲ್ಲ ಕ್ಷತ್ರಿಯರನ್ನೂ ಧರ್ಮಭ್ರಷ್ಟರನ್ನಾಗಿ ಮಾಡಿದನು. ಈರೀತಿಯಾದ ಧರ್ಮವಿಜಯದಿಂದ ಈ ಭೂಮಿಯನ್ನು ಗೆದ್ದು ರಾಜನಾದ ಸಗರನು ಅಶ್ವಮೇಧಯಾಗಕ್ಕೋಸ್ಕರವಾಗಿ ಅಶ್ವವನ್ನು ಬಿಟ್ಟನು.

ತಸ್ಯ ಚಾರಯುತಸ್ಸೋಽಶ್ವಸ್ಸಮುದ್ರೇ ಪೂರ್ವದಕ್ಷಿಣೇ ।
ಗತಃ ಷಷ್ಟಿಸಹಸ್ರೈಸ್ತು ತತ್ಪುತ್ರೈರನ್ವಿತೋ ಮುನೇ ॥ ೪೯ ॥

ದೇವರಾಜೇನ ಶಕ್ರೇಣ ಸೋಽಶ್ವೋ ಹಿ ಸ್ವಾರ್ಥಸಾಧಿನಾ ।
ವೇಲಾಸಮೀಪೇಽಪಹೃತೋ ಭೂಮಿಂ ಚೈವ ಪ್ರವೇಶಿತಃ ॥ ೫೦ ॥

ಮಹಾರಾಜೋಽಥ ಸಗರಸ್ತದ್ಧಯಾನ್ವೇಷಣಾಯ ಚ ।
ಸ ತಂ ದೇಶಂ ತದಾ ಪುತ್ರೈಃ ಖಾನಯಾಮಾಸ ಸರ್ವತಃ ॥ ೫೧ ॥

ಆಸೇದುಸ್ತೇ ತತಸ್ತತ್ರ ಖನ್ಯಮಾನೇ ಮಹಾರ್ಣವೇ ।
ತಮಾದಿಪುರುಷಂ ದೇವಂ ಕಪಿಲಂ ವಿಶ್ವರೂಪಿಣಂ ॥ ೫೨ ॥

ತಸ್ಯ ಚಕ್ಷುಸ್ಸಮುತ್ಥೇನ ವಹ್ನಿನಾ ಪ್ರತಿಬುದ್ಧ್ಯತಃ ।
ದಗ್ಧಾಃ ಷಷ್ಟಿಸಹಸ್ರಾಣಿ ಚತ್ವಾರಸ್ತ್ವವಶೇಷಿತಾಃ ॥ ೫೩ ॥

೪೯. ಅಶ್ವವು ಸಂಚಾರಮಾಡುತ್ತಾ ಪೂರ್ವದಕ್ಷಿಣ ಸಮುದ್ರ ಪ್ರದೇಶಕ್ಕೆ ಹೋಯಿತು. ಅದರ ಹಿಂದೆ ಸಗರನ ಅರವತ್ತುಸಾವಿರಜನ ಪುತ್ರರಿದ್ದರು.

೫೦. ದೇವರಾಜನಾದ ಇಂದ್ರನು ತನ್ನ ಸ್ಥಾನಕ್ಕೆ ಚ್ಯುತಿ ಬರುವುದೆಂದು ತಿಳಿದು ಸ್ವಾರ್ಥವನ್ನು ಸಾಧಿಸಲು ಭೂಮಿಯನ್ನು ಪ್ರವೇಶಿಸಿ ಆ ಕುದುರೆಯನ್ನು ಸಮುದ್ರದ ದಡಕ್ಕೆ ತೆಗೆದುಕೊಂಡು ಬಂದನು.

೫೧. ಮಹಾರಾಜನಾದ ಸಗರನು ತನ್ನ ಮಕ್ಕಳೊಡನೆ ಆ ಕುದುರೆಯನ್ನು ಹುಡುಕುವವನಾಗಿ ಕುದುರೆಯು ಹೋದ ಸ್ಥಳವನ್ನು ಎಲ್ಲ ಕಡೆಯಲ್ಲಿಯೂ ಅಗೆಸಿದನು.

೫೨. ಅವರೆಲ್ಲರೂ ಸಮುದ್ರವನ್ನು ಅಗೆಯುತ್ತಾ ಹೊರಟು ಆದಿಪುರುಷನೂ, ವಿಶ್ವರೂಪಿಯೂ ಆದ ಕಪಿಲಮಹರ್ಷಿಯನ್ನು ಸಂಧಿಸಿದರು.

೫೩. ಅಲ್ಲಿ ಮಹರ್ಷಿಯು ಎಚ್ಚೆತ್ತು ಕಣ್ಣುಬಿಡಲು ಅವನ ಕಣ್ಣಿನಿಂದ ಹೊರಹೊರಟ ಕ್ರೋಧಾಗ್ನಿಯಿಂದ ಅರವತ್ತುಸಾವಿರಜನರೂ ಸುಟ್ಟುಹೋದರು. ಅವರಲ್ಲಿ ನಾಲ್ಕೇಜನರು ಉಳಿದರು.

ಹರ್ಷಕೇತುಸ್ಸುಕೇತುಶ್ಚ ತಥಾ ಧರ್ಮರಥೋಽಪರಃ ।
ಶೂರಃ ಪಂಚಜನಶ್ಚೈವ ತಸ್ಯ ವಂಶಕರಾ ನೃಪಾಃ ॥ ೫೪ ॥

ಪ್ರಾದಾಚ್ಚ ತಸ್ಮೈ ಭಗವಾನ್ ಹರಿಃ ಪಂಚವರಾನ್ ಸ್ವಯಂ ।
ವಂಶಂ ಮೇಧಾಂ ಚ ಕೀರ್ತಿಂ ಚ ಸಮುದ್ರಂ ತನಯಂ ಧನಂ ॥ ೫೫ ॥

ಸಾಗರತ್ವಂ ಚ ಲೇಭೇ ಸ ಕರ್ಮಣಾ ತಸ್ಯ ತೇನ ವೈ ।
ತಂ ಚಾಶ್ವಮೇಧಿಕಂ ಸೋಽಶ್ವಂ ಸಮುದ್ರಾದುಪಲಬ್ಧವಾನ್ ॥ ೫೬ ॥

ಆಜಹಾರಾಶ್ವಮೇಧಾನಾಂ ಶತಂ ಸ ತು ಮಹಾಯಶಾಃ ।
ಈಜೇ ಶಂಭುವಿಭೂತೀಶ್ಚ ದೇವತಾಸ್ತತ್ರ ಸುವ್ರತಾಃ ॥ ೫೭ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಸತ್ಯವ್ರತಾದಿಸಗರಪರ್ಯಂತವಂಶವರ್ಣನಂ ನಾಮಾಷ್ಟಾತ್ರಿಂಶೋಽಧ್ಯಾಯಃ

೫೪. ಹರ್ಷಕೇತು, ಸುಕೇತು, ಧರ್ಮರಥ, ಶೂರನಾದ ಪಂಚಜನ ಇವರೇ ಉಳಿದ ನಾಲ್ವರು. ಇವರೆಲ್ಲರೂ ಸಗರನ ವಂಶವನ್ನು ಬೆಳೆಸಿದವರು.

೫೫. ನಾರಾಯಣಾವತಾರನಾದ ಭಗವಾನ್ ಕಪಿಲಮುನಿಯು ಆ ಸಗರನಿಗೆ ಅವನ ಇಕ್ಷ್ವಾಕುವಂಶವು ಸ್ಥಿರವಾಗಿ ವೃದ್ಧಿಹೊಂದುವಂತೆಯೂ, ಸ್ಥಿರವಾದ ಕೀರ್ತಿಯುಳ್ಳದ್ದಾಗುವಂತೆಯೂ ವರವನ್ನು ಕೊಟ್ಟನು. ಮತ್ತು ಸಮುದ್ರನು ಸಗರಪುತ್ರರು ಭೂಮಿಯನ್ನಗೆದುದರಿಂದಾದುದರಿಂದ ಆ ಸಮುದ್ರನು ಸಗರನ ಪುತ್ರನೆಂದು (ಸಾಗರ) ಕರೆಯಲ್ಪಡುವಂತೆಯೂ ಸಗರನಿಗೆ ಸ್ಥಿರವಾಗಿ ಸ್ವರ್ಗವಾಸವು ಲಭಿಸುವಂತೆಯೂ ವರವನ್ನು ಅನುಗ್ರಹಿಸಿದನು.

೫೬-೫೭. ಆಮೇಲೆ ಸಮುದ್ರನು ಹರಿಯ ಆಜ್ಞೆಯಂತೆ ಸಗರನ ಪುತ್ರ (ಸಾಗರ) ನೆಂದು ಕರೆಯಲ್ಪಟ್ಟನು. ಆಮೇಲೆ ಸಗರನು ಸಮುದ್ರನಿಂದ ತನ್ನ ಅಶ್ವಮೇಧದ ಕುದುರೆಯನ್ನು ಪಡೆದು ಯಾಗವನ್ನು ಪೂರಯಿಸಿದನು. ಹೀಗೆ ಆ ಮಹಾರಾಜನು ನೂರು (ಅಶ್ವಮೇಧ) ಯಾಗವನ್ನು ಮಾಡಿದನು. ಈಶ್ವರನ ಅನುಗ್ರಹವನ್ನೂ ಪಡೆದನು. ದೇವತೆಗಳೂ ಅನುಗ್ರಹಿಸಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಸತ್ಯವ್ರತಾದಿಸಗರಪರ್ಯಂತ ವಂಶವರ್ಣನವೆಂಬ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಏಕೋನಚತ್ವಾರಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಸಗರಸ್ಯಾತ್ಮಜಾ ವೀರಾ ಕಥಂ ಜಾತಾ ಮಹಾಬಲಾಃ ।
ವಿಕ್ರಾಂತಾಃ ಷಷ್ಟಿಸಾಹಸ್ರಾ ವಿಧಿನಾ ಕೇನ ವಾ ವದ ॥ ೧ ॥

॥ ಸೂತ ಉವಾಚ ॥

ದ್ವೇ ಪತ್ನ್ಯೌ ಸಗರಸ್ಯಾಸ್ತಾಂ ತಪಸಾ ದಗ್ಧಕಿಲ್ಬಿಷೇ ।
ಔರ್ವಸ್ತಯೋರ್ವರಂ ಪ್ರಾದಾತ್ತೋಷಿತೋ ಮುನಿಸತ್ತಮಃ ॥ ೨ ॥

### ಮೂವತ್ತೊಂಭತ್ತನೆಯ ಅಧ್ಯಾಯವು

೧. ಶೌನಕನು ಪ್ರಶ್ನೆಮಾಡಿದನು :—ಎಲೈ ಸೂತನೇ, ಸಗರನಿಗೆ ಮಹಾ ಬಲಶಾಲಿಗಳಾದ ಅರವತ್ತುಸಾವಿರ ಪುತ್ರರು ಹೇಗೆ ಹುಟ್ಟಿದರು? ಯಾವ ಕಾರಣ ದಿಂದ ಅವರು ಮೃತಿಯನ್ನೈದಿದರು? ಎಂದು ಕೇಳಲು,

೨. ಸೂತನು ಹೇಳಿದನು :—ತಪಸ್ಸಿನಿಂದ ಪವಿತ್ರನಾದ ಸಗರನಿಗೆ ಇಬ್ಬರು ಹೆಂಡತಿಯರಿದ್ದರು. ಅವರಿಬ್ಬರೂ ಔರ್ವ ಮುನಿಯನ್ನು ಸೇವಿಸಲು ಅದರಿಂದ ಸಂತೋಷಪಟ್ಟ ಔರ್ವನು ಅವರಿಬ್ಬರಿಗೂ ವರವನ್ನು ಕೊಟ್ಟನು.

ಷಷ್ಠಿ ಪುತ್ರಸಹಸ್ರಾಣಿ ಏಕಾ ವವ್ರೇ ತರಸ್ವಿನಾಂ ।
ಏಕಂ ವಂಶಕರಂ ತ್ವೇಕಾ ಯಥೇಷ್ಟಂ ವರಶಾಲಿನೀ ॥ ೩ ॥

ತತ್ರೈವಾಗತ್ಯ ತಾನ್ ಲಬ್ಧ್ವಾ ಪುತ್ರಾನ್ ಶೂರಾನ್ ಬಹೂಂಸ್ತದಾ ।
ಸಾ ಚೈವ ಸುಷುವೇ ತುಂಬಂ ಬೀಜಪೂರ್ಣಂ ಪೃಥಕ್ಕೃತಂ ॥ ೪ ॥

ತೇ ಸರ್ವೇ ಹಿ ಸ್ವಧಾತ್ರೀಭಿರ್ವವೃಧುಶ್ಚ ಯಥಾಕ್ರಮಂ ।
ಘೃತಪೂರ್ಣೇಷು ಕುಂಭೇಷು ಕುಮಾರಾಃ ಪ್ರೀತಿವರ್ಧನಾಃ ॥ ೫ ॥

ಕಪಿಲಾಗ್ನಿ ಪ್ರದಗ್ಧಾನಾಂ ತೇಷಾಂ ತತ್ರ ಮಹಾತ್ಮನಾಂ ।
ಏಕಃ ಪಂಚಜನೋ ನಾಮ ಪುತ್ರೋ ರಾಜಾ ಬಭೂವ ಹ ॥ ೬ ॥

ತತಃ ಪಂಚಜನಸ್ಯಾಸೀದಂಶುಮಾನ್ನಾಮ ವೀರ್ಯವಾನ್ ।
ದಿಲೀಪಸ್ತನಯಸ್ತಸ್ಯ ಪುತ್ರೋ ಯಸ್ಯ ಭಗೀರಥಃ ॥ ೭ ॥

೩. ಒಬ್ಬಳು ಅರವತ್ತುಸಾವಿರ ಜನ ಮಕ್ಕಳಾಗಬೇಕೆಂಬ ವರವನ್ನು ಕೇಳಿಕೊಂಡಳು. ಮತ್ತೊಬ್ಬಳು ವಂಶವರ್ಧಕನಾದ ಒಬ್ಬನೇ ಮಗನಾಗಬೇಕೆಂದು ವರವನ್ನು ಕೇಳಿಕೊಂಡಳು. ಈರೀತಿಯಾಗಿ ತಮತಮಗೆ ಬೇಕಾದ ವರಗಳನ್ನು ಕೇಳಿಕೊಂಡರು.

೪. ಶೂರರಾದ ಅನೇಕ ಮಕ್ಕಳಾಗುವ ವರವನ್ನು ಪಡೆದವಳು ಬೀಜಪೂರ್ಣವಾದ ಒಂದು ಸೋರೇಕಾಯನ್ನು ಹಡೆದಳು. ಅದರಲ್ಲಿ ಚಿಕ್ಕಚಿಕ್ಕವಾದ ಅವರತ್ತು ಸಾವಿರ ಗರ್ಭಗಳಿದ್ದವು.

೫. ಆ ಗರ್ಭಗಳನ್ನು ತುಪ್ಪದಿಂದ ತುಂಬಿದ ಕುಂಭಗಳಲ್ಲಿಟ್ಟು ದಾದಿಯರು ರಕ್ಷಿಸುತ್ತಿದ್ದರು. ಕಾಲಕ್ರಮದಲ್ಲಿ ಆ ಗರ್ಭಗಳಿಂದ ಕುಮಾರರು ಜನಿಸಿ ಪ್ರೀತಿಪೂರ್ವಕವಾಗಿ ಬೆಳೆಯುತ್ತಿದ್ದರು.

೬. ಆ ಅರವತ್ತುಸಹಸ್ರ ಜನರೂ ಕಪಿಲಋಷಿಯ ನೇತ್ರಾಗ್ನಿಯಿಂದ ಭಸ್ಮವಾದರು. ಅವರಲ್ಲಿ ಉಳಿದ ಪಂಚಜನನೆಂಬುವನು ರಾಜನಾದನು.

೭-೮. ಆ ಪಂಚಜನನಿಗೆ ಅಂಶುಮಾನನೆಂಬ ಶೂರನಾದ ಮಗನಿದ್ದನು. ಆ ಅಂಶುಮಾನನಿಗೆ ದಿಲೀಪನೆಂಬ ಮಗನೂ, ಆ ದಿಲೀಪನಿಗೆ ಭಗೀರಥನೆಂಬ ಪುತ್ರನೂ

ಯಸ್ತು ಗಂಗಾಂ ಸರಿಚ್ಛ್ರೇಷ್ಠಾಮವತಾರಯತ ಪ್ರಭುಃ ।
ಸಮುದ್ರಮಾನಯಚ್ಚೈನಾಂ ದುಹಿತೃತ್ವಮಕಲ್ಪಯತ್ ॥ ೮ ॥

ಭಗೀರಥಸುತೋ ರಾಜಾ ಶ್ರುತಸೇನ ಇತಿ ಶ್ರುತಃ ।
ನಾಭಾಗಸ್ತು ಸುತಸ್ತಸ್ಯ ಪುತ್ರಃ ಪರಮಧಾರ್ಮಿಕಃ ॥ ೯ ॥

ಅಂಬರೀಷಸ್ತು ನಾಭಾಗಸ್ಸಿಂಧುದ್ವೀಪಸ್ತತೋಽಭವತ್ ।
ಅಯುತಾಜಿತ್ತು ದಾಯಾದಸ್ಸಿಂಧುದ್ವೀಪಸ್ಯ ವೀರ್ಯವಾನ್ ॥ ೧೦ ॥

ಅಯುತಾಜಿತ್ಸುತಸ್ತ್ವಾಸೀದೃತುಪರ್ಣೋ ಮಹಾಯಶಾಃ ।
ದಿವ್ಯಾಕ್ಷಹೃದಯಜ್ಞೋಽಸೌ ರಾಜಾ ನಲಸಖೋಽಭವತ್ ॥ ೧೧ ॥

ಋತುಪರ್ಣಸುತಸ್ತ್ವಾಸೀದನುಪರ್ಣೋ ಮಹಾದ್ಯುತಿಃ ।
ತಸ್ಯ ಕಲ್ಮಾಷಪಾದೋ ವೈ ನಾಮ್ನಾ ಮಿತ್ರಸಹಸ್ತಥಾ ॥ ೧೨ ॥

ಇದ್ದರು. ಆ ಭಗೀರಥನು ಗಂಗಾನದಿಯನ್ನು ಭೂಮಿಗೆ ಇಳಿಸಿದನು. ಗಂಗಾನದಿಯನ್ನು ಸಮುದ್ರಕ್ಕೆ ಸೇರಿಸಿ ತನ್ನ ಮಗಳನ್ನಾಗಿ ಮಾಡಿಕೊಂಡನು. ಅದಕ್ಕೋಸ್ಕರಲೇ ಗಂಗಾನದಿಗೆ ಭಾಗೀರಥೀ ಎಂದು ಹೆಸರಾಯಿತು.

೯. ಭಗೀರಥನಿಗೆ ಶ್ರುತಸೇನನೆಂಬ ಪ್ರಖ್ಯಾತನಾದ ಮಗನಿದ್ದನು. ಆ ಶ್ರುತಸೇನನಿಗೆ ನಾಭಾಗನೆಂಬ ಪರಮಧಾರ್ಮಿಕನಾದ ಪುತ್ರನಿದ್ದನು.

೧೦-೧೧. ಆ ನಾಭಾಗನಿಗೆ ಅಂಬರೀಷನೆಂಬ ಪುತ್ರನಿದ್ದನು. ಅವನಿಗೆ ಸಿಂಧುದ್ವೀಪನೆಂಬುವನು ಪುತ್ರನು. ಆ ಸಿಂಧುದ್ವೀಪನಿಗೆ ಅಯುತಾಜಿತ್ತೆಂಬ ಮಗನು ಇದ್ದನು. ಆ ಅಯುತಾಜಿತ್ತಿಗೆ ಮಹಾಯಶಸ್ವಿಯಾದ ಋತುಪರ್ಣನೆಂಬ ಪುತ್ರನಾದನು. ಅವನು ದಿವ್ಯಾಶ್ವಗಳ ಲಕ್ಷಣಗಳನ್ನು ತಿಳಿದಿದ್ದನು. ಅವನಿಗೆ ನಳಮಹಾರಾಜನು ಮಿತ್ರನು.

೧೨-೧೩. ಋತುಪರ್ಣನಿಗೆ ಅನುಪರ್ಣನೆಂಬುವನು ಮಗನು. ಅವನು ಮಹಾತೇಜಸ್ವಿಯು. ಅವನಿಗೆ ಕಲ್ಮಾಷಪಾದನೆಂಬ ಮಿತ್ರನಿದ್ದನು. ಆ ಕಲ್ಮಾಷ

ಕಲ್ಮಾಷಪಾದಸ್ಯ ಸುತಸ್ಸರ್ವಕರ್ಮೇತಿ ವಿಶ್ರುತಃ ।
ಅನರಣ್ಯಸ್ತು ಪುತ್ರೋऽಭೂದ್ವಿಶ್ರುತಸ್ಸರ್ವಕರ್ಮಣಃ ॥ ೧೩ ॥

ಅನರಣ್ಯಸುತೋ ರಾಜಾ ವಿದ್ವಾನ್ಮುಂಡಿದ್ರುಹೋऽಭವತ್ ।
ನಿಷಧಸ್ತಸ್ಯ ತನಯೋ ರತಿಃ ಖಟ್ವಾಂಗ ಇತ್ಯಪಿ ॥ ೧೪ ॥

ಯೇನ ಸ್ವರ್ಗಾದಿಹಾಗತ್ಯ ಮುಹೂರ್ತಂ ಪ್ರಾಪ್ಯ ಜೀವಿತಂ ।
ತ್ರಯೋऽಪಿ ಸಂಚಿತಾ ಲೋಕಾ ಬುದ್ಧ್ಯಾ ಸತ್ಯೇನ ಚಾನಘ ॥ ೧೫ ॥

ದೀರ್ಘಬಾಹುಸ್ಸುತಸ್ತಸ್ಯ ರಘುಸ್ತಸ್ಯಾಭವತ್ಸುತಃ ।
ಅಜಸ್ತಸ್ಯ ತು ಪುತ್ರೋऽಭೂತ್ತಸ್ಮಾದ್ದಶರಥೋऽಭವತ್ ॥ ೧೬ ॥

ರಾಮೋ ದಶರಥಾಜ್ಜಜ್ಞೇ ಧರ್ಮಾತ್ಮಾ ಯೋ ಮಹಾಯಶಾಃ ।
ಸ ವಿಷ್ಣ್ವಂಶೋ ಮಹಾಶೈವಃ ಪೌಲಸ್ತ್ಯೋ ಯೇನ ಘಾತಿತಃ ॥ ೧೭ ॥

ಪಾದನಿಗೆ ಸರ್ವಕರ್ಮನೆಂಬ ಪ್ರಖ್ಯಾತನಾದ ಮಗನಿದ್ದನು. ಆ ಸರ್ವಕರ್ಮನಿಗೆ ಅನರಣ್ಯನೆಂಬುವನು ಮಗನು.

೧೪-೧೫ ಆ ಅನರಣ್ಯನಿಗೆ ಮುಂಡಿದ್ರುಹನೆಂಬುವನು ಮಗನು. ಅವನು ರಾಜನಾಗಿಯೂ, ವಿದ್ವಾಂಸನಾಗಿಯೂ ಇದ್ದನು. ಅವನಿಗೆ ನಿಷಧ, ರತಿ, ಖಟ್ವಾಂಗ ಎಂಬುವರು ಮಕ್ಕಳು. ಆ ನಿಷಧನು ಸತ್ತಮೇಲೆ ಸ್ವರ್ಗದಿಂದ ಇಳಿದುಬಂದು ಒಂದು ಮುಹೂರ್ತಕಾಲ ಜೀವಂತನಾಗಿದ್ದನು. ಆ ಮೂರುಜನ ಮಕ್ಕಳು ಬುದ್ಧಿವಂತರೂ, ಸತ್ಯವಂತರೂ ಆಗಿದ್ದರು.

೧೬-೧೭. ಆ ನಿಷಧನಿಗೆ ದೀರ್ಘಬಾಹುವು ಮಗನು. ಅವನಿಗೆ ರಘುವೂ, ರಘುವಿಗೆ ಅಜನೂ, ಅಜನಿಗೆ ದಶರಥನೂ ಮಕ್ಕಳು. ಆ ದಶರಥನಿಗೆ ರಾಮನೆಂಬ ಮಗನು ಹುಟ್ಟಿದನು. ಅವನು ಧರ್ಮಾತ್ಮನು. ಮಹಾಕೀರ್ತಿಶಾಲಿಯು. ಅವನು ವಿಷ್ಣುವಿನ ಅಂಶದಿಂದ ಹುಟ್ಟಿದವನು. ಮಹಾಶೈವನು. ಅವನು ರಾವಣನನ್ನು ಕೊಂದನು.

ತಚ್ಚರಿತ್ರಂ ಚ ಬಹುಧಾ ಪುರಾಣೇಷು ಪ್ರವರ್ಣಿತಂ ।
ರಾಮಾಯಣೇ ಪ್ರಸಿದ್ಧಂ ಹಿ ನಾತಃ ಪ್ರೋಕ್ತಂ ತು ವಿಸ್ತರಾತ್ ॥ ೧೮ ॥

ರಾಮಸ್ಯ ತನಯೋ ಜಜ್ಞೇ ಕುಶ ಇತ್ಯತಿವಿಶ್ರುತಃ ।
ಅತಿಥಿಸ್ತು ಕುಶಾಜ್ಜಜ್ಞೇ ನಿಷಧಸ್ತಸ್ಯ ಚಾತ್ಮಜಃ ॥ ೧೯ ॥

ನಿಷಧಸ್ಯ ನಲಃ ಪುತ್ರೋ ನಭಾಃ ಪುತ್ರೋ ನಲಸ್ಯ ತು ।
ನಭಸಃ ಪುಂಡರೀಕಶ್ಚ ಕ್ಷೇಮಧನ್ವಾ ತತಃ ಸ್ಮೃತಃ ॥ ೨೦ ॥

ಕ್ಷೇಮಧನ್ವಸುತಸ್ತ್ವಾಸೀದ್ದೇವಾನೀಕಃ ಪ್ರತಾಪವಾನ್ ।
ಆಸೀದಹೀನಗುರ್ನಾಮ ದೇವಾನೀಕಾತ್ಮಜಃ ಪ್ರಭುಃ ॥ ೨೧ ॥

ಅಹೀನಗೋಸ್ತು ದಾಯಾದಸ್ಸಹಸ್ವಾನ್ನಾಮ ವೀರ್ಯವಾನ್ ।
ವೀರಸೇನಾತ್ಮಜಸ್ತಸ್ಯ ಯಶ್ಚೇಕ್ಷ್ವಾಕುಕುಲೋದ್ಭವಃ ॥ ೨೨ ॥

ವೀರಸೇನಸ್ಯ ದಾಯಾದಃ ಪಾರಿಯಾತ್ರೋ ಬಭೂವ ಹ ।
ತತೋ ಬಲಾಖ್ಯಸ್ತನಯಸ್ಸ್ಥಲಸ್ತಸ್ಮಾದಭೂತ್ಸುತಃ ॥ ೨೩ ॥

೧೮. ಆ ಶ್ರೀರಾಮನ ಚರಿತ್ರೆಯು ಪುರಾಣಗಳಲ್ಲಿ ಅನೇಕವಿಧವಾಗಿ ವರ್ಣಿಸಿರುವುದು. ರಾಮಾಯಣದಲ್ಲಿ ಶ್ರೀರಾಮನ ಚರಿತ್ರೆಯು ಪ್ರಸಿದ್ಧವಾಗಿರುವುದು. ಆದುದರಿಂದ ಇಲ್ಲಿ ನಾನು ಹೆಚ್ಚಿಗೆ ಹೇಳುವುದಿಲ್ಲ.

೧೯-೨೦. ರಾಮನಿಗೆ ಕುಶನೆಂಬ ಮಗನಿದ್ದನು. ಕುಶನಿಗೆ ಅತಿಥಿಯು ಮಗನು. ಆ ಅತಿಥಿಗೆ ನಿಷಧನು ಪುತ್ರನು. ಆ ನಿಷಧನಿಗೆ ನಲನೂ, ನಲನಿಗೆ ನಭನೆಂಬುವನೂ, ಆ ನಭನಿಗೆ ಪುಂಡರೀಕನೂ, ಆ ಪುಂಡರೀಕನಿಗೆ ಕ್ಷೇಮಧನ್ವನೂ ಮಕ್ಕಳು.

೨೧-೨೨. ಕ್ಷೇಮಧನ್ವನಿಗೆ ದೇವಾನೀಕನೆಂಬ ಪ್ರತಾಪಶಾಲಿಯಾದ ಪುತ್ರನಿದ್ದನು. ದೇವಾನೀಕನಿಗೆ ಅಹೀನಗು ಎಂಬ ಮಗನಿದ್ದನು. ಅಹೀನಗುವಿಗೆ ಸಹಸ್ವಾನ್ ಎಂಬ ಶೂರನಾದ ಪುತ್ರನಿದ್ದನು. ಅವನಿಗೆ ವಿರಸೇನನೆಂಬ ಮಗನಿದ್ದನು. ಅವನು ಇಕ್ಷ್ವಾಕು ಕುಲಸಂಭೂತನು.

೨೩-೨೪. ವೀರಸೇನನಿಗೆ ಪಾರಿಯಾತ್ರನೆಂಬ ಪುತ್ರನಿದ್ದನು. ಅವನಿಗೆ ಬಲನೆಂಬುವನು ಮಗನು. ಆ ಬಲನಿಗೆ ಸ್ಥಲನೆಂಬುವನು ಮಗನು. ಆ ಸ್ಥಲನಿಗೆ

ಅರ್ಕಾಂಶಸಂಭವಸ್ತಸ್ಮಾತ್ಪುತ್ರೋ ಯಕ್ಷಃ ಪ್ರತಾಪವಾನ್ ।
ತತ್ಸುತಸ್ತ್ವಗುಣಸ್ತ್ವಾಸೀತ್ತಸ್ಮಾದ್ವಿಧೃತಿರಾತ್ಮಜಃ ॥ ១೪ ॥

ಹಿರಣ್ಯನಾಭಸ್ತತ್ಪುತ್ರೋ ಯೋಗಾಚಾರ್ಯೋ ಬಭೂವ ಹ ।
ಸ ಶಿಷ್ಯೋ ಜೈಮಿನಿಮುನೇರ್ಹ್ಯಾತ್ಮವಿದ್ಯಾವಿಶಾರದಃ ॥ ೧೫ ॥

ಕೌಶಲ್ಯೋ ಯಾಜ್ಞ್ಯವಲ್ಕ್ಯೋಽಥ ಯೋಗಮಧ್ಯಾತ್ಮಸಂಜ್ಞಿಕಂ ।
ಯತೋಽಧ್ಯಗಾನ್ಸ್ಯಪವರಾದ್ಧೃದಯಗ್ರಂಥಿಭೇದನಂ ॥ ೧೬ ॥

ತತ್ಸುತೋ ಪುಷ್ಯನಾಮಾ ಹಿ ಧ್ರುವಸಂಜ್ಞಸ್ತದಾತ್ಮಜಃ ।
ಅಗ್ನಿವರ್ಣಸ್ಸುತಸ್ತಸ್ಯ ಶೀಘ್ರನಾಮಾ ಸುತಸ್ತತಃ ॥ ೧೭ ॥

ಮರುನ್ನಾಮಾ ಸುತಸ್ತಸ್ಯ ಯೋಗಸಿದ್ಧೋ ಬಭೂವ ಹ ।
ಅಸಾವಾಸ್ತೇಽದ್ಯಾಪಿ ಪ್ರಭುಃ ಕಲಾಪಗ್ರಾಮಸಂಜ್ಞಕೇ ॥ ೧೮ ॥

ಸೂರ್ಯನ ಅಂಶದಿಂದ ಹುಟ್ಟಿದ ಯಕ್ಷನೆಂಬ ಪ್ರತಾಪಿಯಾದ ಮಗನಿದ್ದನು. ಅವನಿಗೆ ಅಗುಣನೂ, ಅಗುಣನಿಗೆ ವಿಧೃತಿಯೂ ಮಕ್ಕಳು.

೧೫. ಆ ವಿಧೃತಿಗೆ ಹಿರಣ್ಯನಾಭನೆಂಬ ಮಗನಿದ್ದನು. ಆ ಹಿರಣ್ಯನಾಭನ ಮಗನು ಯೋಗಾಚಾರ್ಯನು. ಅವನು ಜೈಮುನಿಯ ಶಿಷ್ಯನು. ವೇದಾಂತವಿದ್ಯೆಯಲ್ಲಿ ಪ್ರವೀಣನು.

೧೬. ಕೌಶಲ್ಯನೆಂಬುವನೂ, ಯಾಜ್ಞ್ಯವಲ್ಕ್ಯನೂ ಕೂಡ ಆ ಯೋಗಾಚಾರ್ಯನ ದೆಸೆಯಿಂದ ಹೃದಯಗ್ರಂಥಿಭೇದಕವಾದ ಅಧ್ಯಾತ್ಮಯೋಗವನ್ನು ಓದಿದರು.

೧೭-೨೯. ಆ ಯೋಗಾಚಾರ್ಯನ ಮಗನು ಪುಷ್ಯನು. ಅವನ ಮಗನು ಧ್ರುವನು. ಆ ಧ್ರುವನ ಮಗನು ಅಗ್ನಿವರ್ಣನು. ಅವನ ಮಗನು. ಶೀಘ್ರನೆಂಬುವನು. ಆ ಶೀಘ್ರನನಿಗೆ ಮರುತ್ತೆಂಬ ಮಗನು. ಅವನು ಯೋಗಸಿದ್ಧನಾದನು. ಅವನು ಈಗಲೂ ಕಲಾಪವೆಂಬ ಗ್ರಾಮದಲ್ಲಿ ಅಲ್ಲಿರುವ ಮುನಿಗಳೊಡನೆ

ತದ್ವಾಸಿಭಿಶ್ಚ ಮುನಿಭಿಃ ಕಲೇರಂತೇ ಸ ಏವ ಹಿ ।
ಪುನರ್ಭಾವಯಿತಾ ನಷ್ಟಂ ಸೂರ್ಯವಂಶಂ ವಿಶೇಷತಃ ॥ ೨೯ ॥

ಪೃಥುಶ್ರುತಶ್ಚ ತತ್ಪುತ್ರಸ್ಸಂಧಿಸ್ತಸ್ಯ ಸುತಃ ಸ್ಮೃತಃ ।
ಅಮರ್ಷಣಸ್ಸುತಸ್ತಸ್ಯ ಮರುತ್ವಾಂಸ್ತತ್ಸುತೋಽಭವತ್ ॥ ೩೦ ॥

ವಿಶ್ವಸಾಹ್ವಸ್ಸುತಸ್ತಸ್ಯ ತತ್ಸುತೋಽಭೂತ್ಪ್ರಸೇನಜಿತ್ ।
ತಕ್ಷಕಸ್ತಸ್ಯ ತನಯಸ್ತತ್ಸುತೋ ಹಿ ಬೃಹದ್ವಲಃ ॥ ೩೧ ॥

ಏತ ಇಕ್ಷ್ವಾಕುವಂಶೀಯಾ ಅತೀತಾಸ್ಸಂಪ್ರಕೀರ್ತಿತಾಃ ।
ಶೃಣುತಾನಾಗತಾನ್ಭೂತಾಂಸ್ತದ್ವಂಶ್ಯಾನ್ ಧರ್ಮವಿತ್ತಮಾನ್ ॥ ೩೨ ॥

ಬೃಹದ್ವಲಸ್ಯ ತನಯೋ ಭವಿತಾ ಹಿ ಬೃಹದ್ರಣಃ ।
ಬೃಹದ್ರಣಸುತಸ್ತಸ್ಯೋರುಕ್ರಿಯೋ ಹಿ ಭವಿಷ್ಯತಿ ॥ ೩೩ ॥

ವತ್ಸವೃದ್ಧಸ್ಸುತಸ್ತಸ್ಯ ಪ್ರತಿವ್ಯೋಭಾಸುತಸ್ತತಃ ।
ಭಾನುಸ್ತತ್ತನಯೋ ಭಾವೀ ದಿವಾಕೋ ವಾಹಿನೀಪತಿಃ ॥ ೩೪ ॥

ವಾಸಮಾಡುತ್ತಿರುವನು. ಅವನೇ ಕಲಿಯುಗದಲ್ಲಿ ನಷ್ಟವಾಗಿ ಹೋದ ಸೂರ್ಯ ವಂಶವನ್ನು ಪುನಃ ಅಭಿವೃದ್ಧಿಪಡಿಸುವನು.

೩೦. ಆ ಮರುತ್ತಿನ ಮಗನು ಪೃಥುಶ್ರುತನು. ಅವನ ಮಗನು ಸಂಧಿಯು. ಆ ಸಂಧಿಯ ಮಗನು ಅಮರ್ಷಣನು. ಅವನ ಮಗನು ಮರುತ್ವಾನ್ ಎಂಬುವನು.

೩೧-೩೨. ಮರುತ್ವಾನನ ಮಗನು ವಿಶ್ವಸಾಹ್ವನು. ಅವನಿಗೆ ಬೃಹದ್ವಲನು ಮಗನು. ಇವರೆಲ್ಲರೂ ಇಕ್ಷ್ವಾಕುವಂಶದವರು. ಇವರೆಲ್ಲರೂ ಹಿಂದಿನವರು. ಮುಂದೆ ಬರುವ ಮತ್ತು ಹಿಂದೆ ಇದ್ದವರನ್ನು ಹೇಳುವೆನು ಕೇಳು.

೩೩-೩೪. ಬೃಹದ್ವಲನಿಗೆ ಬೃಹದ್ರಣನೆಂಬ ಮಗನಾಗುವನು. ಆ ಬೃಹದ್ರಣನಿಗೆ ಉರುಕ್ರಿಯನೆಂಬುವನು ಹುಟ್ಟುವನು. ಅವನಿಗೆ ವತ್ಸವೃದ್ಧನೂ, ವತ್ಸವೃದ್ಧನಿಗೆ ಪ್ರತಿವ್ಯೋಭಾ ಎಂಬುವನೂ, ಅವನಿಗೆ ಭಾನು ಎಂಬುವನೂ, ಆ ಭಾನುವಿಗೆ ವಾಹಿನೀಪತಿಯೂ ಮಕ್ಕಳಾಗುವರು.

ಸಹದೇವಸ್ಸುತಸ್ತಸ್ಯ ಮಹಾವೀರೋ ಭವಿಷ್ಯತಿ ।
ತತ್ಸುತೋ ಬೃಹದಶ್ವೋ ಹಿ ಭಾನುಮಾಂಸ್ತತ್ಸುತೋ ಬಲೀ ॥ ೩೫ ॥

ಸುತೋ ಭಾನುಮತೋ ಭಾವೀ ಪ್ರತೀಕಾಶ್ವಶ್ಚ ವೀರ್ಯವಾನ್ ।
ಸುಪ್ರತೀಕಸ್ಸುತಸ್ತಸ್ಯ ಭವಿಷ್ಯತಿ ನೃಪೋತ್ತಮಃ ॥ ೩೬ ॥

ಮರುದೇವಸ್ಸುತಸ್ತಸ್ಯ ಸುನಕ್ಷತ್ರೋ ಭವಿಷ್ಯತಿ ।
ತತ್ಸುತಃ ಪುಷ್ಕರಸ್ತಸ್ಯಾಂತರಿಕ್ಷಸ್ತತ್ಸುತೋ ದ್ವಿಜಾಃ ॥ ೩೭ ॥

ಸುತಪಾಸ್ತತ್ಸುತೋ ವೀರೋ ಮಿತ್ರಜಿತ್ತಸ್ಯ ಚಾತ್ಮಜಃ ।
ಬೃಹದ್ಭ್ರಾಜಸ್ಸುತಸ್ತಸ್ಯ ಬರ್ಹಿನಾಮಾ ತದಾತ್ಮಜಃ ॥ ೩೮ ॥

ಕೃತಂಜಯಸ್ಸುತಸ್ತಸ್ಯ ತತ್ಸುತೋ ಹಿ ರಣಂಜಯಃ ।
ಸಂಜಯಸ್ತು ಮಯಸ್ತಸ್ಯ ತಸ್ಯ ಶಾಕ್ಯೋ ಹಿ ಚಾತ್ಮಜಃ ॥ ೩೯ ॥

ಶುದ್ಧೋದಸ್ತನಯಸ್ತಸ್ಯ ಲಾಂಗಲಸ್ತು ತದಾತ್ಮಜಃ ।
ತಸ್ಯ ಪ್ರಸೇನಜಿತ್ಪುತ್ರೋ ತತ್ಸುತಃ ಶೂದ್ರಕಾಹ್ವಯಃ ॥ ೪೦ ॥

೩೫-೩೬. ವಾಹಿನೀಪತಿಗೆ ಮಹಾವೀರನಾದ ಸಹದೇವನು ಮಗನಾಗುವನು. ಆ ಸಹದೇವನಿಗೆ ಬೃಹದಶ್ವನೂ, ಅವನಿಗೆ ಬಲಶಾಲಿಯಾದ ಭಾನುಮಂತನೂ, ಅವನಿಗೆ ಶೂರನಾದ ಪ್ರತೀಕಾಶ್ವನೂ, ಆ ಪ್ರತಿಕಾಶ್ವನಿಗೆ ರಾಜನಾದ ಸುಪ್ರತೀಕನೂ ಮಕ್ಕಳಾಗುವರು.

೩೭-೩೮. ಸುಪ್ರತೀಕನಿಗೆ ಮರುದೇವನೂ, ಮರುದೇವನಿಗೆ ಸುನಕ್ಷತ್ರನೂ, ಸುನಕ್ಷತ್ರನಿಗೆ ಪುಷ್ಕರನೂ, ಅವನಿಗೆ ಅಂತರಿಕ್ಷನೂ, ಅಂತರಿಕ್ಷನಿಗೆ ಸುತಪನೆಂಬುವನೂ, ಸುತಪನಿಗೆ ಮಿತ್ರಜಿತ್ತನೂ, ಅವನಿಗೆ ಬೃಹದ್ಭ್ರಾಜನೂ, ಬೃಹದ್ಭ್ರಾಜನಿಗೆ ಬರ್ಹಿಯೂ ಮಕ್ಕಳಾಗಿ ಹುಟ್ಟುವರು.

೩೯-೪೦. ಬರ್ಹಿಗೆ ಕೃತಂಜಯನೂ, ಅವನಿಗೆ ರಣಂಜಯನೂ, ರಣಂಜಯನಿಗೆ ಸಂಜಯನೂ, ಅವನಿಗೆ ಮಯನೂ, ಮಯನಿಗೆ ಶಾಕ್ಯನೂ, ಶಾಕ್ಯನಿಗೆ ಶುದ್ಧೋದನೂ, ಅವನಿಗೆ ಲಾಂಗಲನೂ, ಲಾಂಗಲನಿಗೆ ಪ್ರಸೇನಜಿತುವೂ, ಅವನಿಗೆ ಶೂದ್ರಕನೂ ಮಕ್ಕಳಾಗುವರು.

ರುಣಕೋ ಭವಿತಾ ತಸ್ಯ ಸುರಥಸ್ತತ್ಸುತಃ ಸ್ಮೃತಃ ।
ಸುಮಿತ್ರಸ್ತತ್ಸುತೋ ಭಾವೀ ವಂಶನಿಷ್ಠಾಂತ ಏವ ಚ ॥ ೪೧ ॥

ಸುಮಿತ್ರಾಂತೋಽನ್ವಯೋಽಯಂ ವೈ ಇಕ್ಷ್ವಾಕೂಣಾಂ ಭವಿಷ್ಯತಿ ।
ರಾಜ್ಞಾಂ ವೈ ಚಿತ್ರವೀರ್ಯಾಣಾಂ ಧರ್ಮಿಷ್ಠಾನಾಂ ಸುಕರ್ಮಣಾಂ ॥ ೪೨ ॥

ಸುಮಿತ್ರಂ ಪ್ರಾಪ್ಯ ರಾಜಾನಂ ಸ ತದ್ವಂಶಶ್ಶುಭಃ ಕಲೌ ।
ಸಂಸ್ಥಾಂ ಪ್ರಾಪ್ಸ್ಯತಿ ತದ್ಬ್ರಾಹ್ಮೇ ವರ್ಧಿಷ್ಯತಿ ಪುನಃ ಕೃತೇ ॥ ೪೩ ॥

ಏತದ್ವೈವಸ್ವತೇ ವಂಶೇ ರಾಜಾನೋ ಭೂರಿದಕ್ಷಿಣಾಃ ।
ಇಕ್ಷ್ವಾಕುವಂಶಪ್ರಭವಾಃ ಪ್ರಾಧಾನ್ಯೇನ ಪ್ರಕೀರ್ತಿತಾಃ ॥ ೪೪ ॥

ಪುಣ್ಯೇಯಂ ಪರಮಾ ಸೃಷ್ಟಿರಾದಿತ್ಯಸ್ಯ ವಿವಸ್ವತಃ ।
ಶ್ರಾದ್ಧದೇವಸ್ಯ ದೇವಸ್ಯ ಪ್ರಜಾನಾಂ ಪುಷ್ಟಿದಸ್ಯ ಚ ॥ ೪೫ ॥

೪೧. ಶೂದ್ರಕನಿಗೆ ರಣಕನೂ, ರಣಕನಿಗೆ ಸುರಥನೂ, ಸುರಥನಿಗೆ ಸುಮಿತ್ರನೂ ಮಕ್ಕಳಾಗುವರು. ಈ ಸುಮಿತ್ರನೇ ಇಕ್ಷ್ವಾಕುವಂಶದ ಕೊನೆಯ ರಾಜನು.

೪೨-೪೩. ಧರ್ಮಿಷ್ಠರೂ, ಕರ್ಮಠರೂ ಆದ ಚಿತ್ರವೀರ್ಯನೇ ಮೊದಲಾದ ರಾಜರುಗಳು ಕಲಿಯುಗದಲ್ಲಿ ಸುಮಿತ್ರ ರಾಜನನ್ನು ಪಡೆಯುವುದರಿಂದ ಅವರ ವಂಶವು ಶುಭಕರವಾಗುವುದು. ಕೊನೆಗೆ ಅವರೆಲ್ಲರೂ ಬ್ರಹ್ಮಲೋಕದಲ್ಲಿ ಶಾಶ್ವತವಾದ ಸ್ಥಿತಿಯನ್ನು ಪಡೆಯುವರು. ಪುನಃ ಕೃತಯುಗದಲ್ಲಿ ಅವರ ವಂಶವು ಬೆಳೆಯುವುದು.

೪೪. ವೈವಸ್ವತಮನುವಂಶದ ಪ್ರಧಾನರಾದ ರಾಜರುಗಳನ್ನೆಲ್ಲಾ ಹೇಳಿಯಾಯಿತು. ಇವರೆಲ್ಲರೂ ಮಹಾದಾನಶೀಲರು. ಇಕ್ಷ್ವಾಕುವಂಶಪ್ರವರ್ಧಕರು.

೪೫-೪೬. ನಾನು ಈಗ ಹೇಳಿದ ಪವಿತ್ರಕರವಾದ ಸೃಷ್ಟಿಯೆಲ್ಲವೂ ಶ್ರಾದ್ಧಾಭಿಮಾನಿದೇವನಾದ ಸೂರ್ಯನ ವಂಶಕ್ಕೆ ಸಂಬಂಧಪಟ್ಟಿರುವುದು. ಈ ಸೃಷ್ಟಿಯು ಪರಮಪವಿತ್ರವಾದುದು. ಪ್ರಜೆಗಳಿಗೆ ಪುಷ್ಟಿಯನ್ನು ಕೊಡುವುದು. ಇದನ್ನು ಯಾರು

ಪಠನ್ ಶೃಣ್ವನ್ನಿಮಾಂ ಸೃಷ್ಟಿಮಾದಿತ್ಯಸ್ಯ ಚ ಮಾನವಃ ।
ಪ್ರಜಾವಾನೇತಿ ಸಾಯುಜ್ಯಮಿಹ ಭುಕ್ತ್ವಾ ಸುಖಂ ಪರಂ ॥ ೪೬ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ವೈವಸ್ವತವಂಶೋದ್ಭವರಾಜವರ್ಣನಂ ನಾಮ
ಏಕೋನಚತ್ವಾರಿಂಶೋಽಧ್ಯಾಯಃ

ಓದುವರೋ ಅಥವಾ ಕೇಳುವರೋ ಅವರು ಪ್ರಜೆಗಳನ್ನು ಪಡೆದು ಈ ಲೋಕದಲ್ಲಿ ಸುಖವನ್ನನುಭವಿಸಿ ಅನಂತರ ಸಾಯುಜ್ಯವನ್ನು ಪಡೆಯುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ವೈವಸ್ವತವಂಶೋದ್ಭವರಾಜ
ವರ್ಣನವೆಂಬ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಚತ್ವಾರಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಇತ್ಯಾಕರ್ಣ್ಯ ಶ್ರಾದ್ಧದೇವಃ ಸೂರ್ಯಾನ್ವಯಮನುತ್ತಮಂ ।
ಪರ್ಯಪೃಚ್ಛನ್ಮುನಿಶ್ರೇಷ್ಠಃ ಶೌನಕಸ್ಸೂತಮಾದರಾತ್ ॥ ೧ ॥

॥ ಶೌನಕ ಉವಾಚ ॥

ಸೂತಸೂತ ಚಿರಂಜೀವ ವ್ಯಾಸಶಿಷ್ಯ ನಮೋಽಸ್ತು ತೇ ।
ಶ್ರಾವಿತಾ ಪರಮಾ ದಿವ್ಯಾ ಕಥಾ ಪರಮಪಾವಿನೀ ॥ ೨ ॥

ತ್ವಯಾ ಪ್ರೋಕ್ತಃ ಶ್ರಾದ್ಧದೇವಸ್ಸೂರ್ಯಃ ಸದ್ವಂಶವರ್ಧನಃ ।
ಸಂಶಯಸ್ತತ್ರ ಮೇ ಜಾತಸ್ತಂ ಬ್ರವೀಮಿ ತ್ವದಗ್ರತಃ ॥ ೩ ॥

## ನಲವತ್ತನೆಯ ಅಧ್ಯಾಯವು

೧. ವ್ಯಾಸಮಹರ್ಷಿ ಇಂತೆಂದನು :—ಶ್ರಾದ್ಧದೇವನಾದ ಸೂರ್ಯನ ಉತ್ತಮವಾದ ವಂಶವರ್ಣನೆಯನ್ನು ಕೇಳಿದ ಮೇಲೆ ಮುನಿಶ್ರೇಷ್ಠನಾದ ಶೌನಕನು ಸೂತನನ್ನು ಪ್ರಶ್ನೆಮಾಡಿದನು.

೨-೩. ಚಿರಂಜೀವಿಯಾದ ಓ ಸೂತನೇ, ನಿನಗೆ ನಮಸ್ಕಾರವು. ವ್ಯಾಸನ ಶಿಷ್ಯನಾದ ನೀನು ಶ್ರಾದ್ಧದೇವನೂ, ಸದ್ವಂಶವರ್ಧಕನೂ ಆದ ಸೂರ್ಯನ ವಂಶವನ್ನು ಹೇಳಿರುವೆ. ಆದರೆ ನೀನು ಹೇಳಿದ ವಿಷಯದಲ್ಲಿ ಒಂದು ಸಂಶಯವುಂಟಾಗಿರುವುದು. ಅದನ್ನು ನಿನ್ನ ಮುಂದೆಯೇ ಹೇಳುವೆನು.

ಕುತೋ ವೈ ಶ್ರಾದ್ಧದೇವತ್ವಮಾದಿತ್ಯಸ್ಯ ವಿವಸ್ವತಃ ।
ಶ್ರೋತುಮಿಚ್ಛಾಮಿ ತತ್ಪ್ರೀತ್ಯಾ ಛಿಂಧಿ ಮೇ ಸಂಶಯಂ ತ್ವಿಮಂ ॥ ೪ ॥

ಶ್ರಾದ್ಧಸ್ಯಾಪಿ ಚ ಮಾಹಾತ್ಮ್ಯಂ ತತ್ಫಲಂ ಚ ವದ ಪ್ರಭೋ ।
ಪ್ರೀತಾಶ್ಚ ಪಿತರೋ ಯೇನ ಶ್ರೇಯಸಾ ಯೋಜಯಂತಿ ತಂ ॥ ೫ ॥

ಏತಚ್ಚ ಶ್ರೋತುಮಿಚ್ಛಾಮಿ ಪಿತ್ರ್ಯಾಣಾಂ ಸರ್ಗಮುತ್ತಮಂ ।
ಕಥಯ ತ್ವಂ ವಿಶೇಷೇಣ ಕೃಪಾಂ ಕುರು ಮಹಾಮತೇ ॥ ೬ ॥

॥ ಸೂತ ಉವಾಚ ॥

ವಚ್ಮಿ ತತ್ತೇಽಖಿಲಂ ಪ್ರೀತ್ಯಾ ಪಿತೃಸರ್ಗಂ ತು ಶೌನಕ ।
ಮಾರ್ಕಂಡೇಯೇನ ಕಥಿತಂ ಭೀಷ್ಮಾಯ ಪರಿಪೃಚ್ಛತೇ ॥ ೭ ॥

ಗೀತಂ ಸನತ್ಕುಮಾರೇಣ ಮಾರ್ಕಂಡೇಯಾಯ ಧೀಮತೇ ।
ತತ್ತೇಽಹಂ ಸಂಪ್ರವಕ್ಷ್ಯಾಮಿ ಸರ್ವಕಾಮಫಲಪ್ರದಂ ॥ ೮ ॥

೪. ಎಲೈ ಮಹಾಬುದ್ಧಿಶಾಲಿಯಾದ ಸೂತಮುನಿಯೇ, ಸೂರ್ಯನಿಗೆ ಶ್ರಾದ್ಧ ದೇವತ್ವವು ಹೇಗೆ ಬಂದಿತು ? ಈ ಸಂಶಯವನ್ನು ನಿವಾರಿಸು.

೫-೬. ಶ್ರಾದ್ಧದ ಮಾಹಾತ್ಮೆಯನ್ನೂ ಅದನ್ನು ಮಾಡುವುದರಿಂದ ಬರುವ ಫಲವನ್ನೂ ತಿಳಿಸು. ಯಾರು ತಮ್ಮ ಪಿತೃಗಳಿಗೆ ಶ್ರಾದ್ಧಮಾಡುವರೋ ಅವರಿಗೆ ಶ್ರೇಯಸ್ಸುಂಟಾಗಲೆಂದು ಪಿತೃಗಳು ಆಶಿಸುವರು. ಮತ್ತು ಪಿತೃಗಳ ಸೃಷ್ಟಿಯು ಹೇಗೆ ಆಯಿತು ? ಈ ವಿಷಯಗಳನ್ನೆಲ್ಲಾ ನನಗೆ ದಯವಿಟ್ಟು ವಿಸ್ತಾರವಾಗಿ ತಿಳಿಸು ಎಂದನು.

೭-೮. ಸೂತನು ಹೇಳಿದನು :—ಎಲೈ ಶೌನಕನೇ, ಪಿತೃಗಳ ಸೃಷ್ಟಿಯೆಲ್ಲವನ್ನೂ ಹೇಳುವೆನು ಕೇಳು. ಹಿಂದೆ ಇದೇ ವಿಷಯವನ್ನು ಭೀಷ್ಮನು ಮಾರ್ಕಂಡೇಯನನ್ನು ಕೇಳಲು ಮಾರ್ಕಂಡೇಯನು ಭೀಷ್ಮನಿಗೆ ತಿಳಿಸಿದನು. ಮಾರ್ಕಂಡೇಯನಿಗೆ ಸನತ್ಕುಮಾರನು ಹೇಳಿದನು. ಸರ್ವೇಷ್ಟಾರ್ಥವನ್ನು ಸಲ್ಲಿಸುವ ಅದೇ ವಿಷಯವನ್ನು ನಿನಗೆ ಹೇಳುವೆನು ಕೇಳು.

ಯುಧಿಷ್ಠಿರೇಣ ಸಂಪೃಷ್ಟೋ ಭೀಷ್ಮೋ ಧರ್ಮಭೃತಾಂ ವರಃ ।
ಶರಶಯ್ಯಾಸ್ಥಿತಃ ಪ್ರೋಚೇ ತಚ್ಛೃಣುಷ್ವ ವದಾಮಿ ತೇ ॥ ೯ ॥

॥ ಯುಧಿಷ್ಠಿರ ಉವಾಚ ॥

ಪುಷ್ಟಿಕಾಮೇನ ಪುಂಸಾ ವೈ ಕಥಂ ಪುಷ್ಟಿರವಾಪ್ಯತೇ ।
ಏತಚ್ಛ್ರೋತುಂ ಸಮಿಚ್ಛಾಮಿ ಕಿಂ ಕುರ್ವಾಣೋ ನ ಸೀದತಿ ॥ ೧೦ ॥

॥ ಸೂತ ಉವಾಚ ॥

ಯುಧಿಷ್ಠಿರೇಣ ಸಂಪೃಷ್ಟಂ ಪ್ರಶ್ನಂ ಶ್ರುತ್ವಾ ಸ ಧರ್ಮವಿತ್ ।
ಭೀಷ್ಮಃ ಪ್ರೋವಾಚ ಸುಪ್ರೀತ್ಯಾ ಸರ್ವೇಷಾಂ ಶೃಣ್ವತಾಂ ವಚಃ ॥ ೧೧ ॥

॥ ಭೀಷ್ಮ ಉವಾಚ ॥

ಯೇ ಕುರ್ವಂತಿ ನರಾಶ್ಶ್ರಾದ್ಧಾನ್ಯಪಿ ಪ್ರೀತ್ಯಾ ಯುಧಿಷ್ಠಿರ ।
ಶ್ರಾದ್ಧೈಃ ಪ್ರೀಣಾತಿ ತತ್ಸರ್ವಂ ಪಿತೄಣಾಂ ಹಿ ಪ್ರಸಾದತಃ ॥ ೧೨ ॥

೯. ಹಿಂದೆ ಯುಧಿಷ್ಠಿರನು ಶರಶಯ್ಯೆಯಲ್ಲಿರುವ ಭೀಷ್ಮನನ್ನು ನೀನು ಕೇಳಿದ ವಿಷಯವನ್ನೇ ಕೇಳಲು ಭೀಷ್ಮನು ಯುಧಿಷ್ಠಿರನಿಗೆ ಹೇಳಿದ ವಿಷಯವನ್ನು ಹೇಳುವೆನು ಕೇಳು.

೧೦. ಯುಧಿಷ್ಠಿರನು ಪ್ರಶ್ನೆ ಮಾಡುವನು :—ಪುಷ್ಟಿಯನ್ನಪೇಕ್ಷಿಸುವ ಮನುಷ್ಯನಿಗೆ ಯಾವುದರಿಂದ ಪುಷ್ಟಿಯುಂಟಾಗುವುದು ? ಏನನ್ನು ಮಾಡಿದರೆ ಮನುಷ್ಯನು ನಾಶಹೊಂದಲಾರನು ? ಈ ವಿಷಯವನ್ನು ಕೇಳಬಯಸುವೆನು, ದಯವಿಟ್ಟು ತಿಳಿಸು ಎಂದನು.

೧೧. ಸೂತನು ಹೇಳುವನು :—ಯುಧಿಷ್ಠಿರನು ಈರೀತಿಯಾಗಿ ಪ್ರಶ್ನೆ ಮಾಡಲು ಧರ್ಮಶಾಸ್ತ್ರವನ್ನು ಬಲ್ಲ ಭೀಷ್ಮನು ಪ್ರೀತಿಯಿಂದ ಎಲ್ಲರಿಗೂ ಕೇಳಿಸುವಂತೆ ಹೇಳಿದನು.

೧೨. ಎಲೈ ಯುಧಿಷ್ಠಿರನೇ, ಯಾರು ಪ್ರೀತಿಯಿಂದ ಶ್ರಾದ್ಧಗಳನ್ನು ಮಾಡುವರೋ ಅವರು ಪಿತೃಗಳ ಅನುಗ್ರಹದಿಂದ ತಮ್ಮ ಇಷ್ಟಗಳೆಲ್ಲವನ್ನೂ ಹೊಂದುವರು.

ಶ್ರಾದ್ಧಾನಿ ಚೈವ ಕುರ್ವಂತಿ ಫಲಕಾಮಾಸ್ಸದಾ ನರಾಃ ।
ಅಭಿಸಂಧಾಯ ಪಿತರಂ ಪಿತುಶ್ಚ ಪಿತರಂ ತಥಾ ॥ ೧೩ ॥

ಪಿತುಃ ಪಿತಾಮಹಶ್ಚೈವ ತ್ರಿಷು ಪಿಂಡೇಷು ನಿತ್ಯದಾ ।
ಪಿತರೋ ಧರ್ಮಕಾಮಸ್ಯ ಪ್ರಜಾಕಾಮಸ್ಯ ಚ ಪ್ರಜಾಂ ॥ ೧೪ ॥

ಪುಷ್ಟಿಕಾಮಸ್ಯ ಪುಷ್ಟಿಂ ಚ ಪ್ರಯಚ್ಛಂತಿ ಯುಧಿಷ್ಠಿರ ॥ ೧೫ ॥

॥ ಯುಧಿಷ್ಠಿರ ಉವಾಚ ॥

ವರ್ತಂತೇ ಪಿತರಃ ಸ್ವರ್ಗೇ ಕೇಷಾಂಚಿನ್ನರಕೇ ಪುನಃ ।
ಪ್ರಾಣಿನಾಂ ನಿಯತಂ ಚಾಪಿ ಕರ್ಮಜಂ ಫಲಮುಚ್ಯತೇ ॥ ೧೬ ॥

ತಾನಿ ಶ್ರಾದ್ಧಾನಿ ದತ್ತಾನಿ ಕಥಂ ಗಚ್ಛಂತಿ ವೈ ಪಿತೄನ್ ।
ಕಥಂ ಶಕ್ತಾಸ್ತಮಾಹರ್ತುಂ ನರಕಸ್ಥಾಃ ಫಲಂ ಪುನಃ ॥ ೧೭ ॥

ದೇವಾ ಅಪಿ ಪಿತೄನ್ ಸ್ವರ್ಗೇ ಯಜಂತ ಇತಿ ಮೇ ಶ್ರುತಂ ।
ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ಬ್ರವೀಹಿ ಮೇ ॥ ೧೮ ॥

೧೩-೧೫. ಮನುಷ್ಯರು ತಂದೆಯನ್ನೂ, ತಂದೆಯ ತಂದೆಯನ್ನೂ (ತಾತ), ಅವರ ತಂದೆಯನ್ನೂ (ಮುತ್ತಾತ) ಈರೀತಿಯಾದ ಮೂರು ತಲೆಯವರನ್ನು ಉದ್ದೇಶಿಸಿ ಫಲಾಪೇಕ್ಷೆಯಿಂದ ಶ್ರಾದ್ಧಮಾಡಿದರೆ ಪಿತೃಗಳು ಅಂಥವನಿಗೆ ಎಂದರೆ ಧರ್ಮವನ್ನಪೇಕ್ಷಿಸುವವನಿಗೆ ಧರ್ಮವನ್ನೂ, ಪ್ರಜೆಗಳನ್ನಪೇಕ್ಷಿಸುವವನಿಗೆ ಪ್ರಜೆಗಳನ್ನೂ, ಪುಷ್ಟಿಯನ್ನಪೇಕ್ಷಿಸುವವನಿಗೆ ಪುಷ್ಟಿಯನ್ನೂ ಕೊಡುವರು.

೧೬-೧೮. ಯುಧಿಷ್ಠಿರನು ಮತ್ತೆ ಪ್ರಶ್ನೆ ಮಾಡುವನು :— ಪಿತೃಗಳಲ್ಲಿ ಕೆಲವರು ಸ್ವರ್ಗದಲ್ಲಿಯೂ, ಕೆಲವರು ನರಕದಲ್ಲಿಯೂ ಇರುವರು. ಇದಕ್ಕೆಲ್ಲಾ ಅವರು ಮಾಡಿರುವ ಕರ್ಮದ ಫಲವೇ ಕಾರಣವು. ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ಅದರ ಫಲವು ಹೇಗೆ ಹೋಗಿ ಸೇರುವುದು ? ಹೇಗೆತಾನೇ ನರಕದಲ್ಲಿರುವ ಪಿತೃಗಳು ಶ್ರಾದ್ಧಫಲವನ್ನು ತೆಗೆದುಕೊಳ್ಳುವರು. ಸ್ವರ್ಗದಲ್ಲಿರುವ ಪಿತೃಗಳನ್ನು ದೇವತೆಗಳೂ ಪೂಜಿಸುವರೆಂದು ಕೇಳಿರುವೆನು. ಇವೆಲ್ಲವನ್ನೂ ವಿಸ್ತಾರವಾಗಿ ನನಗೆ ತಿಳಿಸು ಎನ್ನಲು,

॥ ಭೀಷ್ಮ ಉವಾಚ ॥

ಅತ್ರ ತೇ ಕೀರ್ತಯಿಷ್ಯಾಮಿ ಯಥಾಶ್ರುತಮರಿಂದಮ ।
ಪಿತ್ರಾ ಮಮ ಪುರಾ ಗೀತಂ ಲೋಕಾಂತರಗತೇನ ವೈ ॥ ೧೯ ॥

ಶ್ರಾದ್ಧಕಾಲೇ ಮಮ ಪಿತುರ್ಮಯಾ ಪಿಂಡಸ್ಸಮುದ್ಯತಃ ।
ಮತ್ಪಿತಾ ಮಮ ಹಸ್ತೇನ ಭಿತ್ವಾ ಭೂಮಿಮಯಾಚತ ॥ ೨೦ ॥

ನೈಷ ಕಲ್ಪವಿಧಿರ್ದೃಷ್ಟ ಇತಿ ನಿಶ್ಚಿತ್ಯ ಚಾಪ್ಯಹಂ ।
ಕುಶೇಷ್ವೇವ ತತಃ ಪಿಂಡಂ ದತ್ತವಾನವಿಚಾರಯನ್ ॥ ೨೧ ॥

ತತಃ ಪಿತಾ ಮೇ ಸಂತುಷ್ಟೋ ವಾಚಾ ಮಧುರಯಾ ತದಾ ।
ಉವಾಚ ಭಾರತಶ್ರೇಷ್ಠ ಪ್ರೀಯಮಾಣೋ ಮಯಾನಘ ॥ ೨೨ ॥

ತ್ವಯಾ ದಾಯಾದವಾನಸ್ಮಿ ಧರ್ಮಜ್ಞೇನ ವಿಪಶ್ಚಿತಾ ।
ತಾರಿತೋಽಹಂ ತು ಜಿಜ್ಞಾಸಾ ಕೃತಾ ಮೇ ಪುರುಷೋತ್ತಮ ॥ ೨೩ ॥

---

೧೯. ಭೀಷ್ಮನಿಂತೆಂದನು :—ಎಲೈ ಶತ್ರುನಾಶಕನಾದ ರಾಜನೇ, ಕೇಳು. ಲೋಕಾಂತರವನ್ನು ಹೊಂದಿದ ನಮ್ಮ ತಂದೆಯು ನನಗೆ ಹೇಳಿದ ವಿಷಯವನ್ನು ನಾನು ಕೇಳಿ ತಿಳಿದಿರುವಂತೆ ಹೇಳುವೆನು.

೨೦. ನನ್ನ ತಂದೆಯ ಶ್ರಾದ್ಧಸಮಯದಲ್ಲಿ ನಾನು ಪಿಂಡವನ್ನು ಪಿತೃವಿನ ಕೈಯ್ಯಲ್ಲಿ ಕೊಡಲು ಉದ್ಯುಕ್ತನಾದೆನು. ಆಗ ನನ್ನ ತಂದೆಯು ಪಿಂಡವನ್ನು ಕೈಯಿನಿಂದ ಕಿತ್ತು ಭೂಮಿಯ ಮೇಲೆ ಇಟ್ಟುಕೊಡು ಎಂಬುದಾಗಿ ಕೇಳಿದನು.

೨೧. ಭೂಮಿಯ ಮೇಲೆ ಪಿಂಡವನ್ನು ಹಾಕುವ ಈ ಶ್ರಾದ್ಧಕಲ್ಪದ ವಿಧಿಯು ಸಂಪ್ರದಾಯವಿರುದ್ಧವೆಂದು ನಿಶ್ಚಯಿಸಿ ವಿಚಾರಮಾಡದೆ ಪಿಂಡವನ್ನು ದರ್ಭೆಗಳ ಮೇಲೆ ಇಟ್ಟುಕೊಟ್ಟೆನು.

೨೨. ಎಲೈ ಭಾರತಶ್ರೇಷ್ಠನೇ, ಅನಂತರ ನನ್ನ ತಂದೆಯು ದರ್ಭೆಗಳ ಮೇಲೆ ಪಿಂಡವನ್ನು ಹಾಕಿದುದರಿಂದ ಸಂತುಷ್ಟನಾಗಿ ಮಧುರವಾದ ಮಾತಿನಿಂದ ನನ್ನನ್ನು ಕುರಿತು,

೨೩. ಎಲೈ ಪುರುಷಶ್ರೇಷ್ಠನೇ, ಧರ್ಮಸೂಕ್ಷ್ಮವನ್ನು ತಿಳಿದವನೂ, ಬುದ್ಧಿವಂತನೂ ಆದ ನಿನ್ನಂತಹ ಪುತ್ರನನ್ನು ಪಡೆದುದರಿಂದ ನಾನು ಸುಪುತ್ರವಂತನಾದೆನು. ನೀನು ನನ್ನನ್ನು ಉದ್ಧಾರಮಾಡಿದೆ.

ಪ್ರಮಾಣಂ ಯದ್ಧಿ ಕುರುತೇ ಧರ್ಮಾಚಾರೇಣ ಪಾರ್ಥಿವಃ ।
ಪ್ರಜಾಸ್ತದನುವರ್ತಂತೇ ಪ್ರಮಾಣಾಚರಿತಂ ಸದಾ ॥ ೨೪ ॥

ಶೃಣು ತ್ವಂ ಭಾರತಶ್ರೇಷ್ಠ ವೇದಧರ್ಮಾಂಶ್ಚ ಶಾಶ್ವತಾನ್ ।
ಪ್ರಮಾಣಂ ವೇದಧರ್ಮಸ್ಯ ಪುತ್ರ ನಿರ್ವರ್ತಿತಂ ತ್ವಯಾ ॥ ೨೫ ॥

ತಸ್ಮಾತ್ತವಾಹಂ ಸುಪ್ರೀತಃ ಪ್ರೀತ್ಯಾ ವರಮನುತ್ತಮಂ ।
ದದಾಮಿ ತ್ವಂ ಪ್ರತೀಕ್ಷಸ್ವ ತ್ರಿಷು ಲೋಕೇಷು ದುರ್ಲಭಂ ॥ ೨೬ ॥

ನ ತೇ ಪ್ರಭವಿತಾ ಮೃತ್ಯುರ್ಯಾವಜ್ಜೀವಿತುಮಿಚ್ಛಸಿ ।
ತ್ವತ್ತೋಽಭ್ಯನುಜ್ಞಾಂ ಸಂಪ್ರಾಪ್ಯ ಮೃತ್ಯುಃ ಪ್ರಭವಿತಾ ಪುನಃ ॥ ೨೭ ॥

ಕಿಂ ವಾ ತೇ ಪ್ರಾರ್ಥಿತಂ ಭೂಯೋ ದದಾಮಿ ವರಮುತ್ತಮಂ ।
ತದ್ಬ್ರೂಹಿ ಭಾರತಶ್ರೇಷ್ಠ ಯತ್ತೇ ಮನಸಿ ವರ್ತತೇ ॥ ೨೮ ॥

೨೪. ರಾಜನು ಧರ್ಮಾಚರಣೆಯನ್ನು ಮಾಡಿದರೆ ಪ್ರಜೆಗಳೂ ಸಹ ಅದನ್ನೇ ಪ್ರಮಾಣವೆಂದು ನಂಬಿ ಧರ್ಮಾಚರಣೆಯನ್ನು ಮಾಡುವರು. ಈ ವಿಷಯದಲ್ಲಿ "ಯದ್ಯದಾಚರತಿಶ್ರೇಷ್ಠಸ್ತತ್ತದೇವೇತರೇ ಜನಾಃ" ಎಂಬ ವಚನವೂ ಇರುವುದು.

೨೫-೨೬. ಎಲೈ ಭಾರತಶ್ರೇಷ್ಠನೇ, ಶಾಶ್ವತವಾದ ವೇದಧರ್ಮಗಳನ್ನು ಹೇಳುವೆನು ಕೇಳು. ವೇದೋಕ್ತಧರ್ಮವನ್ನೇ ಪ್ರಮಾಣವೆಂದು ತಿಳಿದು ಅದರಂತೆ ನೀನು ನಡೆಸಿರುವೆ. ಅದರಿಂದ ನಾನು ಸುಪ್ರೀತನಾಗಿರುವೆನು. ಆದುದರಿಂದ ನಿನಗೆ ಉತ್ತಮವಾದ ವರವನ್ನು ಕೊಡುವೆನು. ನಾನು ಕೊಡುವ ವರವು ಮೂರು ಲೋಕದವರಿಗೂ ದುರ್ಲಭವಾಗಿರುವುದು.

೨೭. ನೀನು ಎಲ್ಲಿಯವರೆಗೆ ಬದುಕಲು ಇಚ್ಛಿಸುವೆಯೋ ಅಲ್ಲಿಯವರೆಗೂ ಮೃತ್ಯುವು ನಿನ್ನನ್ನೇನೂ ಮಾಡಲಾರದು. ನಿನ್ನ ಅಪ್ಪಣೆಯನ್ನು ಪಡೆದು ನಿನಗಿಷ್ಟ ಬಂದಾಗ ಮೃತ್ಯುವು ನಿನಗೆ ಬರುವುದು. ಆದುದರಿಂದ ನೀನು ಇಚ್ಛಾಮರಣವುಳ್ಳವನಾಗುವೆ.

೨೮. ಎಲೈ ಭಾರತಶ್ರೇಷ್ಠನೇ, ನೀನು ಮತ್ತೇನನ್ನು ಅಪೇಕ್ಷಿಸುವೆ? ನಿನ್ನ ಮನಸ್ಸಿನಲ್ಲಿ ಏನನ್ನು ಕೇಳಬೇಕೆಂದಿರುವುದು? ಅದನ್ನೂ ತಿಳಿಸು. ಆ ಉತ್ತಮವಾದ ವರವನ್ನೂ ನಿನಗೆ ಕರುಣಿಸುವೆನು ಎಂದನು.

ಇತ್ಯುಕ್ತವತಿ ತಸ್ಮಿಂಸ್ತು ಅಭಿವಾದ್ಯ ಕೃತಾಂಜಲಿಃ ।
ಅದ್ಯೋಽಹಂ ಕೃತಕೃತ್ಯೋಽಹಂ ಪ್ರಸನ್ನೇ ತ್ವಯಿ ಮಾನದ ॥ ೨೯ ॥

ಪ್ರಶ್ನಂ ಪೃಚ್ಛಾಮಿ ವೈ ಕಿಂಚಿದ್ವ್ಯಾಖ್ಯೇಯಸ್ಸಭವತಾ ಸ್ವಯಂ ।
ಸ ಮಾಮುವಾಚ ತದ್ಬ್ರೂಹಿ ಯದೀಚ್ಛಸಿ ದದಾಮಿ ತೇ ।
ಇತ್ಯುಕ್ತೇನ ಮಯಾ ತತ್ರ ಪೃಷ್ಟಃ ಪ್ರೋವಾಚ ತಂ ನೃಪಃ ॥ ೩೦ ॥

॥ ಶಂತನುರುವಾಚ ॥

ಶೃಣು ತಾತ ಪ್ರವಕ್ಷ್ಯಾಮಿ ಪ್ರಶ್ನಂ ತೇಽಹಂ ಯಥಾರ್ಥತಃ ।
ಪಿತೃಕಲ್ಪಂ ಚ ನಿಖಿಲಂ ಮಾರ್ಕಂಡೇಯೇನ ಮೇ ಶ್ರುತಂ ॥ ೩೧ ॥

ಯತ್ತ್ವಂ ಪೃಚ್ಛಸಿ ಮಾಂ ತಾತ ತದೇವಾಹಂ ಮಹಾಮುನಿಂ ।
ಮಾರ್ಕಂಡೇಯಮಪೃಚ್ಛಂ ಹಿ ಸ ಮಾಂ ಪ್ರೋವಾಚ ಧರ್ಮವಿತ್ ॥ ೩೨ ॥

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ಮಯಾ ದೃಷ್ಟಂ ಕದಾಚಿತ್ಪಶ್ಯತಾ ದಿವಂ ।
ವಿಮಾನಂ ಮಹದಾಯಾಂತಮಂತರೇಣ ಗಿರೇಸ್ತದಾ ॥ ೩೩ ॥

೨೯-೩೦. ಈರೀತಿಯಾಗಿ ಪಿತೃವು ಹೇಳುತ್ತಿರಲು ಅಂಜಲಿಬದ್ಧದಾಗಿ–ನಾನು (ಭೀಷ್ಮನು) ಕೃತಾರ್ಥನಾಗಿರುವೆನು. ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ ನಿನ್ನನ್ನು ನಾನು ಒಂದು ಪ್ರಶ್ನೆಯನ್ನು ಕೇಳುವೆನು. ನೀನದಕ್ಕೆ ಪ್ರತ್ಯುತ್ತರವನ್ನು ಹೇಳಬೇಕು ಎನ್ನಲು, ಪಿತೃವು ನನ್ನನ್ನು ಕುರಿತು ನಿನಗೆ ಇಷ್ಟಬಂದಿದ್ದನ್ನು ಕೇಳು, ಹೇಳುವೆನು. ಎಂದು ಹೇಳಿ ನನ್ನ ಪ್ರಶ್ನೆಗೆ ಪ್ರತ್ಯುತ್ತರವಿತ್ತನು.

೩೧. ಎಲೈ ವತ್ಸನೇ, ನಿನ್ನ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳುವೆನು, ಕೇಳು. ಮಾರ್ಕಂಡೇಯ ಮುನಿಯು ನನಗೆ ಹೇಳಿದ ರೀತಿಯಲ್ಲಿ ಪಿತೃಕಲ್ಪವನ್ನೆಲ್ಲಾ ಹೇಳುವೆನು.

೩೨. ನೀನು ಯಾವ ವಿಷಯವಾಗಿ ನನ್ನನ್ನು ಪ್ರಶ್ನೆಮಾಡಿರುವೆಯೋ ಅದೇ ಪ್ರಶ್ನೆಯನ್ನು ನಾನು ಮಾರ್ಕಂಡೇಯ ಮುನಿಯನ್ನು ಕೇಳಿದೆನು. ಆಗ ಮಾರ್ಕಂಡೇಯ ಮುನಿಯು ನನಗೆ ಹೇಳಿದುದನ್ನೇ ಹೇಳುವೆನು.

೩೩-೩೫. ಮಾರ್ಕಂಡೇಯನು ಹೇಳುವನು:—ಎಲೈ ರಾಜನಾದ ಶಂತನುವೇ, ಒಂದಾನೊಂದುದಿನ ನಾನು ಪರ್ವತದ ಮೇಲುಭಾಗದಲ್ಲಿ ಬರುತ್ತಿರುವ ಒಂದು

ತಸ್ಮಿನ್ವಿಮಾನೇ ಪರ್ಯಂಕಸ್ಥಂ ಜ್ವಲಿತಾಂಗಾರವರ್ಚಸಂ ।
ಮಹಾತೇಜಃ ಪ್ರಜ್ವಲಂತಂ ನಿರ್ವಿಶೇಷಂ ಮನೋಹರಂ ॥ ೩೪ ॥

ಅಪಶ್ಯಂ ಚೈವ ತತ್ರಾಹಂ ಶಯಾನಂ ದೀಪ್ತತೇಜಸಂ ।
ಅಂಗುಷ್ಠಮಾತ್ರಂ ಪುರುಷಮಗ್ನಾವಗ್ನಿಮಿವಾಹಿತಂ ॥ ೩೫ ॥

ಸೋಽಹಂ ತಸ್ಮೈ ನಮಃ ಕೃತ್ವಾ ಪ್ರಣಮ್ಯ ಶಿರಸಾ ಪ್ರಭುಂ ।
ಅಪೃಚ್ಛಂ ಚೈವ ತಮಹಂ ವಿದ್ಯಾಮಸ್ತ್ವಾಂ ಕಥಂ ವಿಭೋ ॥ ೩೬ ॥

ಸ ಮಾಮುವಾಚ ಧರ್ಮಾತ್ಮಾ ತೇನ ತದ್ವಿದ್ಯತೇ ತಪಃ ।
ಯೇನ ತ್ವಂ ಬುಧ್ಯಸೇ ಮಾಂ ಹಿ ಮುನೇ ವೈ ಬ್ರಹ್ಮಣಸ್ಸುತಂ ॥ ೩೭ ॥

ಸನತ್ಕುಮಾರಮಿತಿ ಮಾಂ ವಿದ್ಧಿ ಕಿಂ ಕರವಾಣಿ ತೇ ।
ಯೋ ತ್ವನ್ಯೇ ಬ್ರಹ್ಮಣಃ ಪುತ್ರಾ ಕನೀಯಾಂಸಸ್ತು ತೇ ಮಮ ॥ ೩೮ ॥

ಭ್ರಾತರಸ್ಸಪ್ತ ದುರ್ಧರ್ಷಾ ಯೇಷಾಂ ವಂಶಾ ಪ್ರತಿಷ್ಠಿತಾಃ ।
ವಯಂ ತು ಯತಿಧರ್ಮಾಣಸ್ಸಂಯಮ್ಯಾತ್ಮಾನಮಾತ್ಮನಿ ॥ ೩೯ ॥

ವಿಮಾನವನ್ನು ನೋಡಿದೆನು. ಆ ವಿಮಾನದಲ್ಲಿ ಒಂದು ಅಂಗುಷ್ಠ ಪ್ರಮಾಣದಷ್ಟಿರುವ ಒಬ್ಬ ಮನುಷ್ಯನು ಮಲಗಿರುವುದನ್ನು ನೋಡಿದೆನು. ಆತನು ಉರಿಯುತ್ತಿರುವ ಅಗ್ನಿಯಂತೆ ಪ್ರಜ್ವಲಿಸುತ್ತಿದ್ದನು. ಮನೋಹರನಾಗಿದ್ದನು. ಮಹಾತೇಜಸ್ವಿಯಾಗಿ ಆಹಿತಾಗ್ನಿಯಂತೆ ಬೆಳಗುತ್ತಿದ್ದನು.

೩೬. ನಾನು ಆ ಪುರುಷನಿಗೆ ತಲೆಯನ್ನು ಬಾಗಿ ನಮಸ್ಕರಿಸಿ, ಓ ಪ್ರಭುವೇ, ನೀನು ಯಾರು? ಎಂಬುದಾಗಿ ಕೇಳಿದೆನು.

೩೭-೩೮. ಅವನು ನನ್ನನ್ನು ಕುರಿತು ಎಲೈ ಧರ್ಮಾತ್ಮಾ, ನನ್ನನ್ನು ತಿಳಿದುಕೊಳ್ಳುವಂತಹ ತಪಸ್ಸನ್ನು ನೀನು ಮಾಡಿಲ್ಲ. ನಾನು ಬ್ರಹ್ಮನ ಮಗನಾದ ಸನತ್ಕುಮಾರನು. ಬ್ರಹ್ಮನ ಮಕ್ಕಳಲ್ಲಿ ನಾನೇ ಕೊನೆಯವನು. ನನ್ನಿಂದ ನಿನಗೇನಾಗಬೇಕು ? ಹೇಳು.

೩೯-೪೦. ಶೂರರಾದ ಏಳುಜನ ಅಣ್ಣಂದಿರು ತಮ್ಮ ವಂಶವನ್ನು ಬೆಳಸಿಕೊಂಡು ಇರುವರು. ನಾನಾದರೋ ಯತಿಧರ್ಮವನ್ನವಲಂಬಿಸಿ ಜಿತೇಂದ್ರಿಯನಾಗಿ ಆತ್ಮಸಂಯಮಿಯಾಗಿರುವೆನು. ನಾನು ಹುಟ್ಟಿದ ಹಾಗೆಯೇ ಈಗಲೂ ಇರುವುದರಿಂದ

**ಯಥೋತ್ಪನ್ನಸ್ತಥೈವಾಹಂ ಕುಮಾರ ಇತಿ ವಿಶ್ರುತಃ ।**
**ತಸ್ಮಾತ್ಸನತ್ಕುಮಾರಂ ಮೇ ನಾಮೈತತ್ಕಥಿತಂ ಮುನೇ ॥ ೪೦ ॥**

**ಯದ್ಭಕ್ತ್ಯಾ ತೇ ತಪಶ್ಚೀರ್ಣಂ ಮಮ ದರ್ಶನಕಾಂಕ್ಷಯಾ ।**
**ಏಷ ದೃಷ್ಟೋಽಸ್ಮಿ ಭದ್ರಂ ತೇ ಕಂ ಕಾಮಂ ಕರವಾಣಿ ತೇ ॥ ೪೧ ॥**

**ಇತ್ಯುಕ್ತವಂತಂ ತಂ ಚಾಹಂ ಪ್ರಾವೋಚಂ ತಂ ಶೃಣು ಪ್ರಭೋ ।**
**ಪಿತೄಣಾಮಾದಿಸರ್ಗಂ ಚ ಕಥಯಸ್ವ ಯಥಾತಥಂ ॥ ೪೨ ॥**

**ಇತ್ಯುಕ್ತಸ್ಸ ತು ಮಾಂ ಪ್ರಾಹ ಶೃಣು ಸರ್ವಂ ಯಥಾತಥಂ ।**
**ವಚ್ಮಿ ತೇ ತತ್ತ್ವತಸ್ತಾತ ಪಿತೃಸರ್ಗಂ ಶುಭಾವಹಂ ॥ ೪೩ ॥**

**॥ ಸನತ್ಕುಮಾರ ಉವಾಚ ॥**

**ದೇವಾನ್ಪುರಾಸೃಜದ್ಬ್ರಹ್ಮಾ ಮಾಂ ಯಕ್ಷಧ್ವಂ ಸ ಚಾಹ ತಾನ್ ।**
**ಸಮುತ್ಸೃಜ್ಯ ತಮಾತ್ಮಾನಮಯಜಂಸ್ತೇ ಫಲಾರ್ಥಿನಃ ॥ ೪೪ ॥**

ನನಗೆ ಕುಮಾರನೆಂದು ಹೆಸರಾಯಿತು. ಎಲೈ ಮುನಿಯೇ, ಆದುದರಿಂದ ನನ್ನನ್ನು ಸನತ್ಕುಮಾರನೆಂದು ತಿಳಿ.

೪೧. ನನ್ನನ್ನು ನೋಡಬೇಕೆಂಬ ಆಸೆಯಿಂದ ನೀನು ತಪಸ್ಸುಮಾಡಿರುವೆ. ಆದುದರಿಂದ ನಾನು ನಿನಗೆ ಗೋಚರನಾಗಿರುವೆನು. ನಿನಗೆ ಶುಭವಾಗಲೀ. ನನ್ನಿಂದ ನಿನಗೆ ಯಾವ ಇಷ್ಟಾರ್ಥವು ನೆರವೇರಬೇಕು ಹೇಳು ಎಂದನು.

೪೨. ಈರೀತಿಯಾಗಿ ಸನತ್ಕುಮಾರನು ನನ್ನನ್ನು ಕೇಳಲು, ಆಗ ನಾನು ಎಲೈ ಸ್ವಾಮಿಯೇ, ಪಿತೃಗಳ ಆದಿಸೃಷ್ಟಿಯನ್ನು ನನಗೆ ತಿಳಿಸಬೇಕು ಎಂಬುದಾಗಿ ಕೇಳಿದೆನು.

೪೩. ನಾನು ಆರೀತಿಯಾಗಿ ಕೇಳಲು ಸನತ್ಕುಮಾರನು ನನ್ನನ್ನು ಕುರಿತು ಎಲೈ ವತ್ಸನೇ, ಪಿತೃಸೃಷ್ಟಿಯನ್ನು ನಿನಗೆ ಯಥಾರ್ಥವಾಗಿ ಹೇಳುವೆನು. ಅದನ್ನು ಕೇಳಿದರೆ ಶುಭವುಂಟಾಗುವುದು.

೪೪. ಬ್ರಹ್ಮನು ಮೊದಲು ದೇವತೆಗಳನ್ನು ಸೃಷ್ಟಿಮಾಡಿದನು. ಅನಂತರ ಆ ದೇವತೆಗಳನ್ನು ಕುರಿತು ನೀವು ನನ್ನನ್ನು ಪೂಜಿಸಿರಿ ಎಂಬುದಾಗಿ ಹೇಳಿದನು. ಆ ದೇವತೆಗಳಾದರೋ ಅವನನ್ನು ಬಿಟ್ಟು ಫಲಾಪೇಕ್ಷೆಯಿಂದ ಬೇರೆಯವರನ್ನು ಪೂಜಿಸಿದರು.

ತೇ ಶಪ್ತಾ ಬ್ರಹ್ಮಣಾ ಮೂಢಾ ನಷ್ಟಸಂಜ್ಞಾ ಭವಿಷ್ಯಥ ।
ತಸ್ಮಾತ್ಕಿಂಚಿದಜಾನಂತೋ ನಷ್ಟಸಂಜ್ಞಾ ಪಿತಾಮಹಂ ॥ ೪೫ ॥

ಪ್ರೋಚುಸ್ತಂ ಪ್ರಣತಾಸ್ಸರ್ವೇ ಕುರುಷ್ವಾನುಗ್ರಹಂ ಹಿ ನಃ ।
ಇತ್ಯುಕ್ತಾಸ್ತಾನುವಾಚೇದಂ ಪ್ರಾಯಶ್ಚಿತ್ತಾರ್ಥಮೇವ ಹಿ ॥ ೪೬ ॥

ಪುತ್ರಾನ್ ಸ್ವಾನ್ಪರಿಪೃಚ್ಛಧ್ವಂ ತತೋ ಜ್ಞಾನಮವಾಪ್ಸ್ಯಥ ।
ಇತ್ಯುಕ್ತಾ ನಷ್ಟಸಂಜ್ಞಾಸ್ತೇ ಪುತ್ರಾನ್ ಪಪ್ರಚ್ಛುರೋಜಸಾ ॥ ೪೭ ॥

ಪ್ರಾಯಶ್ಚಿತ್ತಾರ್ಥಮೇವಾಧಿಲಬ್ಧಸಂಜ್ಞಾ ದಿವೌಕಸಃ ।
ಗಮ್ಯತಾಂ ಪುತ್ರಕಾ ಏವಂ ಪುತ್ರೈರುಕ್ತಾಶ್ಚ ತೇಽನಘ ॥ ೪೮ ॥

ಅಭಿಶಪ್ತಾಸ್ತು ತೇ ದೇವಾಃ ಪುತ್ರಕಾಮೇನ ವೇಧಸಂ ।
ಪಪ್ರಚ್ಛುರುಕ್ತಾಃ ಪುತ್ರೈಸ್ತೇ ಗತಾಸ್ತೇ ಪುತ್ರಕಾ ಇತಿ ॥ ೪೯ ॥

೪೫. ಅದನ್ನು ನೋಡಿ ಬ್ರಹ್ಮನು, ತನ್ನ ಮಾತನ್ನು ಮೀರಿದುದರಿಂದ ದೇವತೆಗಳಿಗೆ ಎಲೈ ಮೂಢರಿರಾ, ನೀವು ಜ್ಞಾನಶೂನ್ಯರಾಗಿರಿ ಎಂಬುದಾಗಿ ಶಾಪವನ್ನು ಕೊಟ್ಟನು. ಆ ಶಾಪದಿಂದ ದೇವತೆಗಳ ಜ್ಞಾನವು ಹೋಗಿ ಯುಕ್ತಾಯುಕ್ತ ವಿವೇಚನೆಯಿಲ್ಲದೆ ಯಾವುದನ್ನೂ ತಿಳಿಯಲಸಮರ್ಥರಾದರು. ಬಳಿಕ ದೇವತೆಗಳು ಪಶ್ಚಾತ್ತಾಪಯುಕ್ತರಾಗಿ, ತಮಗೆ ಜ್ಞಾನವನ್ನು ಕೊಟ್ಟು ಅನುಗ್ರಹಿಸಬೇಕೆಂದು ಬೇಡಿಕೊಂಡರು.

೪೬-೪೭. ದೇವತೆಗಳು ಈರೀತಿಯಾಗಿ ಕೇಳಲು, ಅವರ ಪ್ರಾಯಶ್ಚಿತ್ತಕ್ಕೋಸ್ಕರವಾಗಿ ದೇವತೆಗಳನ್ನು ಕುರಿತು ಎಲೈ ದೇವತೆಗಳಿರಾ, ನಿಮ್ಮ ಪುತ್ರರನ್ನು ಈ ವಿಷಯವಾಗಿ ಕೇಳಿರಿ. ಅನಂತರ ನಿಮಗೆ ಜ್ಞಾನವುಂಟಾಗುವುದು, ಎಂಬುದಾಗಿ ಹೇಳಿದನು. ಅನಂತರ ದೇವತೆಗಳು ಪ್ರಾಯಶ್ಚಿತ್ತಕ್ಕೋಸ್ಕರ ಜಾಗ್ರತೆಯಾಗಿ ತಮ್ಮ ಪುತ್ರರನ್ನು ಕೇಳಿದರು.

೪೮-೪೯. ಆ ಪುತ್ರರು ದೇವತೆಗಳನ್ನು ಕುರಿತು, ಎಲೈ ಪುತ್ರರೇ, ಹೊರಡಿರಿ ಎಂಬುದಾಗಿ ಹೇಳಿದರು. ಶಪಿಸಲ್ಪಟ್ಟ ದೇವತೆಗಳೆಲ್ಲರೂ ಪುತ್ರರ ಮೇಲಿನ ಆಸೆಯಿಂದ ಬ್ರಹ್ಮನನ್ನು ಕುರಿತು ಪುತ್ರರು, ನೀವು ಹೊರಡಿರಿ ಎಂದು ಹೇಳಿ ಹೊರಟು ಹೋದರು ಎಂದು ಹೇಳಿದರು.

ತತಸ್ತಾನಬ್ರವೀದ್ದೇವೋ ದೇವಾನ್ಬ್ರಹ್ಮಾ ಸಸಂಶಯಾನ್ ।
ಶೃಣುಧ್ವಂ ನಿರ್ಜರಾಸ್ಸರ್ವೇ ಯೂಯಂ ನ ಬ್ರಹ್ಮವಾದಿನಃ ॥ ೫೦ ॥

ತಸ್ಮಾದ್ಯದುಕ್ತಂ ಯುಷ್ಮಾಕಂ ಪುತ್ರೈಸ್ತೈರ್ಜ್ಞಾನಿಸತ್ತಮೈಃ ।
ಮಂತವ್ಯಂ ಸಂಶಯಂ ತ್ಯಕ್ತ್ವಾ ತಥಾ ನ ಚ ತದನ್ಯಥಾ ॥ ೫೧ ॥

ದೇವಾಶ್ಚ ಪಿತರಶ್ಚೈವ ಯಜಧ್ವಂ ತ್ರಿದಿವೌಕಸಃ ।
ಪರಸ್ಪರಂ ಮಹಾಪ್ರೀತ್ಯಾ ಸರ್ವಕಾಮಫಲಪ್ರದಾಃ ॥ ೫೨ ॥

॥ ಸನತ್ಕುಮಾರ ಉವಾಚ ॥

ತತಸ್ತೇ ಛಿನ್ನಸಂದೇಹಾ ಪ್ರೀತಿಮಂತಃ ಪರಸ್ಪರಂ ।
ಬಭೂವುರ್ಮುನಿಶಾರ್ದೂಲ ಬ್ರಹ್ಮವಾಕ್ಯಾತ್ಸುಖಪ್ರದಾಃ ॥ ೫೩ ॥

ತತೋ ದೇವಾ ಹಿ ಪ್ರೋಚುಸ್ತಾನ್ಯದುಕ್ತಾಃ ಪುತ್ರಕಾ ವಯಂ ।
ತಸ್ಮಾದ್ಭವಂತಃ ಪಿತರೋ ಭವಿಷ್ಯಥ ನ ಸಂಶಯಃ ॥ ೫೪ ॥

೫೦-೫೧. ಅನಂತರ ಬ್ರಹ್ಮನು ಸಂಶಯಾವಿಷ್ಟರಾದ ಆ ದೇವತೆಗಳನ್ನು ಕುರಿತು ಎಲೈ ದೇವತೆಗಳಿರಾ, ಕೇಳಿರಿ. ನೀವು ಬ್ರಹ್ಮವಾದಿಗಳಲ್ಲ. ಆದುದರಿಂದಲೇ ಜ್ಞಾನಿಗಳಾದ ನಿಮ್ಮ ಪುತ್ರರು ಹೇಳಿದ ವಿಷಯವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಈ ವಿಷಯದಲ್ಲಿ ಸಂಶಯವನ್ನಿಡಬೇಡಿರಿ.

೫೨. ಎಲೈ ದೇವತೆಗಳಿರಾ, ದೇವತೆಗಳೂ ಪಿತೃಗಳೂ ಪರಸ್ಪರವಾಗಿ ಸೇರಿ ಮಹಾಪ್ರೀತಿಯಿಂದ ಪೂಜಿಸಿರಿ. ಆರೀತಿ ಮಾಡಿದರೆ ನಿಮ್ಮ ಇಷ್ಟಾರ್ಥಗಳೆಲ್ಲಾ ನೆರವೇರುವುದು ಎಂದನು.

೫೩. ಅನಂತರ ದೇವತೆಗಳು ಸಂಶಯವನ್ನು ಬಿಟ್ಟು ಬ್ರಹ್ಮನ ವಾಕ್ಯದಂತೆ ಪರಸ್ಪರವಾಗಿ ಪ್ರೀತಿಯುಕ್ತರಾಗಿ ಸುಖದಿಂದಿದ್ದರು.

೫೪. ಅನಂತರ ದೇವತೆಗಳು ಪುತ್ರರನ್ನು ಕುರಿತು, ನೀವು ನಮ್ಮನ್ನು ಪುತ್ರರೆಂದು ಸಂಬೋಧಿಸಿದ್ದರಿಂದ ನೀವೇ ಪಿತೃಗಳಾಗುವಿರಿ. ಈ ವಿಷಯದಲ್ಲಿ ಸಂಶಯವಿಲ್ಲ.

ಪಿತೃಶ್ರಾದ್ಧೇ ಕ್ರಿಯಾಂ ಕಶ್ಚಿತ್ಕರಿಷ್ಯತಿ ನ ಸಂಶಯಃ ।
ಶ್ರಾದ್ಧೈರಾಪ್ಯಾಯಿತಸ್ಸೋಮೋ ಲೋಕಾನಾಪ್ಯಾಯಯಿಷ್ಯತಿ ॥ ೫೫ ॥

ಸಮುದ್ರಂ ಪರ್ವತವನಂ ಜಂಗಮಾಜಂಗಮೈರ್ವೃತಂ ।
ಶ್ರಾದ್ಧಾನಿ ಪುಷ್ಟಿಕಾಮೈಶ್ಚ ಯೇ ಕರಿಷ್ಯಂತಿ ಮಾನವಾಃ ॥ ೫೬ ॥

ತೇಭ್ಯಃ ಪುಷ್ಟಿಪ್ರದಾಶ್ಚೈವ ಪಿತರಃ ಪ್ರೀಣಿತಾಸ್ಸದಾ ।
ಶ್ರಾದ್ಧೇ ಯೇ ಚ ಪ್ರದಾಸ್ಯಂತಿ ತ್ರೀನ್ಪಿಂಡಾನ್ನಾಮಗೋತ್ರತಃ ॥ ೫೭ ॥

ಸರ್ವತ್ರ ವರ್ತಮಾನಾಸ್ತೇ ಪಿತರಃ ಪ್ರಪಿತಾಮಹಾಃ ।
ಭಾವಯಿಷ್ಯಂತಿ ಸತತಂ ಶ್ರಾದ್ಧದಾನೇನ ತರ್ಪಿತಾಃ ॥ ೫೮ ॥

ಇತಿ ತದ್ವಚನಂ ಸತ್ಯಂ ಭವತ್ವಥ ದಿವೌಕಸಃ ।
ಪುತ್ರಾಶ್ಚ ಪಿತರಶ್ಚೈವ ವಯಂ ಸರ್ವೇ ಪರಸ್ಪರಂ ॥ ೫೯ ॥

೫೫. ಪಿತೃವಿನ ಶ್ರಾದ್ಧಕ್ರಿಯೆಯನ್ನು ಯಾವನಾದರೂ ಮಾಡಿಯೇ ಮಾಡುವನು. ಇದರಲ್ಲಿ ಸಂಶಯವಿಲ್ಲ. ಶ್ರಾದ್ಧಗಳಿಂದ ಸೋಮನನ್ನು ಸಂತೋಷಗೊಳಿಸಿದರೆ ಆ ಸೋಮನು ಸಮುದ್ರ, ವನ, ಚರಾಚರಪ್ರಾಣಿಗಳು ಇವುಗಳಿಂದ ಕೂಡಿರುವ ಲೋಕಗಳನ್ನೂ ಸಂತೋಷಗೊಳಿಸುವನು.

೫೬-೫೮. ಪುಷ್ಟಿಯನ್ನಪೇಕ್ಷಿಸಿ ಯಾರು ಪಿತೃಗಳಿಗೆ ಶ್ರಾದ್ಧಮಾಡುವರೋ ಅವರಿಗೆ ಸಂತುಷ್ಟರಾದ ಪಿತೃಗಳು ಪುಷ್ಟಿಯನ್ನುಂಟುಮಾಡುವರು ಯಾರು ಶ್ರಾದ್ಧ ಸಮಯದಲ್ಲಿ ತನ್ನ ಮೂರು ತಲೆಯವರಿಗೆ (ಪಿತೃ, ಪಿತಾಮಹ, ಪ್ರಪಿತಾಮಹ) ನಾಮಗೋತ್ರಗಳನ್ನುಚ್ಚರಿಸುತ್ತಾ ಮೂರು ಪಿಂಡಗಳನ್ನು ಕೊಡುವರೋ ಅವರಿಗೆ ಸರ್ವತ್ರ ವ್ಯಾಪ್ತರಾದ ಅವರ ಪಿತೃ, ಪಿತಾಮಹ, ಪ್ರಪಿತಾಮಹರು ಶ್ರಾದ್ಧದಿಂದ ಸಂತೋಷಗೊಂಡು ಶ್ರಾದ್ಧಕರ್ತನಿಗೆ ಒಳ್ಳೆಯದಾಗಲೆಂದು ಆಶಿಸುವರು.

೫೯-೬೦. ಈರೀತಿಯಾಗಿ ಪಿತೃಗಳ ಮಾತು ಸತ್ಯವಾಗುವುದು. ಪುತ್ರರಾದ ನಾವೂ, ಪಿತೃಗಳೂ ಅನ್ಯೋನ್ಯವಾಗಿರುವೆವು. ಈರೀತಿಯಾಗಿ ಪಿತೃಗಳೂ, ದೇವತೆ

**ಏವಂ ತೇ ಪಿತರೋ ದೇವಾ ಧರ್ಮತಃ ಪುತ್ರತಾಂ ಗತಾಃ ।**
**ಅನ್ಯೋನ್ಯಂ ಪಿತರೋ ವೈ ತೇ ಪ್ರಥಿತಾಃ ಕ್ಷಿತಿಮಂಡಲೇ ॥ ೬೦ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಶ್ರಾದ್ಧಕಲ್ಪೇ ಪಿತೃಪ್ರಭಾವವರ್ಣನಂ ನಾಮ ಚತ್ವಾರಿಂಶೋಽಧ್ಯಾಯಃ**



ಗಳೂ ಧರ್ಮದಿಂದ ಪರಸ್ಪರ ಪುತ್ರಭಾವವನ್ನು ಹೊಂದಿ ಭೂಮಂಡಲದಲ್ಲಿ ಹೆಸರುವಾಸಿಯಾದರು.

ಇಲ್ಲಿಗೆ ಶ್ರೀ ಶಿವಪುರಾಣದ ಉಮಾಸಂಹಿತೆಯಲ್ಲಿ ಶ್ರಾದ್ಧಕಲ್ಪದಲ್ಲಿ ಪಿತೃಪ್ರಭಾವ ವರ್ಣನವೆಂಬ ನಲವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಏಕಚತ್ವಾರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಸಪ್ತ ತೇ ತಪತಾಂ ಶ್ರೇಷ್ಠ ಸ್ವರ್ಗೇ ಪಿತೃಗಣಾಃ ಸ್ಮೃತಾಃ ।
ಚತ್ವಾರೋ ಮೂರ್ತಿಮಂತೋ ವೈ ತ್ರಯಶ್ಚೈವ ಹ್ಯಮೂರ್ತಯಃ ॥ ೧ ॥

ತಾನ್ಯಜಂತೇ ದೇವಗಣಾ ಆದ್ಯಾ ವಿಪ್ರಾದಯಸ್ತಥಾ ।
ಆಪ್ಯಾಯಯಂತಿ ತೇ ಪೂರ್ವಂ ಸೋಮಂ ಯೋಗಬಲೇನ ವೈ ॥ ೨ ॥

## ನಲವತ್ತೊಂದನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ಎಲೈ ತಾಪಸಶ್ರೇಷ್ಠನೇ, ಸ್ವರ್ಗದಲ್ಲಿ ಒಟ್ಟು ಏಳುಜನ ಪಿತೃಗಣಗಳಿರುವರು. ಅವರಲ್ಲಿ ನಾಲ್ಕುಜನ ಶರೀರಧಾರಿಗಳು. ಮೂರು ಜನರು ಶರೀರವಿಲ್ಲದವರು.

೨. ಮೊದಲನೆಯ ನಾಲ್ಕು ಗಣದವರನ್ನು ಬ್ರಾಹ್ಮಣಾದಿಗಳೂ ಮತ್ತು ದೇವತೆಗಳೂ ಪೂಜಿಸುವರು. ಮೊದಲು ಅವರು ತಮ್ಮ ಯೋಗಬಲದಿಂದ ಸೋಮ ನನ್ನು ಸಂತೋಷಗೊಳಿಸುವರು. ಆದುದರಿಂದ ಶ್ರಾದ್ಧದಲ್ಲಿ ಯೋಗಿಗಳನ್ನು ವಿಶೇಷ ವಾಗಿ ಆಹ್ವಾನಿಸಿ ಪೂಜಿಸಬೇಕು.

ತಸ್ಮಾಚ್ಛ್ರಾದ್ಧಾನಿ ದೇಯಾನಿ ಯೋಗಿನಾಂ ತು ವಿಶೇಷತಃ ।
ಸರ್ವೇಷಾಂ ರಾಜತಂ ಪಾತ್ರಮಥವಾ ರಜತಾನ್ವಿತಂ ॥ ೩ ॥

ದತ್ತಂ ಸ್ವಧಾ ಪುರೋಧಾಯ ಶ್ರಾದ್ಧೇ ಪ್ರೀಣಾತಿ ವೈ ಪಿತೄನ್ ।
ವಹ್ನೇರಾಪ್ಯಾಯನಂ ಕೃತ್ವಾ ಸೋಮಸ್ಯ ತು ಯಮಸ್ಯ ವೈ ॥ ೪ ॥

ಉದಗಾಯನಮಪ್ಯಗ್ನಾವಗ್ನ್ಯಭಾವೇಽಪ್ಸು ವಾ ಪುನಃ ।
ಪಿತೄನ್ ಪ್ರೀಣಾತಿ ಯೋ ಭಕ್ತ್ಯಾ ಪಿತರಃ ಪ್ರೀಣಯಂತಿ ತಂ ॥ ೫ ॥

ಯಚ್ಛಂತಿ ಪಿತರಃ ಪುಷ್ಟಿಂ ಪ್ರಜಾಶ್ಚ ವಿಪುಲಾಸ್ತಥಾ ।
ಸ್ವರ್ಗಮಾರೋಗ್ಯವೃದ್ಧಿಂ ಚ ಯದನ್ಯದಪಿ ಚೇಪ್ಸಿತಂ ॥ ೬ ॥

ದೇವಕಾರ್ಯಾದಪಿ ಮುನೇ ಪಿತೃಕಾರ್ಯಂ ವಿಶಿಷ್ಯತೇ ।
ಪಿತೃಭಕ್ತೋಽಸಿ ವಿಪ್ರರ್ಷೇ ತೇನ ತ್ವಮಜರಾಮರಃ ॥ ೭ ॥

ನ ಯೋಗೇನ ಗತಿಸ್ಸಾ ತು ಪಿತೃಭಕ್ತಸ್ಯ ಯಾ ಮುನೇ ।
ಪಿತೃಭಕ್ತಿರ್ವಿಶೇಷೇಣ ತಸ್ಮಾತ್ಕಾರ್ಯಾ ಮಹಾಮುನೇ ॥ ೮ ॥

---

೩-೫. ಎಲ್ಲರಿಗೂ ಬೆಳ್ಳಿಯ ಪಾತ್ರೆ (ತಟ್ಟೆ) ಯಲ್ಲಾಗಲೀ ಅಥವಾ ಬೆಳ್ಳಿಯನ್ನು ಸೇರಿಸಿರುವ ಪಾತ್ರೆಗಳಲ್ಲಾಗಲಿ ಬಡಿಸಬೇಕು. ಶ್ರಾದ್ಧದಲ್ಲಿ ಪಿತೃಗಳನ್ನುದ್ದೇಶಿಸಿ ಸ್ವಧಾ ಎಂದು ಉಚ್ಚರಿಸಿ ಅಗ್ನಿಯಲ್ಲಿ ಹೋಮಮಾಡಬೇಕು. ಸೋಮನಿಗೂ, ಯಮನಿಗೂ ಈರೀತಿ ಹವಿರ್ಭಾಗಗಳನ್ನು ಹೋಮಮಾಡಬೇಕು. ಅಗ್ನಿಯಿಲ್ಲದಿದ್ದರೆ ಜಲದಲ್ಲಿ ಮಾಡಬಹುದು. ಈರೀತಿಯಾಗಿ ಯಾರು ಪಿತೃಗಳನ್ನು ತೃಪ್ತಿಪಡಿಸುವರೋ ಅವರನ್ನು ಪಿತೃಗಳು ಸಂತೋಷಪಡಿಸುವರು.

೬. ಪಿತೃಗಳು ಪುಷ್ಟಿಯನ್ನೂ, ಪ್ರಜೆಗಳನ್ನೂ, ಸ್ವರ್ಗವನ್ನೂ, ಆರೋಗ್ಯವನ್ನೂ, ವೃದ್ಧಿಯನ್ನೂ ಮತ್ತು ಅವರಿಗೆ ಇಷ್ಟವಾದುದೆಲ್ಲವನ್ನೂ ಕೊಡುವರು.

೭. ಎಲೈ ಮುನಿಯೇ, ದೇವಕಾರ್ಯಕ್ಕಿಂತ ಪಿತೃಕಾರ್ಯವು ಶ್ರೇಷ್ಠವಾದುದು. ನೀನು ಪಿತೃಭಕ್ತನು. ಆದುದರಿಂದ ನೀನು ಜರಾಮರಣರಹಿತನಾಗಿರುವೆ.

೮. ಪಿತೃಭಕ್ತಿಯಿಂದ ಯಾವ ಗತಿಯುಂಟಾಗುವುದೋ ಅಂತಹ ಗತಿಯು ಯೋಗದಿಂದಲೂ ಬರುವುದಿಲ್ಲವು. ಆದುದರಿಂದ ಎಲೈ ಮಹಾಮುನಿಯೇ, ಪಿತೃಭಕ್ತಿಯನ್ನು ವಿಶೇಷವಾಗಿ ಮಾಡಬೇಕು.

॥ ಮಾರ್ಕಂಡೇಯ ಉವಾಚ ॥

ಏವಮುಕ್ತ್ವಾಶು ದೇವೇಶೋ ದೇವಾನಾಮಪಿ ದುರ್ಲಭಂ ।
ಚಕ್ಷುರ್ದತ್ವಾ ಸವಿಜ್ಞಾನಂ ಜಗಾಮ ಯೌಗಿಕೀಂ ಗತಿಂ ॥ ೯ ॥

ಶೃಣು ಭೀಷ್ಮ ಪುರಾ ಭೂಯೋ ಭಾರದ್ವಾಜಾತ್ಮಜಾ ದ್ವಿಜಾಃ ।
ಯೋಗಧರ್ಮಮನುಪ್ರಾಪ್ಯ ಭ್ರಷ್ಟಾ ದುಶ್ಚರಿತೇನ ವೈ ॥ ೧೦ ॥

ವಾಗ್ದುಷ್ಟಃ ಕ್ರೋಧನೋ ಹಿಂಸ್ರಃ ಪಿಶುನಃ ಕವಿರೇವ ಚ ।
ಸ್ವಸೃಷಃ ಪಿತೃವರ್ತೀ ಚ ನಾಮಭಿಃ ಕರ್ಮಭಿಸ್ತಥಾ ॥ ೧೧ ॥

ಕೌಶಿಕಸ್ಯ ಸುತಾಸ್ತಾತ ಶಿಷ್ಯಾ ಗರ್ಗಸ್ಯ ಚಾಭವನ್ ।
ಪಿತರ್ಯುಪರತೇ ಸರ್ವೇ ಪ್ರವಸಂತಸ್ತದಾಭವನ್ ॥ ೧೨ ॥

೯. ಮಾರ್ಕಂಡೇಯನು ಹೇಳುವನು :—ಈರೀತಿಯಾಗಿ ಹೇಳಿ ಸನತ್ಕುಮಾರನು ದೇವತೆಗಳಿಗೂ ದುರ್ಲಭವಾಗಿರುವ ವಿಜ್ಞಾನವೆಂಬ ಕಣ್ಣನ್ನು ಕೊಟ್ಟು ಯೋಗಸಿದ್ಧವಾದ ಗತಿಯನ್ನು ಹೊಂದಿದನು.

೧೦. ಎಲೈ ಭೀಷ್ಮನೇ, ಕೇಳು. ಪೂರ್ವದಲ್ಲಿ ಭಾರದ್ವಾಜನ (ಕೌಶಿಕ) ಮಕ್ಕಳಾದ ಬ್ರಾಹ್ಮಣರು ಯೋಗಧರ್ಮದಲ್ಲಾಸಕ್ತರಾಗಿದ್ದರೂ ತಮ್ಮ ಕೆಟ್ಟನಡತೆಯಿಂದ ಭ್ರಷ್ಟರಾದರು.

೧೧. ವಾಗ್ದುಷ್ಟ, ಕ್ರೋಧನ, ಹಿಂಸ್ರ, ಪಿಶುನ, ಕವಿ, ಸ್ವಸೃಷ, ಪಿತೃವರ್ತೀ ಇವರು ತಮ್ಮ ತಮ್ಮ ಹೆಸರಿಗೆ ತಕ್ಕಂತೆ ಕೆಲಸಗಳನ್ನು ಮಾಡುತ್ತಿದ್ದರು. ವಾಗ್ದುಷ್ಟನು ದುಷ್ಟವಾದ ಮಾತುಗಳನ್ನೇ ಆಡುತ್ತಿದ್ದನು. ಕ್ರೋಧನು ಯಾವಾಗಲೂ ಕೋಪಿಸಿಕೊಂಡೇ ಇರುತ್ತಿದ್ದನು. ಹಿಂಸ್ರನು ಯಾವಾಗಲೂ ಇತರರನ್ನು ಹಿಂಸೆಮಾಡುತ್ತಿದ್ದನು. ಪಿಶುನನು ಯಾವಾಗಲೂ ಚಾಡಿಕೋರನಾಗಿದ್ದನು.

೧೨. ಎಲೈ ವತ್ಸನೇ, ಇವರೆಲ್ಲರೂ ವಿಶ್ವಾಮಿತ್ರನ ಮಕ್ಕಳಾಗಿಯೂ ಗರ್ಗನ ಶಿಷ್ಯರಾಗಿಯೂ ಇದ್ದರು. ತಂದೆಯಾದ ವಿಶ್ವಾಮಿತ್ರನು ಮೃತನಾಗಲು ಸುಮ್ಮನೆ ಅಲ್ಲಲ್ಲಿ ತಿರುಗಾಡುತ್ತಾ ಇದ್ದರು.

ವಿನಿಯೋಗಾದ್ಗುರೋಸ್ತಸ್ಯ ಗಾಂ ದೋಗ್ಧ್ರೀಂ ಸಮಕಾಲಯನ್ ।
ಸಮಾನವತ್ಸಾಂ ಕಪಿಲಾಂ ಸರ್ವೇನ್ಯಾಯಾಗತಾಸ್ತದಾ ॥ ೧೩ ॥

ತೇಷಾಂ ಪಥಿ ಕ್ಷುಧಾರ್ತಾನಾಂ ಬಾಲ್ಯಾನ್ಮೋಹಾಚ್ಚ ಭಾರತ ।
ಕ್ರೂರಾ ಬುದ್ಧಿಸ್ಸಮುತ್ಪನ್ನಾ ತಾಂ ಗಾಂ ವೈ ಹಿಂಸಿತುಂ ತದಾ ॥ ೧೪ ॥

ತಾಂ ಕವಿಸ್ಸ್ವಸೃಪಶ್ಚೈವ ಯಾಚೇತೇ ನೈತಿ ವೈ ತದಾ ।
ನ ಚಾಶಕ್ಯಾಸ್ತು ತಾಭ್ಯಾಂ ನಾ ತದಾ ವಾರಯಿತುಂ ನಿಜಾಃ ॥ ೧೫ ॥

ಪಿತೃವರ್ತೀ ತು ಯಸ್ತೇಷಾಂ ನಿತ್ಯಂ ಶ್ರಾದ್ಧಾಹ್ನಿಕೋ ದ್ವಿಜಃ ।
ಸ ಸರ್ವಾನಬ್ರವೀತ್ಕೋಪಾತ್ಪಿತೃಭಕ್ತಿಸಮನ್ವಿತಃ ॥ ೧೬ ॥

ಯದ್ಯಶಕ್ಯಂ ಪ್ರಕರ್ತವ್ಯಂ ಪಿತ್ರ್ಯಾನುದ್ದಿಶ್ಯ ಸಾಧ್ಯತಾಂ ।
ಪ್ರಕುರ್ವಂತೋ ಹಿ ಶ್ರಾದ್ಧಂ ತು ಸರ್ವ ಏವ ಸಮಾಹಿತಾಃ ॥ ೧೭ ॥

೧೩-೧೪. ಒಂದಾನೊಂದುದಿನ ಅವರೆಲ್ಲರೂ ತಮ್ಮ ಗುರುಗಳ ಮಾತಿನಂತೆ ಹಾಲನ್ನು ಕೊಡುತ್ತಿದ್ದ ತನ್ನಂತೆಯೇ ಕರುವನ್ನುಳ್ಳ ಕಪಿಲವರ್ಣದ (ಬೂದುಬಣ್ಣದ) ಹಸುವೊಂದನ್ನು ಬೇರೇಕಡೆಗೆ ಒಯ್ಯುತ್ತಿದ್ದರು. ಅದರ ಕರುವೂ ಕಪಿಲಬಣ್ಣದ್ದಾಗಿಯೇ ಇತ್ತು. ಮಾರ್ಗಮಧ್ಯದಲ್ಲಿ ಅವರಿಗೆ ಹಸುವನ್ನು ಕೊಂದು ತಿನ್ನಬೇಕೆಂಬ ಕೆಟ್ಟಬುದ್ಧಿಯು ಹುಟ್ಟಿತು. ಕಾರಣವೇನೆಂದರೆ ಅವರು ತುಂಬಾ ಹಸಿದಿದ್ದರು. ಇನ್ನೂ ಚಿಕ್ಕವರಾದ್ದರಿಂದ ಅವರಿಗೆ ಪಾಪದ ಭೀತಿಯು ಅಷ್ಟಾಗಿ ಇರಲಿಲ್ಲ.

೧೫. ಆ ಸಮಯದಲ್ಲಿ ಕವಿ ಎಂಬುವನೂ, ಸ್ವಸೃಪವೂ ಆರೀತಿ ಮಾಡಬಾರದೆಂದು ಎಷ್ಟು ಹೇಳಿದರೂ, ಅವರ ಮಾತನ್ನು ಇತರರು ಕೇಳಲಿಲ್ಲ.

೧೬-೧೭. ಅವರಲ್ಲಿ ನಿತ್ಯವೂ ಶ್ರಾದ್ಧ, ಆಹ್ನೀಕ ಮುಂತಾದ ಕರ್ಮಗಳನ್ನು ಮಾಡುತ್ತಿದ್ದ ಪಿತೃವರ್ತೀ ಎಂಬುವನು ಅವರು ಮಾಡುವ ಕೆಲಸಕ್ಕೆ ತುಂಬಾ ಕೋಪಗೊಂಡು ಅವರನ್ನು ಕುರಿತು, 'ಅಸಾಧ್ಯವಾದ ಕೆಲಸವನ್ನೂ ಕೂಡ ಪಿತೃಗಳನ್ನುದ್ದೇಶಿಸಿ ಮಾಡಬೇಕು. ಎಲ್ಲರೂ ಒಂದೇ ಮನಸ್ಸಿನಿಂದ ಪಿತೃಶ್ರಾದ್ಧವನ್ನು ಮಾಡಿರಿ. ಆ ಹಸುವನ್ನು ಕೊಂದು ಪಿತೃಗಳಿಗೆ ಸಮರ್ಪಿಸಿ ಬಳಿಕ ಅದನ್ನು ನೀವು ಉಪಯೋಗಿ

ಏವಮೇಷಾ ಚ ಗೌರ್ಧರ್ಮಂ ಪ್ರಾಪ್ಸ್ಯತೇ ನಾತ್ರ ಸಂಶಯಃ ।
ಪಿತೄನಭ್ಯರ್ಚ್ಯ ಧರ್ಮೇಣ ನಾಧರ್ಮೋ ನೋ ಭವಿಷ್ಯತಿ ॥ ೧೮ ॥

ಏವಮುಕ್ತಾಶ್ಚ ತೇ ಸರ್ವೇ ಪ್ರೋಕ್ಷಯಿತ್ವಾ ಚ ಗಾಂ ತದಾ ।
ಪಿತೃಭ್ಯಃ ಕಲ್ಪಯಿತ್ವಾ ತು ಹ್ಯುಪಾಯುಂಜತ ಭಾರತ ॥ ೧೯ ॥

ಉಪಯುಜ್ಯ ಚ ಗಾಂ ಸರ್ವೇ ಗುರೋಸ್ತಸ್ಯ ನ್ಯವೇದಯನ್ ।
ಶಾರ್ದೂಲೇನ ಹತಾ ಧೇನುರ್ವತ್ಸೋ ವೈ ಗೃಹ್ಯತಾಮಿತಿ ॥ ೨೦ ॥

ಆರ್ತವತ್ಸಂ ತು ತಂ ವತ್ಸಂ ಪ್ರತಿಜಗ್ರಾಹ ವೈ ದ್ವಿಜಃ ।
ಮಿಥ್ಯೋಪಚಾರತಃ ಪಾಪಮಭೂತ್ತೇಷಾಂ ಚ ಗೋಘ್ನತಾಂ ॥ ೨೧ ॥

ತತಃ ಕಾಲೇನ ಕಿಯತಾ ಕಾಲಧರ್ಮಮುಪಾಗತಾಃ ।
ತೇ ಸಪ್ತ ಭ್ರಾತರಸ್ತಾತ ಬಭೂವುಸ್ತ್ವಾಯುಷಃ ಕ್ಷಯೇ ॥ ೨೨ ॥

ಸಿದ್ದೇ ಆದರೆ ಅದರಿಂದ ನಿಮಗೆ ಧರ್ಮವುಂಟಾಗುವುದೇ ಹೊರತು ನಿಮಗೆ ಅಧರ್ಮವುಂಟಾಗಲಾರದು' ಎಂಬುದಾಗಿ ಹೇಳಿದನು.

೧೯. ಪಿತೃವರ್ತಿಯು ಹೇಳಿದ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಆ ಹಸುವನ್ನು ಚೆನ್ನಾಗಿ ತೊಳೆದು ಪಿತೃಗಳನ್ನುದ್ದೇಶಿಸಿ ಆ ಹಸುವನ್ನು ಸಮರ್ಪಿಸಿ, ಅನಂತರ ತಮ್ಮ ಕಾರ್ಯಸಾಧನೆಮಾಡಿಕೊಂಡರು.

೨೦. ಅವರೆಲ್ಲರೂ ಹಸುವನ್ನು ಉಪಯೋಗಿಸಿಕೊಂಡನಂತರ ತಮ್ಮ ಗುರುಗಳ ಸಮೀಪಕ್ಕೆ ಹೋಗಿ ಹಸುವನ್ನು ಹುಲಿಯು ಕೊಂದುಹಾಕಿತು. ಈ ಕರುವನ್ನು ಸ್ವೀಕರಿಸಿರಿ ಎಂದು ಹೇಳಿದರು.

೨೧. ಅನಂತರ ಆ ಬ್ರಾಹ್ಮಣನು ದುಃಖದಿಂದ ಕೂಗುತ್ತಿರುವ ಆ ಕರುವನ್ನು ಸ್ವೀಕರಿಸಿದನು. ಹಸುವನ್ನು ಕೊಂದು ಸುಳ್ಳು ಹೇಳಿದುದರಿಂದ ಇವರಿಗೆ ಗೋಹತ್ಯಾ ಪಾಪವುಂಟಾಯಿತು.

೨೨. ಹೀಗೇ ಕಾಲವು ಕಳೆಯಿತು. ಆ ಏಳುಜನ ಸಹೋದರರೂ ತಮ್ಮ ಆಯುಸ್ಸು ಮುಗಿಯಲು ಸತ್ತುಹೋದರು.

ತೇ ವೈ ಕ್ರೂರತಯಾ ಹೈಂಸ್ರ್ಯಾತ್ಸ್ವನಾರ್ಯತ್ವಾದ್ಗುರೋಸ್ತಥಾ ।
ಉಗ್ರಹಿಂಸಾವಿಹಾರಾಶ್ಚ ಜಾತಾಸ್ಸಪ್ತ ಸಹೋದರಾಃ ॥ ೨೩ ॥

ಲುಬ್ಧಕಸ್ಯ ಸುತಾಸ್ತಾವದ್ಬಲವಂತೋ ಮನಸ್ವಿನಃ ।
ಜಾತಾ ವ್ಯಾಧಾ ದಶಾರ್ಣೇಷು ಸಪ್ತ ಧರ್ಮವಿಚಕ್ಷಣಾಃ ॥ ೨೪ ॥

ಸ್ವಧರ್ಮನಿರತಾಃ ಸರ್ವೇ ಮೃಗಾ ಮೋಹವಿವರ್ಜಿತಾಃ ।
ಆಸನ್ನುದ್ವೇಗಸಂವಿಗ್ನಾ ರಮ್ಯೇ ಕಾಲಂಜರೇ ಗಿರೌ ॥ ೨೫ ॥

ತನೋರ್ವಾರ್ಥಮನುಧ್ಯಾಯ ಜ್ಞಾನಂ ಮರಣಸಂಭವಂ ।
ಆಸನ್ವನಚರಾಃ ಕ್ಷಾಂತಾ ನಿರ್ದ್ವಂದ್ವಾ ನಿಷ್ಪರಿಗ್ರಹಾಃ ॥ ೨೬ ॥

ತೇ ಸರ್ವೇ ಶುಭಕರ್ಮಾಣಸ್ಸದ್ಧರ್ಮಾಣೋ ವನೇಚರಾಃ ।
ವಿಧರ್ಮಾಚರಣೈರ್ಹೀನಾ ಜಾತಿಸ್ಮರಣಸಿದ್ಧಯಃ ॥ ೨೭ ॥

೨೩. ತಮ್ಮ ಕ್ರೌರ್ಯದಿಂದಲೂ, ಹಿಂಸಾಕರ್ಮದಿಂದಲೂ, ತಮ್ಮ ಗುರುವಿಗೆ ಮೋಸಮಾಡಿದ್ದರಿಂದಲೂ ಆ ಏಳುಜನ ಸಹೋದರರು ಪ್ರಾಣಿಹಿಂಸಕರಾದ ಬೇಡರ ಕುಲದಲ್ಲಿ ಜನಿಸಿದರು.

೨೪. ದಶಾರ್ಣವೆಂಬ ದೇಶದಲ್ಲಿ ಒಬ್ಬ ಬೇಟೆಗಾರನಿದ್ದನು. ಇವರು ಅವನಿಗೆ ಮಕ್ಕಳಾಗಿ ಹುಟ್ಟಿದರು. ಇವರೆಲ್ಲರೂ ಶೂರರಾಗಿಯೂ, ತಮ್ಮ ಇಚ್ಛೆಯಂತೆ ನಡೆಯುವವರಾಗಿಯೂ, ಧರ್ಮವಿಚಕ್ಷಣರಾಗಿಯೂ ಇದ್ದರು.

೨೫. ಆ ಏಳುಜನರೂ ಸ್ವಧರ್ಮನಿರತರಾಗಿಯೂ, ಮೋಹರಹಿತರಾಗಿಯೂ ಇದ್ದರು. ಮನೋಹರವಾದ ಕಾಲಂಜರವೆಂಬ ಪರ್ವತದಲ್ಲಿ ವಾಸಮಾಡುತ್ತಿದ್ದರು.

೨೬-೨೭. ಅವರು ತಮ್ಮ ಹಿಂದಿನ ಜನ್ಮದಲ್ಲಿ ಮರಣವುಂಟಾಗಲು ಕಾರಣವನ್ನೂ, ತಾವು ಹಿಂದೆ ಮಾಡಿದ ಕೆಟ್ಟಕೆಲಸವನ್ನೂ ತಿಳಿದವರಾಗಿದ್ದರು. ಕಾಡಿನಲ್ಲೇ ಸಂಚರಿಸುತ್ತಾ ಶಾಂತರಾಗಿ ಇರುತ್ತಿದ್ದರು. ಯಾರೂ ಮದುವೆಯಾಗಿರಲಿಲ್ಲ. ಎಲ್ಲರೂ ಏಕಾಂಗಿಗಳಾಗಿರುತ್ತಿದ್ದರು. ಹಿಂದಿನ ಜನ್ಮದ ಸ್ಮರಣೆ ಇದ್ದುದರಿಂದ ಶುಭವಾದ ಕೆಲಸಗಳನ್ನು ಮಾಡುತ್ತಾ, ಒಳ್ಳೆಯ ಧರ್ಮವನ್ನೇ ಆಚರಿಸುತ್ತಾ ಇದ್ದರು. ಕೆಟ್ಟ ಕೆಲಸಗಳನ್ನು ಮಾಡುತ್ತಿರಲಿಲ್ಲ.

ಪೂರ್ವಜಾತಿಷು ಯೋ ಧರ್ಮಃ ಶ್ರುತೋ ಗುರುಕುಲೇಷು ವೈ ।
ತಥೈವ ಚಾಸ್ಥಿತಾ ಬುದ್ಧ್ಯಾ ಸಂಸಾರೇऽಪ್ಯನಿವರ್ತನೇ ॥ ೨೮ ॥

ಗಿರಿಮಧ್ಯೇ ಜಹುಃ ಪ್ರಾಣಾನ್ ಲಬ್ಧಾಹಾರಾಸ್ತಪಸ್ವಿನಃ ।
ತೇಷಾಂ ತು ಪತಿತಾನಾಂ ಚ ಯಾನಿ ಸ್ಥಾನಾನಿ ಭಾರತ ॥ ೨೯ ॥

ತಥೈವಾದ್ಯಾಪಿ ದೃಶ್ಯಂತೇ ಗಿರೌ ಕಾಲಂಜರೇ ನೃಪ ।
ಕರ್ಮಣಾ ತೇನ ತೇ ಜಾತಾಃ ಶುಭಾಶುಭವಿವರ್ಜಕಾಃ ॥ ೩೦ ॥

ಶುಭಾಶುಭತರಾಂ ಯೋನಿಂ ಚಕ್ರವಾಕತ್ವಮಾಗತಾಃ ।
ಶುಭೇ ದೇಶೇ ಸರಿದ್ದ್ವೀಪೇ ಸಪ್ತೈವಾಸನ್ ಜಲೌಕಸಃ ॥ ೩೧ ॥

ತ್ಯಕ್ತ್ವಾ ಸಹಚರೀಧರ್ಮಂ ಮುನಯೋ ಧರ್ಮಚಾರಿಣಃ ।
ನಿಸ್ಸಂಗಾ ನಿರ್ಮಮಾಶ್ಶಾಂತಾ ನಿರ್ದ್ವಂದ್ವಾ ನಿಷ್ಪರಿಗ್ರಹಾಃ ॥ ೩೨ ॥

೨೮. ಹಿಂದಿನ ಜನ್ಮದಲ್ಲಿ ಗುರುಕುಲದಲ್ಲಿ ಯಾವ ಧರ್ಮವನ್ನು ಕೇಳಿ ತಿಳಿದಿದ್ದರೋ ಅಂತಹ ಸಂಸಾರನಾಶಕವಾದ ಸದ್ಧರ್ಮವನ್ನೇ ಆಚರಿಸುತ್ತಾ ಅಲ್ಲಿ ವಾಸವಾಗಿದ್ದರು.

೨೯. ಹೀಗೆ ಇರುತ್ತಿರಲಾಗಿ ಅವರೆಲ್ಲರೂ ಆ ಕಾಲಂಜರಪರ್ವತದ ಮಧ್ಯದಲ್ಲಿ ಪ್ರಾಣಗಳನ್ನು ಬಿಟ್ಟರು. ಎಲೈ ಭರತವಂಶೀಕನೇ, ಯಾವ ಸ್ಥಳದಲ್ಲಿ ಅವರು ಬಿದ್ದು ಪ್ರಾಣವನ್ನು ಬಿಟ್ಟರೋ ಆ ಸ್ಥಳಗಳು ಈಗಲೂ ಆ ಕಾಲಂಜರಪರ್ವತದಲ್ಲಿ ಕಾಣಿಸುವುದು.

೩೦-೩೧. ತಾವು ಮಾಡಿದ ಕರ್ಮದಿಂದ ಆ ಕರ್ಮಕ್ಕೆ ತಕ್ಕಂತೆ ಆ ಏಳು ಜನರೂ ಚಕ್ರವಾಕಪಕ್ಷಿಗಳಾಗಿ ಹುಟ್ಟಿದರು. ಶುಭಕರ್ಮಗಳನ್ನೂ ಅಶುಭಕರ್ಮಗಳನ್ನೂ ಬಿಟ್ಟಿದ್ದರಿಂದ ಶುಭಾಶುಭತರವಾದ ಯೋನಿಯಲ್ಲಿ ಅಂದರೆ ಚಕ್ರವಾಕಪಕ್ಷಿಗಳ ಜಾತಿಯಲ್ಲಿ ಶುಭಪ್ರದೇಶವಾದ ಸರಿದ್ವೀಪದಲ್ಲಿ ಹುಟ್ಟಿದರು.

೩೨. ಪತ್ನೀಪರಿಗ್ರಹಮಾಡದೆ ಋಷಿಗಳಾಗಿ ಸದ್ಧರ್ಮವನ್ನಾಚರಿಸುತ್ತಾ ಸಂಗರಹಿತರಾಗಿ ಅಹಂಕಾರವನ್ನು ಬಿಟ್ಟು ಶಾಂತರಾಗಿಯೂ, ಏಕಾಂಗಿಗಳಾಗಿಯೂ ಇದ್ದರು. ಮದುವೆಯನ್ನೂ ಮಾಡಿಕೊಳ್ಳಲಿಲ್ಲ.

ನಿವೃತ್ತಿರ್ನಿವೃತಾಶ್ಚೈವ ಶಕುನಾ ನಾಮತಃ ಸ್ಮೃತಾಃ ।
ತೇ ಬ್ರಹ್ಮಚಾರಿಣಸ್ಸರ್ವೇ ಶಕುನಾ ಧರ್ಮಚಾರಿಣಃ ॥ ೩೩ ॥

ಸ್ಥಿತಾ ಏಕತ್ರ ಸದ್ಧರ್ಮಾ ವಿಕಾರರಹಿತಾಸ್ಸದಾ ।
ಜಾತಿಸ್ಮರಾಸ್ಸುಸಂವೃದ್ಧಾ ಸಪ್ತೈವ ಬ್ರಹ್ಮಚಾರಿಣಃ ॥ ೩೪ ॥

ವಿಪ್ರಯೋನೌ ತು ಯನ್ಮೋಹಾನ್ಮಿಥ್ಯಾಪಚರಿತಂ ಗುರೌ ।
ತಿರ್ಯಗ್ಯೋನೌ ತಥಾ ಜನ್ಮ ಶ್ರಾದ್ಧಾಜ್ಞಾನಂ ಚ ಲೇಭಿರೇ ॥ ೩೫ ॥

ತಥಾ ತು ಪಿತೃಕಾರ್ಯಾರ್ಥಂ ಕೃತಂ ಶ್ರಾದ್ಧಂ ವ್ಯವಸ್ಥಿತೈಃ ।
ತದಾ ಜ್ಞಾನಂ ಚ ಜಾತಿಂ ಚ ಕ್ರಮಾತ್ಪ್ರಾಪ್ತಂ ಗುಣೋತ್ತರಂ ॥ ೩೬ ॥

ಪೂರ್ವಜಾತಿಷು ಯದ್ಬ್ರಹ್ಮ ಶ್ರುತಂ ಗುರುಕುಲೇಷು ವೈ ।
ತಥೈವ ಸಂಸ್ಥಿತಂ ಜ್ಞಾನಂ ತಸ್ಮಾಜ್ಜ್ಞಾನಂ ಸಮಭ್ಯಸೇತ್ ॥ ೩೭ ॥

೩೩-೩೪. ಸುಖಗಳನ್ನೆಲ್ಲಾ ಬಿಟ್ಟಿದ್ದರು. ಹೆಸರಿನಿಂದ ಪಕ್ಷಿಗಳಾಗಿದ್ದರೂ ಬ್ರಹ್ಮಚಾರಿ ಧರ್ಮದಿಂದಿರುತ್ತಾ ಧರ್ಮವನ್ನಾಚರಿಸುತ್ತಿದ್ದರು. ಕಾಮಾದಿವಿಕಾರ ರಹಿತರಾಗಿದ್ದರು. ಇವರಿಗೆ ಹಿಂದಿನ ಜನ್ಮದ ಜಾತಿಸ್ಮರಣೆ ಇತ್ತು. ತಮ್ಮ ಪುರೋಭಿವೃದ್ಧಿಯಲ್ಲಿಯೇ ಆಸಕ್ತರಾಗಿ ಎಲ್ಲರೂ ಬ್ರಹ್ಮಚಾರಿಗಳಾಗಿ ಒಂದೇಕಡೆ ಇರುತ್ತಿದ್ದರು.

೩೫. ಮೊದಲು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿ ಅಲ್ಲಿ ಮೋಹದಿಂದ ಕೂಡಿ ಅನಂತರ ಗುರುಕುಲವಾಸದಲ್ಲಿರುವಾಗ ಗುರುಗಳಿಗೆ ಸುಳ್ಳು ಹೇಳಿದುದರ ಫಲವಾಗಿ ಈ ಏಳುಜನರೂ ಪಕ್ಷಿಗಳ ಜಾತಿಯಲ್ಲಿ ಹುಟ್ಟಿದರು. ಶ್ರಾದ್ಧವನ್ನು ಮಾಡಿದ್ದರಿಂದ ತಮ್ಮ ಹಿಂದಿನ ಜನ್ಮದ ಜಾತಿಸ್ಮರಣೆಯು ಇವರಿಗಿತ್ತು.

೩೬. ಅವರು ಪಕ್ಷಿಗಳಾಗಿದ್ದರೂ ಪಿತೃವಿಗೋಸ್ಕರ ಶ್ರಾದ್ಧವನ್ನು ಮಾಡಿದರು. ಆರೀತಿ ಮಾಡಿದುದರಿಂದ ಕ್ರಮವಾಗಿ ಜ್ಞಾನವನ್ನೂ ಶ್ರೇಷ್ಠವಾದ ಗುಣವನ್ನೂ ಉತ್ತಮ ಜಾತಿಯಲ್ಲಿ ಜನ್ಮವನ್ನೂ ಪಡೆದರು.

೩೭. ಹಿಂದಿನ ಜನ್ಮದಲ್ಲಿ ಗುರುಕುಲದಲ್ಲಿ ಅಭ್ಯಾಸಮಾಡಿದ ಬ್ರಹ್ಮಜ್ಞಾನವು ಅಳಿಯದಂತೆ ಹಾಗೆಯೇ ಇದ್ದಿತು. ಆದಕಾರಣ ಜ್ಞಾನವನ್ನು ಅಭ್ಯಾಸಮಾಡಬೇಕು.

ಸುಮನಾಶ್ಚ ಸುವಾಕ್ಛುದ್ಧಃ ಪಂಚಮಶ್ಛಿದ್ರದರ್ಶಕಃ ।
ಸ್ವತಂತ್ರಶ್ಚ ಸುಯಜ್ಞಶ್ಚ ಕುಲೀನಾ ನಾಮತಃ ಸ್ಮೃತಾಃ ॥ ೩೮ ॥

ತೇಷಾಂ ತತ್ರ ವಿಹಂಗಾನಾಂ ಚರತಾಂ ಧರ್ಮಚಾರಿಣಾಂ ।
ಸುವೃತ್ತಮಭವತ್ತತ್ರ ತಚ್ಛೃಣುಷ್ವ ಮಹಾಮುನೇ ॥ ೩೯ ॥

ನೀಪಾನಾಮೀಶ್ವರೋ ರಾಜಾ ಪ್ರಭಾವೇಣ ಸಮನ್ವಿತಃ ।
ಶ್ರೀಮಾನಂತಃಪುರವೃತೋ ವನಂ ತತ್ರಾವಿವೇಶ ಹ ॥ ೪೦ ॥

ಸ್ವತಂತ್ರಶ್ಚಕ್ರವಾಕಸ್ಸ ಸ್ಪೃಹಯಾಮಾಸ ತಂ ನೃಪಂ ।
ದೃಷ್ಟ್ವಾ ಯಾಂತಂ ಸುಖೋಪೇತಂ ರಾಜ್ಯಶೋಭಾಸಮನ್ವಿತಂ ॥ ೪೧ ॥

॥ ಚಕ್ರವಾಕ ಉವಾಚ ॥

ಯದ್ಯಸ್ತಿ ಸುಕೃತಂ ಕಿಂಚಿತ್ತಪೋ ವಾ ನಿಯಮೋಽಪಿ ವಾ ।
ಖಿನ್ನೋಽಹಮುಪವಾಸೇನ ತಪಸಾ ನಿಶ್ಚಲೇನ ಚ ॥ ೪೨ ॥

೩೮. ಸುಮನ, ಸುವಾಕ್, ಶುದ್ಧ, ಛಿದ್ರದರ್ಶಕ, ಸ್ವತಂತ್ರ, ಸುಯಜ್ಞ, ಕುಲೀನ ಇವೇ ಆ ಏಳುಜನ ಸಹೋದರರ ಹೆಸರುಗಳು.

೩೯. ಎಲೈ ಮಹರ್ಷಿಯೇ, ಧರ್ಮಚಾರಿಗಳಾದ ಆ ಪಕ್ಷಿಗಳು ಹೀಗೆಯೇ ಸಂಚರಿಸುತ್ತಿರಲಾಗಿ ಒಂದು ಸಂಗತಿಯು ನಡೆಯಿತು. ಅದನ್ನು ಹೇಳುವೆನು ಕೇಳು.

೪೦. ಒಂದುದಿನ ಪ್ರಭಾವಶಾಲಿಯಾದ ನೀಪದೇಶದ ರಾಜನು ಅಂತಃಪುರ ಜನರೊಡನೆ ಬೇಟೆಯಾಡುತ್ತಾ ವನದಲ್ಲಿ ಸಂಚರಿಸುತ್ತಿದ್ದಾಗ ಆ ಚಕ್ರವಾಕಗಳು ಇದ್ದ ವನಕ್ಕೆ ಬಂದನು.

೪೧. ಆ ಸಮಯದಲ್ಲಿ ಸ್ವತಂತ್ರನೆಂಬ ಚಕ್ರವಾಕವು ರಾಜವೈಭವದಿಂದ ಹೋಗುತ್ತಿರುವ ಆ ರಾಜನ ಸುಖಸಂತೋಷಗಳನ್ನು ನೋಡಿ ತಾನೂ ಅವನಂತಿರಲು

೪೨-೪೩. ಚಕ್ರವಾಕವು ತನ್ನಲ್ಲಿಯೇ ಹೀಗೆ ಯೋಚಿಸಿತು—ಪುಣ್ಯಕರವಾದ ಕೆಲಸ, ತಪಸ್ಸು, ವ್ರತಾದಿನಿಯಮಗಳು, ಉಪವಾಸ ಇವುಗಳನ್ನು ನಾನು ಸ್ವಲ್ಪ

ತಸ್ಯ ಸರ್ವಸ್ಯ ಪೂರ್ಣೇನ ಫಲೇನಾಪಿ ಕೃತೇನ ಹಿ ।
ಸರ್ವಸೌಭಾಗ್ಯಪಾತ್ರಶ್ಚ ಭವೇಯಮಹಮೀದೃಶಃ ೪೩ ॥

॥ ಮಾರ್ಕಂಡೇಯ ಉವಾಚ ॥

ತತಸ್ತು ಚಕ್ರವಾಕೌ ದ್ವಾವಾಸತುಸ್ಸಹಚಾರಿಣೌ ।
ಆವಾಂ ವೈ ಸಚಿವೌ ಸ್ಯಾವ ತವ ಪ್ರಿಯಹಿತೈಷಿಣೌ ॥ ೪೪ ॥

ತಥೇತ್ಯುಕ್ತ್ವಾ ತು ತಸ್ಯಾಸೀತ್ತದಾ ಯೋಗಾತ್ಮನೋ ಗತಿಃ ।
ಏವಂ ತೌ ಚಕ್ರವಾಕೌ ಚ ಸ್ವವಾಕ್ಯಂ ಪ್ರತ್ಯಭಾಷತಾಂ ॥ ೪೫ ॥

ಯಸ್ಮಾತ್ಕರ್ಮ ಬ್ರುವಾಣಸ್ತ್ವಂ ಯೋಗಧರ್ಮಮವಾಪ್ಯ ತಂ ।
ಏವಂ ವರಂ ಪ್ರಾರ್ಥಯಸೇ ತಸ್ಮಾದ್ವಾಕ್ಯಂ ನಿಬೋಧ ಮೇ ॥ ೪೬ ॥

ರಾಜಾ ತ್ವಂ ಭವಿತಾ ತಾತ ಕಾಂಪಿಲ್ಯೇ ನಗರೋತ್ತಮೇ ।
ಏತೌ ತೇ ಸಚಿವೌ ಸ್ಯಾತಾಂ ವ್ಯಭಿಚಾರಪ್ರಧರ್ಷಿತೌ ॥ ೪೭ ॥

ವಾದರೂ ಮಾಡಿದ್ದರೆ ಆ ಪುಣ್ಯಪ್ರಭಾವದಿಂದ ನಾನೂ ಈರೀತಿಯಾಗಿ ಸರ್ವಸಂಪತ್ಸೌಭಾಗ್ಯಗಳಿಗೆ ಪಾತ್ರನಾಗುವೆನು.

೪೪-೪೫. ಹೀಗೆ ಯೋಚನೆಯನ್ನು ಮಾಡುತ್ತಿರುವಾಗ ಎರಡು ಚಕ್ರವಾಕ ಪಕ್ಷಿಗಳು ಇದರ ಸಮೀಪದಲ್ಲಿದ್ದವು. ಅವುಗಳು ನೀನು ರಾಜನಾದಾಗ ನಾವಿಬ್ಬರೂ ನಿನಗೆ ಆಪ್ತರಾದ ಮಂತ್ರಿಗಳಾಗಿರುವೆವು ಎಂದು ಹೇಳಲು ಅದನ್ನು ಕೇಳಿ ಆ ಹಕ್ಕಿಯು ಹಾಗೆಯೇ ಆಗಲೆಂದು ಹೇಳಿ ಯೋಗಾಭ್ಯಾಸಕ್ರಮವನ್ನು ಆಚರಿಸುವುದಕ್ಕೆ ಪ್ರಾರಂಭಿಸಿತು.

೪೬-೪೭. ಆ ಎರಡು ಚಕ್ರವಾಕಪಕ್ಷಿಗಳು ತಮ್ಮ ಅಭಿಪ್ರಾಯವನ್ನು ಹೀಗೆ ಹೇಳಿದುದನ್ನು ಕೇಳಿ ಆ ಏಳು ಹಕ್ಕಿಗಳಲ್ಲಿ ಮತ್ತೊಂದು ಹಕ್ಕಿಯು—ನೀನು ಯೋಗವನ್ನು ಅವಲಂಬಿಸಿ ಆತ್ಮಧ್ಯಾನವನ್ನು ಮಾಡುತ್ತಿರುತ್ತೀಯೆ. ಹೀಗಿದ್ದಾಗ್ಯೂ ಕರ್ಮದಲ್ಲಿಯೂ ಕರ್ಮಫಲದಲ್ಲಿಯೂ ಆಶೆಪಡುತ್ತೀಯೆ. ನಿನಗೆ ರಾಜನಾಗಬೇಕೆಂಬ ಬಯಕೆ ಇದೆ. ಇದನ್ನು ನೀನೇ ಸ್ಪಷ್ಟವಾಗಿ ಹೇಳಿರುತ್ತೀಯೇ. ಈಗ ನಾನು ಹೇಳುವ ಮಾತನ್ನು ಕೇಳು. ನೀನು ಮುಂದೆ ಶ್ರೇಷ್ಠವಾದ ಕಾಂಪಿಲ್ಯನಗರದ ರಾಜನಾಗಿ ಹುಟ್ಟುತ್ತೀಯೆ. ಯೋಗಭ್ರಷ್ಟರಾದ ಈ ಎರಡು ಹಕ್ಕಿಗಳೂ ನಿನಗೆ ಮಂತ್ರಿಗಳಾಗುವವು ಎಂದಿತು.

ನ ತಾನೂಚುಸ್ತ್ರಯೋ ರಾಜ್ಯಂ ಚತುರಸ್ಸಹಚಾರಿಣಃ ।
ಸ ಪ್ರಸಾದಂ ಪುನಶ್ಚಕ್ರೇ ತನ್ಮಧ್ಯೇ ಸುಮನಾಬ್ರವೀತ್ ॥ ೪೮ ॥

ಅಂತರ್ವೋ ಭವಿತಾ ಶಾಪಃ ಪುನರ್ಯೋಗಮವಾಪ್ಸ್ಯಥ ।
ಸರ್ವಸತ್ತ್ವಃ ಸುಯಜ್ಞಶ್ಚ ಸ್ವತಂತ್ರೋಽಯಂ ಭವಿಷ್ಯತಿ ॥ ೪೯ ॥

ಪಿತೃಪ್ರಸಾದಾದ್ಯುಷ್ಮಾಭಿಸ್ಸಂಪ್ರಾಪ್ತಂ ಸುಕೃತಂ ಭವೇತ್ ।
ಗಾಂ ಪ್ರೋಕ್ಷಯಿತ್ವಾ ಧರ್ಮೇಣ ಪಿತೃಭ್ಯಶ್ಚೋಪಕಲ್ಪಿತಾಃ ॥ ೫೦ ॥

ಅಸ್ಮಾಕಂ ಜ್ಞಾನಸಂಯೋಗಸ್ಸರ್ವೇಷಾಂ ಯೋಗಸಾಧನಂ ।
ಇದಂ ಚ ವಾಕ್ಯಂ ಸಂರಂಬ್ಧಂ ಶ್ಲೋಕಮೇಕಮುದಾಹೃತಂ ॥ ೫೧ ॥

ಪುರುಷಾಂತರಿತಂ ಶ್ರುತ್ವಾ ತತೋ ಯೋಗಮವಾಪ್ಸ್ಯಥ ।
ಇತ್ಯುಕ್ತ್ವಾ ಸ ತು ಮೌನೋಽಭೂದ್ವಿಹಂಗಸ್ಸುಮನಾ ಬುಧಃ ॥ ೫೨ ॥

೪೮-೫೨. ರಾಜ್ಯವನ್ನು, ಮಂತ್ರಿಪದವಿಯನ್ನು ಅಪೇಕ್ಷಿಸಿದ ಮೂರು ಹಕ್ಕಿಗಳೂ ತಮ್ಮ ಸಹಚಾರಿಗಳಾದ ಉಳಿದ ನಾಲ್ಕು ಹಕ್ಕಿಗಳೊಡನೆ ಈ ವಿಷಯವಾಗಿ ಏನನ್ನೂ ಹೇಳಲಿಲ್ಲ. ಬಳಿಕ ಸುಮನಾ ಎಂಬ ಹಕ್ಕಿಯು ಸಂತೋಷದಿಂದ ಸರ್ವಸತ್ತ್ವ, ಸುಯಜ್ಞ, ಸ್ವತಂತ್ರ ಎಂಬ ಮೂರು ಹಕ್ಕಿಗಳನ್ನು ಕುರಿತು—ನಿಮಗೆ ಶಾಪವು ಬಂದು ಯೋಗಸಾಧನೆಗೆ ವಿಘ್ನವುಂಟಾಯಿತಷ್ಟೆ. ಆದರೂ ನಿಮಗೆ ಯೋಗಸಿದ್ಧಿಯು ಲಭಿಸುವುದು. ಹಿಂದೆ ನೀವು ಪಿತೃಕಾರ್ಯಕ್ಕಾಗಿ ಗೋವನ್ನು ಪ್ರೋಕ್ಷಣಾದಿಗಳಿಂದ ಸಂಸ್ಕರಿಸಿ ಪಿತೃಗಳಿಗೆ ಸಮರ್ಪಿಸಿರುವಿರಿ. ಅದರಿಂದ ಪಿತೃಗಳು ಸಂತುಷ್ಟರಾಗಿರುವರು. ಆ ಪುಣ್ಯಪ್ರಭಾವದಿಂದ ಈಗ ನಿಮಗೆ ಸುಕೃತಪರಿಪಾಕವು ಒದಗಿಬಂದಿರುವುದು. ಆದರೆ ಆತ್ಮಜ್ಞಾನವಿಚಾರಪೂರ್ವಕವಾಗಿರುವ ಯೋಗವೇ ನಮ್ಮ ಸದ್ಗತಿಗೆ ಕಾರಣವಾಗಿರುವುದು. ಆತ್ಮನನ್ನು ಜ್ಞಾನದಿಂದ ತಿಳಿದು ಯೋಗದಿಂದ ಸಾಕ್ಷಾತ್ಕಾರಮಾಡಿಕೊಳ್ಳುವುದೇ ನಮ್ಮ ಮುಖ್ಯ ಕರ್ತವ್ಯವು. ನಿಮ್ಮ ಚಾಪಲ್ಯದಿಂದ ನನ್ನ ಮನಸ್ಸಿಗೆ ವ್ಯಾಕುಲವುಂಟಾಗಿರುವುದು. ಆದುದರಿಂದ ಈ ಮಾತನ್ನು ಹೇಳಿರುವೆನು. ಇದನ್ನು ನೀವು ಬೇರೆ ಪುರುಷನ ಮೂಲಕ ತಿಳಿದು ಅನಂತರ ಯೋಗಸಿದ್ಧಿಯನ್ನು ಹೊಂದುವಿರಿ ಎಂದು ಹೇಳಿ ಸುಮ್ಮನಾಯಿತು.

॥ ಮಾರ್ಕಂಡೇಯ ಉವಾಚ ॥
ಲೋಕಾನಾಂ ಸ್ವಸ್ತಯೇ ತಾತ ಶಂತನುಪ್ರವರಾತ್ಮಜ ।
ಇತ್ಯುಕ್ತಂ ತಚ್ಚರಿತ್ರಂ ಮೇ ಕಿಂ ಭೂಯಶ್ಶ್ರೋತುಮಿಚ್ಛಸಿ ॥ ೫೩ ।

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಪಿತೃ
ಸರ್ಗವರ್ಣನೇ ಸಪ್ತವ್ಯಾಧಗತಿವರ್ಣನಂ ನಾಮ
ಏಕಚತ್ವಾರಿಂಶೋಽಧ್ಯಾಯಃ



೫೩. ಮಾರ್ಕಂಡೇಯನಿಂತೆಂದನು :—ಎಲೈ ವತ್ಸ, ಶಂತನುಪುತ್ರನಾದ ಭೀಷ್ಮನೇ, ಲೋಕಕಲ್ಯಾಣಕ್ಕಾಗಿ ಚಕ್ರವಾಕಪಕ್ಷಿಗಳ ಈ ಚರಿತ್ರೆಯನ್ನು ಹೇಳಿರುವೆನು. ಮತ್ತೇನನ್ನು ಕೇಳಬೇಕೆಂದಿರುವೆ? ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಪಿತೃಸೃಷ್ಟಿ ಎಂಬ ಪ್ರಕರಣದಲ್ಲಿ ಸಪ್ತವ್ಯಾಧವರ್ಣನವೆಂಬ ನಲವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ದ್ವಿಚತ್ವಾರಿಂಶೋಽಧ್ಯಾಯಃ

॥ ಭೀಷ್ಮ ಉವಾಚ ॥

**ಮಾರ್ಕಂಡೇಯ ಮಹಾಪ್ರಾಜ್ಞ ಪಿತೃಭಕ್ತಿಭೃತಾಂ ವರ ।**
**ಕಿಂ ಜಾತಂ ತು ತತೋ ಬ್ರೂಹಿ ಕೃಪಯಾ ಮುನಿಸತ್ತಮ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ತೇ ಧರ್ಮಯೋಗನಿರತಾಸ್ಸಪ್ತ ಮಾನಸಚಾರಿಣಃ ।**
**ವಾಯ್ವಂಬುಭಕ್ಷಾಸ್ಸತತಂ ಶರೀರಮುಪಶೋಷಯನ್ ॥ ೨ ॥**

## ನಲವತ್ತೆರಡನೆಯ ಅಧ್ಯಾಯವು

೧. ಭೀಷ್ಮನು ಪ್ರಶ್ನೆಮಾಡುವನು :—ಎಲೈ ಮುನಿಶ್ರೇಷ್ಠನಾದ ಮಾರ್ಕಂಡೇಯನೇ, ನೀನು ಮಹಾಜ್ಞಾನಿಯು. ಪಿತೃಭಕ್ತರಲ್ಲಿ ಶ್ರೇಷ್ಠನು. ಅನಂತರ ನಡೆದ ವಿಚಾರವನ್ನು ದಯವಿಟ್ಟು ತಿಳಿಸು ಎನ್ನಲು,

೨. ಮಾರ್ಕಂಡೇಯನು ಹೇಳುವನು :—ಧರ್ಮಯೋಗದಲ್ಲೇ ಆಸಕ್ತರಾದ ಆ ಏಳು ಚಕ್ರವಾಕಗಳು ಆಹಾರಾರ್ಥವಾಗಿ ನೀರು, ವಾಯುಗಳನ್ನು ಮಾತ್ರ ಸೇವಿಸುತ್ತಾ ತಮ್ಮ ಶರೀರಗಳನ್ನು ಶೋಷಣೆಮಾಡಿದರು.

ಸ ರಾಜಾಂತಃಪುರವೃತೋ ನಂದನೇ ಮಘವಾ ಇವ ।
ಕ್ರೀಡಿತ್ವಾ ಸುಚಿರಂ ತತ್ರ ಸಭಾರ್ಯಸ್ಸ್ವಪುರಂ ಯಯೌ ॥ ೩ ॥

ಅನೂಹೋ ನಾಮ ತಸ್ಯಾಸೀತ್ಪುತ್ರಃ ಪರಮಧಾರ್ಮಿಕಃ ।
ತಂ ವೈಭ್ರಾಜಃ ಸುತಂ ರಾಜ್ಯೇ ಸ್ಥಾಪಯಿತ್ವಾ ವನಂ ಯಯೌ ॥ ೪ ॥

ತಪಃ ಕರ್ತುಂ ಸಮಾರೇಭೇ ಯತ್ರ ತೇ ಸಹಚಾರಿಣಃ ।
ಸ ವೈ ತತ್ರ ನಿರಾಹಾರೋ ವಾಯುಭಕ್ಷೋ ಮಹಾತಪಾಃ ॥ ೫ ॥

ತತೋ ವಿಭ್ರಾಜಿತಂ ತೇನ ವಿಭ್ರಾಜಂ ನಾಮ ತದ್ವನಂ ।
ಬಭೂವ ಸುಪ್ರಸಿದ್ಧಂ ಹಿ ಯೋಗಸಿದ್ಧಿಪ್ರದಾಯಕಂ ॥ ೬ ॥

ತತ್ರೈವ ತೇ ಹಿ ಶಕುನಾಶ್ಚತ್ವಾರೋ ಯೋಗಧರ್ಮಿಣಃ ।
ಯೋಗಭ್ರಷ್ಟಾಸ್ತ್ರಯಶ್ಚೈವ ದೇಹತ್ಯಾಗಕೃತೋಽಭವನ್ ॥ ೭ ॥

೩. ಆ ಕಾಡಿಗೆ ಬಂದಿದ್ದ ನೀಪದೇಶದ ರಾಜನೂ ಅಂತಃಪುರಸ್ತ್ರೀಯರೊಡನೆ ಇಂದ್ರನು ನಂದನವನದಲ್ಲಿ ವಿಹರಿಸುವಂತೆ ಬಹಳಕಾಲ ವಿಹರಿಸಿ ಪತ್ನಿಯರೊಡನೆ ತನ್ನ ಊರಿಗೆ ಹೊರಟುಹೋದನು.

೪. ಆ ವೈಭ್ರಾಜನಿಗೆ ಅನೂಹನೆಂಬ ಪರಮಧಾರ್ಮಿಕನಾದ ಪುತ್ರನಿದ್ದನು. ರಾಜನು ತನ್ನ ಮಗನನ್ನು ರಾಜ್ಯದಲ್ಲಿ ಇರಿಸಿ ತಾನು ತಪಸ್ಸಿಗಾಗಿ ಕಾಡಿಗೆ ಹೊರಟು ಹೋದನು.

೫. ಆ ವೈಭ್ರಾಜನು ಚಕ್ರವಾಕಗಳು ಇದ್ದ ಕಾಡಿಗೆ ಹೋಗಿ ಅಲ್ಲಿ ಅವನು ಯಾವ ಆಹಾರವನ್ನೂ ತೆಗೆದುಕೊಳ್ಳದೆ ವಾಯುವನ್ನೇ ಭಕ್ಷಿಸುತ್ತಾ ತಪಸ್ಸುಮಾಡಲು ಪ್ರಾರಂಭಿಸಿದನು.

೬. ವೈಭ್ರಾಜನೆಂಬ ಆ ರಾಜನ ತಪೋಮಹಿಮೆಯಿಂದ ಆ ವನವೆಲ್ಲವೂ ಬೆಳಗುತ್ತಿದ್ದುದರಿಂದ ಅದಕ್ಕೆ ವಿಭ್ರಾಜವೆಂದು ಹೆಸರುವಾಸಿಯಾಯಿತು. ಅದು ಯೋಗಸಿದ್ಧಿಯನ್ನುಂಟುಮಾಡುವುದು.

೭. ಅದೇ ಕಾಡಿನಲ್ಲಿ ಆ ಏಳು ಪಕ್ಷಿಗಳ ಪೈಕಿ ಯೋಗಧರ್ಮಿಗಳಾದ ನಾಲ್ಕು ಕ್ರೌಂಚಪಕ್ಷಿಗಳೂ, ಯೋಗಭ್ರಷ್ಟರಾದ ಮೂರು ಕ್ರೌಂಚಗಳೂ ಶರೀರತ್ಯಾಗವನ್ನು ಮಾಡಿದವು.

**ಕಾಂಪಿಲ್ಯೇ ನಗರೇ ತೇ ತು ಬ್ರಹ್ಮದತ್ತಪುರೋಗಮಾಃ ।**
**ಜಾತಾಸ್ಸಪ್ತ ಮಹಾತ್ಮಾನಸ್ಸರ್ವೇ ವಿಗತಕಲ್ಮಷಾಃ ॥ ೮ ॥**

**ಸ್ಮೃತಿಮಂತೋಽತ್ರ ಚತ್ವಾರಸ್ತ್ರಯಸ್ತು ಪರಿಮೋಹಿತಾಃ ।**
**ಸ್ವತಂತ್ರಸ್ಯಾಹ್ವಯೋ ಜಾತೋ ಬ್ರಹ್ಮದತ್ತೋ ಮಹೌಜಸಃ ॥ ೯ ॥**

**ಛಿದ್ರದರ್ಶೀ ಸುನೇತ್ರಸ್ತು ವೇದವೇದಾಂಗಪಾರಗೌ ।**
**ಜಾತೌ ಶ್ರೋತ್ರಿಯದಾಯಾದೌ ಪೂರ್ವಜಾತಿಸಹೋಷಿತೌ ॥ ೧೦ ॥**

**ಪಂಚಾಲೋ ಬಹ್ವೃಚಸ್ತ್ವಾಸೀದಾಚಾರ್ಯತ್ವಂ ಚಕಾರ ಹ ।**
**ದ್ವಿವೇದಃ ಪುಂಡರೀಕಶ್ಚ ಛಂದೋಗೋಽಧ್ವರ್ಯುರೇವ ಚ ॥ ೧೧ ॥**

**ತತೋ ರಾಜಾ ಸುತಂ ದೃಷ್ಟ್ವಾ ಬ್ರಹ್ಮದತ್ತಮಕಲ್ಮಷಂ ।**
**ಅಭಿಷಿಚ್ಯ ಸ್ವರಾಜ್ಯೇ ತು ಪರಾಂ ಗತಿಮವಾಪ್ತವಾನ್ ॥ ೧೨ ॥**

೮. ಆ ಏಳುಜನರೂ ಕಾಂಪಿಲ್ಯನೆಂಬ ನಗರದಲ್ಲಿ ಬ್ರಹ್ಮದತ್ತನೇ ಮುಂತಾದ ಹೆಸರುಳ್ಳವರಾಗಿ ಹುಟ್ಟಿದರು. ಎಲ್ಲರೂ ಮಹಾತ್ಮರಾಗಿಯೂ, ಪಾಪರಹಿತರಾಗಿಯೂ ಇದ್ದರು.

೯-೧೦. ಅವರಲ್ಲಿ ನಾಲ್ಕುಜನರಿಗೆ ಪೂರ್ವಜನ್ಮದ ಸ್ಮರಣೆಯಿದ್ದಿತು. ಉಳಿದ ಮೂವರಿಗೆ ಇರಲಿಲ್ಲ. ಸ್ವತಂತ್ರವೆಂಬ ಕ್ರೌಂಚವು ಬ್ರಹ್ಮದತ್ತನೆಂಬ ಹೆಸರಿನಿಂದ ರಾಜಪುತ್ರನಾಗಿ ಹುಟ್ಟಿತು. ಅವನು ಮಹಾತೇಜಸ್ವಿಯಾಗಿದ್ದನು. ಛಿದ್ರದರ್ಶೀ ಮತ್ತು ಸುನೇತ್ರನೆಂಬ ಕ್ರೌಂಚಗಳು ಶ್ರೋತ್ರಿಯವಂಶದಲ್ಲಿ ಹುಟ್ಟಿ ವೇದವೇದಾಂಗ ಪಾರಂಗತರಾಗಿದ್ದವು. ಇವೆರಡೂ ಪೂರ್ವಜಾತಿಯಲ್ಲಿಯೂ ಜೊತೆಯಲ್ಲಿಯೇ ಇರುತ್ತಿದ್ದವು.

೧೧. ಪಂಚಾಲ ಅಥವಾ ಪಂಚಮನೆಂಬುವನು ಋಗ್ವೇದಶಾಖಾಧ್ಯಾಯಿಯಾದ ಬ್ರಾಹ್ಮಣನಾಗಿ ಪೌರೋಹಿತ್ಯವನ್ನು ಮಾಡುತ್ತಿದ್ದನು. ದ್ವಿವೇದನೆಂಬುವನು ಸಾಮವೇದಾಧ್ಯಾಯಿಯಾಗಿಯೂ, ಪುಂಡರೀಕನು ಯಜುರ್ವೇದಾಧ್ಯಯನವನ್ನು ಮಾಡಿ ಅಧ್ವರ್ಯುವಾಗಿಯೂ ಇದ್ದರು.

೧೨. ಅನಂತರ ಕಾಂಪಿಲ್ಯದ ರಾಜನು ಗುಣವಂತನಾದ ಬ್ರಹ್ಮದತ್ತನೆಂಬ ತನ್ನ ಮಗನನ್ನು ತನ್ನ ರಾಜ್ಯದಲ್ಲಿ ಅಭಿಷೇಕಮಾಡಿ ಉತ್ತಮವಾದ ಗತಿಯನ್ನು ಹೊಂದಿದನು.

**ಪಂಚಾಲಃ ಪುಂಡರೀಕಸ್ತು ಪುತ್ರೌ ಸಂಸ್ಥಾಪ್ಯ ಮಂದಿರೇ ।**
**ವಿವಿಶತುರ್ವನಂ ತತ್ರ ಗತೌ ಪರಮಿಕಾಂ ಗತಿಂ ॥ ೧೩ ॥**

**ಬ್ರಹ್ಮದತ್ತಸ್ಯ ಭಾರ್ಯಾ ತು ಸನ್ನತಿರ್ನಾಮ ಭಾರತ ।**
**ಸಾ ತ್ವೇಕಭಾವಸಂಯುಕ್ತಾ ರೇಮೇ ಭರ್ತ್ರಾ ಸಹೈವ ತು ॥ ೧೪ ॥**

**ಶೇಷಸ್ತು ಚಕ್ರವಾಕೌ ವೈ ಕಾಂಪಿಲ್ಯೆ ಸಹಚಾರಿಣಃ ।**
**ಜಾತಾಃ ಶ್ರೋತ್ರಿಯದಾಯಾದಾ ದರಿದ್ರಸ್ಯ ಕುಲೇ ನೃಪ ॥ ೧೫ ॥**

**ಧೃತಿಮಾನ್ ಸುಮಹಾತ್ಮಾ ಚ ತತ್ತ್ವದರ್ಶೀ ನಿರುತ್ಸುಕಃ ।**
**ವೇದಾಧ್ಯಯನಸಂಪನ್ನಾಶ್ಚತ್ವಾರಶ್ಛಿದ್ರದರ್ಶಿನಃ ॥ ೧೬ ॥**

**ತೇ ಯೋಗನಿರತಾಸ್ಸಿದ್ಧಾಃ ಪ್ರಸ್ಥಿತಾಸ್ಸರ್ವ ಏವ ಹಿ ।**
**ಆಮಂತ್ರ್ಯ ಚ ಮಿಥಃ ಶಂಭೋಃ ಪದಾಂಭೋಜಂ ಪ್ರಣಮ್ಯ ತು ॥ ೧೭ ॥**

೧೩. ಪಂಚಾಲನೂ, ಪುಂಡರೀಕನೂ ತಮ್ಮ ಮಕ್ಕಳನ್ನು ತಮ್ಮ ತಮ್ಮ ಮನೆಗಳಲ್ಲಿ ಇಟ್ಟು ತಾವು ತಪಸ್ಸಿಗಾಗಿ ಕಾಡಿಗೆ ಹೋಗಿ ಉತ್ತಮವಾದ ಗತಿಯನ್ನು ಹೊಂದಿದರು.

೧೪. ಆ ಬ್ರಹ್ಮದತ್ತನಿಗೆ ಸನ್ನತಿ ಎಂಬ ಹೆಂಡತಿ ಇದ್ದಳು. ಅವಳು ಏಕಾಗ್ರ ಭಾವದಿಂದ ಗಂಡನೊಡನೆ ಕ್ರೀಡಿಸುತ್ತಾ ಸುಖಿಯಾಗಿದ್ದಳು.

೧೫. ಎಲೈ ರಾಜನೇ, ಉಳಿದ ಚಕ್ರವಾಕಗಳು ಆ ಕಾಂಪಿಲ್ಯನಗರದಲ್ಲಿ ದರಿದ್ರನಾದ ಶ್ರೋತ್ರಿಯನ ವಂಶದಲ್ಲಿ ಹುಟ್ಟಿದವು.

೧೬. ಧೃತಿಮಾನ್, ಸುಮಹಾತ್ಮಾ, ತತ್ವದರ್ಶೀ, ನಿರುತ್ಸಕ ಎಂಬುದೇ ಉಳಿದ ಆ ನಾಲ್ಕುಮಂದಿಯ ಹೆಸರು. ಅವರೆಲ್ಲರೂ ವೇದಾಧ್ಯಯನಸಂಪನ್ನ ರಾಗಿದ್ದರು.

೧೭. ಅವರೆಲ್ಲರೂ ಯೋಗಾಭ್ಯಾಸಮಾಡುತ್ತಾ ಅದರಲ್ಲಿ ಸಿದ್ಧಿಯನ್ನು ಹೊಂದಿದ್ದರು. ಯಾರಾದರೂ ಕರೆದರೆ ಎಲ್ಲರೂ ಒಟ್ಟಿಗೇ ಹೋಗುತ್ತಿದ್ದರು. ಪರಸ್ಪರ ಜೋತೆಯಲ್ಲಿಯೇ ಈಶ್ವರನ ಪಾದಕಮಲವನ್ನು ನಮಸ್ಕರಿಸಲು ಹೋಗುತ್ತಿದ್ದರು.

ಶೂರಾ ಯೇ ಸಂಪ್ರಪದ್ಯಂತೇ ಅಪುನರ್ಭವಕಾಂಕ್ಷಿಣಃ ।
ಪಾಪಂ ಪ್ರಣಾಶಯಂತ್ವದ್ಯ ತಚ್ಛಂಭೋಃ ಪರಮಂ ಪದಂ ॥ ೧೮ ॥

ಶರೀರೇ ಮಾನಸೇ ಚೈವ ಪಾಪೇ ವಾಗ್ಜೇ ಮಹಾಮುನೇ ।
ಕೃತೇ ಸಮ್ಯಗಿದಂ ಭಕ್ತ್ಯಾ ಪಠೇಚ್ಛ್ರದ್ಧಾಸಮನ್ವಿತಃ ॥ ೧೯ ॥

ಮುಚ್ಯತೇ ಸರ್ವಪಾಪೇಭ್ಯಶ್ಶಿವನಾಮಾನುಕೀರ್ತನಾತ್ ।
ಉಚ್ಚಾರ್ಯಮಾಣ ಏತಸ್ಮಿನ್ ದೇವದೇವಸ್ಯ ತಸ್ಯ ವೈ ॥ ೨೦ ॥

ವಿಲಯಂ ಪಾಪಮಾಯಾತಿ ಹ್ಯಾಮಭಾಂಡಮಿವಾಂಭಸಿ ।
ತಸ್ಮಾತ್ತತ್ಸಂಚಿತೇ ಪಾಪೇ ಸಮಾನಂತರಮೇವ ಚ ॥ ೨೧ ॥

ಜಪ್ತವ್ಯಮೇತತ್ಪಾಪಸ್ಯ ಪ್ರಶಮಾಯ ಮಹಾಮುನೇ ।
ನರೈಃ ಶ್ರದ್ಧಾಲುಭಿರ್ಭೂಯಸ್ಸರ್ವಕಾಮಫಲಾಪ್ತಯೇ ॥ ೨೨

೧೮. ಪುನರುತ್ಪತ್ತಿಯು ಬೇಡವೆಂದು ಬಯಸುವ ಯಾವ ಮೋಕ್ಷಾಭಿಲಾಷಿಗಳು ಆ ಈಶ್ವರನ ಪಾದಗಳನ್ನು ನಂಬುವರೋ ಅವರ ಪಾಪಗಳನ್ನೆಲ್ಲಾ ಈಶ್ವರನ ಶ್ರೇಷ್ಠವಾದ ಪಾದಗಳು ನಾಶಮಾಡುವುವು.

೧೯. ಈ ಉಪಾಖ್ಯಾನವನ್ನು ಶ್ರದ್ಧೆಯಿಂದ ಪಠಿಸುವವರ ವಾಙ್ಮನಃಕಾಯಗಳಿಂದ ಉಂಟಾದ ಎಂದರೆ ಶರೀರದಿಂದುಂಟಾದ ಪಾಪವೂ ಮನಸ್ಸಿನಿಂದ ಮತ್ತು ಮಾತಿನಿಂದ ಉಂಟಾದ ಪಾಪವೂ ನಾಶವಾಗುವುವು.

೨೦. ದೇವದೇವನಾದ ಶಿವನ ನಾಮೋಚ್ಚಾರಣೆಯನ್ನು ಮಾಡಿದರೆ ಸಮಸ್ತ ಪಾಪಗಳೂ ನಾಶವಾಗುವುವು.

೨೧. ಆ ಶಿವನ ನಾಮೋಚ್ಚಾರಣೆಯನ್ನು ಮಾಡಿದರೆ ಕಾವಗಡಿಗೆಯ ಮೇಲೆ ಹಾಕಿದ ನೀರಿನಂತೆ ಜನ್ಮಾಂತರಗಳಲ್ಲಿ ಕೂಡಿಹಾಕಿದ ಸಮಸ್ತಪಾಪಗಳೂ ನಾಶವಾಗುವುವು.

೨೨. ಎಲೈ ಮಹಾಮುನಿಯೇ, ಶ್ರದ್ಧಾಳುಗಳಾದ ಜನರು ತಮ್ಮ ಪಾಪವು ನಾಶವಾಗುವುದಕ್ಕೂ ಇಷ್ಟಾರ್ಥಫಲಗಳೆಲ್ಲವೂ ನೆರವೇರುವುದಕ್ಕೂ ಶಿವನಾಮವನ್ನು ಅವಶ್ಯವಾಗಿ ಜಪಿಸಬೇಕು.

ಪುಷ್ಟ್ಯರ್ಥಮಿಮಮಧ್ಯಾಯಂ ಪಠೇದೇನಂ ಶೃಣೋತಿ ವಾ ।
ಮುಚ್ಯತೇ ಸರ್ವಪಾಪೇಭ್ಯೋ ಮೋಕ್ಷಂ ಯಾತಿ ನ ಸಂಶಯಃ ॥ ೨೩ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಪಿತೃಕಲ್ಪೇ ಪಿತೃಪ್ರಭಾವವರ್ಣನಂ ನಾಮ ದ್ವಿಚತ್ವಾರಿಂಶೋಽಧ್ಯಾಯಃ



೨೩. ಪುಷ್ಟಿಯನ್ನು ಹೊಂದಲಿಚ್ಛೆಯುಳ್ಳವರು ಈ ಅಧ್ಯಾಯವನ್ನು ಪಠಿಸಿದಲ್ಲಿ ಅಥವಾ ಕೇಳಿದಲ್ಲಿ ಅವರಿಗೆ ಪುಷ್ಟಿಯುಂಟಾಗುವುದಲ್ಲದೆ ಅವರ ಎಲ್ಲಾ ಪಾಪಗಳೂ ನಾಶವಾಗಿ ಮೋಕ್ಷವು ಲಭಿಸುವುದು. ಇದರಲ್ಲಿ ಸಂಶಯವಿಲ್ಲ.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಪಿತೃಕಲ್ಪದಲ್ಲಿ ಪಿತೃಪ್ರಭಾವ ವರ್ಣನವೆಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ತ್ರಿಚತ್ವಾರಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಆಚಾರ್ಯಪೂಜನಂ ಬ್ರೂಹಿ ಸೂತ ವ್ಯಾಸಗುರೋಽಧುನಾ ।
ಗ್ರಂಥಸ್ಯ ಶ್ರವಣಾಂತೇ ಹಿ ಕಿಂ ಕರ್ತವ್ಯಂ ತದಪ್ಯಹೋ ॥ ೧ ॥

॥ ಸೂತ ಉವಾಚ ॥

ಪೂಜಯೇದ್ವಿಧಿವದ್ಭಕ್ತ್ಯಾಚಾರ್ಯಂ ಶ್ರುತ್ವಾ ಕಥಾಂ ಪರಾಂ ।
ಗ್ರಂಥಾಂತೇ ವಿಧಿವದ್ದದ್ಯಾದಾಚಾರ್ಯಾಯ ಪ್ರಸನ್ನಧೀಃ ॥ ೨ ॥

## ನಲವತ್ತಮೂರನೆಯ ಅಧ್ಯಾಯವು

೧. ಶೌನಕನು ಪ್ರಶ್ನೆಮಾಡುವನು :—ಎಲೈ ವ್ಯಾಸಗುರುವಾದ ಸೂತನೇ, ಆಚಾರ್ಯನನ್ನು ಪೂಜಿಸುವ ವಿಧಾನವೇನು ? ಮತ್ತು ಗ್ರಂಥವನ್ನು ಕೇಳಿದನಂತರ ಏನುಮಾಡಬೇಕು ? ಎಂಬ ವಿಷಯವನ್ನು ತಿಳಿಸು ಎನ್ನಲು,

೨. ಸೂತನು ಹೇಳುವನು :—ಪುರಾಣದ ಶ್ರೇಷ್ಠವಾದ ಕಥೆಯನ್ನು ಕೇಳಿದ ನಂತರ ಆಚಾರ್ಯನನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಬೇಕು. ಗ್ರಂಥವು ಮುಗಿಯಲು ಸಂತೋಷಚಿತ್ತನಾಗಿ ಆಚಾರ್ಯನಿಗೆ ದಕ್ಷಿಣಾದಿಗಳನ್ನು ಕೊಡಬೇಕು.

ತತೋ ವಕ್ತಾರಮಾನಮ್ಯ ಸಂಪೂಜ್ಯ ಚ ಯಥಾವಿಧಿ ।
ಭೂಷಣೈರ್ಹಸ್ತಕರ್ಣಾನಾಂ ವಸ್ತ್ರೈಸ್ಸೌವರ್ಣ್ಯಾದಿಭಿಸ್ಸುಧೀಃ ॥ ೩ ॥

ಶಿವಪೂಜಾಸಮಾಪ್ತೌ ತು ದದ್ಯಾದ್ಧೇನುಂ ಸವತ್ಸಿಕಾಂ ।
ಕೃತ್ವಾಸನಂ ಸುವರ್ಣಸ್ಯ ಪಲಮಾನಸ್ಯ ಸಾಂಬರಂ ॥ ೪ ॥

ತತ್ರ ಸ್ಥಾಪ್ಯ ಶುಭಂ ಗ್ರಂಥಂ ಲಿಖಿತಂ ಲಲಿತಾಕ್ಷರೈಃ ।
ಆಚಾರ್ಯಾಯ ಸುಧೀರ್ದದ್ಯಾನ್ಮುಕ್ತಃ ಸ್ಯಾದ್ಭವಬಂಧನೈಃ ॥ ೫ ॥

ಗ್ರಾಮೋ ಗಜೋ ಹಯಶ್ಚಾಪಿ ಯಥಾಶಕ್ತ್ಯಪರಾಣಿ ಚ ।
ಮುನೇ ಸರ್ವಾಣಿ ದೇಯಾನಿ ವಾಚಕಾಯ ಮಹಾತ್ಮನೇ ॥ ೬ ॥

ವಿಧಾನಸಹಿತಂ ಸಮ್ಯಕ್ಛ್ರುತಂ ಹಿ ಸಫಲಂ ಸ್ಮೃತಂ ।
ಪುರಾಣಂ ಶೌನಕಮುನೇ ಸತ್ಯಮೇವೋದಿತಂ ಮಯಾ ॥ ೭ ॥

---

೩. ಪುರಾಣವನ್ನು ಹೇಳುವ ಆಚಾರ್ಯನನ್ನು ಯಥಾವಿಧಿಯಾಗಿ ಪೂಜೆ ಮಾಡಿ ಆತನಿಗೆ ಹಸ್ತಾಭರಣಗಳನ್ನೂ, ಕರ್ಣಾಭರಣಗಳನ್ನೂ ವಸ್ತ್ರಾದಿಗಳನ್ನು ಕೊಟ್ಟು ಸಂತೋಷಪಡಿಸಬೇಕು.

೪-೫. ಶಿವಪೂಜೆಯನ್ನು ಮಾಡಿದನಂತರ ಕರುವಿನಿಂದ ಕೂಡಿದ ಹಸುವನ್ನು ಆಚಾರ್ಯನಿಗೆ ದಾನಕೊಡಬೇಕು. ಪೀಠದ ಮೇಲೆ ಕುಳ್ಳಿರಿಸಿ ಒಂದುಪಲ ತೂಕ ಸುವರ್ಣದೊಡನೆ ವಸ್ತ್ರವನ್ನಿಟ್ಟು ದಾನಕೊಡಬೇಕು. ಮತ್ತು ಸ್ಪಷ್ಟವಾಗಿ ಬರೆದಿರುವ ಶುಭವಾದ ಗ್ರಂಥವೊಂದನ್ನು ಅಲ್ಲಿಟ್ಟು ಆಚಾರ್ಯನಿಗೆ ದಾನವಾಗಿ ಕೊಡಬೇಕು. ಈರೀತಿ ಮಾಡಿದರೆ ಆತನು ಸಂಸಾರವೆಂಬ ಬಂಧನದಿಂದ ಬಿಡುಗಡೆಯನ್ನು ಹೊಂದುವನು.

೬. ಮತ್ತು ಅನುಕೂಲವಿದ್ದಲ್ಲಿ ಮಹಾತ್ಮನಾದ ಪೌರಾಣೀಕನಿಗೆ ಗ್ರಾಮವನ್ನಾಗಲೀ, ಕುದುರೆಯನ್ನಾಗಲಿ ಕೊಡಬಹುದು. ಅಥವಾ ತಮ್ಮ ಶಕ್ತಿಯಿದ್ದಂತೆ ಯಾವುದನ್ನಾದರೂ ಕೊಡಬಹುದು.

೭. ಎಲೈ ಶೌನಕನೇ, ವಿಧಾನಸಹಿತವಾಗಿ ನೀನು ಪುರಾಣವನ್ನು ಕೇಳಿರುವೆ. ಅದಕ್ಕೆ ಸರಿಯಾದ ಫಲವೂ ಉಂಟಾಗುವುದು. ನಾನು ನಿಜವಾದ ವಿಷಯವನ್ನು ಹೇಳಿರುವೆನು.

ತಸ್ಮಾದ್ವಿಧಾನಯುಕ್ತಂ ತು ಶೃಣುಯಾದ್ಭಕ್ತಿತೋ ಮುನೇ ।
ಪುರಾಣಂ ನಿಗಮಾರ್ಥಾಢ್ಯಂ ಪುಣ್ಯದಂ ಹೃದಯಂ ಶ್ರುತೇಃ ೮ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ವ್ಯಾಸಪೂಜನಪ್ರಕಾರೋ ನಾಮ ತ್ರಿಚತ್ವಾರಿಂಶೋಽಧ್ಯಾಯಃ



೮. ಆದುದರಿಂದ ಎಲೈ ಮುನಿಯೇ, ವಿಧ್ಯುಕ್ತವಾಗಿ ಪುರಾಣವನ್ನು ಭಕ್ತಿಯಿಂದ ಎಲ್ಲರೂ ಕೇಳಬೇಕು. ಇದರಲ್ಲಿ ವೇದಾರ್ಥಗಳು ತುಂಬಿವೆ. ಇದನ್ನು ಕೇಳಿದರೆ ಪುಣ್ಯವುಂಟಾಗುವುದು. ವೇದದ ಹೃದಯವೇ ಇದು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ವ್ಯಾಸಪೂಜನಪ್ರಕಾರವೆಂಬ
ನಲವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಚತುಶ್ಚತ್ವಾರಿಂಶೋಽಧ್ಯಾಯಃ

॥ ಮುನಯ ಊಚುಃ ॥

**ವ್ಯಾಸೋತ್ಪತ್ತಿಂ ಮಹಾಬುದ್ಧೇ ಬ್ರೂಹಿ ಸೂತ ದಯಾನಿಧೇ ।**
**ಕೃಪಯಾ ಪರಯಾ ಸ್ವಾಮಿನ್ಕೃತಾರ್ಥಾನ್ನಿಷ್ಕುರು ಪ್ರಭೋ ॥ ೧ ॥**

**ವ್ಯಾಸಸ್ಯ ಜನನೀ ಪ್ರೋಕ್ತಾ ನಾಮ್ನಾ ಸತ್ಯವತೀ ಶುಭಾ ।**
**ವಿವಾಹಿತಾ ತು ಸಾ ದೇವೀ ರಾಜ್ಞಾ ಶಂತನುನಾ ಕಿಲ ॥ ೨ ॥**

### ನಲವತ್ತನಾಲ್ಕನೆಯ ಅಧ್ಯಾಯವು

೧. ಋಷಿಗಳು ಸೂತಪುರಾಣಿಕನನ್ನು ಪ್ರಶ್ನೆಮಾಡುವರು :—ಎಲೈ ದಯಾನಿಧಿಯಾದ ಸೂತಮುನಿಯೇ, ನೀನು ಅತ್ಯಂತ ಪ್ರಾಜ್ಞನು ಮತ್ತು ಪ್ರಭುವು. ಆದುದರಿಂದ ನಮ್ಮ ಮೇಲೆ ದಯವಿಟ್ಟು ವ್ಯಾಸಮುನಿಯ ಉತ್ಪತ್ತಿಕ್ರಮವನ್ನು ಹೇಳು. ಅದನ್ನು ಕೇಳಿ ನಾವು ಕೃತಾರ್ಥರಾಗುವೆವು.

೨-೩. ವ್ಯಾಸಮುನಿಯ ತಾಯಿಯು ಮಂಗಳಕರಳಾದ ಸತ್ಯವತೀದೇವಿಯು. ಅವಳು ರಾಜನಾದ ಶಂತನುವಿನ ಮದುವೆಯಾದ ಪತ್ನಿಯಲ್ಲವೇ? ಹೀಗಿರಬೇಕಾದರೆ ಆ ಸತ್ಯವತಿಯಲ್ಲಿ ಪರಾಶರಮುನಿಯಿಂದ ಮಹಾಯೋಗಿಯಾದ ವ್ಯಾಸನು ಹೇಗೆ

ತಸ್ಯಾಂ ಜಾತೋ ಮಹಾಯೋಗೀ ಕಥಂ ವ್ಯಾಸಃ ಪರಾಶರಾತ್ ।
ಸಂದೇಹೋಽತ್ರ ಮಹಾಞ್ಜ್ಞಾತಸ್ತಂ ಭವಾಞ್ಛೇತ್ತು ಮರ್ಹತಿ　॥ ೩ ॥

॥ ಸೂತ ಉವಾಚ ॥

ಏಕದಾ ತೀರ್ಥಯಾತ್ರಾಯಾಂ ವ್ರಜನ್ ಯೋಗೀ ಪರಾಶರಃ ।
ಯದೃಚ್ಛಯಾಗತೋ ರಮ್ಯಂ ಯಮುನಾಯಾಸ್ತಟಂ ಶುಭಂ　॥ ೪ ॥

ನಿಷಾದಮಾಹ ಧರ್ಮಾತ್ಮಾ ಕುರ್ವಂತಂ ಭೋಜನಂ ತದಾ ।
ನಯಸ್ವ ಯಮುನಾಪಾರಂ ಜಲಯಾನೇನ ಮಾಮರಂ　॥ ೫ ॥

ಇತ್ಯುಕ್ತೋ ಮುನಿನಾ ತೇನ ನಿಷಾದಸ್ಸ್ವಸುತಾಂ ಜಗೌ ।
ಮತ್ಸ್ಯಗಂಧಾಮಮುಂ ಬಾಲೇ ಪಾರಂ ನಾವಾನಯ ದ್ರುತಂ　॥ ೬ ॥

ತಾಪಸೋಽಯಂ ಮಹಾಭಾಗೇ ದೃಶ್ಯಂತೀಗರ್ಭಸಂಭವಃ ।
ತಿತೀರ್ಷುರಸ್ತಿ ಧರ್ಮಾಬ್ಧಿಶ್ಚತುರಾಮ್ನಾಯಪಾರಗಃ　॥ ೭ ॥

ಹುಟ್ಟಿದನು ಎಂಬ ದೊಡ್ಡ ಸಂದೇಹವು ನಮಗುಂಟಾಗಿರುವುದು. ಅದನ್ನು ನೀನು ಹೋಗಲಾಡಿಸು ಎನ್ನಲು,

೪. ಸೂತನಿಂತೆಂದನು :—ಒಂದಾನೊಂದುದಿನ ಯೋಗಿಯಾದ ಪರಾಶರ ಮುನಿಯು ತೀರ್ಥಯಾತ್ರೆಯನ್ನು ಮಾಡುತ್ತಾ ಮನೋಹರವಾಗಿಯೂ, ಶುಭಪ್ರದ ವಾಗಿಯೂ ಇರುವ ಯಮುನಾನದಿಯ ತೀರಕ್ಕೆ ಅಕಸ್ಮಾತ್ತಾಗಿ ಬಂದನು.

೫. ಆ ಯಮುನಾನದಿಯ ತಟದಲ್ಲಿ ಒಬ್ಬ ಬೇಡನು ಊಟಮಾಡುತ್ತಾ ಕುಳಿತಿದ್ದನು. ಪರಾಶರನು ಅವನನ್ನು ಕುರಿತು, 'ನೀನು ನನ್ನನ್ನು ನಾವೆಯಿಂದ ನದಿಯ ಆಚೆಯ ದಡಕ್ಕೆ ಕರೆದುಕೊಂಡು ಹೋಗು' ಎಂದು ಹೇಳಿದನು.

೬-೭. ಆ ಬೇಡನು ಮುನಿಯ ಈ ಮಾತನ್ನು ಕೇಳಿ, ತನ್ನ ಮಗಳಾದ 'ಮತ್ಸ್ಯಗಂಧಿ' ಎಂಬುವಳನ್ನು ಕೂಗಿ ಅಮ್ಮಾ ಮಗು, ಈ ಮುನಿಯನ್ನು ಜಾಗ್ರತೆ ಯಾಗಿ ನಾವೆಯಲ್ಲಿ ಕುಳ್ಳಿರಿಸಿಕೊಂಡು ಆಚೆಯ ದಡವನ್ನು ತಲಪಿಸು. ಇಲ್ಲಿಗೆ ಬಂದಿರುವ ಈ ಪರಾಶರಮುನಿಯು ದೃಶ್ಯಂತೀ ಎಂಬುವಳ ಪುತ್ರನು. ಮಹಾ ತಪಸ್ವಿಯು. ಧರ್ಮಸಾಗರನು ಮತ್ತು ಚತುರ್ವೇದಪಾರಂಗತನು. ಈ ನದಿಯನ್ನು

ಇತಿ ವಿಜ್ಞಾಪಿತಾ ಪಿತ್ರಾ ಮತ್ಸ್ಯಗಂಧಾ ಮಹಾಮುನಿಂ ।
ಸಂವಾಹಯತಿ ನೌಕಾಯಾಮಾಸೀನಂ ಸೂರ್ಯರೋಚಿಷಂ ॥ ೮ ॥

ಕಾಲಯೋಗಾನ್ಮಹಾಯೋಗೀ ತಸ್ಯಾಂ ಕಾಮಾತುರೋಽಭವತ್ ।
ದೃಷ್ಟ್ವಾ ಯೋಽಪ್ಸರಸಾಂ ರೂಪಂ ನ ಕದಾಪಿ ವಿಮೋಹಿತಃ ॥ ೯ ॥

ಗೃಹೀತುಕಾಮಃ ಸ ಮುನಿರ್ದಾಶಕನ್ಯಾಂ ಮನೋಹರಾಂ ।
ದಕ್ಷಿಣೇನ ಕರೇಣೈತಾಮಸ್ಪೃಶದ್ದಕ್ಷಿಣೇ ಕರೇ ॥ ೧೦ ॥

ತಮುವಾಚ ವಿಶಾಲಾಕ್ಷೀ ವಚನಂ ಸ್ಮಿತಪೂರ್ವಕಂ ।
ಕಿಮಿದಂ ಕ್ರಿಯತೇ ಕರ್ಮ ವಾಚಂಯಮ ವಿಗರ್ಹಿತಂ ॥ ೧೧ ॥

ದಾಟಬೇಕೆಂದು ಇಲ್ಲಿಗೆ ಬಂದಿರುವನು. ಆದುದರಿಂದ ನೀನು ಇವನನ್ನು ನಾವೆಯಲ್ಲಿ ಕೂರಿಸಿಕೊಂಡು ಆಚೆದಡಕ್ಕೆ ತಲಪಿಸು ಎಂದನು.

೮. ಮತ್ಸ್ಯಗಂಧಿಯು ತಂದೆಯ ಅಪ್ಪಣೆಯಂತೆ ಹಡಗಿನಲ್ಲಿ ಕುಳಿತು, ಸೂರ್ಯನಂತೆ ತೇಜಸ್ವಿಯಾಗಿರುವ ಪರಾಶರಮುನಿಯನ್ನು ಆಚೆದಡಕ್ಕೆ ಒಯ್ಯಲು ಪ್ರಾರಂಭಿಸಿದಳು.

೯. ಅಪ್ಸರಸ್ತ್ರೀಯರ ಮನೋಹರವಾದ ರೂಪವನ್ನು ನೋಡಿದರೂ ಮೋಹಗೊಳ್ಳದಿದ್ದ ಪರಾಶರಮುನಿಯು ಅದೃಷ್ಟವಶದಿಂದ ಅವಳನ್ನು ನೋಡಿ ಕಾಮಾತುರನಾದನು.

೧೦. ಅನಂತರ ಆ ಮುನಿಯು ಮನೋಹರಳಾದ ಮತ್ಸ್ಯಗಂಧಿಯೆಂಬ ಆ ಬೇಡರ ಕನ್ಯೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳಲು ಅವಳ ಬಲಗೈಯನ್ನು ತನ್ನ ಬಲಗೈಯಿಂದ ಹಿಡಿದುಕೊಂಡನು.

೧೧. ವಿಶಾಲಾಕ್ಷಿಯಾದ ಆ ಯುವತಿಯು ಮುಗುಳ್ನಗೆ ನಗುತ್ತಾ ಎಲೈ ಮೌನಿಯೇ ಇದೇನೀ ನಿನ್ನ ಕೆಲಸ? ಇದು ನಿನ್ನಂತಹ ಋಷಿಗಳಿಗೆ ನಿಂದಿತವಾದ ಕೆಲಸವಲ್ಲವೇ?

ವಸಿಷ್ಠಸ್ಯ ಕುಲೇ ರಮ್ಯೇ ತ್ವಂ ಜಾತೋऽಸಿ ಮಹಾಮತೇ ।
ನಿಷಾದಜಾ ತ್ವಹಂ ಬ್ರಹ್ಮನ್ಕಥಂ ಸಂಗೋ ಘಟೇತ ನೌ ॥ ೧೨ ॥

ದುರ್ಲಭಂ ಮಾನುಷಂ ಜನ್ಮ ಬ್ರಾಹ್ಮಣತ್ವಂ ವಿಶೇಷತಃ ।
ತತ್ರಾಪಿ ತಾಪಸತ್ವಂ ಚ ದುರ್ಲಭಂ ಮುನಿಸತ್ತಮ ॥ ೧೩ ॥

ವಿದ್ಯಯಾ ವಪುಷಾ ವಾಚಾ ಕುಲಶೀಲೇನ ಚಾನ್ವಿತಃ ।
ಕಾಮಬಾಣವಶಂ ಯಾತೋ ಮಹದಾಶ್ಚರ್ಯಮತ್ರ ಹಿ ॥ ೧೪ ॥

ಪ್ರವೃತ್ತಮಸ್ಯಸತ್ಕರ್ಮ ಕರ್ತುಮೇನಂ ನ ಕೋऽಪಿ ಹ ।
ಭುವಿ ವಾರಯಿತುಂ ಶಕ್ತಃ ಶಾಪಭೀತ್ಯಾಸ್ಯ ಯೋಗಿನಃ ॥ ೧೫ ॥

೧೨. ನೀನು ಪವಿತ್ರವಾದ ವಸಿಷ್ಠವಂಶದಲ್ಲಿ ಹುಟ್ಟಿದವನು. ನಾನು ಬೇಡರ ಜಾತಿಯವಳು. ನೀನು ಬ್ರಾಹ್ಮಣನು. ನಾನು ನೀಚಕುಲದಲ್ಲಿ ಹುಟ್ಟಿದವಳು. ನಮ್ಮಿಬ್ಬರಿಗೂ ಹೇಗೆತಾನೇ ಸಂಗವು ನೆರವೇರೀತು !

೧೩. ಎಲೈ ಮುನಿಶ್ರೇಷ್ಠನೇ, ಲೋಕದಲ್ಲಿ ಮನುಷ್ಯಜನ್ಮವೇ ದುರ್ಲಭವು. ಅದರಲ್ಲೂ ಬ್ರಾಹ್ಮಣಜನ್ಮವಂತೂ ವಿಪರೀತ ದುರ್ಲಭವು. ಮುನಿಜನ್ಮವೆಂದರೆ ಆವೆರಡಕ್ಕಿಂತಲೂ ಅತ್ಯಂತ ದುರ್ಲಭವು. ಈ ಮೂರು ಜನ್ಮವೂ ಒಂದಕ್ಕಿಂತ ಮತ್ತೊಂದು ಉತ್ತರೋತ್ತರ ಉತ್ಕೃಷ್ಟವಾದುದು.

೧೪. ನೀನು ಬ್ರಾಹ್ಮಣಜನ್ಮದಲ್ಲಿ ಹುಟ್ಟಿ ಅತ್ಯುತ್ತಮವಾದ ತಾಪಸವೃತ್ತಿಯನ್ನವಲಂಬಿಸಿ ವಿದ್ಯೆಯಿಂದಲೂ, ಶರೀರದಿಂದಲೂ, ಮಾತುಗಳಿಂದಲೂ ಪವಿತ್ರನಾಗಿರುವೆ. ಸತ್ಕುಲಪ್ರಸೂತನಾದ ನೀನು ಕಾಮಮೋಹಿತನಾದನೆಂದರೆ ತುಂಬಾ ಆಶ್ಚರ್ಯಕರವಾದ ವಿಷಯವೇ ಸರಿ ಎಂದಳು.

೧೫-೧೬. ಪುನಃ ತನ್ನ ಮನಸ್ಸಿನಲ್ಲಿ ಈ ಋಷಿಯು ಕೆಟ್ಟಕೆಲಸವನ್ನು ಮಾಡಲು ತೊಡಗಿರುವನು. ಈ ಕೆಲಸದಿಂದ ಇವನನ್ನು ತಪ್ಪಿಸಲು ಯಾರಿಗೂ ಸಾಧ್ಯವಿಲ್ಲ. ಏಕೆಂದರೆ ಹಾಗೆ ತಪ್ಪಿಸಲು ಹೊರಟವರಿಗೆ ಸಿಟ್ಟಿನಿಂದ ಶಾಪವನ್ನು ಕೊಟ್ಟರೂ ಕೊಡಬಹುದು. ಎಂದು ಯೋಚಿಸಿ, ಪರಾಶರಮುನಿಯನ್ನು ಕುರಿತು,

**ಇತಿ ಸಂಚಿಂತ್ಯ ಹೃದಯೇ ನಿಜಗಾದ ಮಹಾಮುನಿಂ ।**
**ತಾವದ್ಧೈರ್ಯಂ ಕುರು ಸ್ವಾಮಿನ್ ಯಾವತ್ತ್ವಾಂ ಪಾರಯಾಮಿ ನ ॥ ೧೬ ॥**

**॥ ಸೂತ ಉವಾಚ ॥**

**ಇತಿ ಶ್ರುತ್ವಾ ವಚಸ್ತಸ್ಯಾ ಯೋಗಿರಾಜಃ ಪರಾಶರಃ ।**
**ತತ್ಯಾಜ ಪಾಣಿಂ ತರಸಾ ಸಿಂಧೋಃ ಪಾರಂ ಗತಃ ಪುನಃ ॥ ೧೭ ॥**

**ಪುನರ್ಜಗ್ರಾಹ ತಾಂ ಬಾಲಾಂ ಮುನಿಃ ಕಾಮಪ್ರಪೀಡಿತಃ ।**
**ಕಂಪಮಾನಾ ತು ಸಾ ಬಾಲಾ ತಮುವಾಚ ದಯಾನಿಧಿಂ ॥ ೧೮ ॥**

**ದುರ್ಗಂಧಾಹಂ ಮುನಿಶ್ರೇಷ್ಠ ಕೃಷ್ಣವರ್ಣಾ ನಿಷಾದಜಾ ।**
**ಭವಾಂಸ್ತು ಪರಮೋದಾರವಿಚಾರೋ ಯೋಗಿಸತ್ತಮಃ ॥ ೧೯ ॥**

**ನಾವಯೋರ್ಘಟಿತೇ ಸಂಗೋ ಕಾಚಕಾಂಚನಯೋರಿವ ।**
**ತುಲ್ಯಜಾತ್ಯಾಕೃತಿಕಯೋಃ ಸಂಗಃ ಸೌಖ್ಯಪ್ರದೋ ಭವೇತ್ ॥ ೨೦ ॥**

" ಸ್ವಾಮಿಯೇ ನಾನು ಆಚೆಯ ದಡಕ್ಕೆ ಸೇರಿಸುವವರೆಗೂ ಸ್ವಲ್ಪ ತಡೆ " ಎಂಬುದಾಗಿ ು.

೧೭. ಈರೀತಿಯಾಗಿ ಆ ಮತ್ಸ್ಯಗಂಧಿಯು ಹೇಳಲು ಅವಳ ಮಾತನ್ನು ಕೇಳಿ ಆ ಯೋಗಿಶ್ರೇಷ್ಠನಾದ ಪರಾಶರಮುನಿಯು ಅವಳ ಕೈಯನ್ನು ಬಿಟ್ಟು ಬಿಟ್ಟನು. ಮತ್ತು,

೧೮. ದಡವನ್ನು ಸೇರಿದ ಮೇಲೆ ಪುನಃ ಪರಾಶರನು ಕಾಮಪೀಡಿತನಾಗಿ ಆ ಬಾಲಿಕೆಯನ್ನು ಹಿಡಿದುಕೊಂಡನು. ಆ ಮತ್ಸ್ಯಗಂಧಿಯು ಇವನ ಕೃತ್ಯಕ್ಕೆ ನಡುಗುತ್ತಾ ಅವನನ್ನು ಕುರಿತು ಮತ್ತಿಂತೆಂದಳು.

೧೯. ಎಲೈ ಮುನಿಶ್ರೇಷ್ಠನೇ, ನಾನು ದುರ್ಗಂಧವುಳ್ಳವಳು. ಕಪ್ಪುಬಣ್ಣ ದವಳು. ಬೇಡರ ಜಾತಿಯವಳು. ನೀನಾದರೋ ಉದಾತ್ತಧ್ಯೇಯವುಳ್ಳವನೂ, ಮುನಿಶ್ರೇಷ್ಠನೂ ಆಗಿರುವೆ.

೨೦. ಹೀಗಿರುವ ನಮ್ಮಿಬ್ಬರಿಗೂ ಹೇಗೆತಾನೇ ಸಂಬಂಧವುಂಟಾದೀತು ? ಗಾಜಿಗೂ ಮತ್ತು ಚಿನ್ನಕ್ಕೂ ಎಲ್ಲಿಯಾದರೂ ಸಾಮ್ಯವುಂಟಾದೀತೇ ? ಸಂಬಂಧವು

ಇತ್ಯುಕ್ತೇನ ತಯಾ ತೇನ ಕ್ಷಣಮಾತ್ರೇಣ ಕಾಮಿನೀ ।
ಕೃತಾ ಯೋಜನಗಂಧಾ ತು ರಮ್ಯರೂಪಾ ಮನೋರಮಾ ॥ ೨೧ ॥

ಪುನರ್ಜಗ್ರಾಹ ತಾಂ ಬಾಲಾಂ ಸ ಮುನಿಃ ಕಾಮಪೀಡಿತಃ ।
ಗೃಹೀತುಕಾಮಂ ತಂ ದೃಷ್ಟ್ವಾ ಪುನಃ ಪ್ರೋವಾಚ ವಾಸವೀ ॥ ೨೨ ॥

ರಾತ್ರೌ ವ್ಯವಾಯಃ ಕರ್ತವ್ಯೋ ನ ದಿವೇತಿ ಶ್ರುತಿರ್ಜಗೌ ।
ದಿವಾಸಂಗೇ ಮಹಾನ್ದೋಷೋ ನಿಂದಾ ಚಾಪಿ ದುರಾಸದಾ ॥ ೨೩ ॥

ತಸ್ಮಾತ್ತಾವತ್ಪ್ರತೀಕ್ಷಸ್ವ ಯಾವದ್ಭವತಿ ಯಾಮಿನೀ ।
ಪಶ್ಯಂತಿ ಮಾನವಾಶ್ಚಾತ್ರ ಪಿತಾ ಮೇ ಚ ತಟೇ ಸ್ಥಿತಃ ॥ ೨೪ ॥

ನಡೆಯಬೇಕಾದರೆ ಒಂದೇಸಮನಾದ ಆಕಾರವೂ ಮತ್ತು ಜಾತಿಯೂ ಇರುವ ಗಂಡು ಹೆಣ್ಣುಗಳಿಗೆ ಮಾತ್ರ. ಈರೀತಿ ಸಮಾನರಾದವರಿಗೆ ಸಂಬಂಧವೇರ್ಪಟ್ಟರೆ ಅಂತಹ ಸಂಬಂಧವು ಅವರಿಬ್ಬರಿಗೂ ಅತ್ಯಂತ ಸುಖವನ್ನುಂಟುಮಾಡುವುದು ಎಂದಳು.

೨೧. ಆ ಮತ್ಸ್ಯಗಂಧಿಯು ಈ ರೀತಿಯಾಗಿ ಹೇಳುತ್ತಿರಲು, ಆ ಪರಾಶರ ಮುನಿಯು ಆಕ್ಷಣದಲ್ಲಿಯೇ ತನ್ನ ತಪಃಪ್ರಭಾವದಿಂದ ಮತ್ಸ್ಯಗಂಧವುಳ್ಳ ಅವಳ ಶರೀರವನ್ನು ಪರಿಮಳವಾದ ವಾಸನೆಯುಳ್ಳದ್ದನ್ನಾಗಿ ಮಾಡಿದನು. ಈ ಸುವಾಸನೆಯು ಒಂದು ಯೋಜನದವರೆಗೂ ವ್ಯಾಪಿಸುವಂತಿದ್ದಿತು. ಕಪ್ಪುಬಣ್ಣವು ಹೋಗಿ ಮನೋಹರವಾದ ರೂಪವಂತೆಯಾದಳು.

೨೨. ಅನಂತರ ಪರಾಶರನು ಕಾಮಪೀಡಿತನಾಗಿ ಪುನಃ ಅವಳನ್ನು ಹಿಡಿದುಕೊಂಡನು. ಈರೀತಿ ತನ್ನನ್ನು ಹಿಡಿದುಕೊಳ್ಳುತ್ತಿರುವ ಆ ಮುನಿಯನ್ನು ನೋಡಿ ಆ ಯೋಜನಗಂಧಿಯು ಅವನನ್ನು ಕುರಿತು,

೨೩-೨೪. ಎಲೈ ಮುನಿಯೇ, ನಾವಿಬ್ಬರೂ ರಾತ್ರಿಯಲ್ಲಿ ರಮಿಸೋಣ. ಹಗಲಿನಲ್ಲಿ ರಮಿಸಬಾರದೆಂದು ಶ್ರುತಿಯು ಹೇಳುತ್ತದೆ. ಹಗಲಿನಲ್ಲಿ ರಮಿಸಿದರೆ ಶ್ರುತಿಯನ್ನು ಮೀರಿದ ದೋಷವೂ, ಅತ್ಯಂತವಾದ ನಿಂದೆಯೂ ಸಹ ಉಂಟಾಗುವುದು. ಆದುದರಿಂದ ರಾತ್ರಿಯು ಬರುವವರೆಗೂ ಸ್ವಲ್ಪ ತಡೆ. ಏಕೆಂದರೆ ದೋಷವು ಬರುವುದೂ ಅಲ್ಲದೆ ಈಗ ಇಲ್ಲಿ ಜನಗಳೆಲ್ಲಾ ಓಡಾಡುತ್ತಿರುವರು. ಆಚೆಯ ದಡದಲ್ಲಿ ನಮ್ಮ ತಂದೆಯು ನೋಡುತ್ತಿರುವನು ಎಂದಳು.

ತಯೋಕ್ತಮಿದಮಾಕರ್ಣ್ಯ ವಚನಂ ಮುನಿಪುಂಗವಃ ।
ನೀಹಾರಂ ಕಲ್ಪಯಾಮಾಸ ಸದ್ಯಃ ಪುಣ್ಯಬಲೇನ ವೈ ॥ ೨೫ ॥

ನೀಹಾರೇ ಚ ಸಮುತ್ಪನ್ನೇ ತಮಸಾ ರಾತ್ರಿಸಂನಿಭೇ ।
ವ್ಯನಾಯಚಕಿತಾ ಬಾಲಾ ಪುನಃ ಪ್ರೋವಾಚ ತಂ ಮುನಿಂ ॥ ೨೬ ॥

ಯೋಗಿನ್ನಮೋಘವೀರ್ಯಸ್ತ್ವಂ ಭುಕ್ತ್ವಾ ಗಂತಾಸಿ ಮಾಂ ಯದಿ ।
ಸಗರ್ಭಾ ಸ್ಯಾಂ ತದಾ ಸ್ವಾಮಿನ್ ಕಾಗತಿರ್ಮೇ ಭವೇದಿತಿ ॥ ೨೭ ॥

ಕನ್ಯಾವ್ರತಂ ಮಹಾಬುದ್ಧೇ ಮಮ ನಷ್ಟಂ ಭವಿಷ್ಯತಿ ।
ಹಸಿಷ್ಯಂತಿ ತದಾ ಲೋಕಾಃ ಪಿತರಂ ಕಿಂ ಬ್ರವೀಮ್ಯಹಂ ॥ ೨೮ ॥

॥ ಪರಾಶರ ಉವಾಚ ॥

ರಮ ಬಾಲೇ ಮಯಾ ಸಾರ್ಧಂ ಸ್ವಚ್ಛಂದಂ ಕಾಮಜೈ ರಸೈಃ ।
ಸ್ವೀಯಾಭಿಲಾಷಮಾಖ್ಯಾಹಿ ಪೂರಯಾಮ್ಯಧುನಾ ಪ್ರಿಯೇ ॥ ೨೯ ॥

೨೫. ಯೋಜನಗಂಧಿಯ ಮಾತನ್ನು ಕೇಳಿ ಋಷಿಶ್ರೇಷ್ಠನಾದ ಪರಾಶರನು ತನ್ನ ತಪಶ್ಶಕ್ತಿಯಿಂದ ತಕ್ಷಣವೇ ಮಂಜುಬೀಳುವಂತೆ ಮಾಡಿದನು.

೨೬. ಮಂಜು ಮುಚ್ಚಿಕೊಳ್ಳಲು ಆಗ ಕತ್ತಲೆಯಿಂದ ಕೂಡಿದ ರಾತ್ರಿಯಂತೆಯೇ ಆ ಹಗಲು ಕಾಣಿಸಿತು. ಇದನ್ನು ನೋಡಿ ಯೋಜನಗಂಧಿಗೆ ಅತ್ಯಾಶ್ಚರ್ಯವಾಯಿತು ಮತ್ತು ಅವಳು ಪರಾಶರಮುನಿಯನ್ನು ಕುರಿತು,

೨೭-೨೮. ಎಲೈ ಮುನಿಯೇ, ನೀನೀಗ ನನ್ನೊಡನೆ ರಮಿಸಿ ಹೊರಟು ಹೋದರೆ, ನೀನು ಅಮೋಘವೀರ್ಯನಾಗಿರುವುದರಿಂದ ತಕ್ಷಣ ನಾನು ಗರ್ಭಿಣಿಯಾಗುವೆನು. ಆಗ ನನ್ನ ಕನ್ಯಾವಸ್ಥೆಯು ನಾಶವಾಗುವುದು. ಕನ್ಯಕಾವ್ರತವು ನಷ್ಟವಾಗುವುದು. ಜನಗಳೆಲ್ಲರೂ ನನ್ನನ್ನು ನೋಡಿ ಅಪಹಾಸ್ಯಮಾಡುವರು. ಆಗ ನಾನು ನಮ್ಮ ತಂದೆಗೆ ಈ ವಿಷಯವನ್ನು ಹೇಗೆತಾನೇ ತಿಳಿಸಲಿ ? ಮುಂದಿನ ನನ್ನ ಗತಿಏನು ? ಎಂದು ಪ್ರಾರ್ಥಿಸಿದಳು.

೨೯. ಪರಾಶರಮುನಿ ಇಂತೆಂದನು :—ಎಲೌ ಪ್ರೀತಿಪಾತ್ರಳೇ, ನೀನೀಗ ನನ್ನೊಡನೆ ಶೃಂಗಾರ ರಸಾಂಗಭಂಗಿಗಳಿಂದ ಯಥೇಚ್ಛವಾಗಿ ವಿಹರಿಸು. ನಿನ್ನಭಿಲಾಷೆಗಳು ಏನಿದ್ದರೂ ಹೇಳು ಸಂಕೋಚಪಡಬೇಡ. ನಾನು ನಡಿಸಿಕೊಡುವೆನು.

ಮದಾಜ್ಞಾಸತ್ಯಕರಣಾನ್ನಾಮ್ನಾ ಸತ್ಯವತೀ ಭವ ।
ವಂದನೀಯಾ ತಥಾಶೇಷೈರ್ಯೋಗಿಭಿಸ್ತ್ರಿದಶೈರಪಿ ॥ ೩೦ ॥

॥ ಸತ್ಯವತ್ಯುವಾಚ ॥

ಜಾನತೇ ನ ಪಿತಾ ಮಾತಾ ನ ವಾನ್ಯೇ ಭುವಿ ಮಾನವಾಃ ।
ಕನ್ಯಾಧರ್ಮೋ ನ ಮೇ ಹನ್ಯಾದ್ಯದಿ ಸ್ವೀಕುರು ಮಾಂ ತದಾ ॥ ೩೧ ॥

ಪುತ್ರಶ್ಚ ತ್ವತ್ಸಮೋ ನಾಥ ಭವೇದದ್ಭುತಶಕ್ತಿಮಾನ್ ।
ಸೌಗಂಧ್ಯಂ ಸರ್ವದಾಂಗೇ ಮೇ ತಾರುಣ್ಯಂ ಚ ನವಂನವಂ ॥ ೩೨ ॥

॥ ಪರಾಶರ ಉವಾಚ ॥

ಶೃಣು ಪ್ರಿಯೇ ತವಾಭೀಷ್ಟಂ ಸರ್ವಂ ಪೂರ್ಣಂ ಭವಿಷ್ಯತಿ ।
ವಿಷ್ಣ್ವಂಶಸಂಭವಃ ಪುತ್ರೋ ಭವಿತಾ ತೇ ಮಹಾಯಶಾಃ ॥ ೩೩ ॥

೩೦. ನನ್ನಾಜ್ಞೆಯನ್ನು ಸತ್ಯವನ್ನಾಗಿ ಮಾಡುವುದರಿಂದ ಎಂದರೆ ನನ್ನ ಅಭಿಲಾಷೆಯನ್ನು ಪೂರ್ತಗೊಳಿಸುವುದರಿಂದ ನಿನಗೆ ಸತ್ಯವತೀ ಎಂದು ಹೆಸರು ಬರಲಿ. ಮತ್ತು ನೀನು ಯೋಗಿಗಳಿಂದಲೂ, ದೇವತೆಗಳಿಂದಲೂ ನಮಸ್ಕರಿಸಲ್ಪಡಲು ಅರ್ಹಳಾಗುವೆ ಎಂದನು.

೩೧. ಸತ್ಯವತಿಯು ಇಂತೆಂದಳು:—ಎಲೈ ಮುನಿಯೇ, ನಾನು ನಿನ್ನಲ್ಲಿ ರಮಿಸಿರುವೆನೆಂಬ ವಿಷಯವು ನನ್ನ ತಂದೆಗಾಗಲೀ, ತಾಯಿಗಾಗಲೀ ಅಥವಾ ಪ್ರಪಂಚದಲ್ಲಿ ಯಾರಿಗಾದರೂ ಸರಿಯೇ ತಿಳಿಯಕೂಡದು ಮತ್ತು ನನ್ನ ಕನ್ಯಾಧರ್ಮವು ನಾಶವಾಗಬಾರದು. ಈರೀತಿಯಾಗಿ ನೀನು ನನ್ನನ್ನು ಅನುಗ್ರಹಿಸುವುದಾದರೆ ನೀನು ನನ್ನೊಡನೆ ವಿಹರಿಸಬಹುದು.

೩೨. ನನ್ನಲ್ಲಿ ಹುಟ್ಟುವ ಮಗನು ನಿನ್ನಂತೆಯೇ ಅದ್ಭುತಶಕ್ತಿಯುಳ್ಳವನಾಗಿರಬೇಕು. ನನ್ನ ಶರೀರವು ಯಾವಾಗಲೂ ಪರಿಮಳದ ವಾಸನೆಯಿಂದ ಕೂಡಿರಬೇಕು. ನನಗೆ ಯಾವಾಗಲೂ ಹೊಸಹೊಸದಾದ ತಾರುಣ್ಯವು ಉಕ್ಕುತ್ತಿರಬೇಕು ಎಂದು ಕೇಳಿಕೊಳ್ಳಲು,

೩೩. ಪರಾಶರನು ಸತ್ಯವತಿಯನ್ನು ಕುರಿತು—ಎಲೌ ಪ್ರಿಯಳೇ, ನಿನ್ನಭಿಲಾಷೆಗಳನ್ನೆಲ್ಲಾ ಪೂರ್ಣಮಾಡಿರುವೆನು. ನಿನ್ನಲ್ಲಿ ಹುಟ್ಟುವ ಪುತ್ರನು ವಿಷ್ಣ್ವಂಶಸಂಭೂತನು ಮತ್ತು ಅತ್ಯಂತ ಕೀರ್ತಿಶಾಲಿಯಾಗುವನು.

ಕಿಂಚಿದ್ವೈ ಕಾರಣಂ ವಿದ್ಧಿಂ ಯತೋಽಹಂ ಕಾಮಪೀಡಿತಃ ।
ದೃಷ್ಟ್ವಾ ಚಾಪ್ಸರಸಾಂ ರೂಪಂ ನಾಮುಹ್ಯನ್ಮೇ ಮನಃ ಕ್ವಚಿತ್ ॥ ೩೪ ॥

ಮೀನಗಂಧಾಂ ಸಮಾಲಕ್ಷ್ಯ ತ್ವಾಂ ಮೋಹವಶಗೋಽಭವಂ ।
ನ ಬಾಲೇ ಭಾಲಪಟ್ಟಸ್ಥೋ ಬ್ರಹ್ಮಲೇಖೋಽನ್ಯಥಾ ಭವೇತ್ ॥ ೩೫ ॥

ಪುರಾಣಕರ್ತಾ ಪುತ್ರಸ್ತೇ ವೇದಶಾಖಾವಿಭಾಗಕೃತ್ ।
ಭವಿಷ್ಯತಿ ವರಾರೋಹೇ ಖ್ಯಾತಕೀರ್ತಿರ್ಜಗತ್ತ್ರಯೇ ॥ ೩೬ ॥

ಇತ್ಯುಕ್ತ್ವಾ ತಾಂ ಸುರಮ್ಯಾಂಗೀಂ ಭುಕ್ತ್ವಾ ಯೋಗವಿಶಾರದಃ ।
ವವ್ರಾಜ ಶೀಘ್ರಂ ಯಮುನಾಜಲೇ ಸ್ನಾತ್ವಾ ಮಹಾಮುನೇ ॥ ೩೭ ॥

ಸಾಪಿ ಗರ್ಭಂ ದಧಾರಾಶು ದ್ವಾದಶಾತ್ಮಸಮಪ್ರಭಂ ।
ಅಸೂತ ಸೂರ್ಯಜಾದ್ವೀಪೇ ಕಾಮದೇವಮಿವಾತ್ಮಜಂ ॥ ೩೮ ॥

---

೩೪-೩೫. ಮನಮೋಹಿನಿಯರಾದ ಅಪ್ಸರಸ್ತ್ರೀಯರನ್ನು ನೋಡಿದರೂ ಕೂಡ ಮೋಹಗೊಳ್ಳದಿದ್ದ ನಾನು ನಿನ್ನಲ್ಲಿ, ಅದರಲ್ಲೂ ಮೀನಿನ ವಾಸನೆಯುಳ್ಳ ನಿನ್ನಲ್ಲಿ ಮೋಹಗೊಂಡಿರುವೆನೆಂದರೆ ಏನೋ ಕಾರಣವಿದ್ದೇ ಇರುವುದು. ಬ್ರಹ್ಮಲಿಪಿಯೇ, ಹಾಗಿರುವುದು. ಅಂತಹ ಬ್ರಹ್ಮನ ನಿಯಮವು ಎಂದಿಗೂ ಸುಳ್ಳಾಗುವುದಿಲ್ಲ.

೩೬. ಎಲೌ ಮಂಗಳಾಂಗಿಯೇ, ನಿನ್ನಲ್ಲಿ ಹುಟ್ಟುವ ಪುತ್ರನು ಪುರಾಣಗಳನ್ನು ರಚಿಸುವನು ಮತ್ತು ವೇದಗಳನ್ನು ವಿಭಾಗಮಾಡಿ ಮೂರು ಲೋಕದಲ್ಲಿಯೂ ಕೀರ್ತಿಯನ್ನು ಪಡೆಯುವನು ಎಂದನು.

೩೭. ಈರೀತಿಯಾಗಿ ಹೇಳಿ ಆ ಯೋಜನಗಂಧಿಯೊಡನೆ ಯೋಗಿಶ್ರೇಷ್ಠನಾದ ಪರಾಶರನು ರಮಿಸಿದನು. ಮತ್ತು ಯಮುನಾನದಿಯಲ್ಲಿ ಸ್ನಾನಮಾಡಿ ಶೀಘ್ರವಾಗಿ ಹೊರಟುಹೋದನು.

೩೮. ತಕ್ಷಣ ಸತ್ಯವತಿಯು ದ್ವಾದಶಸೂರ್ಯರಂತೆ ತೇಜೋಯುಕ್ತವಾದ ಗರ್ಭವನ್ನು ಧರಿಸಿದಳು. ಮತ್ತು ಸೂರ್ಯಜವೆಂಬ ದ್ವೀಪದಲ್ಲಿ ತೇಜಸ್ಸಿನಲ್ಲಿ ಮನ್ಮಥನಿಗೆ ಸಮಾನನಾದ ಪುತ್ರನನ್ನು ಹಡೆದಳು.

ವಾಮೇ ಕಮಂಡಲುಂ ಬಿಭ್ರದ್ದಕ್ಷಿಣೇ ದಂಡಮುತ್ತಮಂ ।
ಪಿಶಂಗೀಭಿರ್ಜಟಾಭಿಶ್ಚ ರಾಜಿತೋ ಮಹಸಾಂ ಚಯಃ ॥ ೩೯ ॥

ಜಾತಮಾತ್ರಸ್ತು ತೇಜಸ್ವೀ ಮಾತರಂ ಪ್ರತ್ಯಭಾಷತ ।
ಗಚ್ಛ ಮಾತರ್ಯಥಾಕಾಮಂ ಗಚ್ಛಾಮ್ಯಹಮತಃ ಪರಂ ॥ ೪೦ ॥

ಮಾತರ್ಯದಾ ಭವೇತ್ಕಾರ್ಯಂ ತವ ಕಿಂಚಿದ್ಧೃದೀಪ್ಸಿತಂ ।
ಸಂಸ್ಮೃತಶ್ಚಾಗಮಿಷ್ಯಾಮಿ ತ್ವದಿಚ್ಛಾಪೂರ್ತಿಹೇತವೇ ॥ ೪೧ ॥

ಇತ್ಯುಕ್ತ್ವಾ ಮಾತೃಚರಣಾವಭಿವಾದ್ಯ ತಪೋನಿಧಿಃ ।
ಜಗಾಮ ಚ ತಪಃ ಕರ್ತುಂ ತೀರ್ಥಂ ಪಾಪವಿಶೋಧನಂ ॥ ೪೨ ॥

ಸಾಪಿ ಪಿತ್ರಂತಿಕಂ ಯಾತಾ ಪುತ್ರಸ್ನೇಹಾಕುಲಾ ಸತೀ ।
ಸ್ಮರಂತೀ ಚರಿತಂ ಸೂನೋರ್ವರ್ಣಯಂತೀ ಸ್ವಭಾಗ್ಯಕಂ ॥ ೪೩ ॥

೩೯-೪೦. ಹುಟ್ಟಿದ ಮಗನು ಎಡಗೈಯಲ್ಲಿ ಕಮಂಡಲುವನ್ನೂ ಬಲಗೈಯಲ್ಲಿ ದಂಡವನ್ನೂ ಹಿಡಿದು ಬೂದುಬಣ್ಣದ ಜಟೆಗಳಿಂದ ಕೂಡಿ ತೇಜೋರಾಶಿಯಾಗಿ ಪ್ರಕಾಶಿಸುತ್ತಿದ್ದನು. ಮತ್ತು ಹುಟ್ಟಿದ ಕೂಡಲೇ ತಾಯಿಯನ್ನು ಕುರಿತು, ಎಲೌ ತಾಯೇ, ನೀನಿನ್ನು ಇಷ್ಟಬಂದಂತೆ ಹೊರಡಬಹುದು. ಅನಂತರ ನಾನಿಲ್ಲಿಂದ ಹೊರಡುವೆನು.

೪೧. ಎಲೌ ತಾಯೇ, ನಿನಗಭೀಷ್ಟವಾದ ಯಾವುದಾದರೂ ಕಾರ್ಯವು ನನ್ನಿಂದ ಆಗಬೇಕಾಗಿದ್ದಲ್ಲಿ ನನ್ನನ್ನು ಸ್ಮರಿಸಿಕೋ. ನಾನು ಕೂಡಲೇ ಬಂದು ನಿನ್ನಿಷ್ಟವನ್ನು ಪೂರ್ತಿಗೊಳಿಸುವೆನು ಎಂದು ಹೇಳಿದನು.

೪೨. ಈರೀತಿಯಾಗಿ ಹೇಳಿ ಆ ತಪೋನಿಧಿಯು ತಾಯಿಯಾದ ಸತ್ಯವತಿಯ ಚರಣಗಳಿಗಭಿವಂದಿಸಿ ತಪಸ್ಸನ್ನು ಮಾಡಲು ಪಾಪನಾಶಕವಾದ ತೀರ್ಥಗಳನ್ನು ಕುರಿತು ಹೊರಟುಹೋದನು.

೪೩. ಬಳಿಕ ಆ ಸತ್ಯವತಿ ಎಂದು ಹೆಸರುಪಡೆದ ಮತ್ಸ್ಯಗಂಧಿಯು ತಂದೆಯ ಸಮೀಪಕ್ಕೆ ಹೋದಳು. ಆಗಾಗ್ಗೆ ಪುತ್ರಸ್ನೇಹದಿಂದ ಕೂಡಿದವಳಾಗಿ ತನ್ನ ಮಗನ ಚರಿತ್ರೆಯನ್ನು ಸ್ಮರಿಸಿಕೊಳ್ಳುತ್ತಾ ಅಂತಹ ಮಗನನ್ನು ಪಡೆದ ತನ್ನ ಅದೃಷ್ಟವೇ ಅದೃಷ್ಟವೆಂದು ಸಂತೋಷಪಡುತ್ತಿದ್ದಳು.

ದ್ವಿಪೇ ಜಾತೋ ಯತೋ ಬಾಲಸ್ತೇನ ದ್ವೈಪಾಯನೋऽಭವತ್ ।
ವೇದಶಾಖಾವಿಭಜನಾದ್ವೇದವ್ಯಾಸಃ ಪ್ರಕೀರ್ತಿತಃ ॥ ೪೪ ॥

ತೀರ್ಥರಾಜಂ ಪ್ರಥಮತೋ ಧರ್ಮಕಾಮಾರ್ಥಮೋಕ್ಷದಂ ।
ನೈಮಿಷಂ ಚ ಕುರುಕ್ಷೇತ್ರಂ ಗಂಗಾದ್ವಾರಮವಂತಿಕಾಂ ॥ ೪೫ ॥

ಅಯೋಧ್ಯಾಂ ಮಥುರಾಂ ಚೈವ ದ್ವಾರಕಾಮಮರಾವತೀಂ ।
ಸರಸ್ವತೀಂ ಸಿಂಧುಸಂಗಂ ಗಂಗಾಸಾಗರಸಂಗಮಂ ॥ ೪೬ ॥

ಕಾಂಚೀಂ ಚ ತ್ರ್ಯಂಬಕಂ ಚಾಪಿ ಸಪ್ತಗೋದಾವರೀತಟಂ ।
ಕಾಲಂಜರಂ ಪ್ರಭಾಸಂ ಚ ತಥಾ ಬದರಿಕಾಶ್ರಮಂ ॥ ೪೭ ॥

ಗೋಕರ್ಣಂ ಭೃಗುಕಚ್ಛಂ ಚ ಭೃಗುತುಂಗಂ ಚ ಪುಷ್ಕರಂ ।
ಶ್ರೀಪರ್ವತಾದಿತೀರ್ಥಾನಿ ಧಾರಾತೀರ್ಥಂ ತಥೈವ ಚ ॥ ೪೮ ॥

ಮಹಾಲಯಂ ತಥೋಂಕಾರಕ್ಷೇತ್ರಂ ವೈ ಪೌರುಷೋತ್ತಮಂ ।
ಗತ್ವಾವಗಾಹ್ಯ ವಿಧಿನಾ ಚಚಾರ ಪರಮಂ ತಪಃ ॥ ೪೯ ॥

೪೪. ಸತ್ಯವತಿಯ ಮಗನು ದ್ವೀಪದಲ್ಲಿ ಹುಟ್ಟಿದುದರಿಂದ ಅವನಿಗೆ ದ್ವೈಪಾಯನನೆಂದೂ ವೇದಗಳ ಶಾಖೆಯನ್ನು ವಿಭಾಗಮಾಡಿದುದರಿಂದ ವೇದವ್ಯಾಸನೆಂದೂ ಹೆಸರಾಯಿತು.

೪೫-೪೬. ಅನಂತರ ವೇದವ್ಯಾಸನು ಧರ್ಮಾರ್ಥಕಾಮಮೋಕ್ಷಗಳನ್ನು ಕೊಡುವ ತೀರ್ಥಸಂಚಾರಕ್ಕಾಗಿ ಹೊರಟು ನೈಮಿಷಾರಣ್ಯ, ಕುರುಕ್ಷೇತ್ರ, ಗಂಗಾದ್ವಾರ, ಅವಂತಿಕಾ, ಅಯೋಧ್ಯಾ, ಮಥುರಾ, ದ್ವಾರಕ, ಅಮರಾವತಿ ಎಂಬ ದೇಶಗಳನ್ನೂ ಸಿಂಧು, ಸರಸ್ವತಿ, ಸಿಂಧುಸಂಗಮ, ಗಂಗಾಸಾಗರಸಂಗಮ ಮುಂತಾದ ನದಿಗಳನ್ನೂ ದಾಟಿ,

೪೭-೫೦. ಕಾಂಚೀ, ತ್ರ್ಯಂಬಕ, ಸಪ್ತಗೋದಾವರೀ, ಕಾಲಂಜರ, ಪ್ರಭಾಸ, ಬದರಿಕಾಶ್ರಮ, ಗೋಕರ್ಣ, ಭೃಗುಕಚ್ಛ, ಭೃಗುತುಂಗ, ಪುಷ್ಕರ ಎಂಬ ತೀರ್ಥಕ್ಷೇತ್ರಗಳನ್ನೂ ಶ್ರೀಪರ್ವತ, ಧಾರಾತೀರ್ಥ, ಮಹಾಲಯ, ಓಂಕಾರಕ್ಷೇತ್ರ, ಪೌರುಷೋತ್ತಮ ಎಂಬ ತೀರ್ಥಗಳಿಗೆ ಹೋಗಿ ಅಲ್ಲಿ ಯಥಾವಿಧಿಯಾಗಿ ಸ್ನಾನಮಾಡಿ

ಏವಂ ತೀರ್ಥಾನ್ಯನೇಕಾನಿ ನಾನಾದೇಶಸ್ಥಿತಾನಿ ಹ ।
ಪರ್ಯಟನ್ನಾಲಿಕಾಸೂನುಃ ಪ್ರಾಪದ್ವಾರಾಣಸೀಂ ಪುರೀಂ ॥ ೫೦ ॥

ಯತ್ರ ವಿಶ್ವೇಶ್ವರಃ ಸಾಕ್ಷಾದನ್ನಪೂರ್ಣಾ ಮಹೇಶ್ವರೀ ।
ಭಕ್ತಾನಾಮಮೃತಂ ದಾತುಂ ವಿರಾಜೇತೇ ಕೃಪಾನಿಧೀ ॥ ೫೧ ॥

ಪ್ರಾಪ್ಯ ವಾರಾಣಸೀತೀರ್ಥಂ ದೃಷ್ಟ್ವಾಥ ಮಣಿಕರ್ಣಿಕಾಂ ।
ಕೋಟಿಜನ್ಮಾರ್ಜಿತಂ ಪಾಪಂ ತತ್ಯಾಜ ಸ ಮುನೀಶ್ವರಃ ॥ ೫೨ ॥

ದೃಷ್ಟ್ವಾ ಲಿಂಗಾನಿ ಸರ್ವಾಣಿ ವಿಶ್ವೇಶಪ್ರಮುಖಾನಿ ಚ ।
ಸ್ನಾತ್ವಾ ಸರ್ವೇಷು ಕುಂಡೇಷು ವಾಪೀಕೂಪಸರಸ್ಸು ಚ ॥ ೫೩ ॥

ನತ್ವಾ ವಿನಾಯಕಾನ್ಸರ್ವಾನ್ ಗೌರೀಃ ಸರ್ವಾಃ ಪ್ರಣಮ್ಯ ಚ ।
ಸಂಪೂಜ್ಯ ಕಾಲರಾಜಂ ಚ ಭೈರವಂ ಪಾಪಭಕ್ಷಣಂ ॥ ೫೪ ॥

ದಂಡನಾಯಕಮುಖ್ಯಾಂಶ್ಚ ಗಣಾನ್ ಸ್ತುತ್ವಾ ಪ್ರಯತ್ನತಃ ।
ಆದಿಕೇಶವಮುಖ್ಯಾಂಶ್ಚ ಕೇಶವಾನ್ಪರಿತೋಷ್ಯ ಚ ॥ ೫೫ ॥

---

ಅಲ್ಲೆಲ್ಲಾ ಸಂಚರಿಸಿದನು. ಈರೀತಿಯಾಗಿ ಅನೇಕ ದೇಶಗಳನ್ನೂ, ತೀರ್ಥಕ್ಷೇತ್ರಗಳನ್ನೂ ಸಂದರ್ಶಿಸಿ ಅನಂತರ ಆ ವೇದವ್ಯಾಸನು ಕಾಶೀಪಟ್ಟಣಕ್ಕೆ ಹೋದನು.

೫೧. ಆ ಕಾಶಿಯಲ್ಲಿ ಅನ್ನಪೂರ್ಣಾದೇವಿಯೊಡನೆ ಕೂಡಿದ ಕೃಪಾನಿಧಿಯಾದ ವಿಶ್ವೇಶ್ವರನು ಭಕ್ತರಿಗೆ ಅಮೃತವನ್ನು ಕೊಡಲು ವಿರಾಜಿಸುತ್ತಿರುವನು.

೫೨. ವಾರಾಣಸೀ ತೀರ್ಥವನ್ನು ಸೇರಿದ ಮೇಲೆ ಅಲ್ಲಿ ಮಣಿಕರ್ಣಿಕಾ ಎಂಬ ಸ್ಥಳವನ್ನು ದರ್ಶನಮಾಡಿ ಕೋಟಿಜನ್ಮಾರ್ಜಿತವಾದ ತನ್ನ ಪಾಪಗಳನ್ನೆಲ್ಲಾ ಪರಿಹಾರ ಮಾಡಿಕೊಂಡನು.

೫೩. ಅಲ್ಲಿರತಕ್ಕ ಎಲ್ಲಾ ಭಾವಿ, ಕೊಳ, ಸರೋವರವೇ ಮುಂತಾದ ತೀರ್ಥಗಳಲ್ಲಿ ಸ್ನಾನಮಾಡಿ ವಿಶ್ವೇಶ್ವರನೇ ಮೊದಲಾದ ಲಿಂಗಗಳನ್ನು ದರ್ಶನನಮಸ್ಕಾರಗಳಿಂದ ಅರ್ಚಿಸಿದನು.

೫೪-೫೫. ಅಲ್ಲಿರುವ ಗಣಪತಿ, ಪಾರ್ವತಿದೇವಿ, ಪಾಪನಾಶಕನಾದ ಭೈರವ ಇವರನ್ನು ಭಕ್ತಿಯಿಂದ ನಮಸ್ಕರಿಸಿ ದಂಡನಾಯಕಾದಿ ಮುಖ್ಯ ಗಣಗಳನ್ನೂ ಆದಿಕೇಶವನೇ ಮೊದಲಾದ ವಿಷ್ಣುದೇವತೆಗಳನ್ನೂ ಸ್ತೋತ್ರಮಾಡಿ ಪೂಜಿಸಿದನು.

ಲೋಲಾರ್ಕಮುಖ್ಯಸೂರ್ಯಾಂಶ್ಚ ಪ್ರಣಮ್ಯ ಚ ಪುನಃ ಪುನಃ ।
ಕೃತ್ವಾ ಪಿಂಡಪ್ರದಾನಾನಿ ಸರ್ವತೀರ್ಥೇಷ್ವತಂದ್ರಿತಃ ॥ ೫೬ ॥

ಸ್ಥಾಪಯಾಮಾಸ ಪುಣಾತ್ಮಾ ಲಿಂಗಂ ವ್ಯಾಸೇಶ್ವರಾಭಿದಂ ।
ಯದ್ದರ್ಶನಾದ್ಭವೇದ್ವಿಪ್ರಾ ನರೋ ವಿದ್ಯಾಸು ವಾಕ್ಪತಿಃ ॥ ೫೭ ॥

ಲಿಂಗಾನ್ಯಭ್ಯರ್ಚ್ಯ ವಿಶ್ವೇಶಪ್ರಮುಖಾನಿ ಸುಭಕ್ತಿತಃ ।
ಅಸಕೃಚ್ಚಿಂತಯಾಮಾಸ ಕಿಂ ಲಿಂಗಂ ಕ್ಷಿಪ್ರಸಿದ್ಧಿದಂ ॥ ೫೮ ॥

ಯಮಾರಾಧ್ಯ ಮಹಾದೇವಂ ವಿದ್ಯಾಃ ಸರ್ವಾ ಲಭೇಮಹಿ ।
ಪುರಾಣಕರ್ತೃತಾಶಕ್ತಿರ್ಮಮಾಸ್ತು ಯದನುಗ್ರಹಾತ್ ॥ ೫೯ ॥

ಶ್ರೀಮದೋಂಕಾರನಾಥಂ ವಾ ಕೃತ್ತಿವಾಸೇಶ್ವರಂ ಕಿಮು ।
ಕೇದಾರೇಶಂ ನು ಕಾಮೇಶಂ ಚಂದ್ರೇಶಂ ವಾ ತ್ರಿಲೋಚನಂ ॥ ೬೦ ॥

---

೫೬. ಲೋಲಾರ್ಕನೇ ಮುಂತಾದ ಸೂರ್ಯರನ್ನು ಪುನಃಪುನಃ ನಮಸ್ಕರಿಸಿದನು. ಎಲ್ಲಾ ತೀರ್ಥಗಳಲ್ಲಿಯೂ ತೀರ್ಥಶ್ರಾದ್ಧವಿಧಿಯಿಂದ ಪಿಂಡಪ್ರದಾನವನ್ನು ಮಾಡಿದನು.

೫೭. ಮತ್ತು ಅಲ್ಲಿ ಪುಣ್ಯಾತ್ಮನಾದ ವ್ಯಾಸನು ವ್ಯಾಸೇಶ್ವರನೆಂಬ ಹೆಸರುಳ್ಳ ಲಿಂಗವನ್ನು ಪ್ರತಿಷ್ಠೆಮಾಡಿದನು ಅದನ್ನು ನೋಡಿದ ಮಾತ್ರದಿಂದಲೇ ಮನುಷ್ಯನು ವಿದ್ಯೆಯಲ್ಲಿ ಬೃಹಸ್ಪತಿಗೆ ಸಮಾನನಾಗುವನು.

೫೮-೫೯. ಅಲ್ಲಿರುವ ಲಿಂಗಗಳನ್ನೆಲ್ಲಾ ಪೂಜಿಸುತ್ತಾ ಆ ವ್ಯಾಸನು ಈರೀತಿ ಯೋಚಿಸಿದನು. ಯಾವ ಲಿಂಗವನ್ನು ಪೂಜಿಸಿದರೆ ನನಗೆ ಬೇಗ ಇಷ್ಟಾರ್ಥವು ಸಿದ್ಧಿಸುವುದು ಮತ್ತು ಯಾವ ಲಿಂಗದ ಅನುಗ್ರಹದಿಂದ ನನಗೆ ಪುರಾಣವನ್ನು ರಚಿಸುವ ಶಕ್ತಿಯುಂಟಾಗುವುದು ?

೬೦. ಈಗ ನಾನು ಓಂಕಾರನಾಥನನ್ನು ಪೂಜಿಸಲೇ ? ಅಥವಾ ಕೃತ್ತಿವಾಸೇಶ್ವರ ಕೇದಾರೇಶ ಅಥವಾ ಕಾಮೇಶ ಇವರಲ್ಲಿ ಯಾರನ್ನು ಪೂಜಿಸಲಿ ? ಪೂಜೆಗೆ ಸರಿಯಾದುದು ಚಂದ್ರೇಶಲಿಂಗವೇ ಅಥವಾ ತ್ರಿಲೋಚನಲಿಂಗವೇ ?

ಕಾಲೇಶಂ ವೃದ್ಧಕಾಲೇಶಂ ಕಲಶೇಶ್ವರಮೇವ ವಾ ।
ಜ್ಯೇಷ್ಠೇಶಂ ಜಂಬುಕೇಶಂ ವಾ ಜೈಗೀಷವ್ಯೇಶ್ವರಂ ತು ವಾ ॥ ೬೧ ॥

ದಶಾಶ್ವಮೇಧಮೀಶಾನಂ ದ್ರುಮಿಚಂಡೇಶಮೇವ ವಾ ।
ದೃಕ್ಕೇಶಂ ಗರುಡೇಶಂ ವಾ ಗೋಕರ್ಣೇಶಂ ಗಣೇಶ್ವರಂ ॥ ೬೨ ॥

ಪ್ರಸನ್ನವದನೇಶಂ ವಾ ಧರ್ಮೇಶಂ ತಾರಕೇಶ್ವರಂ ।
ನಂದಿಕೇಶಂ ನಿವಾಸೇಶಂ ಪತ್ರೀಶಂ ಪ್ರೀತಿಕೇಶ್ವರಂ ॥ ೬೩ ॥

ಪರ್ವತೇಶಂ ಪಶುಪತಿಂ ಹಾಟಕೇಶ್ವರಮೇವ ವಾ ।
ಬೃಹಸ್ಪತೀಶ್ವರಂ ವಾಥ ತಿಲಭಾಂಡೇಶಮೇವ ವಾ ॥ ೬೪ ॥

ಭಾರಭೂತೇಶ್ವರಂ ಕಿಂ ವಾ ಮಹಾಲಕ್ಷ್ಮೀಶ್ವರಂ ತು ವಾ ।
ಮರುತೇಶಂ ತು ಮೋಕ್ಷೇಶಂ ಗಂಗೇಶಂ ನರ್ಮದೇಶ್ವರಂ ॥ ೬೫ ॥

ಕೃಷ್ಣೇಶಂ ಪರಮೇಶಾನಂ ರತ್ನೇಶ್ವರಮಥಾಪಿ ವಾ ।
ಯಾಮುನೇಶಂ ಲಾಂಗಲೀಶಂ ಶ್ರೀಮದ್ವಿಶ್ವೇಶ್ವರಂ ವಿಭುಂ ॥ ೬೬ ॥

ಅವಿಮುಕ್ತೇಶ್ವರಂ ವಾಥ ವಿಶಾಲಾಕ್ಷೀಶಮೇವ ವಾ ।
ವ್ಯಾಘ್ರೇಶ್ವರಂ ವರಾಹೇಶಂ ವಿದ್ಯೇಶ್ವರಮಥಾಪಿ ವಾ ॥ ೬೭ ॥

೬೧-೬೩. ಕಾಲೇಶ, ವೃದ್ಧಕಾಲೇಶ, ಕಲಶೇಶ್ವರ, ಜ್ಯೇಷ್ಠೇಶ, ಜಂಬುಕೇಶ, ಜೈಗೀಷವ್ಯೇಶ, ದಶಾಶ್ವಮೇಧೇಶ್ವರ, ದ್ರುಮಿಚಂಡೀಶ, ದೃಕ್ಕೇಶ, ಗರುಡೇಶ, ಗೋಕರ್ಣೇಶ, ಗಣೇಶ್ವರ ಇವರಲ್ಲಿ ಯಾರನ್ನು ನಾನು ಪೂಜಿಸಲಿ? ಪ್ರಸನ್ನವದನೇಶ್ವರ, ಧರ್ಮೇಶ, ತಾರಕೇಶ್ವರ, ನಂದಿಕೇಶ್ವರ, ನಿವಾಸೇಶ್ವರ, ಪತ್ರೀಶೇಶ್ವರ, ಪ್ರೀತಿಕೇಶ್ವರ ಇವರಲ್ಲಿ ಯಾರು ನನ್ನ ಪೂಜೆಗೆ ಯೋಗ್ಯರು?

೬೪-೭೦. ಪರ್ವತೇಶ, ಪಶುಪತಿ, ಹಾಟಕೇಶ್ವರ, ಬೃಹಸ್ಪತೀಶ್ವರ, ತಿಲಭಾಂಡೇಶ್ವರ, ಭಾರಭೂತೇಶ್ವರ, ಮಹಾಲಕ್ಷ್ಮೀಶ್ವರ, ಮರುತೇಶ, ಮೋಕ್ಷೇಶ, ಗಂಗೇಶ, ನರ್ಮದೇಶ್ವರ, ಕೃಷ್ಣೇಶ, ಪರಮೇಶಾನ, ರತ್ನೇಶ್ವರ, ಯಾಮುನೇಶ, ಲಾಂಗಲೀಶ್ವರ, ಶ್ರೀಮದ್ವಿಶ್ವೇಶ್ವರ, ಅವಿಮುಕ್ತೇಶ್ವರ, ವಿಶಾಲಾಕ್ಷೀಶ್ವರ, ವ್ಯಾಘ್ರೇಶ್ವರ, ವರಾಹೇಶ್ವರ, ವಿದ್ಯೇಶ್ವರ, ವರುಣೇಶ, ವಿಧೀಶ, ಹರಿಕೇಶೇಶ್ವರ, ಭವಾನೀಶ, ಕಪರ್ದೀಶ, ಕಂದು

ವರುಣೇಶಂ ವಿಧೀಶಂ ವಾ ಹರಿಕೇಶೇಶ್ವರಂ ತು ವಾ ।
ಭವಾನೀಶಂ ಕಪರ್ದೀಶಂ ಕಂದುಕೇಶಮಜೇಶ್ವರಂ ॥ ೬೮ ॥

ವಿಶ್ವಕರ್ಮೇಶ್ವರಂ ವಾಥ ವೀರೇಶ್ವರಮಥಾಪಿ ವಾ ।
ನಾದೇಶಂ ಕಪಿಲೇಶಂ ವಾ ಭುವನೇಶ್ವರಮೇವ ಚ ॥ ೬೯ ॥

ವಾಷ್ಕುಲೀಶಂ ಮಹಾದೇವಂ ಸಿದ್ಧೀಶ್ವರಮಥಾಪಿ ವಾ ।
ವಿಶ್ವೇದೇವೇಶ್ವರಂ ವೀರಭದ್ರೇಶಂ ಭೈರವೇಶ್ವರಂ ॥ ೭೦ ॥

ಅಮೃತೇಶಂ ಸತೀಶಂ ವಾ ಪಾರ್ವತೀಶ್ವರಮೇವ ವಾ ।
ಸಿದ್ಧೇಶ್ವರಂ ಮತಂಗೇಶಂ ಭೂತೀಶ್ವರಮಥಾಪಿ ವಾ ॥ ೭೧ ॥

ಆಷಾಢೀಶಂ ಪ್ರಕಾಮೇಶಂ ಕೋಟಿರುದ್ರೇಶ್ವರಂ ತಥಾ ।
ಮದಾಲಸೇಶ್ವರಂ ಚೈವ ತಿಲಪರ್ಣೇಶ್ವರಂ ಕಿಮು ॥ ೭೨ ॥

ಕಿಂ ವಾ ಹಿರಣ್ಯಗರ್ಭೇಶಂ ಕಿಂ ವಾ ಶ್ರೀಮಧ್ಯಮೇಶ್ವರಂ ।
ಇತ್ಯಾದಿ ಕೋಟಿಲಿಂಗಾನಾಂ ಮಧ್ಯೇಽಹಂ ಕಿಮುಪಾಶ್ರಯೇ ॥ ೭೩ ॥

ಇತಿ ಚಿಂತಾತುರೋ ವ್ಯಾಸಃ ಶಿವಭಕ್ತಿರತಾತ್ಮವಾನ್ ।
ಕ್ಷಣಂ ವಿಚಾರಯಾಮಾಸ ಧ್ಯಾನಸುಸ್ಥಿರಚೇತಸಾ ॥ ೭೪ ॥

ಕೇಶ, ಅಜೇಶ್ವರ, ವಿಶ್ವಕರ್ಮೇಶ್ವರ, ವೀರೇಶ್ವರ, ನಾದೇಶ, ಕಪಿಲೇಶ, ಭುವನೇಶ್ವರ, ವಾಷ್ಕುಲೀಶ್ವರ, ಮಹಾದೇವ, ಸಿದ್ಧೀಶ್ವರ, ವೀರಭದ್ರೇಶ್ವರ, ಭೈರವೇಶ್ವರ ಇವರುಗಳಲ್ಲಿ ನಾನು ಯಾರನ್ನು ಪೂಜಿಸಲಿ ?

೭೧-೭೩. ಅಮೃತೇಶ, ಸತೀಶ, ಪಾರ್ವತೀಶ್ವರ, ಸಿದ್ಧೇಶ್ವರ, ಮತಂಗೇಶ್ವರ, ಭೂತೀಶ್ವರ, ಆಷಾಢೀಶ್ವರ, ಪ್ರಕಾಮೇಶ, ಕೋಟಿರುದ್ರೇಶ್ವರ, ಮದಾಲಸೇಶ್ವರ, ತಿಲಪರ್ಣೇಶ್ವರ, ಹಿರಣ್ಯಗರ್ಭೇಶ್ವರ, ಶ್ರೀಮಧ್ಯಮೇಶ್ವರ ಇವರುಗಳೇ ಮೊದಲಾದ ಕೋಟಿಲಿಂಗಗಳ ಮಧ್ಯದಲ್ಲಿ ಯಾರನ್ನು ನಾನು ಪೂಜಿಸಲಿ ?

೭೪. ಈರೀತಿಯಾಗಿ ವ್ಯಾಸಮುನಿಯು ಈಶ್ವರನ ಭಕ್ತಿಯಲ್ಲೇ ಮಗ್ನನಾಗಿ ಸ್ವಲ್ಪಹೊತ್ತು ಧ್ಯಾನದಿಂದ ಮನಸ್ಸನ್ನು ಸ್ಥಿರಮಾಡಿಕೊಂಡು ಯೋಚಿಸಿದನು.

ಅದ್ಯಜ್ಞಾತಂ ವಿಸ್ಮೃತಂ ತಾವನ್ನಿಷ್ಪನ್ನೋ ಮೇ ಮನೋರಥಃ ।
ಸಿದ್ಧೈಃ ಸಂಪೂಜಿತಂ ಲಿಂಗಂ ಧರ್ಮಕಾಮಾರ್ಥಮೋಕ್ಷದಂ ॥ ೭೫ ॥

ದರ್ಶನಾತ್ಸ್ಪರ್ಶನಾದ್ಯಸ್ಯ ಚೇತೋ ನಿರ್ಮಲತಾಮಿಯಾತ್ ।
ಉದ್ಘಾಟಿತಂ ಸದ್ಯೈವಾಸ್ತಿ ದ್ವಾರಂ ಸ್ವರ್ಗಸ್ಯ ಯತ್ರ ಹಿ ॥ ೭೬ ॥

ಅವಿಮುಕ್ತೇ ಮಹಾಕ್ಷೇತ್ರೇ ಸಿದ್ಧಕ್ಷೇತ್ರೇ ಹಿ ತತ್ಪರಂ ।
ಯತ್ರಾಸ್ತೇ ಪರಮಂ ಲಿಂಗಂ ಮಧ್ಯಮೇಶ್ವರಸಂಜ್ಞಕಂ ॥ ೭೭ ॥

ನ ಮಧ್ಯಮೇಶ್ವರಾದನ್ಯಲ್ಲಿಂಗಂ ಕಾಶ್ಯಾಂ ಹಿ ವಿದ್ಯತೇ ।
ಯದ್ದರ್ಶನಾರ್ಥಮಾಯಾಂತಿ ದೇವಾಃ ಪರ್ವಣಿ ಪರ್ವಣಿ ॥ ೭೮ ॥

ಅತಃ ಸೇವ್ಯೋ ಮಹಾದೇವೋ ಮಧ್ಯಮೇಶ್ವರಸಂಜ್ಞಕಃ ।
ಅಸ್ಯಾರಾಧನತೋ ವಿಪ್ರಾ ಬಹವಃ ಸಿದ್ಧಿಮಾಗತಾಃ ॥ ೭೯ ॥

೭೫-೭೭. ಓಹೋ! ಈಗ ಗೊತ್ತಾಯಿತು. ಇದುವರೆವಿಗೂ ಮರೆತು ಹೋಗಿತ್ತು. ಈ ಅವಿಮುಕ್ತ ಮಹಾಕ್ಷೇತ್ರದಲ್ಲಿ ನನ್ನ ಪೂಜೆಗೆ ಯೋಗ್ಯನಾಗಿರುವ ಲಿಂಗವೆಂದರೆ ಸಿದ್ಧರಿಂದ ಪೂಜಿಸಲ್ಪಟ್ಟ, ಧರ್ಮಾರ್ಥಕಾಮಮೋಕ್ಷಗಳನ್ನು ಕೊಡುವ ಮಧ್ಯಮೇಶ್ವರಲಿಂಗವು. ಈ ಮಧ್ಯಮೇಶ್ವರಲಿಂಗವನ್ನು ನೋಡಿದರೂ, ಮುಟ್ಟಿದರೂ ಸಹ ಮನಸ್ಸು ಪರಿಶುದ್ಧವಾಗುವುದು. ಇದನ್ನು ಪೂಜಿಸಿದವನಿಗೆ ಸ್ವರ್ಗವು ಲಭಿಸುವುದು.

೭೮. ಈ ಕಾಶೀಕ್ಷೇತ್ರದಲ್ಲಿ ಮಧ್ಯಮೇಶ್ವರನಿಗಿಂತ ಪವಿತ್ರವಾದ ಲಿಂಗವು ಮತ್ತೊಂದಿಲ್ಲ. ಇದರ ದರ್ಶನಾರ್ಥವಾಗಿ ಪ್ರತಿ ಪರ್ವಸಮಯಗಳಲ್ಲೂ ದೇವತೆಗಳು ಬರುತ್ತಾರೆ.

೭೯. ಆದುದರಿಂದ ಈ ಮಧ್ಯಮೇಶ್ವರನನ್ನು ನಾನೀಗ ಪೂಜೆಮಾಡಬೇಕು. ಎಷ್ಟೋ ಜನ ಬ್ರಾಹ್ಮಣರು ಈ ಮಧ್ಯಮೇಶ್ವರನನ್ನು ಪೂಜಿಸಿ ಸಿದ್ಧಿಯನ್ನು ಪಡೆದಿರುವರು.

ಯಃ ಪ್ರಧಾನತಯಾ ಕಾಶ್ಯಾ ಮಧ್ಯೇ ತಿಷ್ಠತಿ ಶಂಕರಃ ।
ಸ್ವಪುರೀಜನಸೌಖ್ಯಾರ್ಥಮತೋಽಸೌ ಮಧ್ಯಮೇಶ್ವರಃ ॥ ೮೦ ॥

ತುಂಬುರುರ್ನಾಮ ಗಂಧರ್ವೋ ದೇವರ್ಷಿರ್ನಾರದಸ್ತಥಾ ।
ಅಮುಮಾರಾಧ್ಯ ಸಂಪನ್ನೌ ಗಾನವಿದ್ಯಾವಿಶಾರದೌ ॥ ೮೧ ॥

ಅಮುಮೇವ ಸಮಾರಾಧ್ಯ ವಿಷ್ಣುರ್ಮೋಕ್ಷಪ್ರದೋಽಭವತ್ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸ್ರಷ್ಟೃಪಾಲಕಹಾರಕಾಃ ॥ ೮೨ ॥

ಧನಾಧೀಶಃ ಕುಬೇರೋಽಪಿ ವಾಮದೇವೋ ಹಿ ಶೈವರಾಟ್ ।
ಖಟ್ವಾಂಗೋ ನಾಮ ಭೂಪಾಲೋಽನಪತ್ಯೋ ಪತ್ಯವಾನಭೂತ್ ॥ ೮೩ ॥

ಅಪ್ಸರಾಶ್ಚಂದ್ರಭಾಮಾಖ್ಯಾ ನೃತ್ಯಂತೀ ನಿಜಭಾವತಃ ।
ಸದೇಹಾ ಕೋಕಿಲಾಲಾಪಾ ಲಿಂಗಮಧ್ಯೇ ಲಯಂ ಗತಾ ॥ ೮೪ ॥

೮೦. ಮಧ್ಯಮೇಶ್ವರನು ತನ್ನ ಪಟ್ಟಣದ ಜನಗಳಿಗೆ ಸುಖವನ್ನು ಕೊಡುವುದಕ್ಕೋಸ್ಕರವಾಗಿಯೇ ಕಾಶೀಪಟ್ಟಣದ ಮಧ್ಯಭಾಗದಲ್ಲಿ ನೆಲಸಿರುವನು.

೮೧. ಗಾನವಿದ್ಯಾಪ್ರವೀಣರಾದ ತುಂಬುರುವೂ ಮತ್ತು ದೇವಋಷಿಯಾದ ನಾರದನೂ ಮಧ್ಯಮೇಶ್ವರನನ್ನು ಪೂಜಿಸಿ ಸಂಗೀತವಿದ್ಯೆಯಲ್ಲಿ ಪ್ರವೀಣರಾಗಿರುವರು.

೮೧. ಈ ಮಧ್ಯಮೇಶ್ವರನನ್ನು ಪೂಜೆ ಮಾಡಿಯೇ ವಿಷ್ಣುವು ಮೋಕ್ಷವನ್ನು ಕೊಡುವ ಶಕ್ತಿಯನ್ನು ಸಂಪಾದಿಸಿರುವನು. ಮತ್ತು ಬ್ರಹ್ಮನು ಸೃಷ್ಟಿಕರ್ತನಾಗಿಯೂ, ವಿಷ್ಣುವೂ ಪಾಲಕನಾಗಿಯೂ, ರುದ್ರನು ಸಂಹಾರಕನಾಗಿಯೂ ಆಗಲು ಮಧ್ಯಮೇಶ್ವರನ ಪೂಜೆಯೇ ಕಾರಣವು.

೮೩. ಕುಬೇರನು ಈ ಮಧ್ಯಮೇಶ್ವರನನ್ನು ಪೂಜಿಸಿ ಧನಕ್ಕೆಲ್ಲಾ ಅಧಿಪತಿಯಾದನು. ವಾಮದೇವನು ಮಧ್ಯಮೇಶ್ವರನನ್ನು ಪೂಜಿಸಿ ಶೈವಶ್ರೇಷ್ಠನಾದನು. ಖಟ್ವಾಂಗನೆಂಬ ರಾಜನು ಪುತ್ರರಿಲ್ಲದೆ ಪೇಚಾಡುತ್ತಾ ಮಧ್ಯಮೇಶ್ವರನನ್ನು ಪೂಜೆ ಮಾಡಲು ಅವನಿಗೆ ಮಕ್ಕಳಾಯಿತು.

೮೪. ಚಂದ್ರಭಾಮೆಯೆಂಬ ಅಪ್ಸರಸ್ತ್ರೀಯು ಕೋಗಿಲೆಯಂತೆ ಮಧುರವಾಗಿ ಗಾನಮಾಡುತ್ತಾ ಮಧ್ಯಮೇಶ್ವರನ ಎದುರಿಗೆ ಹಾವಭಾವಗಳಿಂದ ನರ್ತನಮಾಡಿದಳು.

ಶ್ರೀಕರೋ ಗೋಪಿಕಾಸೂನುಃ ಸೇವಿತಾ ಮಧ್ಯಮೇಶ್ವರಂ ।
ಗಾಣಪತ್ಯಂ ಸಮಾಲೇಭೇ ಶಿವಸ್ಯ ಕರುಣಾತ್ಮನಃ ॥ ೮೫ ॥

ಭಾರ್ಗವೋ ಗೀಷ್ಪತಿಶ್ಚೋಭೌ ದೇವೌ ದೈತ್ಯಸುರಾರ್ಚಿತೌ ।
ವಿದ್ಯಾಪಾರಂಗವೌ ಜಾತೌ ಪ್ರಸಾದಾನ್ಮಧ್ಯಮೇಶಿತುಃ ॥ ೮೬ ॥

ಅಹಮಪ್ಯತ್ರ ಸಂಪೂಜ್ಯ ಮಧ್ಯಮೇಶ್ವರಮೀಶ್ವರಂ ।
ಪುರಾಣಕರ್ತೃತಾಶಕ್ತಿಂ ಪ್ರಾಪ್ಸ್ಯಾಮಿ ತರಸಾ ಧ್ರುವಂ ॥ ೮೭ ॥

ಇತಿ ಕೃತ್ವಾ ಮತಿಂ ಧೀರೋ ವ್ಯಾಸಃ ಸತ್ಯವತೀಸುತಃ ।
ಭಾಗೀರಥ್ಯಂಭಸಿ ಸ್ನಾತ್ವಾ ಜಗ್ರಾಹ ನಿಯಮಂ ವ್ರತೀ ॥ ೮೮ ॥

ವಾತಭುಗ್ಜಲಭುಕ್ಕ್ವಾಪಿ ಕ್ವಚಿನ್ನಿರಶನವ್ರತೀ ।
ಕ್ವಚಿತ್ಪರ್ಣಾಶನೋ ಭೂತ್ವಾ ಫಲಶಾಕಾಶನಃ ಕ್ವಚಿತ್ ॥ ೮೯ ॥

ಅನಂತರ ಮಧ್ಯಮೇಶ್ವರನು ಅವಳನ್ನು ತನ್ನಲ್ಲಿ ಐಕ್ಯಮಾಡಿಕೊಂಡನು ಎಂದರೆ ಸಾಯುಜ್ಯಪದವಿಯನ್ನು ಅನುಗ್ರಹಿಸಿದನು.

೮೫. ಶ್ರೀಕರನೆಂಬ ಗೋಪಿಕಾಪುತ್ರನು ಮಧ್ಯಮೇಶ್ವರನನ್ನು ಪೂಜಿಸಿ ಕರುಣಾಹೃದಯನಾದ ಶಿವನ ಅನುಗ್ರಹದಿಂದ ಅವನ ಗಣಗಳಲ್ಲಿ ಒಬ್ಬನಾದನು.

೮೬. ರಾಕ್ಷಸರಿಗೆ ಪೂಜ್ಯನಾದ ಶುಕ್ರನೂ, ದೇವತೆಗಳಿಗೆ ಪೂಜ್ಯನಾದ ಬೃಹಸ್ಪತಿಯೂ ಮಧ್ಯಮೇಶ್ವರನನ್ನು ಪೂಜಿಸಿ ಅವನ ಅನುಗ್ರಹದಿಂದ ಸಕಲವಿದ್ಯಾಪಾರಂಗತರಾದರು.

೮೭. ಆದುದರಿಂದ ನಾನೂ ಕೂಡ ಸರ್ವಲೋಕಾಧಿಪತಿಯಾದ ಈ ಮಧ್ಯಮೇಶ್ವರನನ್ನು ಪೂಜಿಸಿ ಪುರಾಣಗಳನ್ನು ರಚಿಸುವ ಶಕ್ತಿಯನ್ನು ಹೊಂದುವೆನು.

೮೮. ಈರೀತಿಯಾಗಿ ಯೋಚಿಸಿ ನಿರ್ಧಾರಮಾಡಿಕೊಂಡು ಆ ಸತ್ಯವತೀಸುತನಾದ ವ್ಯಾಸನು ಗಂಗಾನದಿಯಲ್ಲಿ ಸ್ನಾನಮಾಡಿ ಈಶ್ವರಾರಾಧನೆಗಾಗಿ ವ್ರತನಿಯಮವನ್ನು ಸ್ವೀಕರಿಸಿದನು ಎಂದರೆ ದೀಕ್ಷಾಬದ್ಧನಾದನು.

೮೯-೯೦. ಕೆಲವುದಿನ ಗಾಳಿಯನ್ನೇ ಆಹಾರಮಾಡಿಕೊಂಡೂ, ಕೆಲವುದಿನ ಏನೂ ಆಹಾರವನ್ನು ತೆಗೆದುಕೊಳ್ಳದೆಯೂ, ಕೆಲವುದಿನ ಎಲೆಗಳನ್ನೇ ತಿನ್ನುತ್ತಲೂ,

ಇತ್ಯಾದಿನಿಯಮೈರ್ಯೋಗೀ ತ್ರಿಕಾಲಂ ಮಧ್ಯಮೇಶ್ವರಂ ।
ಪೂಜಯಾಮಾಸ ಧರ್ಮಾತ್ಮಾ ನಾನಾವೃಕ್ಷೋದ್ಭವೈಃ ಫಲೈಃ ॥ ೯೦ ॥

ಇತ್ಥಂ ಬಹುತಿಥೇ ಕಾಲೇ ವ್ಯತೀತೇ ಕಾಲಿಕಾಸುತಃ ।
ಸ್ನಾತ್ವಾ ತ್ರಿಪಥಗಾತೋಯೇ ಯಾವದಾಯಾತಿ ಸ ಪ್ರಗೇ ॥ ೯೧ ॥

ಮಧ್ಯಮೇಶ್ವರಮೀಶಾನಂ ಭಕ್ತಾಭೀಷ್ಟವರಪ್ರದಂ ।
ತಾವದ್ದದರ್ಶ ಪುಣ್ಯಾತ್ಮಾ ಮಧ್ಯೇ ಲಿಂಗಂ ಮಹೇಶ್ವರಂ ॥ ೯೨ ॥

ಉಮಾಭೂಷಿತವಾಮಾಂಗಂ ವ್ಯಾಘ್ರಚರ್ಮೋತ್ತರೀಯಕಂ ।
ಜಟಾಜೂಟಚಲದ್ಗಂಗಾತರಂಗೈಶ್ಚಾರುವಿಗ್ರಹಂ ॥ ೯೩ ॥

ಲಸಚ್ಚಾರದಬಾಲೇಂದುಚಂದ್ರಿಕಾಚಂದಿತಾಲಕಂ ।
ಭಸ್ಮೋದ್ಧೂಲಿತಸರ್ವಾಂಗಂ ಕರ್ಪೂರರಾಜ್ಯುನವಿಗ್ರಹಂ ॥ ೯೪ ॥

ಕೆಲವುದಿನ ಹಣ್ಣು, ಕಾಯಿಗಳನ್ನು ತಿನ್ನುತ್ತಲೂ ಈರೀತಿಯಾಗಿ ಕಠಿನ ನಿಯಮ ಗಳಿಂದ ಮೂರು ಕಾಲದಲ್ಲಿಯೂ ನಾನಾಜಾತಿಯ ಮರಗಳ ಫಲಪುಷ್ಪಗಳಿಂದ ಮಧ್ಯಮೇಶ್ವರನನ್ನು ಭಕ್ತಿಯಿಂದ ಪೂಜಿಸಿದನು.

೯೧-೯೨. ಈರೀತಿಯಾಗಿ ಆ ವ್ಯಾಸನು ಬಹಳ ವರ್ಷಗಳನ್ನು ಕಳೆದನು. ಒಂದುದಿನ ಪ್ರಾತಃಕಾಲದಲ್ಲಿ ಗಂಗಾನದಿಯಲ್ಲಿ ಸ್ನಾನಮಾಡಿ ಬಂದಕೂಡಲೇ ಆ ಪುಣ್ಯಾತ್ಮನಾದ ವ್ಯಾಸನು ಮಧ್ಯೇಶ್ವರಲಿಂಗದ ಮಧ್ಯಭಾಗದಲ್ಲಿ ಉದ್ಭವಿಸಿರುವ, ಭಕ್ತರ ಇಷ್ಟಾರ್ಥವನ್ನು ನೆರವೇರಿಸುವ ಪ್ರತ್ಯಕ್ಷನಾದ ಪರಮೇಶ್ವರನನ್ನು ಕಂಡನು.

೯೩-೯೪. ಆ ಪರಮೇಶ್ವರನು ವ್ಯಾಘ್ರಚರ್ಮವನ್ನುಟ್ಟು ಎಡಗಡೆಯಲ್ಲಿ ಪಾರ್ವತಿಯನ್ನು ಕುಳ್ಳಿರಿಸಿಕೊಂಡು ಪ್ರಕಾಶಿಸುತ್ತಿದ್ದನು. ಅವನ ಶರೀರವು ಅವನ ಜಟಾಜೂಟದಲ್ಲಿರುವ ಗಂಗೆಯ ಅಲೆಗಳಿಂದ ಮನೋಹರವಾಗಿ ಒಪ್ಪುತ್ತಿತ್ತು. ಆ ಜಟಾಜೂಟವು ಪ್ರಕಾಶಮಾನವಾದ ಬಾಲಚಂದ್ರನ ಬೆಳದಿಂಗಳಿಂದ ಹೊಳೆಯು ತ್ತಿತ್ತು. ಅವನ ಶರೀರವೆಲ್ಲವೂ ಭಸ್ಮವನ್ನು ಲೇಪಿಸಿಕೊಂಡಿದ್ದರಿಂದ ಕರ್ಪೂರದಂತೆ ಬಿಳುಪಾಗಿ ಪ್ರಕಾಶಿಸುತ್ತಿತ್ತು.

ಕರ್ಣಾಂತಾಯತನೇತ್ರಂ ಚ ವಿದ್ರುಮಾರುಣದಚ್ಛದಂ ।
ಪಂಚವರ್ಷಾಕೃತಿಂ ಬಾಲಂ ಬಾಲಕೋಚಿತಭೂಷಣಂ ॥ ೯೫ ॥

ದಧಾನಂ ಕೋಟಿಕಂದರ್ಪದರ್ಪಹಾನಿತನುದ್ಯುತಿಂ ।
ನಗ್ನಂ ಪ್ರಹಸಿತಾಸ್ಯಾಬ್ಜಂ ಗಾಯಂತಂ ಸಾಮ ಲೀಲಯಾ ॥ ೯೬ ॥

ಕರುಣಾಸಾರಪಾಥೋಧಿಂ ಭಕ್ತವತ್ಸಲನಾಮಕಂ ।
ಆಶುತೋಷಮುಮಾಕಾಂತಂ ಪ್ರಸಾದಸುಮುಖಂ ಹರಂ ॥ ೯೭ ॥

ಸಮಾಲೋಕ್ಯ ಸ್ತುತಿಂ ಚಕ್ರೇ ಪ್ರೇಮಗದ್ಗದಯಾ ಗಿರಾ ।
ಯೋಗಿನಾಮಪ್ಯಗಮ್ಯಂ ತಂ ದೀನಬಂಧುಂ ಚಿದಾತ್ಮಕಂ ॥ ೯೮ ॥

॥ ವೇದವ್ಯಾಸ ಉವಾಚ ॥

ದೇವದೇವ ಮಹಾಭಾಗ ಶರಣಾಗತವತ್ಸಲ ।
ವಾಙ್ಮನಃಕರ್ಮದುಷ್ಪ್ರಾಪ ಯೋಗಿನಾಮಪ್ಯಗೋಚರ ॥ ೯೯ ॥

೯೫. ಅವನ ಕಣ್ಣುಗಳು ಕಿವಿಯವರೆಗೂ ವಿಶಾಲವಾಗಿಯೂ, ಹವಳದಂತೆ ಕೆಂಪಾಗಿಯೂ ಇದ್ದವು. ಅವನು ಐದುವರ್ಷದ ಬಾಲಕನಂತಿದ್ದು ಬಾಲಕರಿಗೆ ಯೋಗ್ಯವಾದ ಆಭರಣಗಳನ್ನಿಟ್ಟುಕೊಂಡು ಪ್ರಕಾಶಿಸುತ್ತಿದ್ದನು.

೯೬. ಮತ್ತು ಅವನ ಶರೀರಸೌಂದರ್ಯವು ಕೋಟಿ ಮನ್ಮಥರ ಶರೀರ ಸೌಂದರ್ಯಕ್ಕೂ ಮಿಗಿಲೆನಿಸಿತ್ತು. ಅವನ ಮುಖವು ಅರಳಿರುವ ಕಮಲವನ್ನು ಹೋಲುತ್ತಿತ್ತು. ಅವನು ಆನಂದವಾಗಿ ಸಾಮವೇದವನ್ನು ಗಾನಮಾಡುತ್ತಿದ್ದನು.

೯೭-೯೮. ಅವನು ಕರುಣಾಸಾಗರನು. ಭಕ್ತವತ್ಸಲನೆಂದು ಹೆಸರು ಪಡೆದವನು. ಭಕ್ತರನ್ನು ಜಾಗ್ರತೆಯಾಗಿ ಸಂತುಷ್ಟಿಗೊಳಿಸುವವನು. ಭಕ್ತರಿಗೆ ಅನುಗ್ರಹವನ್ನುಂಟುಮಾಡುವವನು. ಇಂತಹ ಈಶ್ವರನನ್ನು ನೋಡಿ ವ್ಯಾಸನು ಪ್ರೇಮಾಧಿಕ್ಯದಿಂದ ತಡವರಿಸುತ್ತಿರುವ ಧ್ವನಿಯಿಂದ ಆ ದೀನಬಂಧುವೂ, ಯೋಗಿಗಳಿಗೂ ದುರ್ಲಭನೂ, ಚಿತ್ಸ್ವರೂಪನೂ ಆದ ಪರಮೇಶ್ವರನನ್ನು ಸ್ತೋತ್ರ ಮಾಡಿದನು.

೯೯. ಎಲೈ ದೇವದೇವನಾದ ಪರಮೇಶ್ವರನೇ, ನೀನು ಪೂಜ್ಯನು. ಶರಣಾಗತವತ್ಸಲನು. ಮಾತುಗಳಿಂದ ನಿನ್ನನ್ನು ವರ್ಣಿಸುವುದಕ್ಕೂ, ಮನಸ್ಸಿನಲ್ಲಿ ಯೋಚಿಸು

ಮಹಿಮಾನಂ ನ ತೇ ವೇದಾ ವಿದಾಮಾಸುರುಮಾಪತೇ ।
ತ್ವಮೇವ ಜಗತಃ ಕರ್ತಾ ಧರ್ತಾ ಹರ್ತಾ ತಥೈವ ಚ ॥ ೧೦೦ ॥

ತ್ವಮಾದ್ಯಃ ಸರ್ವದೇವಾನಾಂ ಸಚ್ಚಿದಾನಂದ ಈಶ್ವರಃ ।
ನಾಮಗೋತ್ರೇ ನ ವಾ ತೇ ಸ್ತಃ ಸರ್ವಜ್ಞೋಽಸಿ ಸದಾಶಿವ ॥ ೧೦೧ ॥

ತ್ವಮೇವ ಪರಮಂ ಬ್ರಹ್ಮ ಮಾಯಾಪಾಶನಿವರ್ತಕಃ ।
ಗುಣತ್ರಯೈರ್ನ ಲಿಪ್ತಸ್ತ್ವಂ ಪದ್ಮಪತ್ರಮಿವಾಂಭಸಾ ॥ ೧೦೨ ॥

ನ ತೇ ಜನ್ಮ ನ ವಾ ಶೀಲಂ ನ ದೇಶೋ ನ ಕುಲಂ ಚ ತೇ ।
ಇತ್ಥಂ ಭೂತೋಽಪೀಶ್ವರಸ್ತ್ವಂ ತ್ರಿಲೋಕ್ಯಾಃ ಕಾಮಮಾವಹೇಃ
೧೦೩ ॥

ವುದಕ್ಕೂ, ವ್ರತಪೂಜಾದಿಗಳಿಂದ ನೋಡುವುದಕ್ಕೂ ದುರ್ಲಭನು. ಯೋಗಿಗಳಿಗೂ ಕೂಡ ಅಗೋಚರನಾದವನು.

೧೦೦. ಹೇ ಉಮಾಪತಿಯೇ, ವೇದಗಳೂ ಕೂಡ ನಿನ್ನ ಮಹಿಮೆಯನ್ನು ತಿಳಿಯಲಾರವು. ಜಗತ್ತಿನ ಸೃಷ್ಟಿಗೆ ನೀನೇ ಕಾರಣನು. ಜಗತ್ತನ್ನು ಪೋಷಿಸಿ ಕಾಪಾಡುವವನೂ, ಕಡೆಯಲ್ಲಿ ಅದನ್ನು ಸಂಹಾರಮಾಡುವವನೂ ನೀನೆ ಆಗಿರುವೆ.

೧೦೧. ಎಲೈ ಸದಾಶಿವನೇ, ನೀನು ದೇವತೆಗಳಲ್ಲೆಲ್ಲಾ ಮೊದಲನೆಯವನು. ಭಕ್ತರ ಅಭೀಷ್ಟವನ್ನು ನೆರವೇರಿಸುವವನು. ಸಚ್ಚಿದಾನಂದಸ್ವರೂಪನು. ನಿನಗೆ ಹೆಸರಾಗಲೀ ಗೋತ್ರವಾಗಲೀ ಇಲ್ಲವು. ಎಲ್ಲಾ ವಿಷಯಗಳನ್ನು ತಿಳಿದ ಸರ್ವಜ್ಞನು.

೧೦೨. ನೀನು ಪರಬ್ರಹ್ಮಸ್ವರೂಪನು. ಜೀವನ ಮಾಯಾಪಾಶವನ್ನು ನಾಶ ಮಾಡತಕ್ಕವನು. ನಿರ್ಗುಣಸ್ವರೂಪನು. ತಾವರೆಯ ಎಲೆಯ ಮೇಲಿರುವ ನೀರು ಹೇಗೆ ತಾವರೆ ಎಲೆಗೆ ಅಂಟಿಕೊಂಡಿರುವುದಿಲ್ಲವೋ ಹಾಗೆ ನಿನ್ನನ್ನು ಸತ್ವರಜಸ್ತಮೋ ಗುಣಗಳು ಮುಟ್ಟಲಾರವು.

೧೦೩. ನೀನು ಉತ್ಪತ್ತಿರಹಿತನು. ನಿನಗೆ ಕುಲವಾಗಲೀ, ಶೀಲವಾಗಲೀ, ದೇಶವಾಗಲೀ ಯಾವುದೂ ಇಲ್ಲ. ಹೀಗಿದ್ದರೂ ನೀನು ಮೂರುಲೋಕಕ್ಕೂ ಒಡೆಯ ನಾಗಿ ಜನಗಳ ಇಷ್ಟಾರ್ಥವನ್ನು ನೆರವೇರಿಸುವೆ.

ನ ಬ್ರಹ್ಮಾ ನ ಚ ಲಕ್ಷ್ಮೀಶೋ ನ ಚ ಸೇಂದ್ರಾ ದಿವೌಕಸಃ ।
ನ ಯೋಗೀಂದ್ರಾ ವಿದುಸ್ತತ್ತ್ವಂ ಯಸ್ಯ ತಂ ತ್ವಾಮುಪಾಸ್ಮಹೇ ॥ ೧೦೪ ॥

ತ್ವತ್ತಃ ಸರ್ವಂ ತ್ವಂ ಹಿ ಸರ್ವಂ ಗೌರೀಶಸ್ತ್ವಂ ಪುರಾಂತಕಃ ।
ತ್ವಂ ಬಾಲಸ್ತ್ವಂ ಯುವಾ ವೃದ್ಧಸ್ತ್ವಂ ತ್ವಾಂ ಹೃದಿ ಯುನಜ್ಮ್ಯಹಂ ॥ ೧೦೫ ॥

ನಮಸ್ತಸ್ಮೈ ಮಹೇಶಾಯ ಭಕ್ತಧ್ಯೇಯಾಯ ಶಂಭವೇ ।
ಪುರಾಣಪುರುಷಾಯಾದ್ಧಾ ಶಂಕರಾಯ ಪರಾತ್ಮನೇ ॥ ೧೦೬ ॥

ಇತಿ ಸ್ತುತ್ವಾ ಕ್ಷಿತೌ ಯಾವದ್ದಂಡವನ್ನಿಪಪಾತ ಸಃ ।
ತಾವತ್ಸ ಬಾಲೋ ಹೃಷ್ಟಾತ್ಮಾ ವೇದವ್ಯಾಸಮಭಾಷತ ॥ ೧೦೭ ॥

೧೦೪. ಬ್ರಹ್ಮನೂ, ವಿಷ್ಣುವೂ, ಇಂದ್ರನೇ ಮೊದಲಾದ ದೇವತೆಗಳೂ, ಮುನಿಶ್ರೇಷ್ಠರೂ ನಿನ್ನನ್ನುಪಾಸನೆಮಾಡುವರು. ಆದರೆ ನಿನ್ನ ತತ್ವವನ್ನು ಎಂದರೆ ನಿಜಸ್ವರೂಪವನ್ನು ಮಾತ್ರ ತಿಳಿಯಲಾರರು.

೧೦೫. ಎಲೈ ಗೌರೀಪತಿಯೇ, ನಿನ್ನಿಂದಲೇ ಸಮಸ್ತ ಪ್ರಪಂಚವೂ ನಡೆಯುತ್ತಿರುವುದು. ನೀನೇ ಸಮಸ್ತ ವಸ್ತುಸ್ವರೂಪನು. ನಿನ್ನನ್ನು ಬಿಟ್ಟು ಬೇರೆ ವಸ್ತುವಿಲ್ಲ. ನೀನು ತ್ರಿಪುರರನ್ನು ಕೊಂದವನು. ನೀನು ಹುಡುಗನೂ, ತರುಣನೂ, ವೃದ್ಧನೂ ಸಹ ಆಗಿರುವೆ. ಇಂತಹ ನಿನ್ನನ್ನು ನಾನು ಮನಸ್ಸಿನಲ್ಲಿ ಧ್ಯಾನ ಮಾಡುವೆನು.

೧೦೬. ನೀನು ಭಕ್ತರ ಧ್ಯಾನಕ್ಕೆ ವಿಷಯನಾಗಿರುವವನು, ಮಂಗಳಕರನು. ಇಂತಹ ಮಹೇಶ್ವರನಿಗೆ ನಮಸ್ಕಾರಗಳು. ಪುರಾಣಪುರುಷನೂ ಪರಮಾತ್ಮನೂ ಆದ ನಿನಗೆ ನಮಸ್ಕಾರವು.

೧೦೭-೧೦೮. ಈರೀತಿಯಾಗಿ ಸ್ತೋತ್ರಮಾಡಿ ವೇದವ್ಯಾಸನು ಈಶ್ವರನಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿದನು. ಇವನ ಭಕ್ತಿಗೆ ಮೆಚ್ಚಿ ಆ ಮಧ್ಯೇಶ್ವರನು ಸಂತೋಷಪಟ್ಟು "ಎಲೈ ಯೋಗಿಯೇ, ನಿನಗೆ ಇಷ್ಟವಾದ ವರವನ್ನು ಕೇಳಿಕೋ.

ವರಂ ವೃಣೀಷ್ವ ಭೋ ಯೋಗಿನ್ ಯಸ್ತೇ ಮನಸಿ ವರ್ತತೇ ।
ನಾದೇಯಂ ವಿದ್ಯತೇ ಕಿಂಚಿದ್ಭಕ್ತಾಧೀನೋ ಯತೋಽಸ್ಮ್ಯಹಂ ॥ ೧೦೮ ॥

ತತ ಉತ್ಥಾಯ ಹೃಷ್ಟಾತ್ಮಾ ಮುನಿರ್ವ್ಯಾಸೋ ಮಹಾತಪಾಃ ।
ಪ್ರತ್ಯಬ್ರವೀತ್ಕಿಮಜ್ಞಾತಂ ಸರ್ವಜ್ಞಸ್ಯ ತವ ಪ್ರಭೋ ॥ ೧೦೯ ॥

ಸರ್ವಾಂತರಾತ್ಮಾ ಭಗವನ್ ಶರ್ವಃ ಸರ್ವಪ್ರದೋ ಭವಾನ್ ।
ಯಾಚ್ಞಾಂ ಪ್ರತಿನಿಯುಂಕ್ತೇ ಮಾಂ ಕಿಮೀಶೋ ದೈನ್ಯಕಾರಿಣೀಂ ॥ ೧೧೦ ॥

ಇತಿ ಶ್ರುತ್ವಾ ವಚಸ್ತಸ್ಯ ವ್ಯಾಸಸ್ಯಾಮಲಚೇತಸಃ ।
ಶುಚಿ ಸ್ಮಿತ್ವಾ ಮಹಾದೇವೋ ಬಾಲರೂಪಧರೋಽಬ್ರವೀತ್ ॥ ೧೧೧ ॥

॥ ಬಾಲ ಉವಾಚ ॥

ತ್ವಯಾ ಬ್ರಹ್ಮವಿದಾಂ ಶ್ರೇಷ್ಠ ಯೋಽಭಿಲಾಷಃ ಕೃತೋ ಹೃದಿ ।
ಅಚಿರೇಣೈವ ಕಾಲೇನ ಸ ಭವಿಷ್ಯತ್ಯಸಂಶಯಃ ॥ ೧೧೨ ॥

ನಾನು ಭಕ್ತಪರಾಧೀನನಾದುದರಿಂದ ನೀನು ಯಾವುದನ್ನು ಕೇಳಿದರೂ ಕೊಡುವೆನು" ಎಂದು ಹೇಳಿದನು.

೧೦೯-೧೧೦. ಅನಂತರ ವೇದವ್ಯಾಸನು ಆನಂದದಿಂದ ಮೇಲಕ್ಕೆದ್ದು ಮಧ್ಯಮೇಶ್ವರನನ್ನು ಕುರಿತು ಎಲೈ ಪ್ರಭುವೇ, ಸರ್ವಜ್ಞನಾದ ನಿನಗೆ ತಿಳಿಯದ ವಿಷಯವಾವುದು? ನೀನು ಸರ್ವಾಂತರ್ಯಾಮಿಯು. ಭಕ್ತರು ಕೇಳಿದುದೆಲ್ಲವನ್ನೂ ಕೊಡುವವನು. ಇಂತಹ ನೀನು ನನ್ನನ್ನು ವರವನ್ನು ಕೇಳು ಎಂದು ಏತಕ್ಕೆ ಆಜ್ಞಾಪಿಸುವೆ? ಎಂದನು.

೧೧೧. ಈರೀತಿಯಾದ ಶುದ್ಧಚಿತ್ತನಾದ ವ್ಯಾಸನ ಮಾತನ್ನು ಕೇಳಿ, ಬಾಲರೂಪವನ್ನು ಧರಿಸಿರುವ ಆ ಮಧ್ಯಮೇಶ್ವರನು ಮುಗುಳ್ನಗೆ ನಗುತ್ತಾ ವ್ಯಾಸನನ್ನು ಕುರಿತು,

೧೧೨-೧೧೩. ಎಲೈ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ವ್ಯಾಸನೇ, ನಿನ್ನ ಮನಸ್ಸಿನಲ್ಲಿ ಯಾವ ಅಭಿಲಾಷೆಯಿರುವುದೋ ಅದು ಸ್ವಲ್ಪಕಾಲದಲ್ಲೇ ನೆರವೇರು

ಕಂಠೇ ಸ್ಥಿತ್ವಾ ತವ ಬ್ರಹ್ಮನ್ನಂತರ್ಯಾಮ್ಯಹಮೀಶ್ವರಃ ।
ಸೇತಿಹಾಸಪುರಾಣಾನಿ ಸಮ್ಯಜ್ನಿರ್ಮಾಪಯಾಮ್ಯಹಂ ॥ ೧೧೩ ॥

ಅಭಿಲಾಷಾಷ್ಟಕಂ ಪುಣ್ಯಂ ಸ್ತೋತ್ರಮೇತತ್ತ್ವಯೇರಿತಂ ।
ವರ್ಷಂ ತ್ರಿಕಾಲಂ ಪಠನಾತ್ಕಾಮದಂ ಶಂಭುಸದ್ಮನಿ ॥ ೧೧೪ ॥

ಏತತ್ಸ್ತೋತ್ರಸ್ಯ ಪಠನಂ ವಿದ್ಯಾಬುದ್ಧಿವಿವರ್ಧನಂ ।
ಸರ್ವಸಂಪತ್ಕರಂ ಪ್ರೋಕ್ತಂ ಧರ್ಮದಂ ಮೋಕ್ಷದಂ ನೃಣಾಂ ॥ ೧೧೫ ॥

ಪ್ರಾತರುತ್ಥಾಯ ಸುಸ್ನಾತೋ ಲಿಂಗಮಭ್ಯರ್ಚ್ಯ ಶಾಂಕರಂ ।
ವರ್ಷಂ ಪಠನ್ನಿದಂ ಸ್ತೋತ್ರಂ ಮೂರ್ಖೋಽಪಿ ಸ್ಯಾದ್ಬೃಹಸ್ಪತಿಃ ॥೧೧೬॥

ಸ್ತ್ರಿಯಾ ವಾ ಪುರುಷೇಣಾಪಿ ನಿಯಮಾಲ್ಲಿಂಗಸನ್ನಿಧೌ ।
ವರ್ಷಂ ಜಪ್ತಮಿದಂ ಸ್ತೋತ್ರಂ ಬುದ್ಧಿಂ ವಿದ್ಯಾಂ ಚ ವರ್ಧಯೇತ್
॥ ೧೧೭ ॥

---

ವುದು. ಇದರಲ್ಲಿ ಸಂಶಯವಿಲ್ಲ. ನಾನು ಅಂತರ್ಯಾಮಿಯಾಗಿ ನಿನ್ನ ಕಂಠದಲ್ಲಿದ್ದು ಇತಿಹಾಸ, ಪುರಾಣಗಳನ್ನು ರಚಿಸುವಂತೆ ಮಾಡುವೆನು.

೧೧೪. ನೀನು ನನ್ನನ್ನು ಕುರಿತು ಮಾಡಿದ ಅಭಿಲಾಷಾಷ್ಟಕವೆಂಬ ಈ ಸ್ತೋತ್ರವನ್ನು ಮೂರುಕಾಲದಲ್ಲೂ ಪಾರಾಯಣಮಾಡಿದರೆ ಸಮಸ್ತ ಇಷ್ಟಾರ್ಥವು ನೆರವೇರುವುದು.

೧೧೫. ಈ ಸ್ತೋತ್ರವನ್ನು ಪಠಿಸುವುದರಿಂದ ವಿದ್ಯೆಯೂ ಬುದ್ಧಿಯೂ ಅಭಿವೃದ್ಧಿಯಾಗುವುವು. ಇದು ಸರ್ವಸೌಭಾಗ್ಯಗಳನ್ನು ಕೊಡುವುದು. ಜನರಿಗೆ ಧರ್ಮವನ್ನೂ ಮೋಕ್ಷವನ್ನೂ ಉಂಟುಮಾಡುವುದು.

೧೧೬. ಪ್ರತಿದಿನವೂ ಬೆಳಿಗ್ಗೆ ಸ್ನಾನಮಾಡಿದ ನಂತರ ಈಶ್ವರನನ್ನು ಪೂಜಿಸಿ ಒಂದು ವರ್ಷಕಾಲ ಈ ಸ್ತೋತ್ರವನ್ನು ಪಠಿಸಿದರೆ ವಿದ್ಯೆಯಿಲ್ಲದೆ ಮುರ್ಖನಾಗಿದ್ದರೂ ಆ ಮನುಷ್ಯನು ಬೃಹಸ್ಪತಿಯಂತೆ ವಿದ್ಯಾವಂತನಾಗುವನು.

೧೧೭. ಸ್ತ್ರೀಯಾಗಲೀ, ಪುರುಷನಾಗಲೀ ನಿಯಮವಾಗಿ ಈಶ್ವರನ ಲಿಂಗ ಸಮೀಪದಲ್ಲಿ ಒಂದುವರ್ಷ ಈ ಅಭಿಲಾಷಾಷ್ಟಕವನ್ನು ಸ್ತೋತ್ರಮಾಡಿದರೆ ಅವರಿಗೆ ವಿದ್ಯೆಯೂ, ಬುದ್ಧಿಯೂ ಅಭಿವೃದ್ಧಿಯಾಗುವುವು.

ಇತ್ಯುಕ್ತ್ವಾ ಸ ಮಹಾದೇವೋ ಬಾಲೋ ಲಿಂಗೇ ನ್ಯಲೀಯತ ।
ವ್ಯಾಸೋಽಪಿ ಮುಂಚನ್ನಶ್ರೂಣಿ ಶಿವಪ್ರೇಮಾಕುಲೋಽಭವತ್ ॥ ೧೧೮ ॥

ಏವಂ ಲಬ್ಧವರೋ ವ್ಯಾಸೋ ಮಹೇಶಾನ್ಮಧ್ಯಮೇಶ್ವರಾತ್ ।
ಅಷ್ಟಾದಶ ಪುರಾಣಾನಿ ಪ್ರಣಿನಾಯ ಸ್ವಲೀಲಯಾ ॥ ೧೧೯ ॥

ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ ।
ಭವಿಷ್ಯಂ ನಾರದೀಯಂ ಚ ಮಾರ್ಕಂಡೇಯಮತಃ ಪರಂ ॥ ೧೨೦ ॥

ಆಗ್ನೇಯಂ ಬ್ರಹ್ಮವೈವರ್ತಂ ಲೈಂಗಂ ವಾರಾಹಮೇವ ಚ ।
ವಾಮನಾಖ್ಯಂ ತತಃ ಕೌರ್ಮಂ ಮಾತ್ಸ್ಯಂ ಗಾರುಡಮೇವ ಚ ॥ ೧೨೧ ॥

ಸ್ಕಾಂದಂ ತಥೈವ ಬ್ರಹ್ಮಾಂಡಾಖ್ಯಂ ಪುರಾಣಂ ಚ ಕೀರ್ತಿತಂ ।
ಯಶಸ್ಯಂ ಪುಣ್ಯದಂ ನೄಣಾಂ ಶ್ರೋತೄಣಾಂ ಶಾಂಕರಂ ಯಶಃ ॥ ೧೨೨ ॥

೧೧೮. ಹೀಗೆ ಹೇಳಿ ಬಾಲಕನ ರೂಪವನ್ನು ಧರಿಸಿದ ಆ ಮಧ್ಯಮೇಶ್ವರನು ಅಲ್ಲಿದ್ದ ಲಿಂಗದಲ್ಲಿ ಲೀನನಾದನು. ವ್ಯಾಸನೂ ಕೂಡ ಆನಂದಬಾಷ್ಪವನ್ನು ಸುರಿಸುತ್ತಾ ಶಿವನ ಭಕ್ತಿಯಲ್ಲಿ ತತ್ಪರನಾದನು.

೧೧೯. ಈರೀತಿಯಾಗಿ ಮಧ್ಯಮೇಶ್ವರನ ಅನುಗ್ರಹದಿಂದ ವೇದವ್ಯಾಸನು ಹದಿನೆಂಟು ಪುರಾಣಗಳನ್ನು ರಚಿಸಿದನು.

೧೨೦-೧೨೨. ಬ್ರಹ್ಮಪುರಾಣ, ಪದ್ಮಪುರಾಣ, ವಿಷ್ಣುಪುರಾಣ, ಶಿವಪುರಾಣ, ಭಾಗವತಪುರಾಣ, ಭವಿಷ್ಯಪುರಾಣ, ನಾರದೀಯಪುರಾಣ, ಮಾರ್ಕಂಡೇಯಪುರಾಣ, ಆಗ್ನೇಯಪುರಾಣ, ಬ್ರಹ್ಮವೈವರ್ತಕಪುರಾಣ, ಲಿಂಗಪುರಾಣ, ವರಾಹಪುರಾಣ, ವಾಮನಪುರಾಣ, ಕೂರ್ಮಪುರಾಣ, ಮತ್ಸ್ಯಪುರಾಣ, ಗರುಡಪುರಾಣ, ಸ್ಕಾಂದಪುರಾಣ, ಬ್ರಹ್ಮಾಂಡಪುರಾಣ ಇವೇ ಆ ಹದಿನೆಂಟು ಪುರಾಣಗಳು. ಇವೆಲ್ಲವೂ ಕೇಳುವ ಜನಗಳಿಗೆ ಕೀರ್ತಿಯನ್ನೂ ಪುಣ್ಯವನ್ನೂ ಕೊಡುವುವು.

॥ ಸೂತ ಉವಾಚ ॥

ಅಷ್ಟಾದಶಪುರಾಣಾನಾಂ ಪೂರ್ವಂ ನಾಮೋದಿತಂ ತ್ವಯಾ
ಕುರು ನಿರ್ವಚನಂ ತೇಷಾಮಿದಾನೀಂ ವೇದವಿತ್ತಮ ॥ ೧೨೩ ॥

॥ ವ್ಯಾಸ ಉವಾಚ ॥

ಅಯಮೇವ ಕೃತಃ ಪ್ರಶ್ನಸ್ತಂಡಿನಾ ಬ್ರಹ್ಮಯೋನಿನಾ ।
ನಂದಿಕೇಶ್ವರಮುದ್ದಿಶ್ಯ ಸ ಯದಾಹ ಬ್ರವೀಮಿ ತತ್ ॥ ೧೨೪ ॥

॥ ನಂದಿಕೇಶ್ವರ ಉವಾಚ ॥

ಯತ್ರ ವಕ್ತಾ ಸ್ವಯಂ ತಂಡೇ ಬ್ರಹ್ಮಾ ಸಾಕ್ಷಾಚ್ಚತುರ್ಮುಖಃ ।
ತಸ್ಮಾದ್ಬ್ರಾಹ್ಮಂ ಸಮಾಖ್ಯಾತಂ ಪುರಾಣಂ ಪ್ರಥಮಂ ಮುನೇ ॥ ೧೨೫ ॥

ಪದ್ಮಕಲ್ಪಸ್ಯ ಮಾಹಾತ್ಮ್ಯಂ ತತ್ರ ಯಸ್ಮಾದುದಾಹೃತಂ ।
ತಸ್ಮಾತ್ಪಾದ್ಮಂ ಸಮಾಖ್ಯಾತಂ ಪುರಾಣಂ ಚ ದ್ವಿತೀಯಕಂ ॥ ೧೨೬ ॥

೧೨೩. ಸೂತಮುನಿಯು ವ್ಯಾಸನನ್ನು ಕುರಿತು ಮತ್ತೆ ಪ್ರಶ್ನೆ ಮಾಡಿದನು:— ಎಲೈ ಜ್ಞಾನಿಶ್ರೇಷ್ಠನೇ, ನೀನು ಈಗ ಹದಿನೆಂಟು ಪುರಾಣಗಳ ಹೆಸರನ್ನು ತಿಳಿಸಿರುವೆ ಯಷ್ಟೆ. ಈಗ ಆ ಪುರಾಣಗಳಿಗೆ ಏಕೆ ಆ ಹೆಸರುಗಳು ಬಂದವೆಂಬ ವಿವರವನ್ನು ಹೇಳು ಎನ್ನಲು,

೧೨೪. ವ್ಯಾಸನಿಂತೆಂದನು:—ಹಿಂದೆ ಬ್ರಹ್ಮನ ಮಗನಾದ ತಂಡಿಯು ನೀನು ಕೇಳಿದ ಪ್ರಶ್ನೆಯನ್ನೇ ನಂದಿಕೇಶ್ವರನನ್ನು ಕೇಳಿದನು. ಆಗ ನಂದಿಕೇಶ್ವರನು ತಂಡಿಗೆ ಯಾವ ವಿಷಯವನ್ನು ತಿಳಿಸಿದನೋ ಅದನ್ನೇ ನಾನು ನಿನಗೆ ತಿಳಿಸುವೆನು.

೧೨೫. ನಂದಿಕೇಶ್ವರನು ತಂಡಿಯನ್ನು ಕುರಿತು ಕೇಳಿದನು:—ಎಲೈ ತಂಡಿ ಮುನಿಯೇ, ಸಾಕ್ಷಾತ್ ಚತುರ್ಮುಖಬ್ರಹ್ಮನು ತಾನೇ ಈ ಪುರಾಣವನ್ನು ಹೇಳಿದು ದರಿಂದ ಈ ಮೊದಲನೆಯ ಪುರಾಣಕ್ಕೆ ಬ್ರಹ್ಮಪುರಾಣವೆಂದು ಹೆಸರಾಯಿತು.

೧೨೬. ಪದ್ಮಕಲ್ಪದ ಮಾಹ್ಯಾತ್ಮ್ಯವು ವಿಸ್ತಾರವಾಗಿ ವರ್ಣಿಸಿರುವುದರಿಂದ ಎರಡನೆಯ ಪುರಾಣಕ್ಕೆ ಪದ್ಮಪುರಾಣವೆಂದು ಹೆಸರಾಯಿತು.

ಪರಾಶರಕೃತಂ ಯತ್ತು ಪುರಾಣಂ ವಿಷ್ಣುಬೋಧಕಂ ।
ತದೇವ ವ್ಯಾಸಕಥಿತಂ ಪುತ್ರಪಿತ್ರೋರಭೇದತಃ ॥ ೧೨೭ ॥

ಯತ್ರ ಪೂರ್ವೋತ್ತರೇ ಖಂಡೇ ಶಿವಸ್ಯ ಚರಿತಂ ಬಹು ।
ಶೈವಮೇತತ್ಪುರಾಣಂ ಹಿ ಪುರಾಣಜ್ಞಾ ವದಂತಿ ಚ ॥ ೧೨೮ ॥

ಭಗವತ್ಯಾಶ್ಚ ದುರ್ಗಾಯಾಶ್ಚರಿತಂ ಯತ್ರ ವಿದ್ಯತೇ ।
ತತ್ತು ಭಾಗವತಂ ಪ್ರೋಕ್ತಂ ನನು ದೇವೀಪುರಾಣಕಂ ॥ ೧೨೯ ॥

ನಾರದೋಕ್ತಂ ಪುರಾಣಂ ತು ನಾರದೀಯಂ ಪ್ರಚಕ್ಷತೇ ।
ಯತ್ರ ವಕ್ತಾऽಭವತ್ತಂಡೇ ಮಾರ್ಕಂಡೇಯೋ ಮಹಾಮುನಿಃ ॥ ೧೩೦ ॥

ಮಾರ್ಕಂಡೇಯಪುರಾಣಂ ಹಿ ತದಾಖ್ಯಾತಂ ಚ ಸಪ್ತಮಂ ।
ಅಗ್ನಿಯೋಗಾತ್ತದಾಗ್ನೇಯಂ ಭವಿಷ್ಯೋಕ್ತೇರ್ಭವಿಷ್ಯಕಂ ॥ ೧೩೧ ॥

---

೧೨೭. ಮೂರನೆಯ ಪುರಾಣವು ಪರಾಶರನಿಂದ ರಚಿಸಲ್ಪಟ್ಟಿತು. ಅದನ್ನೇ ವ್ಯಾಸನು ಹೇಳಿದನು. ಪಿತೃಪುತ್ರರಿಗೆ ಭೇದವಿಲ್ಲದಿರುವುದರಿಂದ ವ್ಯಾಸನೇ ಅದನ್ನು ರಚಿಸಿದಂತಾಯಿತು. ಅದು ವಿಷ್ಣುಪ್ರತಿಪಾದಕವಾದುದರಿಂದ ಅದಕ್ಕೆ ವಿಷ್ಣುಪುರಾಣವೆಂದು ಹೆಸರಾಯಿತು.

೧೨೮. ನಾಲ್ಕನೆಯ ಪುರಾಣದಲ್ಲಿ ಪೂರ್ವೋತ್ತರಖಂಡಗಳೆರಡರಲ್ಲಿಯೂ ಶಿವನ ಚರಿತ್ರೆಯು ವಿಸ್ತಾರವಾಗಿ ವರ್ಣಿಸಲ್ಪಟ್ಟಿರುವುದರಿಂದ ಅದಕ್ಕೆ ಶಿವಪುರಾಣವೆಂದು ಹೆಸರು.

೧೨೯. ಐದನೆಯ ಪುರಾಣದಲ್ಲಿ ಭಗವತಿಯಾದ ದುರ್ಗೆಯ ಚರಿತ್ರೆಯನ್ನು ವರ್ಣಿಸಿರುವುದರಿಂದ ಅದಕ್ಕೆ ದೇವೀಭಾಗವತವೆಂದು ಹೆಸರು.

೧೩೦. ಆರನೆಯ ಪುರಾಣವನ್ನು ನಾರದನು ಹೇಳಿದ್ದುದರಿಂದ ಅದಕ್ಕೆ ನಾರದೀಯಪುರಾಣವೆಂದೂ, ಏಳನೆಯದನ್ನು ಮಾರ್ಕಂಡೇಯ ಮುನಿಯು ಹೇಳಿದ್ದರಿಂದ ಅದಕ್ಕೆ ಮಾರ್ಕಂಡೇಯಪುರಾಣವೆಂದೂ ಹೆಸರಾಯಿತು.

೧೩೧-೧೩೨. ಎಂಟನೆಯದರಲ್ಲಿ ಅಗ್ನಿಯ ವಿಷಯವನ್ನೂ ಯೋಗವೇ ಮೊದಲಾದ ಮಂತ್ರತಂತ್ರಗಳನ್ನೂ ತಿಳಿಸಿರುವುದರಿಂದ ಅದಕ್ಕೆ ಅಗ್ನಿಪುರಾಣವೆಂತಲೂ,

ವಿವರ್ತನಾದ್ಬ್ರಹ್ಮಣಸ್ತು ಬ್ರಹ್ಮವೈವರ್ತಮುಚ್ಯತೇ ।
ಲಿಂಗಸ್ಯ ಚರಿತೋಕ್ತತ್ವಾತ್ಪುರಾಣಂ ಲಿಂಗಮುಚ್ಯತೇ ॥ ೧೩೨ ॥

ವರಾಹಸ್ಯ ಚ ವಾರಾಹಂ ಪುರಾಣಂ ದ್ವಾದಶಂ ಮುನೇ ।
ಯತ್ರ ಸ್ಕಂದಃ ಸ್ವಯಂ ಶ್ರೋತಾ ವಕ್ತಾ ಸಾಕ್ಷಾನ್ಮಹೇಶ್ವರಃ ॥ ೧೩೩ ॥

ತತ್ತು ಸ್ಕಾಂದಂ ಸಮಾಖ್ಯಾತಂ ವಾಮನಸ್ಯ ತು ವಾಮನಂ ।
ಕೌರ್ಮಂ ಕೂರ್ಮಸ್ಯ ಚರಿತಂ ಮಾತ್ಸ್ಯಂ ಮತ್ಸ್ಯೇನ ಕೀರ್ತಿತಂ ॥೧೩೪॥

ಗರುಡಸ್ತು ಸ್ವಯಂ ವಕ್ತಾ ಯತ್ತದ್ಗಾರುಡಸಂಜ್ಞಕಂ ।
ಬ್ರಹ್ಮಾಂಡಚರಿತೋಕ್ತತ್ವಾದ್ಬ್ರಹ್ಮಾಂಡಂ ಪರಿಕೀರ್ತಿತಂ ॥ ೧೩೫ ॥

ಒಂಭತ್ತನೆಯದರಲ್ಲಿ ಭವಿಷ್ಯದ (ಮುಂದಾಗುವ) ವಿಷಯವನ್ನು ತಿಳಿಸುವುದರಿಂದ ಅದಕ್ಕೆ ಭವಿಷ್ಯಪುರಾಣವೆಂತಲೂ, ಹತ್ತನೆಯದರಲ್ಲಿ ಬ್ರಹ್ಮನ ವಿವರ್ತವಾದದ ವಿಷಯವನ್ನು ಹೇಳಿರುವುದರಿಂದ ಅದಕ್ಕೆ ಬ್ರಹ್ಮವೈವರ್ತಪುರಾಣವೆಂತಲೂ, ಹನ್ನೊಂದನೆಯದಲ್ಲಿ ಲಿಂಗರೂಪಿಯಾದ ಈಶ್ವರನ ಚರಿತ್ರೆಯನ್ನು ಹೇಳಿರುವುದರಿಂದ ಅದಕ್ಕೆ ಲಿಂಗಪುರಾಣವೆಂತಲೂ ಹೆಸರಾಯಿತು.

೧೩೩-೧೩೪. ಹನ್ನೆರಡನೆಯದಲ್ಲಿ ವಿಷ್ಣುವಿನ ವರಾಹ ಚರಿತ್ರೆಯನ್ನು ಹೇಳಿರುವುದರಿಂದ ವರಾಹಪುರಾಣವೆಂತಲೂ, ಹದಿಮೂರನೆಯದಲ್ಲಿ ಸಾಕ್ಷಾತ್‌ಪರಮೇಶ್ವರನು ತನ್ನ ಪುತ್ರನಾದ ಸ್ಕಂದನಿಗೆ ಬೋಧನೆಮಾಡಿರುವುದರಿಂದ ಅದಕ್ಕೆ ಸ್ಕಾಂದಪುರಾಣವೆಂತಲೂ, ಹದಿನಾಲ್ಕನೆಯದರಲ್ಲಿ ವಿಷ್ಣುವಿನ ವಾಮನಾವತಾರದ ಚರಿತ್ರೆಯನ್ನು ಹೇಳುವುದರಿಂದ ವಾಮನಪುರಾಣವೆಂತಲೂ, ಹದಿನೈದರಲ್ಲಿ ವಿಷ್ಣುವಿನ ಕೂರ್ಮಾವತಾರ ವಿಷಯವೂ, ಹದಿನಾರನೆಯದರಲ್ಲಿ ಮತ್ಸ್ಯಾವತಾರ ವಿಷಯವೂ ಹೇಳಲ್ಪಟ್ಟಿರುವುದರಿಂದ ಕ್ರಮವಾಗಿ ಕೂರ್ಮಪುರಾಣ, ಮತ್ಸ್ಯಪುರಾಣವೆಂತಲೂ ಹೆಸರಾಯಿತು.

೧೩೫. ಹದಿನೇಳನೆಯದರಲ್ಲಿ ಗರುಡನು ಹೇಳಿರುವುದರಿಂದ ಅದಕ್ಕೆ ಗರುಡಪುರಾಣವೆಂತಲೂ, ಹದಿನೆಂಟನೆಯದರಲ್ಲಿ ಬ್ರಹ್ಮಾಂಡ ಚರಿತೆಯನ್ನು ಹೇಳುವುದರಿಂದ ಅದಕ್ಕೆ ಬ್ರಹ್ಮಾಂಡಪುರಾಣವೆಂತಲೂ ಹೆಸರಾಯಿತು.

**॥ ಸೂತ ಉವಾಚ ॥**

**ಅಯಮೇವ ಮಯಾಕಾರಿ-ಪ್ರಶ್ನೋ ವ್ಯಾಸಾಯ ಧೀಮತೇ ।**
**ತತಃ ಸರ್ವಪುರಾಣಾನಾಂ ಮಯಾ ನಿರ್ವಚನಂ ಶ್ರುತಂ ॥ ೧೩೬ ॥**

**ಏವಂ ವ್ಯಾಸಃ ಸಮುತ್ಪನ್ನಃ ಸತ್ಯವತ್ಯಾಂ ಪರಾಶರಾತ್ ।**
**ಪುರಾಣಸಂಹಿತಾಶ್ಚಕ್ರೇ ಮಹಾಭಾರತಮುತ್ತಮಂ ॥ ೧೩೭ ॥**

**ಪರಾಶರೇಣ ಸಂಯೋಗಃ ಪುನಃ ಶಂತನುನಾ ಯಥಾ ।**
**ಸತ್ಯವತ್ಯಾ ಇಹ ಬ್ರಹ್ಮನ್ನಃ ಸಂಶಯಿತುಮರ್ಹಸಿ ॥ ೧೩೮ ॥**

**ಸಕಾರಣೇಯಮುತ್ಪತ್ತಿಃ ಕಥಿತಾಶ್ಚರ್ಯಕಾರಿಣೀ ।**
**ಮಹತಾಂ ಚರಿತೇ ಚೈವ ಗುಣಾ ಗ್ರಾಹ್ಯಾ ವಿಚಕ್ಷಣೈಃ ॥ ೧೩೯ ॥**

೧೩೬. ಸೂತನಿಂತೆಂದನು :—ನಾನು ಇದೇ ಪ್ರಶ್ನೆಯನ್ನು ಜ್ಞಾನಿಯಾದ ವ್ಯಾಸಮುನಿಯನ್ನು ಕೇಳಿದೆನು. ಅನಂತರ ಅವನು ಎಲ್ಲ ಪುರಾಣಗಳಿಗೂ ಆಯಾ ಹೆಸರು ಬರಲು ಕಾರಣವನ್ನೂ ನನಗೆ ತಿಳಿಸಿದನು.

೧೩೭. ಈರೀತಿಯಾಗಿ ವ್ಯಾಸನು ಪರಾಶರನಿಂದ ಸತ್ಯವಲ್ಲಿ ಹುಟ್ಟಿದನು. ಇದೇ ಅವನ ಉತ್ಪತ್ತಿಕ್ರಮವು. ಅವನು ಅಷ್ಟಾದಶಪುರಾಣಗಳನ್ನೂ ಅವುಗಳಲ್ಲಿನ ಸಂಹಿತೆಗಳನ್ನೂ ಪವಿತ್ರವಾದ ಮಹಾಭಾರತವನ್ನೂ ರಚಿಸಿದನು ಎಂದನು.

೧೩೮. ಮುನಿಗಳು ಕೇಳಿದರು :—ಎಲೈ ಸೂತಮುನಿಯೇ, ಸತ್ಯವತಿಯೊಡನೆ ಪರಾಶರನಿಗೆ ಸಂಬಂಧವಾದ ವಿಷಯವನ್ನು ನಿನ್ನಿಂದ ಕೇಳಿ ತಿಳಿದುಕೊಂಡೆವು. ಅನಂತರ ಶಂತನುಚಕ್ರವರ್ತಿಗೂ ಅವಳಿಗೂ ಹೇಗೆ ಸಂಬಂಧವುಂಟಾಯಿತು. ಎಂಬ ವಿಷಯದಲ್ಲಿ ನಮಗೆ ಉಂಟಾಗಿರುವ ಸಂಶಯವನ್ನು ನೀನೇ ಪರಿಹರಿಸಬೇಕು. ಎಂದರು.

೧೩೯. ಇಂತಹ ಆಶ್ಚರ್ಯಕರವಾದ ವ್ಯಾಸೋತ್ಪತ್ತಿಯ ಕಾರಣವನ್ನು ತಿಳಿಸಿದ್ದಾಯಿತು. ಆದುದರಿಂದ ವಿವೇಕಿಗಳಾದವರು ಇಂತಹ ಮಹಾತ್ಮರುಗಳ ಚರಿತ್ರೆಯನ್ನು ಶ್ರವಣಮಾಡಿ ಅದರಲ್ಲಿನ ಗುಣಾವಗುಣಗಳನ್ನು ವಿಮರ್ಶೆಮಾಡಿ ತಿಳಿದುಕೊಳ್ಳಬೇಕು.

ಇದಂ ರಹಸ್ಯಂ ಪರಮಂ ಯಃ ಶೃಣೋತಿ ಪಠತ್ಯಪಿ ।
ಸ ಸರ್ವಪಾಪನಿರ್ಮುಕ್ತ ಋಷಿಲೋಕೇ ಮಹೀಯತೇ ॥ ೧೪೦ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ವ್ಯಾಸೋತ್ಪತ್ತಿರ್ನಾಮ ಚತುಶ್ಚತ್ವಾರಿಂಶೋಽಧ್ಯಾಯಃ



೧೪೦. ಗೋಪ್ಯವಾಗಿಯೂ, ಪವಿತ್ರವಾಗಿಯೂ ಇರುವ ಈ ಚರಿತ್ರೆಯನ್ನು ಯಾರು ಕೇಳುವರೋ ಮತ್ತು ಓದುವರೋ ಅವರ ಪಾಪಗಳೆಲ್ಲಾ ನಾಶವಾಗಿ ಅವರು ಋಷಿಲೋಕಕ್ಕೆ ಹೋಗುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ವ್ಯಾಸೋತ್ಪತ್ತಿಕಥನವೆಂಬ
ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಪಂಚಚತ್ವಾರಿಂಶೋಽಧ್ಯಾಯಃ

॥ ಮುನಯ ಊಚು ॥

**ಶ್ರುತಾ ಶಂಭೋಃ ಕಥಾ ರಮ್ಯಾ ನಾನಾಖ್ಯಾನಸಮನ್ವಿತಾ ।**
**ನಾನಾವತಾರಸಂಯುಕ್ತಾ ಭುಕ್ತಿಮುಕ್ತಿಪ್ರದಾ ನೃಣಾಂ ॥ ೧ ॥**

**ಇದಾನೀಂ ಶ್ರೋತುಮಿಚ್ಛಾಮಸ್ತ್ವತ್ತೋ ಬ್ರಹ್ಮವಿದಾಂ ವರ ।**
**ಚರಿತ್ರಂ ಜಗದಂಬಾಯಾ ಭಗವತ್ಯಾ ಮನೋಹರಂ ॥ ೨ ॥**

## ನಲವತ್ತೈದನೆಯ ಅಧ್ಯಾಯವು

೧. ಮುನಿಗಳು ಕೇಳಿದರು :—ಅನೇಕ ಇತಿಹಾಸಗಳಿಂದ ಕೂಡಿ ಮನೋಹರವಾಗಿರುವ ಮತ್ತು ನಾನಾ ಅವತಾರಗಳಿಂದ ಕೂಡಿರುವ ಶಿವನ ಕಥೆಯನ್ನು ನಾವು ಇದುವರೆವಿಗೂ ಕೇಳಿದೆವು. ಇದು ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುವುದು.

೨-೪. ಎಲೈ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಸೂತನೇ, ಈಗ ನಾವು ಪರಬ್ರಹ್ಮಸ್ವರೂಪನಾದ ಶಿವನ ಆದಿಶಕ್ತಿಯೂ, ಜಗನ್ಮಾತೆಯೂ ಆದ ಭಗವತಿಯ ಮನೋಹರವಾದ ಚರಿತ್ರೆಯನ್ನು ಕೇಳಬೇಕೆಂದಿರುವೆವು. ಆ ಪಾರ್ವತಿಯು ಮೂರು

ಪರಬ್ರಹ್ಮಮಹೇಶಸ್ಯ ಶಕ್ತಿರಾದ್ಯಾ ಸನಾತನೀ ।
ಉಮಾ ಯಾ ಸಮಭಿಖ್ಯಾತಾ ತ್ರೈಲೋಕ್ಯಜನನೀ ಪರಾ ॥ ೩ ॥

ಸತೀ ಹೈಮವತೀ ತಸ್ಯಾ ಅವತಾರದ್ವಯಂ ಶ್ರುತಂ ।
ಅಪರಾನವತಾರಾಂಸ್ತ್ವಂ ಬ್ರೂಹಿ ಸೂತ ಮಹಾಮತೇ ॥ ೪ ॥

ಕೋ ವಿರಜ್ಯೇತ ಮತಿಮಾನ್ ಗುಣಶ್ರವಣಕರ್ಮಣಿ ।
ಶ್ರೀಮಾತುರ್ಜ್ಞಾನಿನೋ ಯಾನಿ ನ ತ್ಯಜಂತಿ ಕದಾಚನ ॥ ೫ ॥

॥ ಸೂತ ಉವಾಚ ॥

ಧನ್ಯಾ ಯೂಯಂ ಮಹಾತ್ಮಾನಃ ಕೃತಕೃತ್ಯಾಃ ಸ್ಥ ಸರ್ವದಾ ।
ಯತ್ಪೃಚ್ಛಥ ಪರಾಂಬಾಯಾ ಉಮಾಯಾಶ್ಚರಿತಂ ಮಹತ್ ॥ ೬ ॥

ಶೃಣ್ವತಾಂ ಪೃಚ್ಛತಾಂ ಚೈವ ತಥಾ ವಾಚಯತಾಂ ಚ ತತ್ ।
ಪಾದಾಂಬುಜರಜಾಂಸ್ಯೇವ ತೀರ್ಥಾನಿ ಮುನಯೋ ವಿದುಃ ॥ ೭ ॥

ಲೋಕಕ್ಕೂ ಜನನಿಯು. ಅವಳ ಸತೀ ಮತ್ತು ಪಾರ್ವತೀ ಎಂಬ ಎರಡು ಅವತಾರಗಳ ವಿಷಯವನ್ನು ನಾವು ಕೇಳಿರುವೆವು. ಇನ್ನುಳಿದ ಅವತಾರಗಳನ್ನು ನಮಗೆ ತಿಳಿಸು.

೫. ವಿವೇಕಿಯಾದವನು ಸದ್ಗುಣವಂತರ ಚರಿತ್ರೆಗಳನ್ನು ಕೇಳುವ ವಿಷಯದಲ್ಲಿ ಬೇಜಾರುಪಡುವನೇ? ಹಾಗೆಯೇ ಜ್ಞಾನಿಗಳು ಶ್ರೀಜಗದಂಬೆಯ ಕಥೆಯನ್ನು ಕೇಳುವ ಸಂದರ್ಭವನ್ನು ಯಾವಾಗಲೂ ಕಳೆದುಕೊಳ್ಳುವುದಿಲ್ಲ ಎಂದರು.

೬. ಸೂತಮುನಿಯಿಂತೆಂದನು :—ಎಲೈ ಮುನಿಗಳೇ, ಜಗದಂಬೆಯಾದ ಉಮೆಯ ಚರಿತ್ರೆಯನ್ನು ನೀವೀಗ ಕೇಳಿದಿರಿ. ಆದುದರಿಂದ ನೀವೇ ಧನ್ಯರು. ಕೃತಕೃತ್ಯರು ಮತ್ತು ಮಹಾತ್ಮರುಗಳು.

೭. ಈ ಕಥೆಯನ್ನು ಕೇಳುವವರ, ಪ್ರಶ್ನೆ ಮಾಡುವವರ ಅಥವಾ ಪಾರಾಯಣವನ್ನು ಮಾಡುವವರ ಚರಣಕಮಲಗಳ ಧೂಳಿಗಳನ್ನೇ ತೀರ್ಥಗಳೆಂದು ಮುನಿಗಳು ಹೇಳುವರು.

ತೇ ಧನ್ಯಾಃ ಕೃತಕೃತ್ಯಾಃ ಸ್ಯುರ್ಧನ್ಯಾ ತೇಷಾಂ ಪ್ರಸೂಃ ಕುಲಂ ।
ಯೇಷಾಂ ಚಿತ್ತಂ ಭವೇಲ್ಲೀನಂ ಶ್ರೀದೇವ್ಯಾಂ ಪರಸಂವಿದಿ ॥ ೮ ॥

ಯೇ ನ ಸ್ತುವಂತಿ ದೇವೇಶೀಂ ಸರ್ವಕಾರಣಕಾರಣಾಂ ।
ಮಾಯಾಗುಣೈರ್ಮೋಹಿತಾಸ್ತೇ ಹತಭಾಗ್ಯಾ ನ ಸಂಶಯಃ ॥ ೯ ॥

ನ ಭಜಂತಿ ಮಹಾದೇವೀಂ ಕರುಣಾರಸಸಾಗರಾಂ ।
ಅಂಧಕೂಪೇ ಪತಂತ್ಯೇತೇ ಘೋರೇ ಸಂಸಾರರೂಪಿಣಿ ॥ ೧೦ ॥

ಗಂಗಾಂ ವಿಹಾಯ ತೃಪ್ತ್ಯರ್ಥಂ ಮರುವಾರಿ ಯಥಾ ವ್ರಜೇತ್ ।
ವಿಹಾಯ ದೇವೀಂ ತದ್ಭಿನ್ನಂ ತಥಾ ದೇವಾಂತರಂ ವ್ರಜೇತ್ ॥ ೧೧ ॥

ಯಸ್ಯಾಃ ಸ್ಮರಣಮಾತ್ರೇಣ ಪುರುಷಾರ್ಥಚತುಷ್ಟಯಂ ।
ಅನಾಯಾಸೇನ ಲಭತೇ ಕಸ್ತ್ಯಜೇತ್ತಾಂ ನರೋತ್ತಮಃ ॥ ೧೨ ॥

೮. ಯಾರ ಮನಸ್ಸು ಜಗದಂಬೆಯ ವಿಷಯವಾದ ಜ್ಞಾನದಲ್ಲಿ ತಲ್ಲೀನವಾಗಿರುವುದೋ ಅವರೇ ಧನ್ಯರು. ಅವರ ಜನ್ಮವು ಸಾರ್ಥಕವಾದುದು. ಮತ್ತು ಅವರ ಕುಲವು ಪವಿತ್ರವಾದುದು.

೯. ಯಾರು ಸರ್ವಕಾರಣಗಳಿಗೂ ಕಾರಣಳಾದ ದೇವಿಯನ್ನು ಸ್ತೋತ್ರ ಮಾಡುವುದಿಲ್ಲವೋ ಅವರು ಮಾಯಾಗುಣಗಳಿಂದ ಬದ್ಧರಾಗಿ ಭಾಗ್ಯಹೀನರಾದವರು. ಈ ವಿಷಯದಲ್ಲಿ ಸಂಶಯವಿಲ್ಲ.

೧೦. ದಯಾಸಾಗರಳಾದ ಮಹಾದೇವಿಯನ್ನು ಧ್ಯಾನಮಾಡದ ಪಾಪಾತ್ಮರು ಘೋರವಾಗಿರುವ ಸಂಸಾರವೆಂಬ ಅಂಧಕೂಪದಲ್ಲಿ ಬೀಳುವರು.

೧೧. ಬಾಯಾರಿಕೆಯನ್ನಡಗಿಸಲು ಗಂಗೆಯನ್ನು ಬಿಟ್ಟು ಮರುಮರೀಚಿಕೆ (ಬಿಸಲ್ಗುದುರೆ) ಯನ್ನು ಕುರಿತು ಹೋಗುವುದು ಹೇಗೆ ಮೂರ್ಖತನವೋ ಹಾಗೆ ದೇವಿಯನ್ನು ಬಿಟ್ಟು ಬೇರೆ ದೇವತೆಗಳನ್ನು ಪೂಜಿಸುವುದು ಮೂರ್ಖತನವು.

೧೨. ದೇವಿಯ ಸ್ಮರಣಮಾತ್ರದಿಂದಲೇ ಧರ್ಮಾರ್ಥಕಾಮಮೋಕ್ಷಗಳು ಅನಾಯಾಸವಾಗಿ ದೊರೆಯುವುವು. ಹೀಗಿರುವಲ್ಲಿ ಯಾರುತಾನೇ ಆ ದೇವಿಯ ಧ್ಯಾನವನ್ನು ಮಾಡದಿರುವರು ?

ಏತತ್ಪೃಷ್ಟಃ ಪುರಾ ಮೇಧಾಸ್ಸುರಥೇನ ಮಹಾತ್ಮನಾ ।
ಯದುಕ್ತಂ ಮೇಧಸಾ ಪೂರ್ವಂ ತಚ್ಛೃಣುಷ್ವ ವದಾಮಿ ತೇ ॥ ೧೩ ॥

ಸ್ವಾರೋಚಿಷೇಂತರೇ ಪೂರ್ವಂ ವಿರಥೋ ನಾಮ ಪಾರ್ಥಿವಃ ।
ಸುರಥಸ್ತಸ್ಯ ಪುತ್ರೋಽಭೂನ್ಮಹಾಬಲಪರಾಕ್ರಮಃ ॥ ೧೪ ॥

ದಾನಶೌಂಡಃ ಸತ್ಯವಾದೀ ಸ್ವಧರ್ಮಕುಶಲಃ ಕೃತೀ ।
ದೇವೀಭಕ್ತೋ ದಯಾಸಿಂಧುಃ ಪ್ರಜಾನಾಂ ಪರಿಪಾಲಕಃ ॥ ೧೫ ॥

ಪೃಥಿವೀಂ ಶಾಸತಸ್ತಸ್ಯ ಪಾಕಶಾಸನತೇಜಸಃ ।
ಬಭೂವುರ್ನವ ಯೇ ಭೂಪಾಃ ಪೃಥ್ವೀಗ್ರಹಣತತ್ಪರಾಃ ॥ ೧೬ ॥

ಕೋಲಾನಾಮ್ನೀಂ ರಾಜಧಾನೀಂ ರುರುಧುಸ್ತಸ್ಯ ಭೂಪತೇಃ ।
ತೈಸ್ಸಮಂ ತುಮುಲಂ ಯುದ್ಧಂ ಸಮಪದ್ಯತ ದಾರುಣಂ ॥ ೧೭ ॥

೧೩. ಪೂರ್ವದಲ್ಲಿ ಇದೇ ವಿಷಯವನ್ನು ಸುರಥನೆಂಬುವನು ಮೇಧಮುನಿಯನ್ನು ಕೇಳಿದನು. ಆಗ ಮೇಧನು ಸುರಥನಿಗೆ ಹೇಳಿದ ವಿಷಯವನ್ನು ನಾನು ನಿಮಗೆ ಈಗ ಹೇಳುವೆನು.

೧೪. ಪೂರ್ವದಲ್ಲಿ ಸ್ವಾರೋಚಿಷಮನ್ವಂತರದಲ್ಲಿ ವಿರಥನೆಂಬ ಒಬ್ಬ ರಾಜನು ಇದ್ದನು. ಅವನಿಗೆ ಬಲಪರಾಕ್ರಮದಿಂದ ಕೂಡಿದ ಸುರಥನೆಂಬ ಒಬ್ಬ ಮಗನು ಹುಟ್ಟಿದನು.

೧೫. ಅವನು ದಾನಮಾಡುವುದರಲ್ಲಿ ನಿಪುಣನಾಗಿ ಸತ್ಯವನ್ನೇ ನುಡಿಯುತ್ತಾ ಸ್ವಧರ್ಮನಿರತನಾಗಿದ್ದನು. ಅವನು ದೇವಿಯ ಭಕ್ತನಾಗಿದ್ದನು. ಸರ್ವರಲ್ಲೂ ದಯೆಯಿಂದ ವರ್ತಿಸುತ್ತಾ ಪ್ರಜಾಪರಿಪಾಲನೆಯಲ್ಲಿ ಆಸಕ್ತನಾಗಿದ್ದನು.

೧೬. ಇಂದ್ರನಿಗೆ ಸಮಾನ ಪರಾಕ್ರಮಿಯಾದ ಅವನು ಈರೀತಿಯಾಗಿ ರಾಜ್ಯವಾಳುತ್ತಿರಲು ಅನೇಕ ಹೊಸ ರಾಜರು ಇವನ ರಾಜ್ಯವನ್ನು ಆಕ್ರಮಿಸಲು ಬಂದರು.

೧೭. ಅನಂತರ ಆ ರಾಜರೆಲ್ಲರೂ ಸೇರಿ ಸುರಥನ ರಾಜಧಾನಿಯಾದ ಕೋಲಾ ಎಂಬ ಪಟ್ಟಣಕ್ಕೆ ಮುತ್ತಿಗೆ ಹಾಕಿದರು. ಆಗ ಸುರಥನು ಅವರೊಡನೆ ಘೋರವಾದ ಯುದ್ಧವನ್ನು ಮಾಡಬೇಕಾಯಿತು.

**ಯುದ್ಧೇ ಸ ನಿರ್ಜಿತೋ ಭೂಪಃ ಪ್ರಬಲೈಸ್ತೈರ್ದ್ವಿಷದ್ಗಣೈಃ ।**
**ಉಚ್ಚಾಸಿತಶ್ಚ ಕೋಲಾಯಾ ಹೃತ್ವಾ ರಾಜ್ಯಮಶೇಷತಃ ॥ ೧೮ ॥**

**ಸ ರಾಜಾ ಸ್ವಪುರೀಮೇತ್ಯಾಕರೋದ್ರಾಜ್ಯಂ ಸ್ವಮಂತ್ರಿಭಿಃ ।**
**ತತ್ರಾಪಿ ಚ ಮಹಾಪಕ್ಷೈರ್ವಿಪಕ್ಷೈಸ್ಸ ಪರಾಜಿತಃ ॥ ೧೯ ॥**

**ದೈವಾಚ್ಛತ್ರುತ್ವಮಾಪನ್ನೈರಮಾತ್ಯಪ್ರಮುಖೈರ್ಗಣೈಃ ।**
**ಕೋಶಸ್ಥಿತಂ ಚ ಯದ್ವಿತ್ತಂ ತತ್ಸರ್ವಂ ಚಾತ್ಮಸಾತ್ಕೃತಂ ॥ ೨೦ ॥**

**ತತಸ್ಸ ನಿರ್ಗತೋ ರಾಜಾ ನಗರಾನ್ಮೃಗಯಾಚ್ಛಲಾತ್ ।**
**ಅಸಹಾಯೋಽಶ್ವಮಾರುಹ್ಯ ಜಗಾಮ ಗಹನಂ ವನಂ ॥ ೨೧ ॥**

**ಇತಸ್ತತಸ್ತತ್ರ ಗಚ್ಛನ್ ರಾಜಾ ಮುನಿವರಾಶ್ರಮಂ ।**
**ದದರ್ಶ ಕುಸುಮಾರಾಮಭ್ರಾಜಿತಂ ಸರ್ವತೋದಿಶಂ ॥ ೨೨ ॥**

೧೮. ಯುದ್ಧದಲ್ಲಿ ಶತ್ರುಗಳು ಸುರಥನನ್ನು ಸೋಲಿಸಿದರು. ಮತ್ತು ಅವನ ರಾಜ್ಯವನ್ನೆಲ್ಲಾ ನಾಶಮಾಡಿ ರಾಜಧಾನಿಯಾದ ಕೋಲಾಪಟ್ಟಣದಿಂದ ಅವನನ್ನು ಓಡಿಸಿದರು.

೧೯. ಅನಂತರ ಸುರಥನು ತನ್ನ ರಾಜ್ಯದಲ್ಲಿದ್ದ ಮತ್ತೊಂದು ಊರಿಗೆ ಹೋಗಿ ಅಲ್ಲಿ ಮಂತ್ರಿಗಳೊಡನೆ ಕೂಡಿ ರಾಜ್ಯವಾಳಲು ಪ್ರಾರಂಭಿಸಿದನು. ಅಲ್ಲಿಯೂ ಕೂಡ ಪ್ರಬಲರಾದ ಶತ್ರುಗಳು ಅವನನ್ನು ಸೋಲಿಸಿದರು.

೨೦. ಸುರಥನ ದುರದೃಷ್ಟದಿಂದ ಅವನ ಮಂತ್ರಿಗಳೇ ಅವನಿಗೆ ಶತ್ರುಗಳಾಗಿದ್ದರು. ಅವರೆಲ್ಲರೂ ರಾಜಭಂಡಾರದಲ್ಲಿರುವ ಹಣವನ್ನೆಲ್ಲಾ ದೋಚಿ ತಮ್ಮ ವಶಮಾಡಿಕೊಂಡರು.

೨೧. ಅನಂತರ ಆ ರಾಜನು ಏಕಾಂಗಿಯಾಗಿ ಕುದುರೆಯನ್ನೇರಿ ಹೊರಟು ಬೇಟೆಯಾಡುವ ನೆಪದಿಂದ ದಟ್ಟವಾದ ಅರಣ್ಯವನ್ನು ಸೇರಿದನು.

೨೨. ಅತ್ತಿತ್ತ ತಿರುಗಾಡುತ್ತಾ ಇರುವಲ್ಲಿ ಹೂತೋಟಗಳಿಂದ ರಮ್ಯವಾಗಿದ್ದ ಓರ್ವ ಮುನಿವರನ ಆಶ್ರಮವು ಕಾಣಿಸಿತು.

ವೇದಧ್ವನಿಸಮಾಕೀರ್ಣಂ ಶಾಂತಜಂತುಸಮಾಶ್ರಿತಂ ।
ಶಿಷ್ಯೈಃ ಪ್ರಶಿಷ್ಯೈಸ್ತಚ್ಛಿಷ್ಯೈಸ್ಸಮಂತಾತ್ಪರಿವೇಷ್ಟಿತಂ ॥ ೨೩ ॥

ವ್ಯಾಘ್ರಾದಯೋ ಮಹಾವೀರ್ಯಾ ಅಲ್ಪವೀರ್ಯಾನ್ಮಹಾಮತೇ ।
ತದಾಶ್ರಮೇ ನ ಬಾಧಂತೇ ದ್ವಿಜವರ್ಯಪ್ರಭಾವತಃ ॥ ೨೪ ॥

ಉವಾಸ ತತ್ರ ನೃಪತಿರ್ಮಹಾಕಾರುಣಿಕೋ ಬುಧಃ ।
ಸತ್ಕೃತೋ ಮುನಿನಾಥೇನ ಸುವಚೋಭೋಜನಾಸನೈಃ ॥ ೨೫ ॥

ಏಕದಾ ಸ ಮಹಾರಾಜಶ್ಚಿಂತಾಮಾಪ ದುರತ್ಯಯಾಂ ।
ಅಹೋ ಮೇ ಹೀನಭಾಗ್ಯಸ್ಯ ದುರ್ಬುದ್ಧೇರ್ಹೀನತೇಜಸಃ ॥ ೨೬ ॥

ಹೃತಂ ರಾಜ್ಯಮಶೇಷೇಣ ಶತ್ರುವರ್ಗೈರ್ಮದೋದ್ಧತೈಃ ।
ಮತ್ಪೂರ್ವೈ ರಕ್ಷಿತಂ ರಾಜ್ಯಂ ಶತ್ರುಭಿರ್ಭುಜ್ಯತೇಽಧುನಾ ॥ ೨೭ ॥

೨೩. ಆ ಆಶ್ರಮದಲ್ಲಿ ಎಲ್ಲೆಲ್ಲಿಯೂ ವೇದಘೋಷವು ಕೇಳಿ ಬರುತ್ತಿತ್ತು. ಅಲ್ಲಿದ್ದ ಪ್ರಾಣಿಗಳೆಲ್ಲಾ ತಮ್ಮ ದುಷ್ಟಸ್ವಭಾವವನ್ನು ಬಿಟ್ಟು ಸಾಧುವಾಗಿದ್ದವು. ಅಲ್ಲಿ ಋಷಿಗಳೂ, ಶಿಷ್ಯರೂ, ಅವರ ಶಿಷ್ಯರೂ, ಆ ಶಿಷ್ಯರ ಶಿಷ್ಯರೂ ಎಲ್ಲರೂ ಸೇರಿದ್ದರು.

೨೪. ಆ ಮುನಿಶ್ರೇಷ್ಠನ ಪ್ರಭಾವದಿಂದ ಕ್ರೂರಸ್ವಭಾವವುಳ್ಳ ಹುಲಿ ಮುಂತಾದ ದುಷ್ಟಮೃಗಗಳೂ ಸಾಧುವಾಗಿರುತ್ತಿದ್ದವು. ಅವು ಇತರರಿಗೆ ತೊಂದರೆಯನ್ನುಂಟುಮಾಡುತ್ತಿರಲಿಲ್ಲ.

೨೫. ಸುರಥನು ಆ ಆಶ್ರಮಕ್ಕೆ ಹೋಗಲು ಋಷಿಯು ಅವನನ್ನು ಊಟ ಉಪಚಾರಗಳಿಂದ ಸತ್ಕರಿಸಿದನು. ಆ ರಾಜನು ಅಲ್ಲಿಯೇ ದೈನ್ಯದಿಂದ ವಾಸಮಾಡಿಕೊಂಡಿದ್ದನು.

೨೬-೨೭. ಹೀಗೆ ಇರುತ್ತಿರಲು ಒಂದುದಿನ ಅವನು ಕಠಿಣವಾದ ಚಿಂತೆಯಲ್ಲಿ ಮಗ್ನನಾದನು. 'ಅಯ್ಯೋ! ನಾನೆಂತಹ ದುರ್ಭಾಗ್ಯನು. ನನ್ನ ರಾಜ್ಯವೆಲ್ಲವೂ ಶತ್ರುಗಳ ಅಧೀನವಾಯಿತು ನಾನೆಂತಹ ದುರ್ಬಲನು. ನನ್ನ ಹಿಂದಿನ ರಾಜರು ಈ ರಾಜ್ಯವನ್ನು ಕಾಪಾಡಿಕೊಂಡು ಬಂದಿದ್ದರು. ಈಗ ಅದನ್ನು ಕಾಪಾಡಲಾರದೆ ಶತ್ರುಗಳಿಗೆ ಅನುಭವಿಸಲು ಕೊಟ್ಟಿರುವೆನಲ್ಲಾ?

ಮಾದೃಶಶ್ಚೈತ್ರವಂಶೇऽಸ್ಮಿನ್ನ ಕೋऽಪ್ಯಾಸೀನ್ಮಹೀಪತಿಃ ।
ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ರಾಜ್ಯಂ ಲಭೇಯ ಹಿ ॥ ೨೮ ॥

ಅಮಾತ್ಯಾ ಮಂತ್ರಿಣಶ್ಚೈವ ಮಾಮಕಾ ಯೇ ಸನಾತನಾಃ ।
ನ ಜಾನೇ ಕಂ ಚ ನೃಪತಿಂ ಸಮಾಸಾದ್ಯಾಧುನಾಸತೇ ॥ ೨೯ ॥

ವಿನಾಶ್ಯ ರಾಜ್ಯಮಧುನಾ ನ ಜಾನೇ ಕಾಂ ಗತಿಂ ಗತಾಃ ।
ರಣಭೂಮಿಮಹೋತ್ಸಾಹಾ ಅರಿವರ್ಗನಿಕೃಂತನಾಃ ॥ ೩೦ ॥

ಮಾಮಕಾ ಯೇ ಮಹಾಶೂರಾ ನೃಪಮನ್ಯಂ ಭಜಂತಿ ತೇ ।
ಪರ್ವತಾಭಾ ಗಜಾ ಅಶ್ವಾ ವಾತವದ್ವೇಗಗಾಮಿನಃ ॥ ೩೧ ॥

ಪೂರ್ವಪೂರ್ವಾರ್ಜಿತಃ ಕೋಶಃ ಪಾಲ್ಯತೇ ತೈರ್ನ ವಾಧುನಾ ।
ಏವಂ ಮೋಹವಶಂ ಯಾತೋ ರಾಜಾ ಪರಮಧಾರ್ಮಿಕಃ ॥ ೩೨ ॥

ಏತಸ್ಮಿನ್ನಂತರೇ ತತ್ರ ವೈಶ್ಯಃ ಕಶ್ಚಿತ್ಸಮಾಗತಃ ।
ರಾಜಾ ಪಪ್ರಚ್ಛ ಕಸ್ತ್ವಂ ಭೋ ಕಿಮರ್ಥಮಿಹ ಚಾಗತಃ ॥ ೩೩ ॥

೨೮-೨೯. ಈ ಚೈತ್ರವಂಶದಲ್ಲಿ ನನ್ನಂತಹ ನಿರ್ಭಾಗ್ಯನಾದ ರಾಜನು ಇದು ವರೆಗೆ ಯಾರೂ ಹುಟ್ಟಿಲ್ಲ. ಈಗ ನಾನೇನು ಮಾಡಲಿ? ಎಲ್ಲಿಗೆ ಹೋಗಲಿ? ಕಳೆದುಕೊಂಡಿರುವ ರಾಜ್ಯವನ್ನು ಪುನಃ ಹೇಗೆ ಸಂಪಾದಿಸಲಿ? ಸತ್ಪುರುಷರಾದ ನನ್ನ ಮಂತ್ರಿಗಳೆಲ್ಲಾ ಈಗ ಯಾರನ್ನು ರಾಜನನ್ನಾಗಿ ಮಾಡಿರುವರು? ನನಗೊಂದೂ ಗೊತ್ತಾಗುವುದಿಲ್ಲ.

೩೦-೩೧. ರಣಾಂಗಣದಲ್ಲಿ ಶತ್ರುಗಳನ್ನೆಲ್ಲಾ ಕತ್ತರಿಸುತ್ತಿದ್ದ ಮಹಾ ಉತ್ಸಾಹ ಶಾಲಿಗಳಾದ ಆ ನನ್ನ ಮಹಾಶೂರರಾದ ಸೈನಿಕರು ರಾಜ್ಯ ನಾಶವಾಗಲು ಈಗ ಎಲ್ಲಿಗೆ ಹೋಗಿರುವರು? ಮತ್ತು ಪರ್ವತದಂತಿದ್ದ ಆ ಆನೆಗಳೂ, ವಾಯುವೇಗಗಾಮಿಗಳಾದ ಕುದುರೆಗಳೂ ಈಗ ಎಲ್ಲಿ ಹೋದವೋ ಕಾಣೆನಲ್ಲಾ.

೩೨. ಪೂರ್ವದಿಂದಲೂ ಸಂಪಾದಿಸಿದ ರಾಜಭಂಡಾರವು ರಕ್ಷಿಸಲ್ಪಡುತ್ತಿರು ವುದೇ ಅಥವಾ ಇಲ್ಲವೇ? ಈರೀತಿಯಾಗಿ ಸುರಥನು ಯೋಚನೆಯಲ್ಲಿ ಮಗ್ನ ನಾದನು.

೩೩-೩೪. ಹೀಗಿರುವಲ್ಲಿ ಅಲ್ಲಿಗೆ ಒಬ್ಬ ವೈಶ್ಯನು ಬಂದನು. ರಾಜನು ವೈಶ್ಯ ನನ್ನು ಕುರಿತು ಎಲೈ ಪುರುಷಶ್ರೇಷ್ಠನೇ, ನೀನಾರು? ಯಾವ ಕಾರ್ಯಾರ್ಥವಾಗಿ

ದುರ್ಮನಾ ಲಕ್ಷಸೇ ಕಸ್ಮಾದೇತನ್ಮೇ ಬ್ರೂಹಿ ಸಾಂಪ್ರತಂ ।
ಇತ್ಯಾಕರ್ಣ್ಯ ವಚೋ ರಮ್ಯಂ ನರಪಾಲೇನ ಭಾಷಿತಂ ॥ ೩೪ ॥

ದೃಗ್ಭ್ಯಾಂ ವಿಮುಂಚನ್ನಶ್ರೂಣಿ ಸಮಾಧಿರ್ವೈಶ್ಯಪುಂಗವಃ ।
ಪ್ರತ್ಯುವಾಚ ಮಹೀಪಾಲಂ ಪ್ರಣಯಾವನತಾಂ ಗಿರಂ ॥ ೩೫ ॥

॥ ವೈಶ್ಯ ಉವಾಚ ॥

ಸಮಾಧಿರ್ನಾಮ ವೈಶ್ಯೋಽಹಂ ಧನಿವಂಶಸಮುದ್ಭವಃ ।
ಪುತ್ರದಾರಾದಿಭಿಸ್ತ್ಯಕ್ತಃ ಧನಲೋಭಾನ್ಮಹೀಪತೇ ॥ ೩೬ ॥

ವನಮಭ್ಯಾಗತೋ ರಾಜನ್ ದುಃಖಿತಃ ಸ್ವೇನ ಕರ್ಮಣಾ ।
ಸೋಽಹಂ ಪುತ್ರಪ್ರಪೌತ್ರಾಣಾಂ ಕಲತ್ರಾಣಾಂ ತಥೈವ ಚ ೩೭ ॥

ಭ್ರಾತೄಣಾಂ ಭ್ರಾತೃಪುತ್ರಾಣಾಂ ಪರೇಷಾಂ ಸುಹೃದಾಂ ತಥಾ
ನ ವೇದ್ಮಿ ಕುಶಲಂ ಸಮ್ಯಕ್ಕರುಣಾಸಾಗರ ಪ್ರಭೋ ॥ ೩೮ ॥

ಇಲ್ಲಿಗೆ ಬಂದಿರುವೆ? ನಿನ್ನನ್ನು ನೋಡಿದರೆ ಏನನ್ನೋ ಯೋಚಿಸುತ್ತಿರುವಂತೆ ಕಾಣುತ್ತಿರುವುದು. ಅದನ್ನೆಲ್ಲಾ ನನ್ನೊಡನೆ ಸಂಕೋಚಪಡದೆ ಹೇಳು ಎಂದನು. ಈ ಮಾತನ್ನು ಕೇಳಿ ಸಮಾಧಿ ಎಂಬ ಹೆಸರಿನ ಆ ವೈಶ್ಯನು ದುಃಖದಿಂದ ಕಂಬನಿಗರೆಯುತ್ತಾ ಆ ರಾಜನನ್ನು ಕುರಿತು ವಿನಯದಿಂದಿಂತೆಂದನು.

೩೬-೩೮. ಎಲೈ ದಯಾಸಾಗರನಾದ ರಾಜನೇ, ಕೇಳು. ನಾನು ಶ್ರೀಮಂತ ಕುಲದಲ್ಲಿ ಹುಟ್ಟಿದ ಓರ್ವ ವೈಶ್ಯನು. ನನ್ನ ಹೆಸರು ಸಮಾಧಿ ಎಂದು. ಹಣದ ಆಶೆಯಿಂದ ನನ್ನ ಹೆಂಡತಿ, ಮಕ್ಕಳು ನನ್ನನ್ನು ಓಡಿಸಿಬಿಟ್ಟಿರುವರು. ಆದರಿಂದ ದುಃಖಿತನಾಗಿ ನಾನು ಅರಣ್ಯಕ್ಕೆ ಬಂದಿರುವೆನು. ಈಗ ನನಗೆ ನನ್ನ ಪುತ್ರಪೌತ್ರರೂ, ಹೆಂಡತಿಯೂ, ಅಣ್ಣತಮ್ಮಂದಿರೂ, ಅವರ ಮಕ್ಕಳೂ, ನನ್ನ ಸ್ನೇಹಿತರೂ ಹೇಗಿರುವರೋ ಏನೋ ಎಂಬ ಚಿಂತೆಯುಂಟಾಗಿರುವುದು. ಅವರ ಕ್ಷೇಮವೇ ಗೊತ್ತಾಗದಂತಾಗಿರುವುದು ಎಂದು ದುಃಖಪಟ್ಟನು.

॥ ರಾಜೋವಾಚ ॥

ನಿಷ್ಕಾಸಿತೋ ಯೈಃ ಪುತ್ರಾದ್ಯೈರ್ದುರ್ವೃತ್ತೈರ್ಧನಗರ್ದಿಭಿಃ ।
ತೇಷು ಕಿಂ ಭವತಾ ಪ್ರೀತಿಃ ಕ್ರಿಯತೇ ಮೂರ್ಖಜಂತುವತ್ ॥ ೩೯ ॥

॥ ವೈಶ್ಯ ಉವಾಚ ॥

ಸಮ್ಯಗುಕ್ತಂ ತ್ವಯಾ ರಾಜನ್ ವಚಃ ಸಾರಾರ್ಥಬೃಂಹಿತಂ ।
ತಥಾಪಿ ಸ್ನೇಹಪಾಶೇನ ಮೋಹ್ಯತೇಽತೀವ ಮೇ ಮನಃ ॥ ೪೦ ॥

ಏವಂ ಮೋಹಾಕುಲೌ ವೈಶ್ಯಪಾರ್ಥಿವೌ ಮುನಿಸತ್ತಮ ।
ಜಗ್ಮತುರ್ಮುನಿವರ್ಯಸ್ಯ ಮೇಧಸಃ ಸನ್ನಿಧಿಂ ತದಾ ॥ ೪೧ ॥

ಸ ವೈಶ್ಯರಾಜಸಹಿತೋ ನರರಾಜಃ ಪ್ರತಾಪವಾನ್ ।
ಪ್ರಣನಾಮ ಮಹಾಧೀರಃ ಶಿರಸಾ ಯೋಗಿನಾಂ ವರಂ ॥ ೪೨ ॥

ಬದ್ಧ್ವಾಂಜಲಿಮಿಮಾಂ ವಾಚಮುವಾಚ ನೃಪತಿರ್ಮುನಿಂ ।
ಭಗವನ್ನಾವಯೋರ್ಮೋಹಂ ಛೇತ್ತುಮರ್ಹಸಿ ಸಾಂಪ್ರತಂ ॥ ೪೩ ॥

೩೯. ಇದನ್ನು ಕೇಳಿ, ರಾಜನು ಸಮಾಧಿಯನ್ನು ಕುರಿತು ದುರಾಚಾರಿಗಳೂ, ಲೋಭಿಗಳೂ ಆಗಿರುವ ಆ ನಿನ್ನ ಪುತ್ರರು ನಿನ್ನನ್ನು ಓಡಿಸಿರುವರು. ಅವರ ವಿಷಯದಲ್ಲಿ ನಿನಗೇಕೆ ಇಷ್ಟು ಪ್ರೀತಿ ಎನ್ನಲು,

೪೦. ಆ ವೈಶ್ಯನಿಂತೆಂದನು :—ಎಲೈ ರಾಜನೇ, ನೀನು ಅರ್ಥಗರ್ಭಿತವಾದ ಮಾತನ್ನು ಚೆನ್ನಾಗಿ ಹೇಳಿರುವೆ. ಆದರೂ ಸ್ನೇಹಪಾಶಬದ್ಧವಾದ ನನ್ನ ಮನಸ್ಸು ಮೋಹಗೊಂಡಿದೆ ಎಂದನು.

೪೧-೪೨. ಈರೀತಿಯಾಗಿ ಮಾತನಾಡಿ ಮೋಹಾಕುಲಿತರಾದ ಸಮಾಧಿಯೂ ಮತ್ತು ಪರಾಕ್ರಮಿಯಾದ ಸುರಥನೂ ಮುನಿಶ್ರೇಷ್ಠನಾದ ಮೇಧಮುನಿಯ ಸಮೀಪಕ್ಕೆ ಹೋಗಿ ಅವರಿಗೆ ಭಕ್ತಿಯಿಂದ ತಲೆಬಾಗಿ ನಮಸ್ಕರಿಸಿದರು.

೪೩. ಅನಂತರ ಸುರಥನು ಅಂಜಲಿಬದ್ಧನಾಗಿ ಋಷಿಯನ್ನು ಕುರಿತು—ಎಲೈ ಪೂಜ್ಯನೇ, ನಮ್ಮಿಬ್ಬರನ್ನೂ ಆವರಿಸಿರುವ ಮೋಹವನ್ನು ನಾಶಮಾಡಲು ನೀನೇ ಸಮರ್ಥನು. ಆದುದರಿಂದ ದಯವಿಟ್ಟು ನಮ್ಮ ಮೋಹಾಂಧಕಾರವನ್ನು ನಾಶ ಮಾಡಿ ನಮ್ಮನ್ನು ಉದ್ಧರಿಸಬೇಕು.

ಅಹಂ ರಾಜ್ಯಶ್ರಿಯಾ ತ್ಯಕ್ತೋ ಗಹನಂ ವನಮಾಶ್ರಿತಃ ।
ತಥಾಪಿ ಹೃತರಾಜ್ಯಸ್ಯ ತೋಷೋ ನೈವಾಭಿಜಾಯತೇ ॥ ೪೪ ॥

ಅಯಂ ಚ ವೈಶ್ಯಸ್ಸ್ವಜನೈರ್ದಾರಾದ್ಯೈರ್ನಿಷ್ಕೃತೋ ಗೃಹಾತ್ ।
ತಥಾಪ್ಯೇತಸ್ಯ ಮಮತಾ ನ ನಿವೃತ್ತಿಂ ಸಮಶ್ನುತೇ ॥ ೪೫ ॥

ಕಿಮತ್ರ ಕಾರಣಂ ಬ್ರೂಹಿ ಜ್ಞಾನಿನೋರಪಿ ನೋ ಮನಃ ।
ಮೋಹೇನ ವ್ಯಾಕುಲಂ ಜಾತಂ ಮಹತ್ಯೇಷಾ ಹಿ ಮೂರ್ಖತಾ ॥ ೪೬ ॥

॥ ಋಷಿರುವಾಚ ॥

ಮಹಾಮಾಯಾ ಜಗದ್ಧಾತ್ರೀ ಶಕ್ತಿರೂಪಾ ಸನಾತನೀ ।
ಸಾ ಮೋಹಯತಿ ಸರ್ವೇಷಾಂ ಸಮಾಕೃಷ್ಯ ಮನಾಂಸಿ ವೈ ॥ ೪೭ ॥

೪೪. ನಾನು ರಾಜ್ಯವನ್ನು ಕಳೆದುಕೊಂಡು ಘೋರವಾದ ಅರಣ್ಯಕ್ಕೆ ಬಂದಿರುವೆನು. ರಾಜ್ಯವನ್ನೆಲ್ಲಾ ಕಳೆದುಕೊಂಡು ವನಕ್ಕೆ ಬಂದರೂ ನನ್ನ ಮನಸ್ಸಿಗೆ ಶಾಂತಿಯು ದೊರಕಿಲ್ಲ.

೪೫. ಈತನು ವೈಶ್ಯಕುಲದಲ್ಲಿ ಹುಟ್ಟಿದವನು. ಇವನ ಸ್ವಜನರೂ, ಹೆಂಡತಿ ಮಕ್ಕಳೂ ಇವನನ್ನು ಓಡಿಸಿರುವರು. ಆದರೂ ಇವನಿಗೆ ಅವರಲ್ಲಿರುವ ಪ್ರೀತಿಯು ಹೋಗಿಲ್ಲವು.

೪೬. ಇದಕ್ಕೆ ಕಾರಣವೇನು ? ನಾವು ಜ್ಞಾನಿಗಳಾಗಿದ್ದರೂ ಕೂಡ ನಮ್ಮ ಮನಸ್ಸು ಮೋಹಗೊಂಡಿದೆ. ಇದು ನಮ್ಮ ಅತ್ಯಂತ ಮೂರ್ಖತನವೇ ಸರಿ ಎಂದನು.

೪೭. ಇದನ್ನು ಕೇಳಿ ಆ ಋಷಿಯಿಂತೆಂದನು :—ಇದು ನಿಮ್ಮ ಮೋಹವಲ್ಲವು. ಮಹಾಮಾಯಾಸ್ವರೂಪಳಾದ ಜಗದಂಬಿಕೆಯು ನಿಮ್ಮ ಮನಸ್ಸು ಮೋಹಗೊಳ್ಳುವಂತೆ ಮಾಡಿರುವಳು. ಅವಳು ಶಕ್ತಿಸ್ವರೂಪಿಣಿಯು. ಎಲ್ಲರ ಮನಸ್ಸನ್ನೂ ತನ್ನೆಡೆಗೆ ಎಳೆದುಕೊಂಡು ಮೋಹಗೊಳ್ಳುವಂತೆ ಮಾಡುವಳು.

ಬ್ರಹ್ಮಾದಯಸ್ಸುರಾಸ್ಸರ್ವೇ ಯನ್ಮಾಯಾಮೋಹಿತಾಃ ಪ್ರಭೋ ।
ನ ಜಾನಂತಿ ಪರಂ ತತ್ತ್ವಂ ಮನುಷ್ಯಾಣಾಂ ಚ ಕಾ ಕಥಾ ॥ ೪೮ ॥

ಸಾ ಸೃಜತ್ಯಖಿಲಂ ವಿಶ್ವಂ ಸೈವ ಪಾಲಯತೀತಿ ಚ ।
ಸೈವ ಸಂಹರತೇ ಕಾಲೇ ತ್ರಿಗುಣಾ ಪರಮೇಶ್ವರೀ ॥ ೪೯ ॥

ಯಸ್ಯೋಪರಿ ಪ್ರಸನ್ನಾ ಸಾ ವರದಾ ಕಾಮರೂಪಿಣೀ ।
ಸ ಏವ ಮೋಹಮತ್ಯೇತಿ ನಾನ್ಯಥಾ ನೃಪಸತ್ತಮ ॥ ೫೦ ॥

॥ ರಾಜೋವಾಚ ॥

ಕಾ ಸಾ ದೇವೀ ಮಹಾಮಾಯಾ ಯಾ ಚ ಮೋಹಯತೇಽಖಿಲಾನ್ ।
ಕಥಂ ಜಾತಾ ಚ ಸಾ ದೇವೀ ಕೃಪಯಾ ವದ ಮೇ ಮುನೇ ॥ ೫೧ ॥

॥ ಋಷಿರುವಾಚ ॥

ಜಗತ್ಯೇಕಾರ್ಣವೇ ಜಾತೇ ಶೇಷಮಾಸ್ತೀರ್ಯ ಯೋಗರಾಟ್ ।
ಯೋಗನಿದ್ರಾಮುಪಾಶ್ರಿತ್ಯ ಯದಾ ಸುಷ್ವಾಪ ಕೇಶವಃ ॥ ೫೨ ॥

---

೪೮. ಬ್ರಹ್ಮನೇ ಮೊದಲಾದ ದೇವತೆಗಳೂ ಕೂಡ ಮಾಯಾಮೋಹಿತರಾಗಿರುವರು. ಅಂತವರಿಗೇ ನಿಜವಾದ ತತ್ವವು ತಿಳಿದಿಲ್ಲ ಎಂದಮೇಲೆ ಇನ್ನು ಮನುಷ್ಯರಿಗೆ ತಿಳಿಯುವುದೆಂದರೇನು ?

೪೯. ಸತ್ವರಜಸ್ತಮೋಗುಣಸ್ವರೂಪಳಾದ ಆ ಪರಮೇಶ್ವರಿಯೇ ಪ್ರಪಂಚವನ್ನು ಸೃಷ್ಟಿಮಾಡುವಳು. ಅದನ್ನು ರಕ್ಷಿಸುವವಳೂ ಅವಳೇ. ಅದನ್ನು ಸಂಹಾರಮಾಡುವುದೂ ಅವಳ ಕೆಲಸವೇ.

೫೦. ಕಾಮರೂಪಿಯಾದ ಅವಳು ಯಾರಿಗಾದರೂ ಪ್ರಸನ್ನಳಾದರೆ ಅವರ ಇಷ್ಟಾರ್ಥಗಳನ್ನೆಲ್ಲಾ ನೆರವೇರಿಸುವಳು. ಅವಳ ದಯೆಗೆ ಪಾತ್ರನಾದ ಹೊರತು ಮೋಹವು ನಾಶವಾಗಲಾರದು ಎಂದನು.

೫೧. ರಾಜನು ಮತ್ತೆ ಪ್ರಶ್ನೆಮಾಡುವನು :—ಎಲೈ ಮುನಿಯೇ, ಮಹಾಮಾಯಾಸ್ವರೂಪಳಾದ ಆ ದೇವಿಯಾರು ? ಜನರನ್ನೆಲ್ಲಾ ಮೋಹಗೊಳಿಸತಕ್ಕ ಅವಳು ಹೇಗೆ ಹುಟ್ಟಿದಳು. ಈ ವಿಷಯವನ್ನು ದಯವಿಟ್ಟು ತಿಳಿಸಬೇಕು ಎನ್ನಲು,

೫೨-೫೩. ಮೇಧಋಷಿಯು ಹೇಳುವನು :—ಪ್ರಳಯದಿಂದ ಜಗತ್ತೆಲ್ಲವೂ ಜಲಮಯವಾಗಲು ಯೋಗಿರಾಜನಾದ ವಿಷ್ಣುವು ಆದಿಶೇಷನನ್ನು ಆಸ್ತರಣ (ಕುಳಿತು

ತದಾ ದ್ವಾವಸುರೌ ಜಾತೌ ವಿಷ್ಣೋಃ ಕರ್ಣಮಲೇನ ವೈ ।
ಮಧುಕೈಟಭನಾಮಾನೌ ವಿಖ್ಯಾತೌ ಪೃಥಿವೀತಲೇ ॥ ೫೩ ॥

ಪ್ರಲಯಾರ್ಕಪ್ರಭೌ ಘೋರೌ ಮಹಾಕಾಯೌ ಮಹಾಹನೂ ।
ದಂಷ್ಟ್ರಾಕರಾಲವದನೌ ಭಕ್ಷಯಂತೌ ಜಗಂತಿ ವಾ ॥ ೫೪ ॥

ತೌ ದೃಷ್ಟ್ವಾ ಭಗವನ್ನಾಭಿಪಂಕಜೇ ಕಮಲಾಸನಂ ।
ಹನನಾಯೋದ್ಯತಾವಾಸ್ತಾಂ ಕಸ್ತ್ವಂ ಭೋರಿಸಿ ವಾದಿನೌ ॥ ೫೫ ॥

ಸಮಾಲೋಕ್ಯ ತು ತೌ ದೈತ್ಯೌ ಸುರಜ್ಯೇಷ್ಠೋ ಜನಾರ್ದನಂ ।
ಶಯಾನಂ ಚ ಪಯೋಂಭೋಧೌ ತುಷ್ಟಾವ ಪರಮೇಶ್ವರೀಂ ॥ ೫೬ ॥

॥ ಬ್ರಹ್ಮೋವಾಚ ॥

ರಕ್ಷ ರಕ್ಷ ಮಹಾಮಾಯೇ ಶರಣಾಗತವತ್ಸಲೇ ।
ಏತಾಭ್ಯಾಂ ಘೋರರೂಪಾಭ್ಯಾಂ ದೈತ್ಯಾಭ್ಯಾಂ ಜಗದಂಬಿಕೇ ॥ ೫೭ ॥

---

ಕೊಳ್ಳುವ ಪೀಠ) ವನ್ನು ಮಾಡಿಕೊಂಡು ಯೋಗನಿದ್ರೆಯಲ್ಲಿದ್ದನು. ಆ ಸಮಯದಲ್ಲಿ ವಿಷ್ಣುವಿನ ಕರ್ಣಮಲ ಎಂದರೆ ಕಿವಿಯಲ್ಲಿರುವ ಕೊಳೆಯಿಂದ ಮಧುಕೈಟಭರೆಂಬ ಇಬ್ಬರು ರಾಕ್ಷಸರು ಹುಟ್ಟಿದರು. ಅವರು ಮಹಾಪ್ರಸಿದ್ಧರು.

೫೪. ಅವರು ಪ್ರಳಯಕಾಲದ ಸೂರ್ಯನಂತೆ ಘೋರರೂಪಿಗಳಾಗಿದ್ದರು. ಅವರ ಶರೀರವು ದೊಡ್ಡದಾಗಿಯೂ, ಅವರ ದವಡೆಯೂ, ಮುಖವೂ ಕೋರೆಹಲ್ಲುಗಳಿಂದ ಭಯಂಕರವಾಗಿಯೂ ಇದ್ದಿತು. ಅವರು ಲೋಕಗಳನ್ನು ಭಕ್ಷಿಸಲು ತೊಡಗಿದರು.

೫೫. ಅವರು ವಿಷ್ಣುವಿನ ನಾಭಿಕಮಲದಲ್ಲಿ ಕುಳಿತಿರುವ ಬ್ರಹ್ಮನನ್ನು ನೋಡಿ, ಎಲೋ ನೀನು ಯಾರು? ಇಲ್ಲೇಕೆ ಕುಳಿತಿರುವೆ? ಎಂದು ಹೇಳುತ್ತಾ ಅವನನ್ನು ಕೊಲ್ಲಲು ಹೊರಟರು.

೫೬. ಬ್ರಹ್ಮನು ಆ ರಾಕ್ಷಸರನ್ನು ನೋಡಿ ಭಯಪಟ್ಟು ಕ್ಷೀರಸಮುದ್ರದಲ್ಲಿರುವ ನಾರಾಯಣನನ್ನೂ ಮತ್ತು ಪರಮೇಶ್ವರಿಯನ್ನೂ ಸ್ತೋತ್ರಮಾಡಿದನು.

೫೭. ಬ್ರಹ್ಮನು ಇಂತು ಸ್ತೋತ್ರಮಾಡಿದನು:—ಎಲೌ ಜಗದಂಬಿಕೆಯೇ, ನೀನು ಶರಣಾಗತವತ್ಸಲೆಯು. ಮಹಾಮಾಯಾಸ್ವರೂಪಳು. ನಮ್ಮನ್ನು ಈ ಘೋರರೂಪರಾದ ರಾಕ್ಷಸರಿಂದ ಕಾಪಾಡು.

**ಪ್ರಣಮಾಮಿ ಮಹಾಮಾಯಾಂ ಯೋಗನಿದ್ರಾಮುಮಾಂ ಸತೀಂ ।**
**ಕಾಲರಾತ್ರಿಂ ಮಹಾರಾತ್ರಿಂ ಮೋಹರಾತ್ರಿಂ ಪರಾತ್ಪರಾಂ ॥ ೫೮ ॥**

**ತ್ರಿದೇವಜನನೀಂ ನಿತ್ಯಾಂ ಭಕ್ತಾಭೀಷ್ಟಫಲಪ್ರದಾಂ ।**
**ಪಾಲಿನೀಂ ಸರ್ವದೇವಾನಾಂ ಕರುಣಾವರುಣಾಲಯಾಂ ॥ ೫೯ ॥**

**ತ್ವತ್ಪ್ರಭಾವಾದಹಂ ಬ್ರಹ್ಮಾ ಮಾಧವೋ ಗಿರಿಜಾಪತಿಃ ।**
**ಸೃಜತ್ಯವತಿ ಸಂಸಾರಂ ಕಾಲೇ ಸಂಹರತೀತಿ ಚ ॥ ೬೦ ॥**

**ತ್ವಂ ಸ್ವಾಹಾ ತ್ವಂ ಸ್ವಧಾ ಹ್ರೀಸ್ತ್ವಂ ಬುದ್ಧಿರ್ವಿಮಲಾ ಮತಾ ।**
**ತುಷ್ಟಿಃ ಪುಷ್ಟಿಸ್ತ್ವಮೇವಾಂಬ ಶಾಂತಿಃ ಕ್ಷಾಂತಿಃ ಕ್ಷುಧಾ ದಮಾ ॥ ೬೧ ॥**

**ವಿಷ್ಣುಮಾಯಾ ತ್ವಮೇವಾಂಬ ತ್ವಮೇವ ಚೇತನಾ ಮತಾ ।**
**ತ್ವಂ ಶಕ್ತಿಃ ಪರಮಾ ಪ್ರೋಕ್ತಾ ಲಜ್ಜಾ ತೃಷ್ಣಾ ತ್ವಮೇವ ಚ ॥ ೬೨ ॥**

---

೫೮. ಎಲೌ ಮಹಾಮಾಯಾಸ್ವರೂಪಳೇ, ನೀನು ಕಾಲರಾತ್ರಿಯು, ಮಹಾರಾತ್ರಿಯು, ಮೋಹರಾತ್ರಿಯು, ಪರಾತ್ಪರಸ್ವರೂಪಳು, ಸತಿಯು. ಯೋಗನಿದ್ರಾಸ್ವರೂಪಳು. ಇಂತಹ ನಿನ್ನನ್ನು ನಮಸ್ಕರಿಸುವೆನು.

೫೯. ನೀನು ಮೂರುಲೋಕಕ್ಕೂ ಜನನಿಯು. ಭಕ್ತರ ಅಭೀಷ್ಟಫಲವನ್ನು ನೆರವೇರಿಸುವವಳು. ಸರ್ವದೇವತೆಗಳಿಗೂ ರಕ್ಷಕಳು. ಕರುಣಾಲಯಳಾದ ನಿನ್ನನ್ನು ನಮಸ್ಕರಿಸುವೆನು.

೬೦. ನಿನ್ನ ಪ್ರಭಾವದಿಂದಲೇ ಬ್ರಹ್ಮನೆನಿಸಿದ ನಾನು ಸೃಷ್ಟಿಕರ್ತನಾಗಿಯೂ, ವಿಷ್ಣುವು ರಕ್ಷಕನಾಗಿಯೂ, ಈಶ್ವರನು ಪ್ರಳಯಕಾಲದಲ್ಲಿ ಸಂಹಾರಕನಾಗಿಯೂ ಇರುವೆವು.

೬೧. ನೀನು ಸ್ವಾಹಾ, ಸ್ವಧಾ, ಹ್ರೀ, ಸ್ವಚ್ಛವಾದ ಬುದ್ಧಿಯೂ ಆಗಿರುವೆ. ನೀನೇ ತುಷ್ಟಿಯು ಮತ್ತು ಪುಷ್ಟಿಯು. ನೀನೇ ಶಾಂತಿಯು, ಕ್ಷಾಂತಿ, ಕ್ಷುಧಾ, ದಮೆಯೂ ಆಗಿರುವೆ.

೬೨-೬೩. ಎಲೌ ತಾಯಿಯೇ, ನೀನು ವಿಷ್ಣುವಿನ ಮಾಯೆಯು. ನೀನು ಚೇತನಸ್ವರೂಪಳು. ನೀನೇ ಶಕ್ತಿ, ಲಜ್ಜಾ, ತೃಷ್ಣಾಸ್ವರೂಪಳಾಗಿರುವೆ. ಭ್ರಾಂತಿ,

ಭ್ರಾಂತಿಸ್ತ್ವಂ ಸ್ಮೃತಿರೂಪಾ ತ್ವಂ ಮಾತೃರೂಪೇಣ ಸಂಸ್ಥಿತಾ ।
ತ್ವಂ ಲಕ್ಷ್ಮೀರ್ಭವನೇ ಪುಂಸಾಂ ಪುಣ್ಯಾಚಾರಪ್ರವರ್ತಿನಾಂ ॥ ೬೩ ॥

ತ್ವಂ ಜಾತಿಸ್ತ್ವಂ ಮತಾ ವೃತ್ತಿರ್ವ್ಯಾಪ್ತಿರೂಪಾ ತ್ವಮೇವ ಹಿ ।
ತ್ವಮೇವ ಚಿತ್ತರೂಪೇಣ ವ್ಯಾಪ್ಯ ಕೃತ್ಸ್ನಂ ಪ್ರತಿಷ್ಠಿತಾ ॥ ೬೪ ॥

ಸಾ ತ್ವಮೇತೌ ದುರಾಧರ್ಷಾವಸುರೌ ಮೋಹಯಾಂಬಿಕೆ ।
ಪ್ರಬೋಧಯ ಜಗದ್ಯೋನೇ ನಾರಾಯಣಮಜಂ ವಿಭುಂ ॥ ೬೫ ॥

॥ ಋಷಿರುವಾಚ ॥

ಬ್ರಹ್ಮಣಾ ಪ್ರಾರ್ಥಿತಾ ಸೇಯಂ ಮಧುಕೈಟಭನಾಶನೇ ।
ಮಹಾವಿದ್ಯಾ ಜಗದ್ಧಾತ್ರೀ ಸರ್ವವಿದ್ಯಾಧಿದೇವತಾ ೬೬

ದ್ವಾದಶ್ಯಾಂ ಫಾಲ್ಗುನಸ್ಯೈವ ಶುಕ್ಲಾಯಾಂ ಸಮಭೂನ್ನೃಪ ।
ಮಹಾಕಾಲೀತಿ ವಿಖ್ಯಾತಾ ಶಕ್ತಿಸ್ತ್ರೈಲೋಕ್ಯಮೋಹಿನೀ ೬೭ ॥

ಸ್ಮೃತಿಸ್ವರೂಪಳೂ ನೀನೇ. ನೀನು ಜಗನ್ಮಾತೆಯು. ಧರ್ಮಮಾರ್ಗಾವಲಂಬಿಗಳಾದ ಜನರ ಮನೆಯ ಸಿರಿಲಕ್ಷ್ಮಿಯೂ ನೀನೇ.

೬೪-೬೫. ನೀನು ಜಾತಿಸ್ವರೂಪಳು. ನೀನಿದ್ದರೆ ಪ್ರಪಂಚವು. ನೀನಿಲ್ಲದಿದ್ದರೆ ಪ್ರಪಂಚವಿರುವುದಿಲ್ಲ. ನೀನು ಮನಸ್ಸಿನ ರೂಪದಲ್ಲಿ ಎಲ್ಲೆಲ್ಲೂ ವ್ಯಾಪಿಸಿಕೊಂಡು ಕುಳಿತಿರುವೆ. ಎಲೌ ಜಗತ್ಕಾರಣಳೇ, ಇಂತಹ ನೀನು ಪ್ರಗಲ್ಭರಾದ ಆ ಮಧುಕೈಟಭರನ್ನು ಮೋಹಗೊಳಿಸು. ಉತ್ಪತ್ತಿರಹಿತನಾದ ವಿಷ್ಣುವನ್ನು ಯೋಗನಿದ್ರೆಯಿಂದ ಎಚ್ಚರಗೊಳಿಸು ಎಂದು ಸ್ತೋತ್ರಮಾಡಿದನು.

೬೬. ಈರೀತಿಯಾಗಿ ಬ್ರಹ್ಮನು ಪ್ರಾರ್ಥಿಸಲು, ಮಹಾವಿದ್ಯಾಸ್ವರೂಪಳೂ, ಸರ್ವವಿದ್ಯಾಧಿದೇವತೆಯೂ ಆದ ಜಗದಂಬಿಕೆಯು ಮಧುಕೈಟಭರನ್ನು ನಾಶಮಾಡಲು ಉದ್ಯುಕ್ತಳಾಗಿ,

೬೭. ಫಾಲ್ಗುಣಮಾಸದ ಶುಕ್ಲಪಕ್ಷ ದ್ವಾದಶಿಯದಿನ ಆವಿರ್ಭವಿಸಿ ಮಹಾಕಾಲೀ ಎಂದು ಪ್ರಸಿದ್ಧಳಾದಳು. ಶಕ್ತಿಸ್ವರೂಪಳಾದ ಅವಳ ರೂಪವು ಮೂರು ಲೋಕವನ್ನು ಮೋಹಗೊಳಿಸುವಂತಿತ್ತು.

ತತೋऽಭವದ್ದಿಯದ್ವಾಣೀ ಮಾ ಭೈಷೀಃ ಕಮಲಾಸನ ।
ಕಂಟಕಂ ನಾಶಯಾಮ್ಯದ್ಯ ಹತ್ವಾಜೌ ಮಧುಕೈಟಭೌ ॥ ೬೮ ॥

ಇತ್ಯುಕ್ತ್ವಾ ಸಾ ಮಹಾಮಾಯಾ ನೇತ್ರವಕ್ತ್ರಾದಿತೋ ಹರೇಃ ।
ನಿರ್ಗಮ್ಯ ದರ್ಶನೇ ತಸ್ಥೌ ಬ್ರಹ್ಮಣೋऽವ್ಯಕ್ತಜನ್ಮನಃ ॥ ೬೯ ॥

ಉತ್ತಸ್ಥೌ ಚ ಹೃಷೀಕೇಶೋ ದೇವದೇವೋ ಜನಾರ್ದನಃ ।
ಸ ದದರ್ಶ ಪುರೋ ದೈತ್ಯೌ ಮಧುಕೈಟಭಸಂಜ್ಞಕೌ ॥ ೭೦ ॥

ತಾಭ್ಯಾಂ ಪ್ರವವೃತೇ ಯುದ್ಧಂ ವಿಷ್ಣೋರತುಲತೇಜಸಃ ।
ಪಂಚವರ್ಷಸಹಾಸ್ರಾಣಿ ಬಾಹುಯುದ್ಧಮಭೂತ್ತದಾ ॥ ೭೧ ॥

ಮಹಾಮಾಯಾಪ್ರಭಾವೇಣ ಮೋಹಿತೌ ದಾನವೋತ್ತಮೌ ।
ಜಜಲ್ಪತೂ ರಮಾಕಾಂತಂ ಗೃಹಾಣ ವರಮೀಪ್ಸಿತಂ ॥ ೭೨ ॥

೬೮. ಅನಂತರ ಅಲ್ಲಿ-ಎಲೈ ಬ್ರಹ್ಮನೇ, ನೀನು ಹೆದರಬೇಡ. ನಾನು ಯುದ್ಧ ಮಾಡಿ ಮಧುಕೈಟಭರನ್ನು ಕೊಲ್ಲುವೆನು. ಮತ್ತು ನಿನ್ನ ದುಃಖವನ್ನು ನಾಶ ಮಾಡುವೆನು ಎಂದು ಆಕಾಶವಾಣಿಯಾಯಿತು.

೬೯. ಈರೀತಿಯಾಗಿ ಮಹಾಮಾಯಳಾದ ಆ ಕಾಲಿಯು ವಿಷ್ಣುವಿನ ಕಣ್ಣಂಚಿನಿಂದ ಹೊರಟು ಆ ಬ್ರಹ್ಮನಿಗೆ ದರ್ಶನವನ್ನು ಕೊಟ್ಟಳು.

೭೦. ಬಳಿಕ ದೇವದೇವನೂ ಜನಗಳನ್ನು ಪಾಲಿಸುವವನೂ ಆದ ವಿಷ್ಣುವು ಎಚ್ಚತ್ತು ತನ್ನ ಮುಂದುಗಡೆ ನಿಂತಿರುವ ಮಧುಕೈಟಭರೆಂಬ ರಾಕ್ಷಸರನ್ನು ನೋಡಿದನು.

೭೧. ಅತುಲಪರಾಕ್ರಮಿಯಾದ ವಿಷ್ಣುವು ಅವರಿಬ್ಬರೊಡನೆ ಯುದ್ಧಮಾಡಿದನು. ಐದುಸಾವಿರ ವರ್ಷದವರೆಗೂ ಆ ಯುದ್ಧವು ಘೋರವಾಗಿ ಜರುಗಿತು.

೭೨. ಅವರಿಬ್ಬರೂ ಮಹಾಮಾಯೆಯ ಪ್ರಭಾವದಿಂದ ಮೋಹದಿಂದ ಆವರಿಸಲ್ಪಟ್ಟವರಾಗಿ ವಿಷ್ಣುವನ್ನು ಕುರಿತು, ನೀನು ಮಾಡಿದ ಯುದ್ಧದಿಂದ ನಮಗೆ ಸಂತೋಷವಾಯಿತು. ನಿನಗೆ ಬೇಕಾದ ವರವನ್ನು ಕೇಳಿಕೋ. ನಾವು ಕೊಡುವೆವು ಎಂದು ಗರ್ವದಿಂದ ನುಡಿದರು.

॥ ನಾರಾಯಣ ಉವಾಚ ॥

ಮಯಿ ಪ್ರಸನ್ನೌ ಯದಿ ವಾಂ ದೀಯತಾಮೇಷ ಮೇ ವರಃ ।
ಮಮ ವಧ್ಯಾವುಭೌ ನಾನ್ಯಂ ಯುವಾಭ್ಯಾಂ ಪ್ರಾರ್ಥಯೇ ವರಂ ॥ ೭೩ ॥

॥ ಋಷಿರುವಾಚ ॥

ಏಕಾರ್ಣವಾಂ ಮಹೀಂ ದೃಷ್ಟ್ವಾ ಪ್ರೋಚತುಃ ಕೇಶವಂ ವಚಃ ।
ಆವಾಂ ಜಹಿ ನ ಯತ್ರಾಸೌ ಧರಣೀ ಪಯಸಾಪ್ಲುತಾ ॥ ೭೪ ॥

ತಥಾಸ್ತು ಪ್ರೋಚ್ಯ ಭಗವಾಞ್ಚಕ್ರಮುತ್ಥಾಪ್ಯ ಸೂಜ್ಜ್ವಲಂ ।
ಚಿಚ್ಛೇದ ಶಿರಸೀ ಕೃತ್ವಾ ಸ್ವಕೀಯಜಘನೇ ತಯೋಃ ॥ ೭೫ ॥

ಏವಂ ತೇ ಕಥಿತೋ ರಾಜನ್ ಕಾಲಿಕಾಯಾಃ ಸಮುದ್ಭವಃ ।
ಮಹಾಲಕ್ಷ್ಮ್ಯಾಸ್ತಥೋತ್ಪತ್ತಿಂ ನಿಶಾಮಯ ಮಹಾಮತೇ ॥ ೭೬ ॥

ನಿರ್ವಿಕಾರಾಪಿ ಸಾಕಾರಾ ನಿರಾಕಾರಾಪಿ ದ್ಯೇವ್ಯುಮಾ ।
ದೇವಾನಾಂ ತಾಪನಾಶಾರ್ಥಂ ಪ್ರಾದುರಾಸೀದ್ಯುಗೇಯುಗೇ ॥ ೭೭ ॥

೭೩. ಇದನ್ನು ಕೇಳಿ ವಿಷ್ಣುವು—ನೀವು ನನ್ನಲ್ಲಿ ಪ್ರಸನ್ನರಾಗಿರುವುದಾದರೆ ನನ್ನಿಂದಲೇ ನಿಮಗೆ ಮರಣವುಂಟಾಗಬೇಕು. ಈ ವರವನ್ನು ನನಗೆ ಕೊಡಿರಿ ನನಗೆ ಮತ್ತಾವ ವರವೂ ಬೇಡ ಎಂದನು.

೭೪. ಅನಂತರ ರಾಕ್ಷಸರು ಭೂಮಿಯೆಲ್ಲವೂ ಜಲಮಯವಾಗಿರುವುದನ್ನು ನೋಡಿ ವಿಷ್ಣುವನ್ನು ಕುರಿತು, ಎಲ್ಲಿ ಭೂಮಿಯು ಜಲಮಯವಾಗಿಲ್ಲವೋ ಅಲ್ಲಿ ನೀನು ನಮ್ಮನ್ನು ಕೊಲ್ಲಬಹುದು ಎಂದು ಹೇಳಿದರು.

೭೫. ಹಾಗೆಯೇ ಆಗಲಿ ಎಂಬುದಾಗಿ ಹೇಳಿ ವಿಷ್ಣುವು ಅವರ ತಲೆಗಳನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಉಜ್ವಲವಾದ ತನ್ನ ಸುದರ್ಶನ ಚಕ್ರದಿಂದ ಕತ್ತರಿಸಿದನು.

೭೬. ಎಲೈ ರಾಜನೇ, ಇದುವರೆವಿಗೂ ಕಾಲಿಕಾದೇವಿಯ ಉತ್ಪತ್ತಿಕ್ರಮವನ್ನು ತಿಳಿಸಿರುವೆನು. ಈಗ ಮಹಾಲಕ್ಷ್ಮಿಯ ಉತ್ಪತ್ತಿಕ್ರಮವನ್ನು ಹೇಳುವೆನು ಕೇಳು.

೭೭. ನಿರ್ವಿಕಾರಳೂ, ಸಾಕಾರಳೂ, ನಿರಾಕಾರಳೂ ಆದ ಪಾರ್ವತಿಯು ದೇವತೆಗಳ ದುಃಖವನ್ನು ನಾಶಮಾಡಲು ಪ್ರತಿಯುಗದಲ್ಲಿಯೂ ಅವತಾರಮಾಡುವಳು.

ಯದಿಚ್ಛಾವೈಭವಂ ಸರ್ವಂ ತಸ್ಯಾ ದೇಹಗ್ರಹಃ ಸ್ಮೃತಃ ।
ಲೀಲಯಾ ಸಾಪಿ ಭಕ್ತಾನಾಂ ಗುಣವರ್ಣನಹೇತವೇ ॥ ೭೮ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಮಹಾಕಾಲಿಕಾವತಾರೋ ನಾಮ ಪಂಚಚತ್ವಾರಿಂಶೋಽಧ್ಯಾಯಃ



೭೮. ಅವಳು ತನಗೆ ಇಚ್ಛೆಬಂದಾಗ ಮಾತ್ರ ಶರೀರವನ್ನು ಧರಿಸಿ ಆವಿರ್ಭವಿಸುವಳು. ಇದು ಆ ದೇವಿಯ ಲೀಲಾವೈಭವವಲ್ಲದೆ ಬೇರೆಯಲ್ಲ. ಭಕ್ತರ ಗುಣಗಳನ್ನು ಪ್ರಕಟಿಸುವುದಕ್ಕಾಗಿಯೇ ಆ ದೇವಿಯು ತನ್ನ ಇಚ್ಛೆಯಿಂದ ಶರೀರವನ್ನು ಧರಿಸುವಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಮಹಾಕಾಲಿಕಾವತಾರ
ವರ್ಣನವೆಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಷಟ್ ಚತ್ವಾರಿಂಶೋಽಧ್ಯಾಯಃ

॥ ಋಷಿರುವಾಚ ॥

ಆಸೀದ್ರಂಭಾಸುರೋ ನಾಮ ದೈತ್ಯವಂಶಶಿರೋಮಣಿಃ ।
ತಸ್ಮಾಜ್ಜಾತೋ ಮಹಾತೇಜಾ ಮಹಿಷೋ ನಾಮ ದಾನವಃ ॥ ೧ ॥

ಸ ಸಂಗ್ರಾಮೇ ಸುರಾನ್ಸರ್ವಾನ್ನಿರ್ಜಿತ್ಯ ದನುಜಾಧಿಪಃ ।
ಚಕಾರ ರಾಜ್ಯಂ ಸ್ವರ್ಲೋಕೇ ಮಹೇಂದ್ರಾಸನಸಂಸ್ಥಿತಃ ॥ ೨ ॥

ಪರಾಜಿತಾಸ್ತತೋ ದೇವಾ ಬ್ರಹ್ಮಾಣಂ ಶರಣಂ ಯಯುಃ ।
ಬ್ರಹ್ಮಾಪಿ ತಾನ್ಸಮಾದಾಯ ಯಯೌ ಯತ್ರ ವೃಷಾಕಪೀ ॥ ೩ ॥

## ನಲವತ್ತಾರನೆಯ ಅಧ್ಯಾಯವು

೧. ಪೂರ್ವದಲ್ಲಿ ದೈತ್ಯಕುಲಶ್ರೇಷ್ಠನಾದ ರಂಭಾಸುರನೆಂಬ ರಾಕ್ಷಸನಿದ್ದನು. ಅವನಿಗೆ ಮಹಾಪರಾಕ್ರಮಿಯಾದ ಮಹಿಷನೆಂಬ ಮಗನು ಹುಟ್ಟಿದನು.

೨. ಅವನು ಯುದ್ಧದಲ್ಲಿ ದೇವತೆಗಳನ್ನೆಲ್ಲಾ ಸೋಲಿಸಿ ಇಂದ್ರನ ಸಿಂಹಾಸನವನ್ನು ಆಕ್ರಮಿಸಿ ಸ್ವರ್ಗಲೋಕದಲ್ಲಿ ರಾಜ್ಯವಾಳುತ್ತಿದ್ದನು.

೩. ದೇವತೆಗಳೆಲ್ಲರೂ ಸೋತುಹೋಗಿ ಬ್ರಹ್ಮನನ್ನು ಮರೆಹೊಕ್ಕರು ಬ್ರಹ್ಮನು ಅವರೆಲ್ಲರನ್ನೂ ಕರೆದುಕೊಂಡು ವಿಷ್ಣು ಮತ್ತು ಶಿವನ ಸಮೀಪಕ್ಕೆ ಹೋದನು.

ತತ್ರ ಗತ್ವಾ ಸುರಾಸ್ಸರ್ವೇ ನತ್ವಾ ಶಂಕರಕೇಶವೌ ।
ಸ್ವವೃತ್ತಂ ಕಥಯಾಮಾಸುರ್ಯಥಾವದನುಪೂರ್ವಶಃ ॥ ೪ ॥

ಭಗವಂತೌ ವಯಂ ಸರ್ವೇ ಮಹಿಷೇಣ ದುರಾತ್ಮನಾ ।
ಉಜ್ಜಾಸಿತಾಶ್ಚ ಸ್ವರ್ಲೋಕಾನ್ನಿರ್ಜಿತ್ಯ ಸಮರಾಂಗಣೇ ॥ ೫ ॥

ಭ್ರಮಾಮೋ ಮರ್ತ್ಯಲೋಕೇಽಸ್ಮಿನ್ನ ಲಭೇಮಹಿ ಶಂ ಕ್ವಚಿತ್ ।
ಕಾಂ ಕಾಂ ನ ದುರ್ದಶಾಂ ನೀತಾ ದೇವಾ ಇಂದ್ರಪುರೋಗಮಾಃ ॥ ೬ ॥

ಸೂರ್ಯಾಚಂದ್ರಮಸೌ ಪಾಶೀ ಕುಬೇರೋ ಯಮ ಏವ ಚ ।
ಇಂದ್ರಾಗ್ನಿವಾತಗಂಧರ್ವಾ ವಿದ್ಯಾಧರಸುಚಾರಣಾಃ ॥ ೭ ॥

ಏತೇಷಾಮಪರೇಷಾಂ ಚ ವಿಧೇಯಂ ಕರ್ಮ ಸೋಽಸುರಃ ।
ಸ್ವಯಂ ಕರೋತಿ ಪಾಪಾತ್ಮಾ ದೈತ್ಯಪಕ್ಷಾಭಯಂಕರಃ ॥ ೮ ॥

೪. ದೇವತೆಗಳೆಲ್ಲರೂ ಅಲ್ಲಿಗೆ ಹೋದನಂತರ ಶಂಕರನನ್ನೂ ವಿಷ್ಣುವನ್ನೂ ನಮಸ್ಕರಿಸಿ ತಮಗೆ ಒದಗಿರುವ ಕಷ್ಟಗಳನ್ನೂ ಆ ದೈತ್ಯನ ವಿಷಯವನ್ನೂ ಅರಿಕೆ ಮಾಡಿಕೊಂಡರು.

೫. ಎಲೈ ಪೂಜ್ಯರೇ, ನಾವು ಮಹಿಷನೆಂಬ ರಾಕ್ಷಸನ ತೊಂದರೆಗೆ ಒಳಗಾಗಿರುವೆವು. ಅವನು ನಮ್ಮನ್ನು ಯುದ್ಧದಲ್ಲಿ ಸೋಲಿಸಿ ಸ್ವರ್ಗಲೋಕದಿಂದ ಓಡಿಸಿರುವನು.

೬. ನಾವೆಲ್ಲರೂ ಭೂಲೋಕದಲ್ಲಿ ಅಲೆಯುತ್ತಾ ಇರುವೆವು. ಆದರೆ ನಮಗೆ ಅಲ್ಲಿಯೂ ಸುಖಸಮಾಧಾನಗಳಿಲ್ಲ. ಈಗ ಇಂದ್ರನೇ ಮೊದಲಾದ ದೇವತೆಗಳಿಗೆ ಎಂತಹ ದುರವಸ್ಥೆ ಪ್ರಾಪ್ತವಾಗಿರುವುದು.

೭-೮. ಸೂರ್ಯ, ಚಂದ್ರ, ವರುಣ, ಕುಬೇರ, ಯಮ, ಇಂದ್ರ, ಅಗ್ನಿ, ವಾಯು, ವಿದ್ಯಾಧರ, ಚಾರಣ ಈ ದೇವತೆಗಳಿಗೆ ಯಾವ ಯಾವ ಕೆಲಸಗಳು ನಿಯಮಿತವಾಗಿರುವುವೋ ಆ ಕೆಲಸಗಳನ್ನೆಲ್ಲಾ ತನ್ನ ಸೇನಾಬಲದಿಂದ ಭಯಂಕರನಾದ ಆ ಮಹಿಷನೇ ಮಾಡುತ್ತಿರುವನು. ನಮ್ಮ ನಮ್ಮ ಕೆಲಸಮಾಡಲೂ ನಮಗೆ ಸ್ವಾತಂತ್ರ್ಯವಿಲ್ಲ.

ತಸ್ಮಾಚ್ಛರಣಮಾಪನ್ನಾನ್ ದೇವಾನ್ನಸ್ತ್ರಾತುಮರ್ಹಥಃ ।
ವಧೋಪಾಯಂ ಚ ತಸ್ಯಾಶು ಚಿಂತಯೇಥಾಂ ಯುವಾಂ ಪ್ರಭೂ ॥ ೯ ॥

ಇತಿ ದೇವವಚಃ ಶ್ರುತ್ವಾ ದಾಮೋದರಸತೀಶ್ವರೌ ।
ಚಕ್ರತುಃ ಪರಮಂ ಕೋಪಂ ರೋಷಾಘೂರ್ಣಿತಲೋಚನೌ ॥ ೧೦ ॥

ತತೋಽತಿಕೋಪಪೂರ್ಣಸ್ಯ ವಿಷ್ಣೋಶ್ಶಂಭೋಶ್ಚ ವಕ್ತ್ರತಃ ।
ತಥಾನ್ಯೇಷಾಂ ಚ ದೇವಾನಾಂ ಶರೀರಾನ್ನಿರ್ಗತಂ ಮಹಃ ॥ ೧೧ ॥

ಅತೀವ ಮಹಸಃ ಪುಂಜಂ ಜ್ವಲಂತಂ ದಶದಿಕ್ಷು ಚ ।
ಅಪಶ್ಯಂಸ್ತ್ರಿದಶಾಸ್ಸರ್ವೇ ದುರ್ಗಾಧ್ಯಾನಪರಾಯಣಾಃ ॥ ೧೨ ॥

ಸರ್ವದೇವಶರೀರೋತ್ಥಂ ತೇಜಸ್ತದತಿಭೀಷಣಂ ।
ಸಂಘೀಭೂಯಾಭವನ್ನಾರೀ ಸಾಕ್ಷಾನ್ಮಹಿಷಮರ್ದಿನೀ ॥ ೧೩ ॥

೯. ಆದುದರಿಂದ ನಾವು ನಿಮ್ಮನ್ನು ಮರೆಹೊಕ್ಕಿರುವೆವು. ಅವನನ್ನು ಸಂಹಾರಮಾಡಲು ಏನಾದರೊಂದು ಉಪಾಯವನ್ನು ಜಾಗ್ರತೆಯಾಗಿ ನೀವಿಬ್ಬರೂ ಯೋಚಿಸಬೇಕು ಎಂದರು.

೧೦. ಈರೀತಿಯಾಗಿ ದೇವತೆಗಳು ಹೇಳಿದ ಮಾತನ್ನು ಕೇಳಿ ಆ ವಿಷ್ಣುವೂ ಮತ್ತು ಶಿವನೂ ರೋಷದಿಂದ ಕಣ್ಣಿನ ಗುಡ್ಡೆಗಳನ್ನು ತಿರುಗಿಸುತ್ತಾ ಆ ದೈತ್ಯನ ಮೇಲೆ ಕೋಪಮಾಡಿಕೊಂಡರು.

೧೧-೧೨. ಅನಂತರ ಅತಿಕೋಪದಿಂದಿರುವ ಆ ವಿಷ್ಣು ಶಿವರ ಮುಖದಿಂದಲೂ, ಇತರ ದೇವತೆಗಳ ಶರೀರದಿಂದಲೂ ತೇಜಸ್ಸು ಹೊರಟಿತು. ಆ ತೇಜಸ್ಸಿನ ಸಮೂಹವು ನಾಲ್ಕು ದಿಕ್ಕುಗಳನ್ನೂ ವ್ಯಾಪಿಸಿ ಅವುಗಳನ್ನು ಸುಡುತ್ತಿತ್ತು. ಇದನ್ನು ದೇವತೆಗಳೆಲ್ಲರೂ ನೋಡಿ ದುರ್ಗೆಯನ್ನು ಮನಸ್ಸಿನಲ್ಲಿ ಧ್ಯಾನಮಾಡಿದರು.

೧೩. ಎಲ್ಲಾ ದೇವತೆಗಳ ಶರೀರದಿಂದ ಉತ್ಪನ್ನವಾದ ಅತಿಭೀಷಣವಾದ ತೇಜಸ್ಸೆಲ್ಲವೂ ಸೇರಿದ್ದರಿಂದ ಆ ಮಹಿಷಾಸುರನನ್ನು ಕೊಲ್ಲುವಂತಹ ಓರ್ವ ಸ್ತ್ರೀಯು ಜನಿಸಿದಳು.

ಶಂಭುತೇಜಸ ಉತ್ಪನ್ನಂ ಮುಖಮುಸ್ಯಾಃ ಸುಭಾಸ್ವರಂ ।
ಯಾಮ್ಯೇನ ಭಾಲಾ ಅಭವನ್ವೈಷ್ಣವೇನ ಚ ಬಾಹವಃ ॥ ೧೪ ॥

ಚಂದ್ರಮಸ್ತೇಜಸಾ ತಸ್ಯಾಃ ಸ್ತನಯುಗ್ಮಂ ವ್ಯಜಾಯತ ।
ಮಧ್ಯಮೈಂದ್ರೇಣ ಜಂಘೋರೂ ವಾರುಣೇನ ಬಭೂವತುಃ ॥ ೧೫ ॥

ಭೂತೇಜಸಾ ನಿತಂಬೋsಭೂದ್ಬ್ರಾಹ್ಮೇಣ ಚರಣದ್ವಯಂ ।
ಆರ್ಕೇಣ ಚರಣಾಂಗುಲ್ಯಃ ಕರಾಂಗುಲ್ಯಶ್ಚ ವಾಸವಾತ್ ॥ ೧೬ ॥

ಕುಬೇರತೇಜಸಾ ನಾಸಾ ರದನಾಶ್ಚ ಪ್ರಜಾಪತೇಃ ।
ಪಾವಕೀಯೇನ ನಯನತ್ರಯಂ ಸಾಂಧ್ಯೇನ ಭ್ರೂದ್ವಯಂ ॥ ೧೭ ॥

ಅನಿಲೇನ ಶ್ರವೋದ್ವಂದ್ವಂ ತಥಾನ್ಯೇಷಾಂ ಸ್ವರೋಕಸಾಂ ।
ತೇಜಸಾಂ ಸಂಭವಃ ಪದ್ಮಾಲಯಾ ಸಾ ಪರಮೇಶ್ವರೀ ॥ ೧೮ ॥

೧೪-೧೫. ಈಶ್ವರನ ತೇಜಸ್ಸಿನಿಂದ ಅವಳ ಪ್ರಕಾಶಮಾನವಾದ ಮುಖವು ಉತ್ಪನ್ನವಾಯಿತು. ಯಮನ ತೇಜಸ್ಸಿನಿಂದ ಅವಳ ಹಣೆಯೂ, ವಿಷ್ಣುವಿನ ತೇಜಸ್ಸಿನಿಂದ ಅವಳ ಬಾಹುಗಳೂ, ಚಂದ್ರನ ತೇಜಸ್ಸಿನಿಂದ ಅವಳ ಸ್ತನಗಳೂ ಹುಟ್ಟಿದವು. ಇಂದ್ರನ ತೇಜಸ್ಸಿನಿಂದ ಅವಳ ಸೊಂಟವೂ, ವರುಣನ ತೇಜಸ್ಸಿನಿಂದ ಮೊಳಕಾಲು ಮತ್ತು ಎರಡು ತೊಡೆಗಳೂ ಉತ್ಪನ್ನವಾದವು.

೧೬-೧೮. ಆ ದೇವಿಯ ನಿತಂಬವು ಭೂಮಿಯ ತೇಜಸ್ಸಿನಿಂದಲೂ, ಕಾಲು ಬ್ರಹ್ಮನ ತೇಜಸ್ಸಿನಿಂದಲೂ ಹುಟ್ಟಿದವು. ಸೂರ್ಯನ ತೇಜಸ್ಸಿನಿಂದ ಅವಳ ಕಾಲಿನ ಬೆರಳುಗಳೂ, ಇಂದ್ರನ ತೇಜಸ್ಸಿನಿಂದ ಕೈಬೆರಳುಗಳೂ ಉತ್ಪನ್ನವಾದವು. ಕುಬೇರನ ತೇಜಸ್ಸಿನಿಂದ ಆ ದೇವಿಯ ನಾಸಿಕವೂ, ಪ್ರಜಾಪತಿಯ ತೇಜಸ್ಸಿನಿಂದ ಅವಳ ಹಲ್ಲುಗಳೂ ಸೃಷ್ಟಿಯಾದವು. ಅಗ್ನಿಯ ತೇಜಸ್ಸಿನಿಂದ ಅವಳ ಮೂರು ಕಣ್ಣುಗಳೂ, ಸಂಧ್ಯೆಯ ತೇಜಸ್ಸಿನಿಂದ ಎರಡು ಹುಬ್ಬುಗಳೂ ನಿರ್ಮಿತವಾದವು. ವಾಯುವಿನ ತೇಜಸ್ಸಿನಿಂದ ಕಿವಿಗಳೆರಡೂ ಉತ್ಪನ್ನವಾದುವು. ಈರೀತಿಯಾಗಿ ಸಮಸ್ತ ದೇವತೆಗಳ ತೇಜಸ್ಸಿನಿಂದ ಪದ್ಮಾಲಯಳಾದ ಪರಮೇಶ್ವರಿಯು ಉತ್ಪನ್ನಳಾದಳು.

ತತೋ ನಿಖಿಲದೇವಾನಾಂ ತೇಜೋರಾಶಿಸಮುದ್ಭವಾಂ ।
ತಮಾಲೋಕ್ಯ ಸುರಾಸ್ಸರ್ವೇ ಪರಂ ಹರ್ಷಂ ಪ್ರಪೇದಿರೇ ॥ ೧೯ ॥

ನಿರಾಯುಧಾಂ ಚ ತಾಂ ದೃಷ್ಟ್ವಾ ಬ್ರಹ್ಮಾದ್ಯಾಸ್ತ್ರಿದಿವೇಶ್ವರಾಃ ।
ಸಾಯುಧಾಂ ತಾಂ ಶಿವಾಂ ಕರ್ತುಂ ಮನಸ್ಸಂದಧಿರೇ ಸುರಾಃ ॥ ೨೦ ॥

ತತಃ ಶೂಲಂ ಮಹೇಶಾನೋ ಮಹೇಶಾನ್ಯೈ ಸಮರ್ಪಯತ್ ।
ಚಕ್ರಂ ಚ ಕೃಷ್ಣೋ ಭಗವಾನ್ ಶಂಖಂ ಪಾಶಂ ಚ ಪಾಶಭೃತ್ ॥ ೨೧ ॥

ಶಕ್ತಿಂ ಹುತಾಶನೋಽಯಚ್ಛನ್ಮಾರುತಶ್ಚಾಪಮೇವ ಚ ।
ಬಾಣಪೂರ್ಣೇಷುಧೀ ಚೈವ ವಜ್ರಘಂಟೇ ಶಚೀಪತಿಃ ॥ ೨೨ ॥

ಯಮೋ ದದೌ ಕಾಲದಂಡಮಕ್ಷಮಾಲಾಂ ಪ್ರಜಾಪತಿಃ ।
ಬ್ರಹ್ಮಾ ಕಮಂಡಲುಂ ಪ್ರಾದಾದ್ರೋಮರಶ್ಮೀನ್ ದಿವಾಕರಃ ॥ ೨೩ ॥

ಕಾಲಃ ಖಡ್ಗಂ ದದೌ ತಸ್ಯೈ ಫಲಕಂ ಚ ಸಮುಜ್ಜ್ವಲಂ ।
ಕ್ಷೀರಾಬ್ಧೀ ರುಚಿರಂ ಹಾರಮಜರೇ ಚ ತಥಾಂಬರೇ ॥ ೨೪ ॥

೧೯. ದೇವತೆಗಳ ತೇಜೋರಾಶಿಯಿಂದ ಉತ್ಪನ್ನಳಾದ ಆ ದೇವಿಯನ್ನು ನೋಡಿ ದೇವತೆಗಳೆಲ್ಲರೂ ಬಹಳ ಆನಂದಪಟ್ಟರು.

೨೦. ದೇವಿಯ ಕೈಯಲ್ಲಿ ಯಾವ ಆಯುಧಗಳೂ ಇರಲಿಲ್ಲ. ಇದನ್ನು ನೋಡಿ ಆ ದೇವತೆಗಳು ಆ ಪರಮೇಶ್ವರಿಗೆ ಆಯುಧವನ್ನು ಕೊಡಬೇಕೆಂದು ಯೋಚಿಸಿದರು.

೨೧-೨೨. ಈಶ್ವರನು ಪರಮೇಶ್ವರಿಗೆ ಶೂಲವನ್ನು ಕೊಟ್ಟನು. ವಿಷ್ಣುವು ಸುದರ್ಶನಚಕ್ರವನ್ನೂ ಶಂಖವನ್ನೂ, ವರುಣನು ಪಾಶವನ್ನೂ, ಅಗ್ನಿಯು ಶಕ್ತ್ಯಾಯುಧವನ್ನೂ, ವಾಯುವು ಬಾಣವನ್ನೂ ಕೊಟ್ಟರು. ಇಂದ್ರನು ಬಾಣದಿಂದ ತುಂಬಿರುವ ಬತ್ತಳಿಕೆಯನ್ನೂ, ವಜ್ರಾಯುಧವನ್ನೂ, ಘಂಟಾಯುಧವನ್ನೂ ಕೊಟ್ಟನು.

೨೩-೨೪. ಯಮನು ಕಾಲದಂಡವನ್ನೂ, ಪ್ರಜಾಪತಿಯು ಅಕ್ಷಮಾಲೆಯನ್ನೂ, ಬ್ರಹ್ಮನು ಕಮಂಡಲವನ್ನೂ, ಸೂರ್ಯನು ರೋಮಗಳನ್ನೂ ಕೊಟ್ಟರು. ಕಾಲನು ಖಡ್ಗವನ್ನೂ ಮತ್ತು ಫಲಕಾಯುಧವನ್ನೂ ಕೊಟ್ಟನು. ಕ್ಷೀರಸಮುದ್ರವು ಮನೋಹರವಾದ ಹಾರವನ್ನೂ ನಾಶವಾಗದಿರುವ ಬಟ್ಟೆಗಳನ್ನೂ ಕೊಟ್ಟಿತು.

ಚೂಡಾಮಣಿಂ ಕುಂಡಲೇ ಚ ಕಟಿಕಾನಿ ತಥೈವ ಚ ।
ಅರ್ಧಚಂದ್ರಂ ಚ ಕೇಯೂರಾನ್ನೂಪುರೌ ಚ ಮನೋಹರೌ ॥ ೨೫ ॥

ಗ್ರೈವೇಯಕಮಂಗುಲೀಷು ಸಮಸ್ತಾಸ್ವಂಗುಲೀಯಕಂ ।
ವಿಶ್ವಕರ್ಮಾ ಚ ಪರಶಂ ದದೌ ತಸ್ಯೈ ಮನೋಹರಂ ॥ ೨೬ ॥

ಅಸ್ತ್ರಾಣ್ಯನೇಕಾನಿ ತಥಾಭೇದ್ಯಂ ಚೈವ ತನುಚ್ಛದಂ ।
ಸುರಭ್ಯಸಾರಸಾಂ ಮಾಲಾಂ ಪಂಕಜಂ ಚಾಂಬುಧಿರ್ದದೌ ॥ ೨೭ ॥

ದದೌ ಸಿಂಹಂ ಚ ಹಿಮವಾನ್ ರತ್ನಾನಿ ವಿವಿಧಾನಿ ಚ ।
ಸುರಯಾ ಪೂರಿತಂ ಪಾತ್ರಂ ಕುಬೇರೋऽಸ್ಯೈ ಸಮರ್ಪಯತ್ ॥ ೨೮ ॥

ಶೇಷಶ್ಚ ಭೋಗಿನಾಂ ನೇತಾ ವಿಚಿತ್ರರಚನಾಂಚಿತಂ ।
ದದೌ ತಸ್ಯೈ ನಾಗಹಾರಂ ನಾನಾಸನ್ಮಣಿಗುಂಫಿತಂ ॥ ೨೯ ॥

ಏತೈಶ್ಚಾನ್ಯೈಸ್ಸುರೈರ್ದೇವೀ ಭೂಷಣೈರಾಯುಧೈಸ್ತಥಾ ।
ಸತ್ಕೃತೋಚ್ಚೈರ್ನನಾದಾಸೌ ಸಾಟ್ಟಹಾಸಂ ಪುನಃ ಪುನಃ ॥ ೩೦ ॥

---

೨೫-೨೬. ಚೂಡಾಮಣಿ, ಕರ್ಣಕುಂಡಲಗಳು, ಬಳೆಗಳು, ಅರ್ಧಚಂದ್ರವೆಂಬ ಒಡವೆ, ಭುಜಕೀರ್ತಿ, ಕಾಲ್ಕಡಗಗಳು, ಕತ್ತಿನಸರ, ಹತ್ತು ಬೆರಳುಗಳಿಗೂ ಉಂಗುರಗಳು ಇವುಗಳೆಲ್ಲವನ್ನೂ ಕೂಡ ಆ ಕ್ಷೀರಸಮುದ್ರವೇ ಕೊಟ್ಟಿತು. ವಿಶ್ವಕರ್ಮನೆಂಬ ದೇವಶಿಲ್ಪಿಯು ಪರಶ್ವಾಯುಧವನ್ನು ಕೊಟ್ಟನು.

೨೭-೨೮. ಸಮುದ್ರನು ಆ ದೇವಿಗೆ ಅನೇಕ ಅಸ್ತ್ರಗಳನ್ನೂ ಮತ್ತು ಭೇದಿಸಲು ಆಗದ ಕವಚವನ್ನೂ, ಮನೋಹರವಾದ ಕಮಲಗಳ ಹಾರವನ್ನೂ, ಒಂದು ಪದ್ಮವನ್ನೂ ಕೊಟ್ಟನು. ಹಿಮವಂತನು ವಾಹನಕ್ಕೋಸ್ಕರ ಸಿಂಹವನ್ನೂ, ಅಲಂಕರಿಸಿಕೊಳ್ಳಲು ನಾನಾವಿಧವಾದ ರತ್ನಗಳನ್ನೂ ಕೊಟ್ಟನು. ಮಧ್ಯದಿಂದ ತುಂಬಿರುವ ಒಂದು ಪಾತ್ರೆಯನ್ನು ಕುಬೇರನು ಕೊಟ್ಟನು.

೨೯-೩೦. ಸರ್ಪಗಳಿಗೆ ಅಧಿಪತಿಯಾದ ಶೇಷನು ನಾನಾ ರತ್ನಗಳನ್ನು ಸೇರಿಸಿ ನಿರ್ಮಿಸಿದ ವಿಚಿತ್ರವಾದ ನಾಗರಹಾರವನ್ನು ಕೊಟ್ಟನು. ಆರೀತಿ ದೇವತೆಗಳು ಕೊಟ್ಟ ಆಯುಧಗಳಿಂದಲೂ, ಅಲಂಕಾರಗಳಿಂದಲೂ ಪ್ರಕಾಶಿಸುತ್ತಾ ಆ ದೇವಿಯು ಅಟ್ಟಹಾಸವನ್ನು ಮಾಡುತ್ತಾ ಬಹಳ ಉಚ್ಚಧ್ವನಿಯಿಂದ ಗರ್ಜನೆಮಾಡಿದಳು.

ತಸ್ಯಾ ಭೀಷಣನಾದೇನ ಪೂರಿತಾ ಚ ನಭಃಸ್ಥಲೀ ।
ಪ್ರತಿಶಬ್ದೋ ಮಹಾನಾಸೀಚ್ಚುಕ್ಷುಭೇ ಭುವನತ್ರಯಂ ॥ ೩೧ ॥

ಚೇಲುಃ ಸಮುದ್ರಾಶ್ಚತ್ವಾರೋ ವಸುಧಾ ಚ ಚಚಾಲ ಹ ।
ಜಯಶಬ್ದಸ್ತತೋ ದೇವ್ಯೈರಕಾರಿ ಮಹಿಷಾರ್ದಿತೈಃ ॥ ೩೨ ॥

ತತೋಽಂಬಿಕಾಂ ಪರಾಂ ಶಕ್ತಿಂ ಮಹಾಲಕ್ಷ್ಮೀಸ್ವರೂಪಿಣೀಂ ।
ತುಷ್ಟುವುಸ್ತೇ ಸುರಾಸ್ಸರ್ವೇ ಭಕ್ತಿಗದ್ಗದಯಾ ಗಿರಾ ॥ ೩೩ ॥

ಲೋಕಂ ಸಂಕ್ಷುಬ್ಧಮಾಲೋಕ್ಯ ದೇವತಾಪರಿಪಂಥಿನಃ ।
ಸಂನದ್ಧಸೈನಿಕಾಸ್ತೇ ಚ ಸಮುತ್ತಸ್ಥುರುಧಾಯುಧಾಃ ॥ ೩೪ ॥

ಮಹಿಷೋಽಪಿ ಚ ತಂ ಶಬ್ದಮಭ್ಯಧಾವದ್ರುಷಾನ್ವಿತಃ ।
ಸ ದದರ್ಶ ತತೋ ದೇವೀಂ ವ್ಯಾಪ್ತಲೋಕತ್ರಯಾಂ ರುಚಾ ॥ ೩೫ ॥

೩೧-೩೨. ಆ ದೇವಿಯ ಭಯಂಕರವಾದ ಶಬ್ದವು ಆಕಾಶಮಂಡಲವನ್ನೆಲ್ಲಾ ಆವರಿಸಿ ಪ್ರತಿಧ್ವನಿಯುಂಟಾಯಿತು. ಈ ಪ್ರತಿಧ್ವನಿಯನ್ನು ಕೇಳಿ ಮೂರು ಲೋಕವೂ ವ್ಯಾಕುಲಗೊಂಡಿತು. ನಾಲ್ಕು ಸಮುದ್ರಗಳೂ ಅಲ್ಲೋಲಕಲ್ಲೋಲವಾದುವು. ಭೂಮಿಯು ನಡುಗಿತು. ಅನಂತರ ಮಹಿಷಾಸುರನ ತೊಂದರೆಗೊಳಗಾದ ಆ ದೇವತೆಗಳೆಲ್ಲರೂ ದೇವಿಗೆ ಜಯಜಯಕಾರವನ್ನು ಮಾಡಿದರು.

೩೩. ಅನಂತರ ಆ ದೇವತೆಗಳೆಲ್ಲರೂ ಪರಾಶಕ್ತಿಸ್ವರೂಪಳೂ, ಮಹಾಲಕ್ಷ್ಮೀಸ್ವರೂಪಳೂ, ಮಾತೃಸ್ವರೂಪಳೂ ಆದ ಅಂಬಿಕೆಯನ್ನು ಭಕ್ತಿಪಾರವಶ್ಯದಿಂದ ನಡುಗುತ್ತಿರುವ ವಾಕ್ಯಗಳಿಂದ ಸ್ತೋತ್ರಮಾಡಿದರು.

೩೪. ಈರೀತಿಯಾಗಿ ಲೋಕಗಳೆಲ್ಲವೂ ಸಂಕ್ಷುಬ್ಧವಾಗಿರುವುದನ್ನು ನೋಡಿ ದೇವತೆಗಳ ಶತ್ರುಗಳಾದ ರಾಕ್ಷಸರೆಲ್ಲರೂ ಆಯುಧಗಳನ್ನು ಹಿಡಿದು ತಮ್ಮ ತಮ್ಮ ಸೈನ್ಯಗಳೊಡನೆ ಕೂಡಿ ಯುದ್ಧಕ್ಕೆ ಸಿದ್ಧರಾದರು.

೩೫. ಆ ಮಹಿಷಾಸುರನೂ ಕೂಡ ಆ ಶಬ್ದವನ್ನು ಕೇಳಿ ಕೋಪಗೊಂಡವನಾಗಿ ಅಲ್ಲಿಗೆ ಓಡಿಬಂದನು. ಮೂರು ಲೋಕಗಳಲ್ಲಿಯೂ ತನ್ನ ಕಾಂತಿಯನ್ನು ಬೀರುತ್ತಾ ಇರುವ ದೇವಿಯನ್ನು ನೋಡಿದನು.

ಏತಸ್ಮಿನ್ನಂತರೇ ತತ್ರ ಮಹಿಷಾಸುರಪಾಲಿತಾಃ ।
ಸಮಾಜಗ್ಮುರ್ಮಹಾವೀರಾ ಕೋಟಿಶೋ ಧೃತಹೇತಯಃ ॥ ೩೬ ॥

ಚಿಕ್ಷುರಶ್ಚಾಮರೋದಗ್ರೌ ಕರಾಲೋದ್ಧತಬಾಷ್ಕಲಾಃ ।
ತಾಮ್ರೋಗ್ರಾಸ್ಯೋಗ್ರವೀರ್ಯಾಶ್ಚ ಬಿಡಾಲೋಂಧಕ ಏವ ಚ ॥ ೩೭ ॥

ದುರ್ಧರೋ ದುರ್ಮುಖಶ್ಚೈವ ತ್ರಿನೇತ್ರಶ್ಚ ಮಹಾಹನುಃ ।
ಏತೇ ಚಾನ್ಯೇ ಬ ಬಹವಃ ಶೂರಾ ಯುದ್ಧವಿಶಾರದಾಃ ॥ ೩೮ ॥

ಯುಯುಧುಃ ಸಮರೇ ದೇವ್ಯಾ ಸಹ ಶಸ್ತ್ರಾಸ್ತ್ರಪಾರಗಾಃ ।
ಇತ್ಥಂ ಕಾಲೋ ವ್ಯತೀಯಾಯ ಯುದ್ಧ್ಯತೋರ್ಭೀಷಣಸ್ತಯೋಃ ॥ ೩೯ ॥

ಅರಿವರ್ಗಕರಕ್ಷಿಪ್ತಾ ನಾನಾಶಸ್ತ್ರಾಸ್ತ್ರರಾಶಯಃ ।
ಮಹಾಮಾಯಾಪ್ರಭಾವೇಣ ವಿಫಲಾ ಅಭವನ್ ಕ್ಷಣಾತ್ ॥ ೪೦ ॥

ತತೋ ಜಘಾನ ಸಾ ದೇವೀ ಚಿಕ್ಷುರಪ್ರಮುಖಾನರೀನ್ ।
ಸಗಣಾನ್ ಗದಯಾ ಬಾಣೈಃ ಶೂಲಶಕ್ತಿಪರಶ್ವಧೈಃ ॥ ೪೧ ॥

---

೩೬. ಅಷ್ಟುಹೊತ್ತಿಗೆ ಸರಿಯಾಗಿ ಮಹಿಷಾಸುರನ ಕಡೆಯ ಕೋಟ್ಯಾನು ಕೋಟಿ ರಾಕ್ಷಸರೂ ಆಯುಧಗಳನ್ನು ಹಿಡಿದು ಅಲ್ಲಿಗೆ ಬಂದು ಸೇರಿದರು.

೩೭-೩೮. ಚಿಕ್ಷುರ, ಚಾಮರ, ಉದಗ್ರ, ಕರಾಲ, ಉದ್ಧತ, ಬಾಷ್ಕಲ, ತಾಮ್ರ, ಉಗ್ರಾಸ್ಯ, ಉಗ್ರವೀರ್ಯ, ಬಿಡಾಲ, ಅಂಧಕ, ದುರ್ಧರ, ದುರ್ಮುಖ, ತ್ರಿನೇತ್ರ, ಮಹಾಹನು ಇವರೇ ಮೊದಲಾದ ಅನೇಕಜನ ರಾಕ್ಷಸರು ಮತ್ತು ಯುದ್ಧ ವಿಶಾರದರೂ, ಶೂರರೂ ಆದ ಇನ್ನೂ ಕೆಲವುಜನ ರಾಕ್ಷಸರೂ ಆ ದೇವಿಯೊಡನೆ ಯುದ್ಧಮಾಡಿದರು.

೩೯-೪೦. ಈರೀತಿಯಾಗಿ ರಾಕ್ಷಸರಿಗೂ ಮತ್ತು ದೇವಿಗೂ ಬಹಳ ಕಾಲದ ವರೆಗೂ ಯುದ್ಧವು ನಡೆಯಿತು. ಆದರೆ ಶತ್ರುಪಕ್ಷದವರು ಬಿಟ್ಟ ಶಸ್ತ್ರಾಸ್ತ್ರಗಳು ಮಹಾಮಾಯೆಯ ಪ್ರಭಾವದಿಂದ ಸ್ವಲ್ಪಕಾಲದಲ್ಲೇ ನಿಷ್ಫಲವಾಗುತ್ತಿದ್ದವು.

೪೧. ಅನಂತರ ದೇವಿಯು ಚಿಕ್ಷುರನೇ ಮೊದಲಾದ ಶತ್ರುಗಳನ್ನು ಅವರವರ ಸೈನಿಕರೊಂದಿಗೆ ಗದೆಯಿಂದಲೂ, ಬಾಣಗಳಿಂದಲೂ, ಶೂಲ, ಶಕ್ತಿ, ಪರಶು ಮುಂತಾದ ಆಯುಧಗಳನ್ನು ಪ್ರಯೋಗಿಸಿಯೂ ಕೊಂದುಹಾಕಿದಳು.

ಏವಂ ಸ್ವೀಯೇಷು ಸೈನ್ಯೇಷು ಹತೇಷು ಮಹಿಷಾಸುರಃ ।
ದೇವೀನಿಃಶ್ವಾಸಸಂಭೂತಾನ್ ಭಾವಯಾಮಾಸ ತಾನ್ ಗಣಾನ್ ॥ ೪೨ ॥

ಅತಾಡಯತ್ಖುರೈಃ ಕಾಂಶ್ಚಿತ್ಕಾಂಶ್ಚಿಚ್ಛೃಂಗದ್ವಯೇನ ಚ ।
ಲಾಂಗೂಲೇನ ಚ ತುಂಡೇನ ಭಿನತ್ತಿ ಸ್ಮ ಮುಹುರ್ಮುಹುಃ ॥ ೪೩ ॥

ಇತ್ಥಂ ದೇವೀಗಣಾನ್ ಹತ್ವಾಭ್ಯಧಾವತ್ಸೋಽಸುರಾಧಿಪಃ ।
ಸಿಂಹಂ ಮಾರಯಿತುಂ ದೇವ್ಯಾಸ್ತತೋಽಸೌ ಕುಪಿತಾಭವತ್ ॥ ೪೪ ॥

ಕೋಪಾತ್ಸೋಽಪಿ ಮಹಾವೀರ್ಯಃ ಖುರಕುಟ್ಟಿತಭೂತಲಃ ।
ಶೃಂಗಾಭ್ಯಾಂ ಶೈಲಮುತ್ಪಾಟ್ಯ ಚಿಕ್ಷೇಪ ಪ್ರಣನಾದ ಚ ॥ ೪೫ ॥

ವೇಗೇನ ವಿಷ್ವಗ್ ಭ್ರಮತಾ ಪ್ರಕ್ಷಿಪ್ತಾ ಗುರವೋದ್ರಯಃ ।
ಆಕಾಶತೋ ಮಹೀಮಧ್ಯೇ ನಿಪೇತುರ್ನೃಪಸತ್ತಮ ॥ ೪೬ ॥

೪೨. ಈರೀತಿಯಾಗಿ ತನ್ನ ಕಡೆಯವರು ನಾಶವಾಗುತ್ತಿರಲು ಮಹಿಷಾಸುರನು ದೇವಿಯ ನಿಶ್ವಾಸದಿಂದ ಹುಟ್ಟಿದ ಗಣಗಳನ್ನು ಹೊಡೆಯಲು ಪ್ರಾರಂಭಿಸಿದನು.

೪೩. ಕೆಲವು ದೇವತೆಗಳನ್ನು ಗೊರಸುಗಳಿಂದಲೂ, ಕೆಲವರನ್ನು ಎರಡು ಕೊಂಬುಗಳಿಂದಲೂ, ಮತ್ತೆ ಕೆಲವರನ್ನು ಬಾಲದಿಂದಲೂ, ಕೆಲವರನ್ನು ಮೂತಿಯಿಂದಲೂ ಬಾರಿಬಾರಿಗೂ ಹೊಡೆಯುತ್ತಿದ್ದನು.

೪೪. ಈರೀತಿಯಾಗಿ ದೇವತೆಗಳನ್ನೆಲ್ಲಾ ಹೊಡೆದು ದೇವಿಯ ವಾಹನವಾದ ಸಿಂಹವನ್ನು ಕೊಲ್ಲುವುದಕ್ಕೋಸ್ಕರ ಮುನ್ನುಗ್ಗಿದನು. ಅದನ್ನು ನೋಡಿ ದೇವಿಯು ಕೋಪಗೊಂಡಳು.

೪೫. ಆ ಮಹಿಷಾಸುರನು ಕ್ರೋಧಾನ್ವಿತನಾಗಿ ತನ್ನ ಗೊರಸುಗಳಿಂದ ಭೂಮಿಯನ್ನು ಕುಟ್ಟುತ್ತಾ ತನ್ನ ಕೋಡುಗಳಿಂದ ಒಂದು ಪರ್ವತವನ್ನು ಎತ್ತಿ ತಂದು ಆ ದೇವಿಯ ಮೇಲೆ ಹಾಕಿ ಗರ್ಜಿಸಿದನು.

೪೬. ಆ ರಾಕ್ಷಸನು ಇಲ್ಲಿಂದಲ್ಲಿಗೆ ಬಹಳ ವೇಗವಾಗಿ ಸಂಚರಿಸುತ್ತಾ ದೊಡ್ಡ ದೊಡ್ಡ ಪರ್ವತಗಳನ್ನು ಆಕಾಶಮಾರ್ಗದಿಂದ ಭೂಮಿಯ ಮೇಲಕ್ಕೆ ನಾಲ್ಕು ಕಡೆಗಳಿಂದಲೂ ಎಸೆದನು.

ಶೃಂಗಭಿನ್ನಾಃ ಪಯೋವಾಹಾಃ ಖಂಡಖಂಡಮಯಾಸಿಷುಃ ।
ಲಾಂಗೂಲೇನಾಹತಶ್ಚಾಬ್ಧಿರ್ನಿಷ್ವಗುದ್ವೇಲಮುಪ್ಪದತ್ ॥ ೪೭ ॥

ಏವಂ ಕ್ರುದ್ಧಂ ಸಮಾಲೋಕ್ಯ ಮಹಿಷಾಸುರಮಂಬಿಕಾ ।
ವಿದಧೇ ತದ್ವಧೋಪಾಯಂ ದೇವಾನಾಮಭಯಂಕರೀ ॥ ೪೮ ॥

ತತಃ ಪಾಶಂ ಸಮುತ್ಕ್ಷಿಪ್ಯ ಕ್ಷಿಪ್ತ್ವಾ ತಸ್ಯೋಪರೀಶ್ವರೀ ।
ಬಬಂಧ ಮಹಿಷಂ ಸೋಽಪಿ ರೂಪಂ ತತ್ಯಾಜ ಮಾಹಿಷಂ ॥ ೪೯ ॥

ತತಃ ಸಿಂಹೋ ಬಭೂವಾಶು ಮಾಯಾವೀ ತಚ್ಛಿರೋಽಂಬಿಕಾ ।
ಯಾವಚ್ಛಿನತ್ತಿ ತಾವತ್ಸ ಖಡ್ಗಪಾಣಿರ್ಬಭೂವ ಹ ॥ ೫೦ ॥

ಸಚರ್ಮಾಸಿಕರಂ ತಂ ಚ ದೇವೀ ಬಾಣೈರತಾಡಯತ್ ।
ತತೋ ಗಜವಪುರ್ಭೂತ್ವಾ ಸಿಂಹಂ ಚಿಚ್ಛೇದ ಶುಂಡಯಾ ॥ ೫೧ ॥

---

೪೭. ಆ ಪರ್ವತಗಳ ಶಿಖರಗಳು ಬಿದ್ದುದರಿಂದ ಸಮುದ್ರಗಳು ನಾನಾ ಭಾಗಗಳಾದವು. ಮತ್ತು ಆ ರಾಕ್ಷಸನ ಬಾಲದ ಏಟಿನಿಂದ ನಾಲ್ಕು ಕಡೆಗಳಿಂದಲೂ ಅಲ್ಲೋಲಕಲ್ಲೋಲವಾದುವು.

೪೮. ಇತ್ತ ದೇವಿಯು ದೇವತೆಗಳಿಗೆ ಹೆದರಬೇಡಿರೆಂದು ಅಭಯವನ್ನು ಕೊಡುತ್ತಾ ಸಿಟ್ಟಿನಿಂದ ಭಯಂಕರನಾಗಿರುವ ಆ ಮಹಿಷಾಸುರನನ್ನು ಕೊಲ್ಲಲು ಉಪಾಯವನ್ನು ಯೋಚಿಸಿದಳು.

೪೯. ಅನಂತರ ಆ ದೇವಿಯು ಪಾಶಾಯುಧವನ್ನು ಅವನ ಮೇಲೆ ಪ್ರಯೋಗಿಸಿದಳು. ಅದು ಆ ಮಹಿಷನನ್ನು ಕಟ್ಟಿತು. ಅನಂತರ ಅವನು ತನ್ನ ಕೋಣದ ರೂಪವನ್ನು ಬಿಟ್ಟುಬಿಟ್ಟನು.

೫೦. ಬಳಿಕ ಆ ಮಾಯಾವಿಯು ಸಿಂಹದ ರೂಪವನ್ನು ಧರಿಸಿದನು. ಆ ದೇವಿಯು ಅದರ ತಲೆಯನ್ನೂ ಕತ್ತರಿಸಿದಳು. ಪುನಃ ಅವನು ಖಡ್ಗವನ್ನು ಹಿಡಿದುಕೊಂಡು ಯುದ್ಧಕ್ಕೆ ಬಂದನು.

೫೧. ಆ ದೇವಿಯು ಖಡ್ಗವನ್ನು ಹಿಡಿದು ಬಂದಿರುವ ಅವನನ್ನು ಬಾಣಗಳಿಂದ ಕೊಂದಳು. ಪುನಃ ಅವನು ಆನೆಯ ಶರೀರವುಳ್ಳವನಾಗಿ ತನ್ನ ಸೊಂಡಲಿನಿಂದ ದೇವಿಯ ಸಿಂಹವನ್ನು ಹೊಡೆದನು.

ತತೋಽಸ್ಯ ಚ ಕರಂ ದೇವೀ ಚಕರ್ತ ಸ್ವಮಹಾಸಿನಾ ।
ಅಧಾರಿ ಚ ಪುನಾ ರೂಪಂ ಸ್ವಕೀಯಂ ತೇನ ರಕ್ಷಸಾ ॥ ೫೨ ॥

ತದೈವ ಕ್ಷೋಭಯಾಮಾಸ ತ್ರೈಲೋಕ್ಯಂ ಸಚರಾಚರಂ ।
ತತಃ ಕ್ರುದ್ಧಾ ಮಹಾಮಾಯಾ ಚಂಡಿಕಾ ಮಾನವಿಕ್ರಮಾ ॥ ೫೩ ॥

ಪಪೌ ಪುನಃ ಪುನಃ ಪಾನಂ ಜಹಾಸೋದ್ಭ್ರಾಂತಲೋಚನಾ ।
ಜಗರ್ಜ ಚಾಸುರಃ ಸೋಽಪಿ ಬಲವೀರ್ಯಮದೋದ್ಧತಃ ॥ ೫೪ ॥

ತಸ್ಯಾ ಉಪರಿ ಚಿಕ್ಷೇಪ ಶೈಲಾನುತ್ಪಾಟ್ಯ ಸೋಽಸುರಃ ।
ಸಾ ಚ ಬಾಣಾವಲೀಘಾತೈಶ್ಚೂರ್ಣಯಾಮಾಸ ಸತ್ವರಂ ॥ ೫೫ ॥

ವಾರುಣೀಮದಸಂಜಾತಮುಖರಾಗಾಕುಲೇಂದ್ರಿಯಾ ।
ಪ್ರೋವಾಚ ಪರಮೇಶಾನೀ ಮೇಘಗಂಭೀರಯಾ ಗಿರಾ ॥ ೫೬ ॥

೫೨-೫೪. ದೇವಿಯು ಆನೆಯ ಸೊಂಡಿಲನ್ನು ತನ್ನ ಕತ್ತಿಯಿಂದ ಕತ್ತರಿಸಿದಳು. ಪುನಃ ಆ ರಾಕ್ಷಸನು ತನ್ನ ರೂಪವನ್ನು ಬದಲಾಯಿಸಿಕೊಂಡು ಚರಾಚರಾತ್ಮಕವಾದ ಮೂರು ಲೋಕಗಳನ್ನೂ ಕ್ಷೋಭೆಗೊಳಿಸಲು ಪ್ರಾರಂಭಿಸಿದನು. ಅದನ್ನು ನೋಡಿ, ಮಹಾಮಾಯೆಯು ತುಂಬಾ ಕೋಪಗೊಂಡಳು. ಮದ್ಯವನ್ನು ಬಾರಿಬಾರಿಗೂ ಪಾನಮಾಡುತ್ತಾ ಕಣ್ಣುಗಳನ್ನು ತಿರುಗಿಸುತ್ತಾ ಅಟ್ಟಹಾಸಮಾಡಿದಳು. ಆ ಮಹಿಷಾಸುರನೂ ಕೂಡ ಶೌರ್ಯಮದದಿಂದ ಉದ್ಧತನಾಗಿ ಘರ್ಜನೆಮಾಡಿದನು. ಮತ್ತು ಪರ್ವತಗಳನ್ನು ಕಿತ್ತು ತಂದು ಆ ದೇವಿಯ ಮೇಲೆ ಹಾಕುತ್ತಿದ್ದನು.

೫೫-೫೬. ಮಹಿಷನು ಹಾಕುತ್ತಿದ್ದ ಬೆಟ್ಟಗಳನ್ನೆಲ್ಲಾ ದೇವಿಯು ತನ್ನ ಬಾಣಗಳ ಸಮೂಹದಿಂದ ಚೂರುಚೂರು ಮಾಡುತ್ತಿದ್ದಳು. ಅನಂತರ ಮದ್ಯಪಾನದ ಮದದಿಂದ ಮುಖವು ಕೆಂಪಾಗಿರಲು, ಇಂದ್ರಿಯಗಳೆಲ್ಲವೂ ಯುದ್ಧಕ್ಕಾಗಿ ತವಕಗೊಳ್ಳುತ್ತಿರಲು ಆ ದೇವಿಯು ಮಹಿಷನನ್ನು ಕುರಿತು ಗಂಭೀರವಾದ ಧ್ವನಿಯಿಂದ ಇಂತೆಂದಳು.

|| ದೇವ್ಯುವಾಚ ||

ರೇ ಮೂಢ ರೇ ಹತಪ್ರಜ್ಞ ವ್ಯರ್ಥಂ ಕಿಂ ಕುರುಷೇ ಹಠಂ ।
ನ ಮದಗ್ರೇಽಸುರಾಃ ಕೇಽಪಿ ಸ್ಥಾಸ್ನವೋ ಜಗತೀತಲೇ || ೫೭ ||

|| ಋಷಿರುವಾಚ ||

ಏವಮಾಭಾಷ್ಯ ಕೂರ್ದಿತ್ವಾ ದೇವೀ ಸರ್ವಕಲಾಮಯೀ ।
ಪದಾಕ್ರಮ್ಯಾಸುರಂ ಕಂಠೇ ಶೂಲೇನಾಗ್ರೇಣ ಸಾಽಭಿನತ್ || ೫೮ ||

ತತಸ್ತಚ್ಚರಣಾಕ್ರಾಂತಃ ಸ ಸ್ವಕೀಯಮುಖಾತ್ತತಃ ।
ಅರ್ಧನಿಷ್ಕ್ರಾಂತ ಏವಾಸೀದ್ದೇವ್ಯಾ ವೀರ್ಯೇಣ ಸಂವೃತಃ || ೫೯ ||

ಅರ್ಧನಿಷ್ಕ್ರಾಂತ ಏವಾಸೌ ಯುಧ್ಯಮಾನೋ ಮಹಾಧಮಃ ।
ಮಹಾಸಿನಾ ಶಿರೋ ಛಿತ್ವಾ ನ್ಯಪಾತಿ ಧರಣೀತಲೇ || ೬೦ ||

೫೭. ಎಲೋ ನೀಚನೇ, ನೀನೇಕೆ ಸುಮ್ಮನೇ ಹಠಮಾಡುವೆ? ನನ್ನ ಮುಂದೆ ಯಾವ ರಾಕ್ಷಸರ ಆಟವೂ ನಡಿಯಲಾರದು. ಯಾರೂ ನನ್ನನ್ನು ಎದುರಿಸಿ ನಿಲ್ಲಲಾರರು.

೫೮. ಈರೀತಿಯಾಗಿ ಹೇಳಿ ಷೋಡಶ ಕಲಾಪರಿಪೂರ್ಣಳಾದ ಆ ದೇವಿಯು ಮುಂದೆ ಬಂದು ಆ ಮಹಿಷನನ್ನು ಕಾಲಿನಿಂದ ತುಳಿದು ಶೂಲಾಯುಧದಿಂದ ಅವನ ಕತ್ತನ್ನು ತಿವಿದಳು.

೫೯. ದೇವಿಯು ತನ್ನ ಬಲದಿಂದ ಶೂಲಪ್ರಯೋಗಮಾಡಲು ಮಹಿಷನು ಅವಳ ಕಾಲುಗಳ ಕೆಳಗೆ ಉರುಳಿದನು. ಆ ತನ್ನ ರೂಪವಾದ ಕೋಣದ ಮುಖದಿಂದ ಅವನ ಶರೀರದ ಅರ್ಧಭಾಗವು ಈಚೆಗೆ ಬಂದಿತು.

೬೦. ಆ ಮಹಿಷನು ತನ್ನ ಅರ್ಧಶರೀರದಿಂದಲೇ ಯುದ್ಧಮಾಡಲು ಪ್ರಾರಂಭಿಸಿದನು. ಆರೀತಿ ಯುದ್ಧಮಾಡುತ್ತಿರುವ ಮಹಾನೀಚನಾದ ಆ ಮಹಿಷನ ತಲೆಯನ್ನು ದೇವಿಯು ತನ್ನ ಕತ್ತಿಯಿಂದ ಕತ್ತರಿಸಿದಳು. ಅವನ ತಲೆಯು ಭೂಮಿಯಲ್ಲಿ ಬಿದ್ದಿತು.

ಹಾ ಹಾ ಶಬ್ದಂ ಸಮುಚ್ಚಾರ್ಯರ್ನಾಮುಖಾಸ್ತದ್ಗಣಾಸ್ತತಃ ।
ಪಲಾಯಂತ ರಣಾದ್ಭೀತಾಸ್ತ್ರಾಹಿ ತ್ರಾಹೀತಿ ವಾದಿನಃ ॥ ೬೦ ॥

ತುಷ್ಟುವುಶ್ಚ ತದಾ ದೇವೀಮಿಂದ್ರಾದ್ಯಾಃ ಸಕಲಾಃ ಸುರಾಃ ।
ಗಂಧರ್ವಾ ಗೀತಮುಚ್ಚೈರುರ್ನನೃತುರ್ನರ್ತಕೀಜನಾಃ ॥ ೬೨ ॥

ಏವಂ ತೇ ಕಥಿತೋ ರಾಜನ್ಮಹಾಲಕ್ಷ್ಮ್ಯಾಃ ಸಮುದ್ಭವಃ ।
ಸರಸ್ವತ್ಯಾಸ್ತಥೋತ್ಪತ್ತಿಂ ಶೃಣು ಸುಸ್ಥೇನ ಚೇತಸಾ ॥ ೬೩ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಮಹಾಲಕ್ಷ್ಮ್ಯವತಾರವರ್ಣನಂ ನಾಮ ಷಟ್ಚತ್ವಾರಿಂಶೋಽಧ್ಯಾಯಃ



೬೧. ಅವನ ತಲೆಯು ಕೆಳಗುರುಳಲು ಅದನ್ನು ನೋಡಿ ಆ ಮಹಿಷನ ಕಡೆಯ ರಾಕ್ಷಸರೆಲ್ಲರೂ ಮುಖಗಳನ್ನು ತಗ್ಗಿಸಿ ಹಾಹಾ ನಮ್ಮನ್ನು ಕಾಪಾಡಿ ಎಂದು ಚೀತ್ಕಾರಮಾಡುತ್ತಾ ನಾನಾ ದಿಕ್ಕುಗಳಿಗೆ ಓಡಿಹೋದರು.

೬೨. ಅನಂತರ ಆ ದೇವಿಯನ್ನು ಇಂದ್ರಾದಿದೇವತೆಗಳೆಲ್ಲಾ ಸ್ತೋತ್ರಮಾಡಿದರು. ಗಂಧರ್ವರು ಗಾನಮಾಡಿದರು. ಅಪ್ಸರೆಯರು ನರ್ತನಮಾಡಿದರು.

೬೩. ಎಲೈ ರಾಜನೇ, ಈರೀತಿಯಾಗಿ ಮಹಾಲಕ್ಷ್ಮಿಯು ಹುಟ್ಟಿದ ಪ್ರಕಾರವನ್ನು ತಿಳಿಸಿರುವೆನು. ಈಗ ಸರಸ್ವತಿಯ ಉತ್ಪತ್ತಿಪ್ರಕಾರವನ್ನು ಹೇಳುವೆನು. ಶಾಂತವಾದ ಮನಸ್ಸಿನಿಂದ ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಮಹಾಲಕ್ಷ್ಮಿಯ ಅವತಾರ
ವರ್ಣನವೆಂಬ ನಲವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಸಪ್ತಚತ್ವಾರಿಂಶೋಽಧ್ಯಾಯಃ

॥ ಋಷಿರುವಾಚ ॥

ಆಸೀಚ್ಛುಂಭಾಸುರೋ ದೈತ್ಯೋ ನಿಶುಂಭಶ್ಚ ಪ್ರತಾಪವಾನ್ ।
ತ್ರೈಲೋಕ್ಯಮೋಜಸಾಕ್ರಾಂತಂ ಭ್ರಾತೃಭ್ಯಾಂ ಸಚರಾಚರಂ ॥ ೧ ॥

ತಾಭ್ಯಾಂ ಪ್ರಪೀಡಿತಾ ದೇವಾ ಹಿಮವಂತಂ ಸಮಾಯಯುಃ ।
ಜನನೀಂ ಸರ್ವಭೂತಾನಾಂ ಕಾಮದಾತ್ರೀಂ ವವಂದಿರೇ ॥ ೨ ॥

## ನಲವತ್ತೇಳನೆಯ ಅಧ್ಯಾಯವು

೧. ಮೇಧಋಷಿಯು ಸೂತನನ್ನು ಕುರಿತು ಹೇಳುವನು :— ಪೂರ್ವದಲ್ಲಿ ಬಲಪರಾಕ್ರಮಶಾಲಿಗಳಾದ ಶುಂಭ ಮತ್ತು ನಿಶುಂಭರೆಂಬ ಇಬ್ಬರು ಅಣ್ಣತಮ್ಮಂದಿರಾದ ರಾಕ್ಷಸರಿದ್ದರು. ಅವರು ತಮ್ಮ ಪರಾಕ್ರಮದಿಂದ ಚರಾಚರಾತ್ಮಕವಾದ ಮೂರು ಲೋಕಗಳನ್ನೂ ನಡುಗಿಸುತ್ತಿದ್ದರು.

೨. ದೇವತೆಗಳೂ ಕೂಡ ಅವರ ಹಿಂಸೆಗೆ ಒಳಗಾಗಿದ್ದರು ಮತ್ತು ಅವರೆಲ್ಲರೂ ಸೇರಿ ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ಸರ್ವಜಗನ್ಮಾತೆಯಾದ, ಇಷ್ಟಾರ್ಥವನ್ನು ಕೊಡುವ ಪಾರ್ವತಿಯನ್ನು ನಮಸ್ಕರಿಸಿ ಸ್ತೋತ್ರಮಾಡಿದರು.

॥ ದೇವಾ ಊಚುಃ ॥

ಜಯ ದುರ್ಗೇ ಮಹೇಶಾನೀ ಜಯಾತ್ಮೀಯಜನಪ್ರಿಯೇ ।
ತ್ರೈಲೋಕ್ಯತ್ರಾಣಕಾರಿಣ್ಯೈ ಶಿವಾಯೈ ತೇ ನಮೋ ನಮಃ ॥ ೩ ॥

ನಮೋ ಮುಕ್ತಿಪ್ರದಾಯಿನ್ಯೈ ಪರಾಂಬಾಯೈ ನಮೋ ನಮಃ ।
ನಮಸ್ಸಮಸ್ತಸಂಸಾರೋತ್ಪತ್ತಿಸ್ಥಿತ್ಯಂತಕಾರಿಕೇ ॥ ೪ ॥

ಕಾಲಿಕಾರೂಪಸಂಪನ್ನೇ ನಮಸ್ತಾರಾಕೃತೇ ನಮಃ ।
ಛಿನ್ನಮಸ್ತಾಸ್ವರೂಪಾಯೈ ಶ್ರೀವಿದ್ಯಾಯೈ ನಮೋಽಸ್ತು ತೇ ॥ ೫ ॥

ಭುವನೇಶಿ ನಮಸ್ತುಭ್ಯಂ ನಮಸ್ತೇ ಭೈರವಾಕೃತೇ ।
ನಮೋಽಸ್ತು ಬಗಲಾಮುಖ್ಯೈ ಧೂಮಾವತ್ಯೈ ನಮೋ ನಮಃ ॥ ೬ ॥

ನಮಸ್ತ್ರಿಪುರಸುಂದರ್ಯೈ ಮಾತಂಗ್ಯೈ ತೇ ನಮೋ ನಮಃ ।
ಅಜಿತಾಯೈ ನಮಸ್ತುಭ್ಯಂ ವಿಜಯಾಯೈ ನಮೋ ನಮಃ ॥ ೭ ॥

೩. ಎಲೈ ದುರ್ಗೆಯೇ, ನೀನು ಈಶ್ವರನ ಪತ್ನಿಯು ಮತ್ತು ನಿನ್ನ ಭಕ್ತರಿಗೆ ಪ್ರಿಯವನ್ನುಂಟುಮಾಡುವವಳು. ನಿನಗೆ ಜಯವಾಗಲಿ. ಮೂರುಲೋಕದ ಜನಗಳ ಸಂತಾಪವನ್ನು ನಾಶಮಾಡುವ ಮಂಗಳಕರಳಾದ ನಿನಗೆ ನಮಸ್ಕಾರವು.

೪-೫. ನೀನು ಭಕ್ತರಿಗೆ ಮುಕ್ತಿಯನ್ನು ಕೊಡುವವಳು. ಮಾತೃಸ್ವರೂಪಳು. ನಿನ್ನಿಂದಲೇ ಸಂಸಾರದ ಉತ್ಪತ್ತಿಯೂ, ಅದರ ರಕ್ಷಣೆಯೂ, ನಾಶವೂ ಕೂಡ ಆಗುತ್ತಿರುವುದು. ನೀನು ಕಾಲಿಕಾರೂಪಳು. ನಕ್ಷತ್ರಸ್ವರೂಪಳು ಮತ್ತು ಛಿನ್ನಮಸ್ತಾ ಎಂಬ ಹೆಸರಿನಿಂದ ಪ್ರಸಿದ್ಧಳಾದವಳು ಮತ್ತು ಶ್ರೀವಿದ್ಯಾರೂಪಳು. ಇಂತಹ ನಿನಗೆ ನಮಸ್ಕಾರವು.

೬-೭. ತ್ರಿಲೋಕಕ್ಕೂ ಒಡೆಯಳಾದ ನಿನಗೆ ನಮಸ್ಕಾರವು. ನೀನು ಭೈರವಾಕೃತಿಯು. ನೀನು ಬಗಲಾಮುಖಿಯು. ಧೂಮಾವತಿಯಾದ ನಿನ್ನನ್ನು ನಮಸ್ಕರಿಸುವೆವು. ತ್ರಿಪುರಸುಂದರಿಯೂ, ಮತಂಗಪುತ್ರಿಯೂ ಆದ ನಿನಗೆ ನಮಸ್ಕಾರಗಳು. ಜಯಿಸಲಶಕ್ಯಳೂ, ವಿಜಯಸ್ವರೂಪಳೂ ಆದ ನಿನ್ನನ್ನು ನಮಸ್ಕರಿಸುವೆವು.

ಜಯಾಯೈ ಮಂಗಲಾಯೈ ತೇ ವಿಲಾಸಿನ್ಯೈ ನಮೋ ನಮಃ ।
ದೋಗ್ಧ್ರೀರೂಪೇ ನಮಸ್ತುಭ್ಯಂ ನಮೋ ಘೋರಾಕೃತೇಽಸ್ತು ತೇ ॥ ೮ ॥

ನಮೋಽಪರಾಜಿತಾಕಾರೇ ನಿತ್ಯಾಕಾರೇ ನಮೋ ನಮಃ ।
ಶರಣಾಗತಪಾಲಿನ್ಯೈ ರುದ್ರಾಣ್ಯೈ ತೇ ನಮೋ ನಮಃ ॥ ೯ ॥

ನಮೋ ವೇದಾಂತವೇದ್ಯಾಯೈ ನಮಸ್ತೇ ಪರಮಾತ್ಮನೇ ।
ಅನಂತಕೋಟಿಬ್ರಹ್ಮಾಂಡನಾಯಿಕಾಯೈ ನಮೋ ನಮಃ ॥ ೧೦ ॥

ಇತಿ ದೇವೈಃ ಸ್ತುತಾ ಗೌರೀ ಪ್ರಸನ್ನಾ ವರದಾ ಶಿವಾ ।
ಪ್ರೋವಾಚ ತ್ರಿದಶಾನ್ಸರ್ವಾನ್ ಯುಷ್ಮಾಭಿಸ್ತೂಯತೇಽತ್ರ ಕಾ ॥ ೧೧ ॥

ತತೋ ಗೌರೀತನೋರೇಕಾ ಪ್ರಾದುರಾಸೀತ್ಕುಮಾರಿಕಾ ।
ಸೋವಾಚ ಮಿಷತಾಂ ತೇಷಾಂ ಶಿವಶಕ್ತ್ಯಂ ಪರಾದರಾತ್ ॥ ೧೨ ॥

೮-೯. ನೀನು ಜಯಸ್ವರೂಪಳು. ಮಂಗಲವನ್ನುಂಟುಮಾಡುವವಳು. ವಿಲಾಸಿನಿಯಾದ ನಿನಗೆ ನಮಸ್ಕಾರಗಳು. ನೀನು ಭಕ್ತರಿಗೆ ಇಷ್ಟಾರ್ಥವನ್ನು ಕೊಡುವವಳು. ಶತ್ರುಗಳಿಗೆ ಭಯಂಕರವಾಗಿ ಕಾಣುವ ಆಕಾರವುಳ್ಳವಳು. ಅನುಪಮ ಸೌಂದರ್ಯವತಿಯಾದ ನಿನ್ನನ್ನು ನಮಸ್ಕರಿಸುವೆವು. ನಿತ್ಯಸ್ವರೂಪಳೂ, ಶರಣಾಗತ ರಕ್ಷಕಳೂ, ರುದ್ರಾಣಿಯೂ ಆದ ನಿನಗೆ ನಮಸ್ಕಾರಗಳು.

೧೦. ನೀನು ವೇದಾಂತವೇದ್ಯಳು. ಪರಮಾತ್ಮಸ್ವರೂಪಳು. ಅನೇಕಕೋಟಿ ಬ್ರಹ್ಮಾಂಡಗಳಿಗೂ ಅಗ್ರೇಸರಳು. ಇಂತಹ ನಿನ್ನನ್ನು ನಮಸ್ಕರಿಸುವೆವು.

೧೧. ಈರೀತಿಯಾಗಿ ಮಾಡಿದ ದೇವತೆಗಳ ಸ್ತೋತ್ರದಿಂದ ಮಂಗಳಕರಳಾದ ಆ ಗೌರಿಯು ಪ್ರಸನ್ನಳಾಗಿ ದೇವತೆಗಳಿಗೆ ವರವನ್ನು ಕೊಡುವುದಕ್ಕಾಗಿ ಅವರನ್ನು ಕುರಿತು ಎಲೈ ದೇವತೆಗಳಿರಾ, ಏತಕ್ಕಾಗಿ ನೀವು ನನ್ನನ್ನು ಸ್ತೋತ್ರಮಾಡುತ್ತಿರುವಿರಿ ಎಂದು ಕೇಳಿದಳು.

೧೨. ಅಷ್ಟರಲ್ಲಿ ಪಾರ್ವತಿಯ ಶರೀರದಿಂದ ಓರ್ವ ಬಾಲಿಕೆಯು ಹುಟ್ಟಿದಳು. ಮತ್ತು ಆ ದೇವತೆಗಳ ಎದುರಿಗೆ ಶಿವಶಕ್ತಿಯಾದ ಪಾರ್ವತಿಯನ್ನು ಕುರಿತು ಆದರ ಪೂರ್ವಕವಾಗಿ ಇಂತೆಂದಳು.

ಸ್ತೋತ್ರಂ ಮೇ ಕ್ರಿಯತೇ ಮಾತಃ ಸಮಸ್ತೈಃ ಸ್ವರ್ಗವಾಸಿಭಿಃ ।
ನಿಶುಂಭಶುಂಭದೈತ್ಯಾಭ್ಯಾಂ ಪ್ರಬಲಾಭ್ಯಾಂ ಪ್ರಪೀಡಿತೈಃ ॥ ೧೩ ॥

ಶರೀರಕೋಶಾದ್ಯತ್ತಸ್ಯಾ ನಿರ್ಗತಾ ತೇನ ಕೌಶಿಕೀ ।
ನಾಮ್ನಾ ಸಾ ಗೀಯತೇ ಸಾಕ್ಷಾಚ್ಛುಂಭಾಸುರನಿಬರ್ಹಣೀ ॥ ೧೪ ॥

ಸೈವೋಗ್ರತಾರಿಕಾ ಪ್ರೋಕ್ತಾ ಮಹೋಗ್ರತಾರಿಕಾಪಿ ಚ ।
ಪ್ರಾದುರ್ಭೂತಾ ಯತಃ ಸಾ ವೈ ಮಾತಂಗೀತ್ಯುಚ್ಯತೇ ಬುಧೈಃ ॥ ೧೫ ॥

ಬಭಾಷೇ ನಿಖಿಲಾನ್ ದೇವಾನ್ ಯೂಯಂ ತಿಷ್ಠತ ನಿರ್ಭಯಾಃ ।
ಕಾರ್ಯಂ ವಃ ಸಾಧಯಿಷ್ಯಾಮಿ ಸ್ವತಂತ್ರಾಹಂ ನಿರಾಶ್ರಯಂ ॥ ೧೬ ॥

ಇತ್ಯುಕ್ತ್ವಾ ಸಾ ತದಾ ದೇವೀ ತರಸಾಂತರ್ಹಿತಾಭವತ್ ।
ಚಂಡಮುಂಡೌ ತು ತಾಂ ದೇವೀಮದ್ರಾಷ್ಟಾಂ ಸೇವಕೌ ತಯೋಃ ॥ ೧೭ ॥

---

೧೩. ಎಲೌ ತಾಯಿಯೇ, ಈ ದೇವತೆಗಳೆಲ್ಲರೂ ಶುಂಭ, ನಿಶುಂಭ ಎಂಬ ರಾಕ್ಷಸರ ತೊಂದರೆಗೆ ಒಳಗಾಗಿ ಅವರ ಹಿಂಸೆಯನ್ನು ತಡೆಯಲಾರದೆ ನನ್ನ ಸ್ತೋತ್ರವನ್ನು ಮಾಡುತ್ತಿರುವರು ಎಂದಳು.

೧೪. ಆ ಬಾಲಿಕೆಯು ಪಾರ್ವತಿಯ ಶರೀರ (ಕೋಶ) ದಿಂದ ಹುಟ್ಟಿದಳಾದುದರಿಂದ ಅವಳಿಗೆ ಕೌಶಿಕೀ ಎಂದು ಹೆಸರು. ಅವಳು ಶುಂಭಾನಿಶುಂಭರನ್ನು ನಾಶ ಮಾಡತಕ್ಕವಳು.

೧೫. ಆ ಕೌಶಿಕೀದೇವಿಯೇ ಉಗ್ರತಾರಿಕಾ ಎಂತಲೂ, ಮಹೋಗ್ರತಾರಿಕಾ ಎಂತಲೂ ಪ್ರಸಿದ್ಧಳಾಗಿರುವಳು. ಅನಂತರ ಅವಳು ಭೂಮಿಯಲ್ಲಿ ಮಾತಂಗೀ ಎಂಬ ಹೆಸರಿನಿಂದ ಅವತಾರಮಾಡಿದಳು.

೧೬. ಅನಂತರ ಆ ಕೌಶಿಕಿಯು ದೇವತೆಗಳನ್ನು ಕುರಿತು, ನೀವು ಹೆದರಬೇಡಿ, ಧೈರ್ಯವಾಗಿರಿ. ನಾನು ನಿಸ್ಸಹಾಯಳಾಗಿ ನಿಮ್ಮ ಕಾರ್ಯವನ್ನು ಸಾಧಿಸಿ ನಿಮ್ಮ ತೊಂದರೆಯನ್ನು ಪರಿಹರಿಸುವೆನು.

೧೭. ಈರೀತಿಯಾಗಿ ಹೇಳಿ ಕೌಶಿಕೀದೇವಿಯು ಅಲ್ಲಿಯೇ ಅಂತರ್ಧಾನಳಾದಳು. ಅದೇ ಸಮಯದಲ್ಲಿ ಶುಂಭನಿಶುಂಭರ ಸೇವಕರಾದ ಚಂಡ, ಮುಂಡ ಎಂಬಿಬ್ಬರು ಆ ದೇವಿಯನ್ನು ನೋಡಿದರು.

ದೃಷ್ಟ್ವಾ ಮನೋಹರಂ ತಸ್ಯಾ ರೂಪಂ ನೇತ್ರಸುಖಾವಹಂ ।
ಪೇತತುಸ್ತೌ ಧರಾಮಧ್ಯೇ ನಷ್ಟಸಂಜ್ಞೌ ವಿಮೋಹಿತೌ ॥ ೧೮ ॥

ಗತ್ವಾ ವ್ಯಾಜಹ್ರತುಃ ಸರ್ವಂ ರಾಜ್ಞೇ ವೃತ್ತಾಂತಮಾದಿತಃ ।
ದೃಷ್ಟ್ವಾ ಕಾಚಿನ್ಮಯಾ ಪೂರ್ವಾ ನಾರೀ ರಾಜನ್ ಮನೋರಮಾ ॥ ೧೯ ॥

ಹಿಮವಚ್ಛಿಖರೇ ರಮ್ಯೇ ಸಂಸ್ಥಿತಾ ಸಿಂಹವಾಹಿನೀ ।
ಸಮಂತಾದ್ದೇವಕನ್ಯಾಭಿಃ ಸೇವಿತಾ ಬದ್ಧಪಾಣಿಭಿಃ ॥ ೨೦ ॥

ಕುರುತೇ ಪಾದಸಂವಾಹಂ ಕಾಚಿತ್ ಸಂಸ್ಕುರುತೇ ಕಚಾನ್ ।
ಪಾಣಿಸಂವಾಹನಂ ಕಾಚಿತ್ ಕಾಚಿನ್ನೇತ್ರಾಂಜನಂ ನ್ಯಧಾತ್ ॥ ೨೧ ॥

ಕಾಚಿದ್ಗೃಹೀತ್ವಾ ಹಸ್ತೇನಾದರ್ಶಂ ದರ್ಶಯತೇ ಮುಖಂ ।
ನಾಗವಲ್ಲೀಂ ದದಾತ್ಯೇಕಾ ಲವಂಗೈಲಾದಿಸಂಯುತಾಂ ॥ ೨೨ ॥

೧೮. ಅವಳ ನಯನಮನೋಹರವೂ, ಅಸದೃಶವೂ, ಮನೋಹರವೂ ಆದ ರೂಪವನ್ನು ನೋಡಿ, ಆ ಚಂಡಮುಂಡರು ಕಾಮಪರವಶರಾಗಿ ಮೋಹಗೊಂಡು ಮೂರ್ಛೆಹೊಂದಿ ಭೂಮಿಯ ಮೇಲೆ ಬಿದ್ದುಬಿಟ್ಟರು.

೧೯. ಬಳಿಕ ಅವರು ರಾಜನಾದ ಶುಂಭನ ಹತ್ತಿರಕ್ಕೆ ಹೋಗಿ ಎಲೈ ರಾಜನೇ, ನಾವು ಮನೋಹರಳಾದ ಓರ್ವ ಸ್ತ್ರೀಯನ್ನು ನೋಡಿದೆವು. ಅವಳು ಅಪೂರ್ವ ಸುಂದರಿಯು.

೨೦. ಮನೋಹರವಾದ ಹಿಮವತ್ಪರ್ವತದ ಶಿಖರದಲ್ಲಿ ಅವಳಿರುವಳು. ಅವಳ ವಾಹನವು ಸಿಂಹವು. ದೇವತಾಸ್ತ್ರೀಯರೆಲ್ಲರೂ ಕೈಮುಗಿದುಕೊಂಡು ಅವಳ ಸೇವೆಯನ್ನು ಮಾಡುತ್ತಿರುವರು.

೨೧. ಕೆಲವು ಹೆಂಗಸರು ಅವಳ ಪಾದಗಳನ್ನು ಅಲಂಕರಿಸುವರು. ಮತ್ತೆ ಕೆಲವರು ಅವಳ ಕೂದಲುಗಳನ್ನು ಬಾಚುವರು. ಕೆಲವರು ಅವಳ ಕೈಗಳಿಗೆ ಅಭರಣಾದಿಗಳಿಂದ ಅಲಂಕಾರಮಾಡುವರು. ಕೆಲವರು ಅವಳ ಕಣ್ಣುಗಳಿಗೆ ಕಪ್ಪನ್ನು ಹಚ್ಚುವರು.

೨೨. ಅವರಲ್ಲಿ ಒಬ್ಬಳು ಕನ್ನಡಿಯನ್ನು ತೋರಿಸುವಳು. ಮತ್ತೊಬ್ಬಳು ಲವಂಗ, ಏಲಕ್ಕಿ ಮುಂತಾದುವುಗಳನ್ನು ಹಾಕಿ ವಿಳ್ಳೆದೆಲೆಯನ್ನು ಮಡಿಸಿಕೊಡುವಳು.

ಪತದ್ಗ್ರಹಂ ಕರೇ ಕೃತ್ವಾ ಸ್ಥಿತಾ ಕಾಚಿತ್ಸಖೀ ಪುರಃ ।
ಭೂಷಯತ್ಯಖಿಲಾಂಗಾನಿ ಕಾಚಿದ್ಭೂಷಾಂಬರಾದಿಭಿಃ　　॥ ೨೩ ॥

ಕದಲೀಸ್ತಂಭಜಂಘೋರೂಃ ಕೀರನಾಸಾಹಿಂದೋರ್ಲತಾ ।
ರಣನ್ಮಂಜೀರಚರಣಾ ರಮ್ಯಾಮೇಖಲಯಾ ಯುತಾ　　॥ ೨೪ ॥

ಲಸತ್ಕಸ್ತೂರಿಕಾಮೋದಮುಕ್ತಾಹಾರಚಲಸ್ತನೀ ।
ಗ್ರೈವೇಯಕಲಸದ್ಗ್ರೀವಾ ಲಸಂತೀದಾಮಮಂಡಿತಾ　　॥ ೨೫ ॥

ಅರ್ಧಚಂದ್ರಧರಾ ದೇವೀ ಮಣಿಕುಂಡಲಧಾರಿಣೀ ।
ರಮ್ಯವೇಣಿರ್ವಿಶಾಲಾಕ್ಷೀ ಲೋಚನಯತ್ರಭೂಷಿತಾ　　॥ ೨೬ ॥

೨೩. ಒಬ್ಬ ಸಖಿಯು ಕೆಳಗೆಬಿದ್ದ ಕೈಯನ್ನು ಮುಂದಿಡುವಳು. ಮತ್ತೊಬ್ಬಳು ಪೀತಾಂಬರಾದಿಗಳಿಂದಲೂ ಒಡವೆಗಳಿಂದಲೂ ಅವಳ ಅಂಗಾಂಗಗಳನ್ನೆಲ್ಲಾ ಅಲಂಕರಿಸುವಳು.

೨೪. ಅವಳ ತೊಡೆಗಳು ಬಾಳೆಯಮರದಂತೆ ಮೃದುವಾಗಿರುವುವು. ಅವಳ ನಾಸಿಕವು ಗಿಳಿಯಮೂಗಿನಂತೆ ಎತ್ತರವಾಗಿರುವುದು. ಕಾಲ್ಗಡಗಗಳಿಂದ ಅವಳ ಕಾಲುಗಳು ಮಂಜೀರಧ್ವನಿಗೈಯ್ಯುತ್ತಿರುವವು. ರಮ್ಯವಾಗಿರುವ ಡಾಬನ್ನು ಹಾಕಿಕೊಂಡಿರುವಳು.

೨೫. ಅವಳು ಸ್ತನತಟಗಳಿಗೆ ಕಸ್ತೂರಿಯನ್ನು ಲೇಪಿಸಿಕೊಂಡಿರುವಳು. ಮುತ್ತಿನಹಾರವನ್ನು ಹಾಕಿಕೊಂಡಿರುವಳು. ಕಂಠಾಭರಣದಿಂದ ಅವಳ ಕುತ್ತಿಗೆಯು ಪ್ರಕಾಶಿಸುತ್ತಿರುವುದು. ಇವೇ ಮೊದಲಾದ ಆಭರಣಗಳನ್ನು ಧರಿಸಿರುವುದರಿಂದ ಅವಳು ಮಿಂಚಿನಂತೆ ಪ್ರಕಾಶಿಸುತ್ತಿರುವಳು.

೨೬. ಆ ದೇವಿಯು ತಲೆಯಲ್ಲಿ ಅರ್ಧಚಂದ್ರನನ್ನು ಧರಿಸಿರುವಳು. ರತ್ನದ ಕರ್ಣಕುಂಡಲಗಳನ್ನು ಧರಿಸಿ ಪ್ರಕಾಶಿಸುತ್ತಿರುವಳು. ರಮ್ಯವಾದ ಜಡೆಯನ್ನು ಹಾಕಿಕೊಂಡಿರುವಳು. ವಿಶಾಲವಾದ ಮೂರು ಕಣ್ಣುಗಳಿಂದ ಪ್ರಕಾಶಿಸುತ್ತಿರುವಳು.

ಸಾಕ್ಷರಾ ಮಾಲಿಕೋಪೇತಾ ಪಾಣಿರಾಜಿತಕಂಕಣಾ ।
ಸ್ವರ್ಣೋರ್ಮಿಕಾಂಗುಲಿಭ್ರಾಜತ್ಪಾರಿಹಾರ್ಯಲಸತ್ಕರಾ ॥ ೨೭ ॥

ಶುಭವಸ್ತ್ರಾವೃತಾ ಗೌರೀ ಪದ್ಮಾಸನವಿರಾಜಿತಾ ।
ಕಾಶ್ಮೀರಬಿಂದುತಿಲಕಾ ಚಂದ್ರಾಲಂಕೃತಮಸ್ತಕಾ ॥ ೨೮ ॥

ತಡಿದ್ದ್ಯುತಿರ್ಮಹಾಮೂಲ್ಯಾಂಬರಚೋಲೋನ್ನಮತ್ಕುಚಾ ।
ಭುಜೈರಷ್ಟಾಭಿರುತ್ತುಂಗೈರ್ಧಾರಯಂತೀ ವರಾಯುಧಾನ್ ॥ ೨೯ ॥

ತಾದೃಶೀ ನಾಸುರೀ ನಾಗೀ ನ ಗಂಧರ್ವೀ ನ ದಾನವೀ ।
ವಿದ್ಯತೇ ತ್ರಿಷು ಲೋಕೇಷು ಯಾದೃಶೀ ಸಾ ಮನೋರಮಾ ॥ ೩೦ ॥

ತಸ್ಮಾತ್ಸಂಭೋಗಯೋಗ್ಯತ್ವಂ ತಸ್ಯಾಸ್ತ್ವಯ್ಯೇವ ಶೋಭತೇ ।
ನಾರೀರತ್ನಂ ಯತಃ ಸಾ ವೈ ಪುಂರತ್ನಂ ಚ ಭವಾನ್ ಪ್ರಭೋ ॥ ೩೧ ॥

೨೭. ಬಾಡಿಹೋಗದಿರುವ ಹೂಮಾಲಿಕೆಯನ್ನು ಧರಿಸಿರುವಳು. ಕೈಗಳಲ್ಲಿ ಬಳೆಗಳನ್ನು ತೊಟ್ಟು, ಬೆರಳುಗಳಲ್ಲಿ ಚಿನ್ನದ ಉಂಗುರಗಳನ್ನು ಧರಿಸಿ ರಾಜಿಸುತ್ತಿರುವಳು.

೨೮. ಶುಭ್ರವಾದ ವಸ್ತ್ರಗಳನ್ನುಟ್ಟು, ಕುಂಕುಮದ ತಿಲಕವನ್ನಿಟ್ಟು, ತಲೆಯಲ್ಲಿ ಚಂದ್ರನನ್ನು ಧರಿಸಿ ಆ ಗೌರಿಯು ಪದ್ಮಾಸನದಲ್ಲಿ ಕುಳಿತಿರುವಳು.

೨೯. ಮಿಂಚಿನಂತೆ ಥಳಥಳಿಸುತ್ತಿರುವ ಅಮೂಲ್ಯವಾದ ಬಟ್ಟೆಗಳನ್ನುಟ್ಟು, ಕಂಚುಕ (ರವಿಕೆ) ವನ್ನು ಧರಿಸಿರುವಳು. ಅವಳ ಸ್ತನಗಳು ಉಬ್ಬಿ ದುಂಡಾಗಿ ಮುಂದಕ್ಕೆ ಚಾಚಿಕೊಂಡಿರುವವು. ಮತ್ತು ಎತ್ತರವಾದ ತನ್ನ ಎಂಟು ಕೈಗಳಲ್ಲೂ ಉತ್ತಮವಾದ ಆಯುಧಗಳನ್ನು ಧರಿಸಿರುವಳು.

೩೦. ಈ ಪಾರ್ವತಿಯಷ್ಟು ಸುಂದರಿಯರು ದೇವಸ್ತ್ರೀಯರಲ್ಲಾಗಲೀ, ನಾಗಕನ್ನಿಕೆಯರಲ್ಲಾಗಲಿ, ಗಂಧರ್ವಸ್ತ್ರೀಯರಲ್ಲಾಗಲೀ, ರಾಕ್ಷಸಸ್ತ್ರೀಯರಲ್ಲಾಗಲೀ ಮೂರು ಲೋಕದಲ್ಲಿಯೂ ಕೂಡ ಯಾರೂ ಇಲ್ಲವೇ ಇಲ್ಲ.

೩೧. ಎಲೈ ಪ್ರಭುವೇ, ಆ ಪಾರ್ವತಿಯು ಸ್ತ್ರೀಯರಲ್ಲೆಲ್ಲಾ ಶ್ರೇಷ್ಠಳು. ನೀನು ಪುರುಷಶ್ರೇಷ್ಠನು. ಆದುದರಿಂದ ಸಮಾನಶೀಲರಾದ ನಿಮ್ಮಿಬ್ಬರಿಗೂ ಸಂಬಂಧವಾಗಬೇಕು. ಅವಳ ಸಂಭೋಗವು ನಿನಗೇ ಯೋಗ್ಯವಾದುದು ಎಂದರು.

ಇತ್ಯುಕ್ತಂ ಚಂಡಮುಂಡಾಭ್ಯಾಂ ನಿಶಮ್ಯ ಸ ಮಹಾಸುರಃ ।
ದೂತಂ ಸುಗ್ರೀವನಾಮಾನಂ ಪ್ರೇಷಯಾಮಾಸ ತಾಂ ಪ್ರತಿ ॥ ೩೨ ॥

ಗಚ್ಛ ದೂತ ತುಷಾರಾದ್ರೌ ತತ್ರಾಸ್ತೇ ಕಾಪಿ ಸುಂದರೀ ।
ಸಾ ನೇತವ್ಯಾ ಪ್ರಯತ್ನೇನ ಕಥಯಿತ್ವಾ ವಚೋ ಮಮ ॥ ೩೩ ॥

ಇತಿ ವಿಜ್ಞಾಪಿತಸ್ತೇನ ಸುಗ್ರೀವೋ ದಾನವೋತ್ತಮಃ ।
ಗತ್ವಾ ಹಿಮಾಚಲಂ ಪ್ರಾಹ ಜಗದಂಬಾಂ ಮಹೇಶ್ವರೀಂ ॥ ೩೪ ॥

॥ ದೂತ ಉವಾಚ ॥

ದೇವಿ ಶುಂಭಾಸುರೋ ದೈತ್ಯೋ ನಿಶುಂಭಸ್ತಸ್ಯ ಚಾನುಜಃ ।
ವಿಖ್ಯಾತಸ್ತ್ರಿಷು ಲೋಕೇಷು ಮಹಾಬಲಪರಾಕ್ರಮಃ ॥ ೩೫ ॥

ಚಾರೋಽಹಂ ಪ್ರೇಷಿತಸ್ತೇನ ಸನ್ನಿಧಿಂ ತೇ ಸಮಾಗಮಂ ।
ಸ ಯಜ್ಞಗೌ ಸುರೇಶಾನಿ ತತ್ಸಮಾಕರ್ಣಯಾಧುನಾ ॥ ೩೬ ॥

೩೨. ಚಂಡಮುಂಡರು ಹೇಳಿದ ಈ ಮಾತಗಳನ್ನು ಕೇಳಿ ಆ ಶುಂಭಾಸುರನು ಸುಗ್ರೀವನೆಂಬ ದೂತನನ್ನು ಕರೆದು ಅವನನ್ನು ಅವಳ ಬಳಿಗೆ ಕಳುಹಿಸಿದನು.

೩೩. ಎಲೈ ದೂತನೇ, ನೀನು ಈಗಲೇ ಹಿಮವತ್ಪರ್ವತಕ್ಕೆ ಹೋಗು. ಅಲ್ಲಿ ಓರ್ವ ಸುಂದರಿ ಇರುವಳು. ನನ್ನ ವಿಷಯಗಳನ್ನವಳಿಗೆ ತಿಳಿಸಿ ಅವಳನ್ನು ಹೇಗಾದರೂ ಮಾಡಿ ಒಲಿಸಿ ನನ್ನ ಬಳಿಗೆ ಕರೆದುಕೊಂಡು ಬಾ ಎಂದನು.

೩೪. ಆ ಶುಂಭನ ಮಾತನ್ನು ಕೇಳಿ ಆ ಸುಗ್ರೀವನು ಹಿಮವತ್ಪರ್ವತಕ್ಕೆ ಹೋಗಿ ಜಗದಂಬಿಕೆಯಾದ ಪಾರ್ವತಿಯನ್ನು ಕುರಿತು,

೩೫. ಎಲೌ ದೇವಿಯೇ, ಶುಂಭನೆಂಬ ಒಬ್ಬ ರಾಕ್ಷಸಶ್ರೇಷ್ಠನಿರುವನು. ಅವನ ತಮ್ಮನು ನಿಶುಂಭಾಸುರನೆಂದು. ಆ ಶುಂಭನು ಬಲಪರಾಕ್ರಮಗಳಿಂದ ಮೂರು ಲೋಕಗಳಲ್ಲೂ ಪ್ರಸಿದ್ಧನಾಗಿರುವನು.

೩೬. ನಾನು ಅವನ ದೂತನು. ನನ್ನನ್ನು ನಿನ್ನ ಸಮೀಪಕ್ಕೆ ಕಳುಹಿಸಿರುವನು. ಅವನು ನಿನಗೆ ತಿಳಿಸಬೇಕೆಂದು ಹೇಳಿರುವ ಮಾತುಗಳನ್ನು ತಿಳಿಸುವೆನು.

ಇಂದ್ರಾದೀನ್ಸಮರೇ ಜಿತ್ವಾ ತೇಷಾಂ ರತ್ನಾನ್ಯಪಾಹರಂ ।
ದೇವಭಾಗಂ ಸ್ವಯಂ ಭುಂಜೇ ಯಾಗೇ ದತ್ತಂ ಸುರಾದಿಭಿಃ ॥ ೩೭ ॥

ಸ್ತ್ರೀರತ್ನಂ ತ್ವಾಮಹಂ ಮನ್ಯೇ ಸರ್ವರತ್ನೋಪರಿಸ್ಥಿತಂ ।
ಸಾ ತ್ವಂ ಮಮಾನುಜಂ ಮಾಂ ವಾ ಭಜತಾತ್ಮಾಮಜ್ಜೈ ರಸೈಃ ॥ ೩೮ ॥

ಇತಿ ದೂತೋಕ್ತಮಾಕರ್ಣ್ಯ ವಚನಂ ಶುಂಭಭಾಷಿತಂ ।
ಜಗಾದ ಸಾ ಮಹಾಮಾಯಾ ಭೂತೇಶಪ್ರಾಣವಲ್ಲಭಾ ॥ ೩೯ ॥

॥ ದೇವ್ಯುವಾಚ ॥

ಸತ್ಯಂ ವದಸಿ ಭೋ ದೂತ ನಾನೃತಂ ಕಿಂಚಿದುಚ್ಯತೇ ।
ಪರಂತ್ವೇಕಾ ಕೃತಾ ಪೂರ್ವಂ ಪ್ರತಿಜ್ಞಾ ತಾಂ ನಿಬೋಧತ ॥ ೪೦ ॥

ಯೋ ಮೇ ದರ್ಪಂ ವಿಧುನುತೇ ಯೋ ಮಾಂ ಜಯತಿ ಸಂಗರೇ ।
ಉತ್ಸಹೇ ತಮಹಂ ಕರ್ತುಂ ಪತಿಂ ನಾನ್ಯಮಿತಿ ಧ್ರುವಂ ॥ ೪೧ ॥

೩೭. ನಾನು ಯುದ್ಧದಲ್ಲಿ ಇಂದ್ರಾದಿದೇವತೆಗಳನ್ನೆಲ್ಲಾ ಜಯಿಸಿ ಅವರ ನವರತ್ನಗಳಾದ ಪಾರಿಜಾತ, ಚಿಂತಾಮಣಿ ಮುಂತಾದುವುಗಳನ್ನು ಅಪಹರಿಸಿರುವೆನು. ಅದೂ ಅಲ್ಲದೆ ಬ್ರಾಹ್ಮಣರಿಂದ ದೇವತೆಗಳಿಗೆ ಕೊಡಲ್ಪಡುತ್ತಿರುವ ಹವಿರ್ಭಾಗಗಳನ್ನು ನಾನೇ ಸ್ವೀಕರಿಸುತ್ತಿರುವೆನು

೩೮. ನಿನ್ನನ್ನು ನಾನು ಉತ್ತಮವಾದ ಸ್ತ್ರೀಯರಿಗಿಂತ ಅತ್ಯುತ್ತಮಳನ್ನಾಗಿ ಭಾವಿಸಿರುವೆನು. ಆದುದರಿಂದ ನೀನು ನನ್ನನ್ನಾಗಲೀ, ನನ್ನ ತಮ್ಮನನ್ನಾಗಲೀ ವರಿಸು ಎಂದು ಹೇಳಿಕಳುಹಿಸಿರುವನು ಎಂದನು.

೩೯. ದೂತನು ಹೇಳಿದ ಈರೀತಿಯಾದ ಶುಂಭನ ಮಾತನ್ನು ಕೇಳಿ ಈಶ್ವರನ ಪ್ರಾಣೇಶ್ವರಿಯಾದ ಆ ಮಹಾಮಾಯೆಯು,

೪೦. ಎಲೈ ದೂತನೇ, ನೀನು ಹೇಳಿದ ವಿಷಯವೆಲ್ಲ ಸತ್ಯವಾದುದು. ಆದರೆ ನಾನು ಒಂದು ಪ್ರತಿಜ್ಞೆಮಾಡಿರುವೆನು. ಅದನ್ನು ಹೇಳುವೆನು ಕೇಳು.

೪೧. ಯಾರು ಯುದ್ಧಮಾಡಿ ನನ್ನ ದರ್ಪವನ್ನು ಅಡಗಿಸುವರೋ ಅವರನ್ನು ಖಂಡಿತ ಪತಿಯನ್ನಾಗಿ ವರಿಸುವೆನು. ಅಂಥವನನ್ನು ಬಿಟ್ಟು ಮತ್ತಾರನ್ನೂ ವರಿಸಲಾರೆನು. ಇದೇ ನನ್ನ ಪ್ರತಿಜ್ಞೆಯು.

**ಸ ತ್ವಂ ಕಥಯ ಶುಂಭಾಯ ನಿಶುಂಭಾಯ ವಚೋ ಮಮ ।**
**ಯಥಾ ಯುಕ್ತಂ ಭವೇದತ್ರ ವಿಧದಾತು ತಥಾತ್ರ ಸಃ || ೪೨ ||**

**ಇತ್ಥಂ ದೇವೀವಚಃ ಶ್ರುತ್ವಾ ಸುಗ್ರೀವೋ ನಾಮ ದಾನವಃ ।**
**ರಾಜ್ಞೇ ವಿಜ್ಞಾಪಯಾಮಾಸ ಗತ್ವಾ ತತ್ರ ಸವಿಸ್ತರಂ || ೪೩ ||**

**ಅಥ ದೂತೋಕ್ತಮಾಕರ್ಣ್ಯ ಶುಂಭೋ ಭೈರವಶಾಸನಃ ।**
**ಧೂಮ್ರಾಕ್ಷಂ ಪ್ರಾಹ ಸಕ್ರೋಧಃ ಸೇನಾನ್ಯಂ ಬಲಿನಾಂ ವರಂ || ೪೪ ||**

**ಹೇ ಧೂಮ್ರಾಕ್ಷ ತುಷಾರಾದ್ರೌ ವರ್ತತೇ ಕಾಪಿ ಸುಂದರೀ ।**
**ತಾಮಾನಯ ದ್ರುತಂ ಗತ್ವಾ ಯಥಾಯಾಸ್ಯತಿ ಸಾತ್ರ ವೈ || ೪೫ ||**

**ತಸ್ಯಾ ಆನಯನೇ ಭೀತಿರ್ನ ಕಾರ್ಯಾಸುರಸತ್ತಮ ।**
**ಯುದ್ಧಂ ಕಾರ್ಯಂ ಪ್ರಯತ್ನೇನ ಯದಿ ಸಾ ಯೋದ್ಧುಮಿಚ್ಛತಿ || ೪೬ ||**

**ಏವಂ ವಿಜ್ಞಾಪಿತೋ ದೈತ್ಯೋ ಧೂಮ್ರಲೋಚನಸಂಜ್ಞಕಃ ।**
**ಗತ್ವಾ ಹಿಮಾಚಲಂ ಪ್ರಾಹ ಭುವನೇಶೀಮುಮಾಂಶಜಾಂ || ೪೭ ||**

---

೪೨. ಆದುದರಿಂದ ನೀನು ಹೋಗಿ ನನ್ನ ಪ್ರತಿಜ್ಞೆಯ ವಿಷಯವನ್ನು ನಿಮ್ಮ ಶುಂಭನಿಗೂ, ನಿಶುಂಭನಿಗೂ ತಿಳಿಸು. ಅನಂತರ ಅವರಿಗೆ ಯಾವ ರೀತಿ ಸೂಕ್ತವೋ ಆರೀತಿ ಮಾಡಲಿ ಎಂದಳು.

೪೩. ಇದನ್ನು ಕೇಳಿ ಸುಗ್ರೀವನೆಂಬ ಆ ದೂತನು ಶುಂಭನ ಹತ್ತಿರಕ್ಕೆ ಹೋಗಿ ಆ ಪಾರ್ವತಿಯ ವೃತ್ತಾಂತವನ್ನು ವಿಸ್ತಾರವಾಗಿ ವಿಜ್ಞಾಪಿಸಿದನು.

೪೪-೪೬. ಆ ದೂತನ ಮಾತನ್ನು ಕೇಳಿ ಶಂಭನು ಧೂಮ್ರಾಕ್ಷನೆಂಬ ತನ್ನ ಸೇನಾಪತಿಯನ್ನು ಕರೆದು, ಎಲೈ ಧೂಮ್ರಾಕ್ಷನೇ, ನೀನು ಈಗಲೇ ಹಿಮವತ್ಪರ್ವತಕ್ಕೆ ಹೋಗಬೇಕು. ಅಲ್ಲೊಬ್ಬಳು ಸುಂದರಿಯಿರುವಳು. ಅವಳನ್ನು ಜಾಗ್ರತೆಯಾಗಿ ಕರೆದುಕೊಂಡು ಬಾ. ಎಲೈ ಅಸುರನೇ, ನೀನು ಆ ದೇವಿಗೆ ಭಯವನ್ನುಂಟುಮಾಡ ಬೇಡ. ಒಂದುವೇಳೆ ಯುದ್ಧಮಾಡುವ ಪ್ರಸಂಗವು ಒದಗಿದರೆ ಮಾತ್ರ ಅವಳೊಡನೆ ಯುದ್ಧಮಾಡು ಎಂದು ಆಜ್ಞಾಪಿಸಿದನು.

೪೭-೪೮. ಶುಂಭನ ಆಜ್ಞೆಯನ್ನು ಪಡೆದು ಆ ಧೂಮ್ರಾಕ್ಷನು ಹಿಮವತ್ಪರ್ವತಕ್ಕೆ ಹೋಗಿ, ಆ ಭುವನೇಶ್ವರಿಯನ್ನು ಕುರಿತು, ಎಲೌ ನಿತಂಬಿನಿಯೇ, ನೀನು

ಭರ್ತುರ್ಮಮಾಂತಿಕಂ ಗಚ್ಛ ನೋಚೇತ್ತ್ವಾಂ ಘಾತಯಾಮ್ಯಹಂ ।
ಷಷ್ಟ್ಯಾ ಸುರಾಣಾಂ ಸಹಿತಃ ಸಹಸ್ರಾಣಾಂ ನಿತಂಬಿನಿ ॥ ೪೮

॥ ದೇವ್ಯುವಾಚ ॥

ದೈತ್ಯರಾಟ್ ಪ್ರೇಷಿತೋ ವೀರ ಹಂಸಿ ಚೇತ್ಕಿಂ ಕರೋಮಿ ತೇ ।
ಪರ್ವಂತ್ವಸಾಧ್ಯಂ ಗಮನಂ ಮನ್ಯೇ ಸಂಗ್ರಾಮಮಂತರಾ ॥ ೪೯ ॥

ಇತ್ಯುಕ್ತಸ್ತಾಮನ್ವಧಾವದ್ದಾನವೋ ಧೂಮ್ರಲೋಚನಃ ।
ಹುಂಕಾರೋಚ್ಚಾರಣೇನೈವ ತಂ ದದಾಹ ಮಹೇಶ್ವರೀ ॥ ೫೦ ॥

ತತಃ ಪ್ರಭೃತಿ ಸಾ ದೇವೀ ಧೂಮಾವತ್ಯುಚ್ಯತೇ ಭುವಿ ।
ಆರಾಧಿತಾ ಸ್ವಭಕ್ತಾನಾಂ ಶತ್ರುವರ್ಗನಿಕರ್ತಿನೀ ॥ ೫೧ ॥

ಧೂಮ್ರಾಕ್ಷೇ ನಿಹತೇ ದೇವ್ಯಾ ವಾಹನೇನಾತಿಕೋಪಿನಾ ।
ಚರ್ವಿತಾಸ್ತದ್ಗಣಾಸ್ಸರ್ವೇಽಪಲಾಯಂತಾವಿಶೇಷಿತಾಃ ॥ ೫೨ ॥

ನಮ್ಮ ಒಡೆಯನಾದ ಶುಂಭಾಸುರನ ಹತ್ತಿರಕ್ಕೆ ನಡೆ. ಇಲ್ಲದಿದ್ದರೆ ಅರವತ್ತುಸಾವಿರ ರಾಕ್ಷಸಸೈನ್ಯಗಳೊಡಗೂಡಿ ನಿನ್ನನ್ನು ಸಂಹರಿಸುವೆನು ಎಂದನು.

೪೯. ಅದನ್ನು ಕೇಳಿ ದೇವಿಯು ಎಲೈ ರಾಕ್ಷಸನೇ, ದೈತ್ಯರಾಜನಿಂದ ಕಳುಹಿಸಲ್ಪಟ್ಟಿರುವ ನೀನು ನನ್ನನ್ನು ಕೊಲ್ಲುವುದಾದರೆ ನಾನುತಾನೇ ಏನುಮಾಡಬೇಕು. ಆದರೆ ನನ್ನೊಡನೆ ಯುದ್ಧವನ್ನು ಮಾಡದ ಹೊರತು ನಾನು ಬರಲಾರೆನು ಎಂದಳು.

೫೦. ಈರೀತಿಯಾಗಿ ಹೇಳಿದ ದೇವಿಯ ಮಾತನ್ನು ಕೇಳಿ ಆ ಧೂಮ್ರಾಕ್ಷನು ಅವಳನ್ನು ಎದುರಿಸಲು ಮುನ್ನುಗ್ಗಿದನು. ಹುಂಕಾರಮಾತ್ರದಿಂದಲೇ ದೇವಿಯು ಅವನನ್ನು ಸುಟ್ಟು ಭಸ್ಮಮಾಡಿದಳು.

೫೧. ಅಂದಿನಿಂದ ದೇವಿಗೆ ಧೂಮಾವತಿಯೆಂದು ಹೆಸರು ಬಂದಿತು. ಭಕ್ತರು ಅವಳನ್ನು ಪೂಜಿಸಿದರೆ ಆ ದೇವಿಯು ಭಕ್ತರ ಶತ್ರುಗಳನ್ನು ನಾಶಮಾಡುವಳು,

೫೨. ದೇವಿಯು ಧೂಮ್ರಾಕ್ಷನನ್ನು ಕೊಲ್ಲಲು ಅವಳ ವಾಹನವಾದ ಸಿಂಹವು ಅತಿಕೋಪದಿಂದ ಧೂಮ್ರಾಕ್ಷನ ಸೈನಿಕರ ಮೇಲೆ ನುಗ್ಗಿ ಎಷ್ಟೋ ಜನಗಳನ್ನು ತಿಂದಿತು. ಇದನ್ನು ನೋಡಿ ಉಳಿದವರು ಒಬ್ಬರೂ ಉಳಿಯದಂತೆ ದಿಕ್ಕಾಪಾಲಾಗಿ ಓಡಿಹೋದರು.

ಇತ್ಥಂ ದೇವ್ಯಾ ಹತಂ ದೈತ್ಯಂ ಶ್ರುತ್ವಾ ಶುಂಭಃ ಪ್ರತಾಪವಾನ್ ।
ಚಕಾರ ಬಹುಲಂ ಕೋಪಂ ಸಂದಷ್ಟೋಷ್ಠಪುಟದ್ವಯಃ ॥ ೫೩ ॥

ಚಂಡಂ ಮುಂಡಂ ರಕ್ತಬೀಜಂ ಪ್ರೈಷಯತ್ಕ್ರಮತೋಽಸುರಾನ್ ।
ತೇಽಪಿ ಚಾಜ್ಞಾಪಿತಾ ದೈತ್ಯಾ ಯಯುರ್ಯತ್ರಾಂಬಿಕಾ ಸ್ಥಿತಾ ॥ ೫೪ ॥

ಸಿಂಹಾರೂಢಾಂ ಭಗವತೀಮಣಿಮಾದಿಭಿರಾಶ್ರಿತಾಂ ।
ಭಾಸಯಂತೀಂ ದಿಶೋ ಭಾಸಾ ದೃಷ್ಟ್ವೋಚುರ್ದಾನವರ್ಷಭಾಃ ॥ ೫೫ ॥

ಹೇ ದೇವಿ ತರಸಾ ಮೂಲಂ ಯಾಹಿ ಶುಂಭನಿಶುಂಭಯೋಃ ।
ಅನ್ಯಥಾ ಘಾತಯಿಷ್ಯಾಮಃ ಸಗಣಾಂ ತ್ವಾಂ ಸವಾಹನಾಂ ॥ ೫೬ ॥

ವೃಣೀಷ್ವ ತಂ ಪತಿಂ ವಾಮೇ ಲೋಕಪಾಲಾದಿಭಿಃ ಸ್ತುತಂ ।
ಪ್ರಪತ್ಸ್ಯಸೇ ಮಹಾನಂದಂ ದೇವಾನಾಮಪಿ ದುರ್ಲಭಂ ೫೭ ॥

೫೩. ಇತ್ತ ಪ್ರತಾಪಶಾಲಿಯಾದ ಶಂಭನು, ಧೂಮ್ರಾಕ್ಷನು ಸತ್ತ ವರ್ತಮಾನವನ್ನು ಕೇಳಿ ತುಟಿಗಳನ್ನು ಕಚ್ಚುತ್ತಾ ಅತ್ಯಂತ ಕೋಪಗೊಂಡು,

೫೪-೫೫. ಚಂಡ, ಮುಂಡ, ರಕ್ತಬೀಜ ಎಂಬ ರಾಕ್ಷಸರನ್ನು ಅವಳ ಬಳಿಗೆ ಕಳುಹಿಸಿದನು. ಅವರೆಲ್ಲರೂ ಹೋಗಿ ಸಿಂಹದ ಮೇಲೆ ಕುಳಿತು ಅಣಿಮಾದ್ಯಷ್ಟ ಸಿದ್ಧಿಗಳಿಂದ ಕೂಡಿ ತನ್ನ ದೇಹಕಾಂತಿಯಿಂದ ದಿಕ್ಕುದಿಕ್ಕುಗಳೆಲ್ಲವನ್ನೂ ಪ್ರಕಾಶಗೊಳಿಸುತ್ತಿರುವ ಆ ಪಾರ್ವತಿಯನ್ನು ನೋಡಿ ಇಂತೆಂದರು.

೫೬. ಎಲೌ ದೇವಿ, ನೀನು ಜಾಗ್ರತೆಯಾಗಿ ಶುಂಭನಿಶುಂಭರ ಹತ್ತಿರಕ್ಕೆ ಹೊರಡು. ಇಲ್ಲದಿದ್ದರೆ ನಿನ್ನ ವಾಹನವನ್ನೂ, ನಿನ್ನ ಪಕ್ಷದವರನ್ನೂ, ನಿನ್ನನ್ನೂ ಖಂಡಿತವಾಗಿ ಕೊಲ್ಲುವೆವು.

೫೭. ಎಲೌ ಸುಂದರಿ, ಶುಂಭನನ್ನು ನೀನು ಪತಿಯನ್ನಾಗಿ ವರಿಸು. ಅವನನ್ನು ಲೋಕಪಾಲಾದಿಗಳೂ ಕೂಡ ಸ್ತುತಿಸುವರು. ದೇವತೆಗಳೂ ಕೂಡ ಅವನನ್ನು ಜಯಿಸಲಾರರು. ಅಂತಹ ಪ್ರಸಿದ್ಧನಾದ ಶುಂಭನನ್ನು ನೀನು ವರಿಸಿದರೆ ಮಹದಾನಂದವನ್ನು ಪಡೆದು ಸುಖದಿಂದಿರುವೆ ಎಂದರು.

ಇತ್ಯುಕ್ತಮಾಕಲಯ್ಯಾಂಬಾ ಸ್ಮಯಿತ್ವಾ ಪರಮೇಶ್ವರೀ ।
ಉದಾಜಹಾರ ಸಾ ದೇವೀ ಸೂನೃತಂ ರಸವದ್ವಚಃ ॥ ೫೮ ॥

॥ ದೇವ್ಯುವಾಚ ॥

ಅದ್ವಿತೀಯೋ ಮಹೇಶಾನಃ ಪರಬ್ರಹ್ಮ ಸದಾಶಿವಃ ।
ಯತ್ತತ್ತ್ವಂ ನ ವಿದುರ್ವೇದಾ ವಿಷ್ಣ್ವಾದೀನಾಂ ಚ ಕಾ ಕಥಾ ॥ ೫೯ ॥

ತಸ್ಯಾಹಂ ಪ್ರಕೃತಿಃ ಸೂಕ್ಷ್ಮಾ ಕಥಮನ್ಯಂ ಪತಿಂ ವೃಣೇ ।
ಸಿಂಹೀ ಕಾಮಾತುರಾ ನೈವ ಜಂಬುಕಂ ವೃಣುತೇ ಕ್ವಚಿತ್ ॥ ೬೦ ॥

ಕರೇಣುರ್ಗರ್ಧಭಂ ನೈವ ದ್ವೀಪಿನೀ ಶಶಕಂ ನ ವಾ ।
ವೃಷಾ ವದತ ಭೋ ದೈತ್ಯಾ ಮೃತ್ಯುವ್ಯಾಲನಿಯಂತ್ರಿತಾಃ ॥ ೬೧ ॥

ಯೂಯಂ ಪ್ರಯಾತ ಪಾತಾಲಂ ಯುಧ್ಯಧ್ವಂ ಶಕ್ತಿರಸ್ತಿ ಚೇತ್ ।
ಇತಿ ಕ್ರೋಧಕರಂ ವಾಕ್ಯಂ ಶ್ರುತ್ವೋಚುಸ್ತೇ ಪರಸ್ಪರಂ ॥ ೬೨ ॥

೫೮. ಆ ರಾಕ್ಷಸರು ಹೇಳಿದ ಮಾತುಗಳನ್ನು ಕೇಳಿ ಆ ಪರಮೇಶ್ವರಿಯು ನಗುತ್ತಾ ಸತ್ಯವೂ ಅರ್ಥಗರ್ಭಿತವೂ ಆದ ಮಾತುಗಳಿಂದಿಂತೆಂದಳು.

೫೯-೬೦. ನಾನು ಪರಬ್ರಹ್ಮಸ್ವರೂಪನಾದ ಸದಾಶಿವನ ಪ್ರಕೃತಿಯು. ಆ ಸದಾಶಿವನ ತತ್ವವನ್ನು ವೇದಗಳೂ ತಿಳಿಯಲಾರವು. ಎಂದಮೇಲೆ ವಿಷ್ಣು ಮುಂತಾದವರು ತಿಳಿಯಲಾಪರೇ? ಅವನು ಅದ್ವಿತೀಯನು. ಮಹೇಶನಾದ ಅವನನ್ನು ಬಿಟ್ಟು ನಾನು ಮತ್ತಾರನ್ನೂ ವರಿಸಲಾರೆನು. ಸಿಂಹಿಣಿಯು ಕಾಮಾತುರಳಾದರೂ ನರಿಯನ್ನು ಎಂದಿಗೂ ವರಿಸುವುದಿಲ್ಲವಷ್ಟೆ?

೬೧. ಹೆಣ್ಣು ಆನೆಯು ಕತ್ತೆಯನ್ನೆಂದಾದರೂ ವರಿಸೀತೆ? ಹೆಣ್ಣುಹುಲಿಯು ಮೊಲವನ್ನು ಎಂದಿಗೂ ವರಿಸುವುದಿಲ್ಲ. ಮೃತ್ಯುವೆಂಬ ಸರ್ಪದಿಂದ ಬಂಧಿತರಾದ ನೀವು ವ್ಯರ್ಥವಾಗಿ ಮಾತನಾಡುತ್ತಿರುವಿರಿ.

೬೨. ಎಲೈ ರಾಕ್ಷಸರೇ, ನಿಮಗೆ ಶಕ್ತಿ ಇದ್ದ ಪಕ್ಷದಲ್ಲಿ ನನ್ನೊಡನೆ ಯುದ್ಧ ಮಾಡಿರಿ. ಇಲ್ಲದಿದ್ದರೆ ಪಾತಾಳಲೋಕಕ್ಕೆ ನಡೆಯಿರಿ ಎಂದು ಕೋಪದಿಂದ ನುಡಿಯಲು, ದೇವಿಯ ಮಾತುಗಳನ್ನು ಕೇಳಿ ತಮ್ಮತಮ್ಮಲ್ಲೇ ಮಾತನಾಡಿಕೊಂಡು,

ಅಬಲಾಂ ಮನಸಿ ಜ್ಞಾತ್ವಾ ನ ಹನ್ಮೋ ಭವತೀಂ ವಯಂ ।
ಅಥೋ ಸ್ಥಿರೈಹಿ ಪಂಚಾಸ್ಯೇ ಯುದ್ಧೇಚ್ಛಾ ಮಾನಸೇಽಸ್ತಿ ಚೇತ್ ॥ ೬೩ ॥

ತೇಷಾಮೇವಂ ವಿವದತಾಂ ಕಲಹಃ ಸಮವರ್ಧತ ।
ವವೃಷುಃ ಸಮರೇ ಬಾಣಾ ಉಭಯೋರ್ದಲಯೋಶ್ಶಿತಾಃ ॥ ೬೪ ॥

ಏವಂ ತೈಃ ಸಮರಂ ಕೃತ್ವಾ ಲೀಲಯಾ ಪರಮೇಶ್ವರೀ ।
ಜಘಾನ ಚಂಡಮುಂಡಾಭ್ಯಾಂ ರಕ್ತಬೀಜಂ ಮಹಾಸುರಂ ॥ ೬೫ ॥

ದ್ವೇಷಬುದ್ಧಿಂ ವಿಧಾಯಾಪಿ ತ್ರಿದಶಾರಾತಯೋಽಸ್ಯಮೀ ।
ಅಂತೇಽಪ್ರಾಪನ್ ಪರಂ ಲೋಕಂ ಯಲ್ಲೋಕಂ ಯಾಂತಿ ಸಜ್ಜನಾಃ ॥ ೬೬ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ
ಧೂಮ್ರಲೋಚನಚಂಡಮುಂಡರಕ್ತಬೀಜವಧೋ ನಾಮ
ಸಪ್ತಚತ್ವಾರಿಂಶೋಽಧ್ಯಾಯಃ

---

೬೩. ಮತ್ತೆ ಆ ದೇವಿಯನ್ನು ಕುರಿತು—ನೀನು ಅಬಲೆ ಎಂದು ತಿಳಿದು ನಾವು ನಿನ್ನನ್ನು ಕೊಲ್ಲಲಿಲ್ಲವು. ಯುದ್ಧಮಾಡಲು ನಿನಗೆ ಇಚ್ಛೆ ಇದ್ದ ಪಕ್ಷದಲ್ಲಿ ಯುದ್ಧಮಾಡಿ ಮೃತ್ಯುವಿನ ಮುಖಕ್ಕೆ ಬಂದು ಬೀಳಬಹುದು ಎಂದರು.

೬೪. ಈರೀತಿಯಾಗಿ ಪರಸ್ಪರ ವಾದವಿವಾದಗಳಾದನಂತರ ಯುದ್ಧವು ಪ್ರಾರಂಭವಾಯಿತು. ಎರಡು ದಳದವರೂ ನಿಶಿತವಾದ ಬಾಣಗಳನ್ನು ಪ್ರಯೋಗಿಸುತ್ತಿದ್ದರು.

೬೫. ಈರೀತಿಯಾಗಿ ಅವರೊಡನೆ ಯುದ್ಧಮಾಡಿ ಪರಮೇಶ್ವರಿಯು ಚಂಡಮುಂಡರನ್ನೂ, ರಕ್ತಬೀಜಾಸುರನನ್ನು ಸಂಹಾರಮಾಡಿದಳು.

೬೬. ಆ ಚಂಡಮುಂಡಾದಿಗಳು ಆ ದೇವಿಯಲ್ಲಿ ದ್ವೇಷವನ್ನಿಟ್ಟು ಯುದ್ಧದಲ್ಲಿ ಅವಳಿಂದ ಕೊಲ್ಲಲ್ಪಟ್ಟರೂ ಆ ದೇವಿಯ ಭಕ್ತರಿಗೆ ಯಾವ ಲೋಕವು ಸಿಕ್ಕುವುದೋ ಆ ಲೋಕಕ್ಕೆ ಹೋದರು. ಅವರು ದೇವಿಯ ಶತ್ರುಗಳಾದರೂ ಅವಳಿಂದಲೇ ಹತರಾದುದರಿಂದ ಅವಳ ಅನುಗ್ರಹಕ್ಕೆ ಪಾತ್ರರಾದರು.

ಇಲ್ಲಿಗೆ ಶ್ರೀ ಶಿವಪುರಾಣದ ಉಮಾಸಂಹಿತೆಯಲ್ಲಿ ಧೂಮ್ರಾಕ್ಷಚಂಡಮುಂಡರಕ್ತ
ಬೀಜರ ವಧೆ ಎಂಬ ನಲವತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಅಷ್ಟಚತ್ವಾರಿಂಶೋಽಧ್ಯಾಯಃ

॥ ರಾಜೋವಾಚ ॥

ಧೂಮ್ರಾಕ್ಷಂ ಚಂಡಮುಂಡಂ ಚ ರಕ್ತಬೀಜಾಸುರಂ ತಥಾ ।
ಭಗವನ್ನಿಹತಂ ದೇವ್ಯಾ ಶ್ರುತ್ವಾ ಶುಂಭಃ ಸುರಾರ್ದನಃ ॥ ೧ ॥

ಕಿಮಕಾರ್ಷೀತ್ತತೋ ಬ್ರಹ್ಮನ್ನೇತನ್ಮೇ ಬ್ರೂಹಿ ಸಾಂಪ್ರತಂ ।
ಶುಶ್ರೂಷವೇ ಜಗದ್ಯೋನೇಶ್ಚರಿತ್ರಂ ಪಾಪನಾಶನಂ ॥ ೨ ॥

॥ ಋಷಿರುವಾಚ ॥

ಹತಾನಿಮಾನ್ ದೈತ್ಯವರಾನ್ಮಹಾಸುರೋ
ನಿಶಮ್ಯ ರಾಜನ್ಮಹನೀಯವಿಕ್ರಮಃ ।

### ನಲವತ್ತೆಂಟನೆಯ ಅಧ್ಯಾಯವು

೧-೨. ಸುರಥನು ಮೇಧಋಷಿಯನ್ನು ಪ್ರಶ್ನೆಮಾಡುವನು :—ಎಲೈ ಋಷಿಶ್ರೇಷ್ಠನೇ, ಪಾರ್ವತಿಯು ಧೂಮ್ರಾಕ್ಷನನ್ನೂ, ಚಂಡಮುಂಡನನ್ನೂ, ರಕ್ತಬೀಜಾಸುರನನ್ನೂ ಕೊಂದ ವಿಷಯವನ್ನು ದೇವಹಿಂಸಕನಾದ ಆ ಶುಂಭನು ಕೇಳಿ ಮುಂದೆ ಏನುಮಾಡಿದನು ? ಆ ವಿಷಯವನ್ನು ನಮಗೆ ತಿಳಿಸು. ನೀನು ತಿಳಿಸುವ ಜಗನ್ಮಾತೆಯ ಚರಿತ್ರೆಯು ಪಾಪವನ್ನು ನಾಶಮಾಡುವುದಾಗಿರುವುದು ಎಂದನು.

೩. ಋಷಿಯು ಹೇಳುವನು :—ಎಲೈ ರಾಜನೇ, ಚಂಡಮುಂಡಾದಿಗಳು ಸತ್ತ ವಿಷಯವನ್ನು ಕೇಳಿ ಅತ್ಯಂತ ಪರಾಕ್ರಮಶಾಲಿಯಾದ ಆ ಶುಂಭನು ತನ್ನ

ಆಜಿಜ್ಞಪತ್ಸ್ವೀಯಗಣಾನ್ದುರಾಸದಾನ್
ರಣಾಭಿಧೋಚ್ಚಾರಣಜಾತಸಂಮುದಾನ್ ॥ ೩ ॥

ಬಲಾನ್ವಿತಾಸ್ಸಂಮಿಲಿತಾ ಮಮಾಜ್ಞಯಾ
ಜಯಾಶಯಾ ಕಾಲಕವಂಶಸಂಭವಾಃ ।
ಸಕಾಲಕೇಯಾಸುರ ಮೌರ್ಯ್ಯದೌರ್ಹೃದಾ-
ಸ್ತಥಾ ಪರೇಽಪ್ಯಾಶು ಪ್ರಯಾಣಯಂತು ತೇ ॥ ೪ ॥

ನಿಶುಂಭಶುಂಭೌ ದಿತಿಜಾನ್ನಿದೇಶ್ಯ ತಾನ್
ರಥಾಧಿರೂಢೌ ನಿರಯಾಂಬಭೂವತುಃ ।
ಬಲಾನ್ಯನೂಖುರ್ಬಲಿನೋಸ್ತಯೋರ್ಧರಾ-
ದ್ವಿನಾಶವಂತಃ ಶಲಭಾ ಇವೋತ್ಥಿತಾಃ ॥ ೫ ॥

ಪ್ರನಾದಯಾಮಾಸ ಮೃದಂಗಮರ್ದಲಂ
ಸಭೇರಿಕಾಡಿಂಡಿಮಜರ್ಝರಾನಕಂ ।

ಸೈನಿಕರಿಗೆ ಯುದ್ಧಮಾಡಲು ಅಪ್ಪಣೆಮಾಡಿದನು. ಅವರೆಲ್ಲರೂ ಯುದ್ಧದ ವಿಷಯವನ್ನು ಕೇಳಿ ಆನಂದದಿಂದ ಮತ್ತರಾದರು.

೪. ಎಲೈ ರಾಕ್ಷಸರೇ, ಬಲಶಾಲಿಗಳಾದ ನೀವೆಲ್ಲರೂ ನನ್ನ ಅಪ್ಪಣೆಯ ಮೇರೆಗೆ ಜಯಿಸಲು ಆಶೆಯುಳ್ಳವರಾಗಿ ಯುದ್ಧಕ್ಕೆ ಹೊರಡಿರಿ. ಮತ್ತು ಕಾಲಕ ವಂಶದಲ್ಲಿ ಹುಟ್ಟಿದ ಕಾಲಕೇಯಾಸುರನೇ ಮೊದಲಾದವರೂ ಮತ್ತು ಮೌರ್ಯ, ದೌರ್ಹೃದ ಎಂಬ ರಾಕ್ಷಸರೂ ಕೂಡ ಯುದ್ಧಮಾಡಲು ಜಾಗ್ರತೆಯಾಗಿ ಹೊರಡಲಿ.

೫. ಈರೀತಿಯಾಗಿ ಶುಂಭನಿಶುಂಭರು ತಮ್ಮ ಕಡೆಯ ದೈತ್ಯರಿಗೆ ಅಪ್ಪಣೆ ಮಾಡಿ ತಾವೂ ರಥದಲ್ಲಿ ಕುಳಿತು ಹೊರಟರು. ಅವನ ಸೈನಿಕರೂ ಸಹ ಭೂಮಿಯಿಂದ ಹುಟ್ಟಿದ ಹುಳುಗಳು ನಾಶವನ್ನು ಹೊಂದುವಂತೆ ಆ ಸ್ಥಳದಿಂದ ಯುದ್ಧಕ್ಕೆ ಹೊರಟರು.

೬. ಆ ದೈತ್ಯಸೈನ್ಯದಲ್ಲಿ ಮೃದಂಗ, ಮದ್ದಲೆ, ಭೇರಿ, ಡಿಂಡಿಮ, ಆನಕ ಮುಂತಾದ ವಾದ್ಯಗಳು ಮೊಳಗಿದವು. ಯುದ್ಧೋತ್ಸಾಹಿಗಳು ಉತ್ಸಾಹದಿಂದ

ರಣಸ್ಥಲೀ ಸಂಜಹೃಷೂ ರಣಪ್ರಿಯಾ
ಅಸುಪ್ರಿಯಾಃ ಸಂಗರತಾಃ ಪರಾಯಯುಃ ॥ ೬ ॥

ಭಟಾಶ್ಚ ತೇ ಯುದ್ಧಪಟಾವೃತಾಸ್ತದಾ
ರಣಸ್ಥಲೀಮಾಪುರಪಾಪವಿಗ್ರಹಾಃ ।
ಗೃಹೀತಶಸ್ತ್ರಾಸ್ತ್ರಚಯಾ ಜಿಗೀಷಯಾ
ಪರಸ್ಪರಂ ವಿಗ್ರಹಯಂತ ಉಲ್ಬಣಂ ॥ ೭ ॥

ಗಜಾಧಿರೂಢಾಸ್ತುರಗಾಧಿರೋಹಿಣೋ
ರಥಾಧಿರೂಢಾಶ್ಚ ಯಥಾಪರೇಽಸುರಾಃ ।
ಅಲಕ್ಷಯಂತಃ ಸ್ವಪರಾನ್ ಜನಾನ್ಮುದಾ-
ಸುರೇಶಸಂಗೇ ಸಮರೇಽಭಿರೇಮಿರೇ ॥ ೮ ॥

ಧ್ವನಿಃ ಶತಘ್ನೀಜನಿತೋ ಮುಹುರ್ಮುಹು-
ರ್ಬಭೂವ ತೇನ ತ್ರಿದಶಾಃ ಸಮೋಜಿತಾಃ ।
ಮಹಾಂಧಕಾರಸ್ಸಮಪದ್ಯತಾಂಬರೇ
ವಿಲೋಕ್ಯತೇ ನೋ ರಥಮಂಡಲಂ ರವೇಃ ॥ ೯ ॥

ಮುನ್ನುಗ್ಗಿದರು. ಪ್ರಾಣಪ್ರಿಯರಾದ ಹೇಡಿಗಳು ಕೆಲವರು ಮಾತ್ರ ಯುದ್ಧದಿಂದ ಹಿಂತಿರುಗಿ ಬಂದರು.

೭. ಮತ್ತೆ ಕೆಲವರು ಯುದ್ಧಕವಚಗಳನ್ನು ಧರಿಸಿ ಶಸ್ತ್ರಾಸ್ತ್ರಗಳನ್ನು ಹಿಡಿದು ಜಯಿಸಬೇಕೆಂಬ ಆಶೆಯಿಂದ ಅನ್ಯೋನ್ಯವಾಗಿ ವೀರಾಲಾಪನವನ್ನು ಮಾಡುತ್ತಾ ಧೈರ್ಯವಾಗಿ ಯುದ್ಧರಂಗವನ್ನು ಸೇರಿದರು.

೮. ಕೆಲವರು ಆನೆಯ ಮೇಲೆ ಕುಳಿತೂ, ಮತ್ತೆ ಕೆಲವರು ಕುದುರೆಯ ಮೇಲೆ ಕುಳಿತುಕೊಂಡೂ, ಇನ್ನು ಕೆಲವರು ರಥಗಳ ಮೇಲೆ ಕುಳಿತೂ ತಮ್ಮ ಜನಗಳನ್ನು ಆನಂದದಿಂದ ನೋಡುತ್ತಾ ಆ ಶುಂಭನ ಸಮೀಪದಲ್ಲೇ ಯುದ್ಧರಂಗದಲ್ಲಿ ಓಡಾಡುತ್ತಿದ್ದರು.

೯. ಬಾರಿಬಾರಿಗೂ ತೋಪುಗಳ ಘರ್ಜಿಸುವಿಕೆಯಿಂದ ಉಂಟಾದ ಧ್ವನಿಯು ಭಯಂಕರನಾಗಿ ಕೇಳಿಬರುತ್ತಿತ್ತು. ಈ ಯುದ್ಧವನ್ನು ನೋಡಲು ಬಂದಿದ್ದ ದೇವತೆ

ಪದಾತಯೋ ನಿರ್ವವ್ರಜುರ್ಹಿ ಕೋಟಿಶಃ
ಪ್ರಭೂತಮಾನಾ ವಿಜಯಾಭಿಲಾಷಿಣಃ ।
ರಥಾಶ್ವಗಾ ವಾರಣಗಾ ಅಥಾಪರೇಽಸುರಾ
ನಿರೀಯುಃ ಕತಿ ಕೋಟಿಶೋ ಮುದಾ ೧೦ ॥

ಅಶುಕ್ಲಶೈಲಾ ಇವ ಮತ್ತವಾರಣಾ
ಅತಾನಿಷುಶ್ಚೀತ್ಕೃತಿಶಬ್ದಮಾಹವೇ ।
ಕ್ರಮೇಲಕಾಶ್ಚಾಪಿ ಗಲದ್ಗಲಧ್ವನಿಂ
ವಿತನ್ವತೇ ಕ್ಷುದ್ರಮಹೀಧರೋಪಮಾಃ ॥ ೧೧ ॥

ಹಯಾಶ್ಚ ಹೇಷಂತ ಉದಗ್ರಭೂಮಿಜಾ
ವಿಶಾಲಕಂಠಾಭರಣಾ ಗತೇರ್ವಿದಃ ।
ಪದಾನಿದಂತಾವಲಮೂರ್ಧ್ನಿ ಬಿಭ್ರತಃ
ಸುಡಿಡ್ಯಿರೇ ವ್ಯೋಮಪಥಾ ಯಥಾ ವಯಃ ॥ ೧೨ ॥

ಗಳೆಲ್ಲರೂ ಆಕಾಶದಲ್ಲಿ ನಿಂತಿದ್ದುದರಿಂದ ಸೂರ್ಯಮಂಡಲವು ಮರೆಯಾಗಿ ಅಂಧಕಾರವು ಆವರಿಸಿತು.

೧೦. ಯುದ್ಧದಲ್ಲಿ ಗೆಲ್ಲಲೇಬೇಕೆಂದು ಬಯಸಿ ಕೋಟ್ಯಾನುಕೋಟಿ ಜನರು ಹೊರಟರು. ಕೆಲವರು ಕಾಲ್ನಡಿಗೆಯಿಂದಲೂ, ಮತ್ತೆ ಕೆಲವರು ಕುದುರೆಯ ಮೇಲೆ ಕುಳಿತೂ, ಇನ್ನೂ ಕೆಲವರು ಆನೆಗಳ ಮೇಲೆ ಕುಳಿತೂ ಸಂತೋಷದಿಂದ ಯುದ್ಧಕ್ಕೋಸ್ಕರ ಬಂದು ಸೇರಿದರು.

೧೧. ಯುದ್ಧದಲ್ಲಿ ಅಂಜನಪರ್ವತದಂತೆ ಕಪ್ಪಾಗಿಯೂ, ಎತ್ತರವಾಗಿಯೂ ಇರುವ ಆನೆಗಳು ಚೀತ್ಕಾರಮಾಡುತ್ತಿದ್ದವು. ಉದ್ದವಾಗಿಯೂ, ಎತ್ತರವಾಗಿಯೂ ಗುಡ್ಡಗಳಂತಿರುವ ಒಂಟೆಗಳು ಗದ್ಗದ ಶಬ್ದಗಳನ್ನು ಮಾಡುತ್ತಿದ್ದವು.

೧೨. ಶ್ರೇಷ್ಠವಾದ ದೇಶಗಳಲ್ಲಿ ಹುಟ್ಟಿದ ಉತ್ತಮಜಾತಿಯ ಕುದುರೆಗಳು ಕೆನೆಯುತ್ತಿದ್ದವು. ಅವುಗಳ ಕತ್ತಿನಲ್ಲಿ ವಿಶಾಲವಾದ ಕಂಠಾಭರಣಗಳನ್ನು ಹಾಕಿದ್ದರು. ಆ ಕುದುರೆಗಳು ಶ್ರೇಷ್ಠಗತಿಯನ್ನು ತಿಳಿದು ಪಕ್ಷಿಗಳು ಹಾರುವಂತೆ ಭೂಮಿಯಿಂದ ನೆಗೆದು ಆನೆಗಳ ತಲೆಯ ಮೇಲೆ ಕಾಲುಗಳನ್ನಿಡುತ್ತಾ ಓಡಾಡುತ್ತಿದ್ದವು.

ಸಮೀಕ್ಷ್ಯ ಶತ್ರೋರ್ಬಲಮಿತ್ಥಮಾಪತ-
ಚ್ಚಕಾರ ಸಜ್ಯಂ ಧನುರಂಬಿಕಾ ತದಾ ।
ನನಾಧ ಘಂಟಾಂ ರಿಪುಸಾದದಾಯಿನೀಂ
ಜಗರ್ಜ ಸಿಂಹೋಽಪಿ ಸಟಾಂ ವಿಧೂನಯನ್ ॥ ೧೩ ॥

ತತೋ ನಿಶುಂಭಸ್ತುಹಿನಾಚಲಸ್ಥಿತಾಂ
ವಿಲೋಕ್ಯ ರಮ್ಯಾಭರಣಾಯುಧಾಂ ಶಿವಾಂ ।
ಗಿರಂ ಬಭಾಷೇ ರಸನಿರ್ಭರಾಂ ಪರಾಂ
ವಿಲಾಸಿನೀಭಾವವಿಚಕ್ಷಣೋ ಯಥಾ ॥ ೧೪ ॥

ಭವಾದೃಶೀನಾಂ ರಮಣೀಯವಿಗ್ರಹೇ
ದುನೋತಿ ಕೀರ್ಣಂ ಖಲು ಮಾಲತೀದಲಂ ।
ಕಥಂ ಕರಾಲಾಹವಮಾತನೋಷ್ಯಯೇ
ಮಹೇಶಿ ತೇನೈವ ಮನೋಜ್ಞವರ್ಷ್ಮಣಾ ॥ ೧೫ ॥

ಇತೀರಯಿತ್ವಾ ವಚನಂ ಮಹಾಸುರೋ
ಬಭೂವ ಮೌನೀ ತಮುವಾಚ ಚಂಡಿಕಾ ।

೧೩. ಈರೀತಿಯಾಗಿ ಶತ್ರುಪಕ್ಷದ ಬಲವನ್ನು ನೋಡಿ ಪಾರ್ವತಿಯು ಧನುಸ್ಸಿಗೆ ಹೆದೆಯನ್ನೇರಿಸಿದಳು. ಮತ್ತು ಶತ್ರುಗಳಿಗೆ ಭಯವನ್ನುಂಟುಮಾಡುವ ಘಂಟೆಯನ್ನು ಬಾರಿಸಿದಳು. ಅವಳ ವಾಹನವಾದ ಸಿಂಹವೂ ಕೂಡ ತನ್ನ ಕೇಸರಗಳನ್ನು ಕೊಡವುತ್ತಾ ಘರ್ಜಿಸಿತು.

೧೪. ಅನಂತರ ನಿಶುಂಭನು, ರಮ್ಯಾಭರಣಗಳಿಂದ ಪ್ರಕಾಶಿಸುತ್ತಾ ಶಸ್ತ್ರಾಸ್ತ್ರಗಳನ್ನು ಹಿಡಿದು ಹಿಮವತ್ಪರ್ವತದ ಮೇಲೆ ನಿಂತಿರುವ ಪಾರ್ವತಿಯನ್ನು ನೋಡಿ, ವಿಲಾಸಿನೀ ಸ್ತ್ರೀಯರ ಮನೋಭಾವವನ್ನು ಪರೀಕ್ಷಿಸುವ ಪುರುಷನಂತೆ ಅತ್ಯಂತ ರಸವತ್ತಾದ ಮಾತುಗಳಿಂದಿಂತೆಂದನು.

೧೫. ಎಲೌ ಮಹೇಶಿಯೇ, ನಿನ್ನಂತಹ ಸುಂದರಿಯ ಶರೀರದಲ್ಲಿ ಮಾಲತೀ ಪುಷ್ಪಸ್ಪರ್ಶವೂ ಕೂಡ ದುಃಖವನ್ನುಂಟುಮಾಡುವುದು. ಅಂತಹ ಮೃದುಶರೀರವುಳ್ಳ ನೀನು ಈ ಭಯಂಕರಯುದ್ಧವನ್ನು ಹೇಗೆ ಮಾಡುವೆ ? ಎಂದನು.

ವೃಥಾ ಕಿಮಾತ್ಥಾಸುರ ಮೂಢ ಸಂಗರಂ
ಕುರುಷ್ವ ನಾಗಾಲಯಮನ್ಯಥಾ ವ್ರಜ ॥ ೧೬ ॥

ತತೋऽತಿರುಷ್ಟಃ ಸಮರೇ ಮಹಾರಥ-
ಶ್ಚಕಾರ ಬಾಣಾವಲಿವೃಷ್ಟಿಮದ್ಭುತಾಂ ।
ಘನಾಘನಾಃ ಸಂವವೃಷುರ್ಯಥೋದಕಂ
ರಣಸ್ಥಲೇ ಪ್ರಾವೃಡಿವಾಗತಾಸ್ತದಾ ॥ ೧೭ ॥

ಶರೈಶ್ಶಿತೈಶ್ಶೂಲಪರಶ್ವಧಾಯುಧೈಃ
ಸಭಿಂಧಿಪಾಲೈಃ ಪರಿಘೈಶ್ಶರಾಸನೈಃ ।
ಭುಶುಂಡಿಕಾಪ್ರಾಸಕ್ಷುರಪ್ರಸಜ್ಞಕೈ-
ರ್ಮಹಾಸಿಭಿಃ ಸಂಯುಯುಧೆ ಮದೋದ್ಧತೈಃ ॥ ೧೮ ॥

ವಿಬಭ್ರಮುಸ್ತತ್ಸಮರೇ ಮಹಾಗಜಾ
ವಿಭಿನ್ನಕುಂಭಾ ಅಸಿತಾದ್ರಿಸಂನಿಭಾಃ

೧೬. ಈರೀತಿಯಾಗಿ ನಿಶುಂಭನು ಹೇಳಿ ಸುಮ್ಮನಾಗಲು, ಆ ಚಂಡಿಕೆಯು ರಾಕ್ಷಸನನ್ನು ಕುರಿತು, ಸುಮ್ಮನೆ ವ್ಯರ್ಥವಾದ ಮಾತುಗಳನ್ನೇಕೆ ಆಡುತ್ತಿರುವೆ? ಎಲೈ ಮೂಢನೇ, ಯುದ್ಧಮಾಡು. ಯುದ್ಧಮಾಡಲು ಶಕ್ತಿಯಿಲ್ಲದಿದ್ದರೆ ಪಾತಾಳ ಲೋಕಕ್ಕೆ ಹೋಗು ಎಂದಳು.

೧೭. ಇದನ್ನು ಕೇಳಿ, ಅತ್ಯಂತ ಕೋಪಗೊಂಡ ಆ ರಾಕ್ಷಸನು ವರ್ಷಕಾಲದಲ್ಲಿ ದೊಡ್ಡದೊಡ್ಡ ಮೇಘಗಳು ಮಳೆಗರೆಯುವಂತೆ ದೇವಿಯ ಮೇಲೆ ಬಾಣಗಳನ್ನು ಒಂದೇಸಮನಾಗಿ ಪ್ರಯೋಗಿಸುತ್ತಿದ್ದನು. ಅವೆಲ್ಲವೂ ಯುದ್ಧರಂಗದಲ್ಲಿ ಮೇಘಗಳಂತೆ ಸೇರಿದವು.

೧೮. ತೀವ್ರವಾದ ಬಾಣಗಳಿಂದಲೂ, ಶೂಲ, ಕೊಡಲಿ, ಭಿಂಧಿಪಾಲ, ಪರಿಘ, ಬತ್ತಳಿಕೆ, ಭುಶುಂಡಿಕಾಯುಧ, ಪ್ರಾಸ, ಕ್ಷುರ ಮುಂತಾದ ಮಹದಾಯುಧಗಳಿಂದ ಮದೋನ್ಮತ್ತರಾದ ಆ ರಾಕ್ಷಸರು ಯುದ್ಧಮಾಡಿದರು.

೧೯. ಆ ಯುದ್ಧದಲ್ಲಿ ಅಂಜನಪರ್ವತದಂತಿರುವ ದೊಡ್ಡದೊಡ್ಡ ಆನೆಗಳ ಕುಂಭಸ್ಥಳಗಳು ಸೀಳಿಹೋದುದರಿಂದ ಅವು ಯುದ್ಧರಂಗದಲ್ಲಿ ಓಡಾಡುತ್ತಿದ್ದವು.

ಚಲದ್ಬಲಾಕಾಧವಲಾವಕೇತವೋ
ವಿಸೇತವಃ ಶುಂಭನಿಶುಂಭಕೇತವಃ ॥ ೧೯ ॥

ವಿಭಿನ್ನದೇಹಾ ದಿತಿಜಾ ಝಷೋಪಮಾ
ವಿಕಂಧರಾ ವಾಜಿಗಣಾ ಭಯಂಕರಾಃ ।
ಪರಾಸವಃ ಕಾಲಿಕಯಾ ಕೃತಾ ರಣೇ
ಮೃಗಾರಿಣಾ ಚಾಶಿಷತಾಪರೇಽಸುರಾಃ ॥ ೨೦ ॥

ವಿಸುಸ್ರುವೂ ರಕ್ತವಹಾಸ್ತದಂತರೇ
ಸರಿಚ್ಛಯಾಸ್ತತ್ರ ವಿಪುಪ್ಲುವೇ ಹತೈಃ ।
ಕಚಾ ಭಟಾನಾಂ ಜಲನೀಲಿಕೋಪಮಾ-
ಸ್ತದುತ್ತರೀಯಂ ಸಿತಫೇನಸನ್ನಿಭಂ ॥ ೨೧ ॥

ತುರಂಗಸಾದೀ ತುರಗಾಧಿರೋಹಿಣಂ
ಗಜಸ್ಥಿತಾನಭ್ಯಪತನ್ ಗಜಾರುಹಃ ।

ಆ ಶುಂಭನಿಶುಂಭರ ರಥದ ಮೇಲಿರುವ ಬಿಳುಪಾದ ಧ್ವಜಗಳು ಆಕಾಶದಲ್ಲಿ ಹಾರುತ್ತಿರುವ ಹಂಸಗಳೋಪಾದಿಯದಲ್ಲಿ ಕಾಣುತ್ತಿದ್ದವು.

೨೦. ಆ ಕಾಲಿಕಾದೇವಿಯು ಯುದ್ಧದಲ್ಲಿ ರಾಕ್ಷಸರನ್ನೆಲ್ಲಾ ಕೊಂದುಹಾಕಿದಳು. ಅವಳ ವಾಹನವಾದ ಸಿಂಹವು ಅನೇಕರನ್ನು ಕೊಂದುಹಾಕಿತು. ಅನೇಕರ ಶರೀರಗಳು ಕತ್ತರಿಸಿಹೋಗಿ ನೀರಿನಿಂದ ಹೊರಬಿದ್ದ ಮೀನುಗಳಂತೆ ಒದ್ದಾಡುತ್ತಿದ್ದರು. ಕತ್ತುಗಳು ಕತ್ತರಿಸಿ ಹೋದ ಕುದುರೆಗಳು ಭಯಂಕರವಾಗಿ ಕಾಣುತ್ತಿದ್ದವು.

೨೧. ಯುದ್ಧರಂಗದಲ್ಲಿ ರಕ್ತದ ನದಿಯು ಹರಿಯಲು ಪ್ರಾರಂಭವಾಯಿತು. ಸತ್ತವರೆಲ್ಲರೂ ಆ ನದಿಯಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದರು. ಹಾಗೆ ಕೊಚ್ಚಿಕೊಂಡು ಹೋಗುತ್ತಿದ್ದವರ ಕೂದಲುಗಳು ಪಾಚಿಯಂತೆಯೂ, ಅವರ ಬಿಳುಪಾದ ವಸ್ತ್ರಗಳು ನೊರೆಯಂತೆಯೂ ಕಾಣಿಸುತ್ತಿದ್ದವು.

೨೨. ಕುದುರೆಯ ಸವಾರರು ಕುದುರೆ ಸವಾರರನ್ನೂ, ರಥಿಕರು ರಥಿಕರನ್ನೂ, ಮಾವಟಿಗರು ಮಾವಟಿಗರನ್ನೂ, ಪದಾತಿಗಳು ಪದಾತಿಗಳನ್ನೂ ಸಂಧಿಸಿ ಹೊಡೆದಾಡುತ್ತಾ ಪರಸ್ಪರ ಯುದ್ಧಮಾಡುತ್ತಿದ್ದರು.

ರಥೀ ರಥೇಶಂ ಖಲು ಪತ್ತಿರಂಘ್ರಿಗಾನ್
ಸಮುಪ್ರತಿದ್ವಂದ್ವಿಕಲಿರ್ಮಹಾನಭೂತ್ ॥ ೨೨ ॥

ತತೋ ನಿಶುಂಭೋ ಹೃದಯೇ ವ್ಯಚಿಂತಯ-
ತ್ಕರಾಲಕಾಲೋಽಯಮುಪಾಗತೋಽಧುನಾ ।
ಭವೇದ್ದರಿದ್ರೋಽಪಿ ಮಹಾಧನೋಮಹಾ-
ಧನೋದರಿದ್ರೋ ವಿಪರೀತಕಾಲತಃ ॥ ೨೩ ॥

ಜಡೋ ಭವೇತ್ ಸ್ಫೀತಮತಿರ್ಮಹಾಮತಿ-
ರ್ಜಡೋ ನೃಶಂಸೋ ಬಹುಮಂತುಸಂಸ್ತುತಃ ।
ಪರಾಜಯಂ ಯಾಂತಿ ರಣೇ ಮಹಾಬಲಾ
ಜಯಂತಿ ಸಂಗ್ರಾಮಮುಖೇ ಚ ದುರ್ಬಲಾಃ ॥ ೨೪ ॥

ಜಯೋಽಜಯೋ ವಾ ಪರಮೇಶ್ವರೇಚ್ಛಯಾ
ಭವತ್ಯನಾಯಾಸತ ಏವ ದೇಹಿನಾಂ ।
ನ ಕಾಲಮುಲ್ಲಂಘ್ಯ ಶಶಾಕ ಜೀವಿತುಂ
ಮಹೇಶ್ವರಃ ಪದ್ಮಜನೀ ರಮಾಪತಿಃ ॥ ೨೫ ॥

೨೩. ಅನಂತರ ನಿಶುಂಭನು ಮನಸ್ಸಿನಲ್ಲಿ ಈರೀತಿಯಾಗಿ ಯೋಚಿಸಿದನು. ಎಂತಹ ಭಯಂಕರಕಾಲವು ಪ್ರಾಪ್ತವಾಯಿತು. ಇಂತಹ ಕಾಲಕ್ಕೆ ಸಿಕ್ಕಿ ಧನವಂತನೂ, ಮಹಾಧನಿಯೂ ದರಿದ್ರರಾಗುವರು.

೨೪. ಕಾಲದ ಬದಲಾವಣೆಯಿಂದ ಜಡನಾದ ಮನುಷ್ಯನು ಬುದ್ಧಿವಂತನಾಗುವನು. ಬುದ್ಧಿವಂತನು ಮೂರ್ಖನಾಗುವನು. ಘಾತುಕನು ಮಾನಿಜನಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುವನು. ಮಹಾಬಲಶಾಲಿಯಾದವನು ಯುದ್ಧದಲ್ಲಿ ಅಪಜಯವನ್ನು ಹೊಂದುವನು. ದುರ್ಬಲನಾದವನು ಜಯವನ್ನು ಪಡೆಯುವನು. ಕಾಲಕ್ಕೆ ವಶನಾಗದವನಿಲ್ಲ.

೨೫. ಮನುಜರ ಜಯಾಪಜಯಗಳು ಈಶ್ವರನ ಇಚ್ಛೆಯಂತೆಯೇ ನಡೆಯುವುವು. ಶಿವನಾಗಲೀ, ಬ್ರಹ್ಮನಾಗಲೀ, ವಿಷ್ಣುವಾಗಲೀ ಕಾಲವನ್ನು ಮೀರಿ ನಡೆಯಲಾರರು.

ಉಪೇತ್ಯ ಸಂಗ್ರಾಮಮುಖಂ ಪಲಾಯನಂ
ನ ಸಾಧು ವೀರಾ ಹೃದಯೇಽನುಮನ್ವತೇ ।
ಪರಂತು ಯುದ್ಧೇ ಕಥಮೇತಯಾ ಜಯೋ
ವಿನಾಶಿತಂ ಮೇ ಸಕಲಂ ಬಲಂ ಯಯಾ ॥ ೨೬ ॥

ಇಯಂ ಹಿ ನೂನಂ ಸುರಕರ್ಮ ಸಾಧಿತುಂ
ಸಮಾಗತಾ ದೈತ್ಯಬಲಂ ಚ ಬಾಧಿತುಂ ।
ಪುರಾಣಮೂರ್ತಿಃ ಪ್ರಕೃತಿಃ ಪರಾ ಶಿವಾ
ನ ಲೌಕಿಕೀಯಂ ವನಿತಾ ಕದಾಪಿ ವಾ ॥ ೨೭ ॥

ವಧೋಽಪಿ ನಾರೀವಿಹಿತೋಽಯಶಸ್ಕರಃ
ಪ್ರಗೀಯತೇ ಯುದ್ಧರಸಂ ಲಿಲಿಕ್ಷುಭಿಃ ।
ತಥಾಪ್ಯಕೃತ್ವಾ ಸಮರಂ ಕಥಂ ಮುಖಂ
ಪ್ರದರ್ಶಯಾಮೋಽಸುರರಾಜಸನ್ನಿಧೌ ॥ ೨೮ ॥

೨೬. ವೀರನಾದ ಮನುಷ್ಯನಿಗೆ ಯುದ್ಧರಂಗಕ್ಕೆ ಕಾಲಿಟ್ಟಮೇಲೆ ಪಲಾಯನ ಮಾಡುವುದು ಯೋಗ್ಯವಾದುದಲ್ಲ, ಅವನು ಮನಸ್ಸಿನಲ್ಲಿಯೂ ಆರೀತಿ ಯೋಚಿಸುವುದಿಲ್ಲ. ಹೀಗಿರಲು ಈ ದೇವಿಯಿಂದ ನನ್ನ ಸೈನ್ಯಗಳೆಲ್ಲವೂ ನಾಶವಾಗಿ ನನಗೆ ಅಪಜಯವಾಗಲು ಕಾರಣವೇನು ?

೨೭. ಈ ದೇವಿಯು ದೇವತೆಗಳ ಕಾರ್ಯಸಿದ್ಧಿಗೋಸ್ಕರವಾಗಿಯೇ ಯುದ್ಧ ಮಾಡಲು ಬಂದಿರುವಳು. ಈಕೆಯಿಂದ ನಮ್ಮ ಸೈನ್ಯಗಳೆಲ್ಲಾ ನಾಶವಾದವು. ಇದನ್ನೆಲ್ಲಾ ನೋಡಿದರೆ ಇವಳು ಸಾಮಾನ್ಯ ಸ್ತ್ರೀಯಲ್ಲ. ಇವಳು ಪುರಾಣಮೂರ್ತಿಯು ಮತ್ತು ಪರಾಪ್ರಕೃತಿಯಾದ ಪಾರ್ವತಿಯು.

೨೮. ಯುದ್ಧವಿಶಾರದರಾದವರು ಯುದ್ಧದಲ್ಲಿ ಹೆಂಗಸಿನಿಂದ ಮಡಿದರೆ ಅಪಕೀರ್ತಿಯುಂಟಾಗುವುದೆಂದು ಹೇಳುತ್ತಾರೆ. ಆದುದರಿಂದ ಈ ಹೆಂಗಸಿನೊಡನೆ ಹೇಗೆ ಯುದ್ಧಮಾಡಲಿ ? ಅಥವಾ ಯುದ್ಧಮಾಡದೆ ನಮ್ಮ ರಾಕ್ಷಸರಾಜನಿಗೆ ನನ್ನ ಮುಖವನ್ನು ಹೇಗೆ ತೋರಿಸಲಿ ?

ವಿಚಾರಯಿತ್ವೇತಿ ಮಹಾರಥೋ ರಥಂ
ಮಹಾಂತಮಧ್ಯಾಸ್ಯ ನಿಯಂತೃಚೋದಿತಂ ।
ಯಯೌ ದ್ರುತಂ ಯತ್ರ ಮಹೇಶ್ವರಾಂಗನಾ
ಸುರಾಂಗನಾಪ್ರಾರ್ಥಿತಯೌವನೋದ್ಗಮಾ ॥ ೨೯ ॥

ಅವೋಚದೇನಾಂ ಸ ಮಹೇಶಿ ಕಿಂ ಭವೇ-
ದೇಭಿರ್ಹತೈರ್ವೇತನಜೀವಿಭಿರ್ಭಟೈಃ ।
ತವಾಸ್ತಿ ಕಾಂಕ್ಷಾ ಯದಿ ಯೋದ್ಧುಮಾವಯೋ-
ಸ್ತದಾ ರಣಃ ಸ್ಯಾದ್ಧೃತಯುದ್ಧಸತ್ಪಟೈಃ ॥ ೩೦ ॥

ಉವಾಚ ಕಾಲೀಂ ಪ್ರತಿ ಕೌಶಿಕೀ ತದಾ
ಸಮೀಕ್ಷ್ಯತಾಮೇಷ ದುರಾಗ್ರಹೋಽನಯೋಃ ।
ಕರೋತಿ ಕಾಲೋ ವಿಪದಾಗಮೇ ಮತಿಂ
ವಿಭಿನ್ನವೃತ್ತಿಂ ಸದಸತ್ಪ್ರವರ್ತಕಃ ॥ ೩೧ ॥

---

೨೯. ಮಹಾರಥನಾದ ಆ ನಿಶುಂಭನು ಈರೀತಿಯಾಗಿ ಯೋಚಿಸಿ ಒಂದು ದೊಡ್ಡ ರಥದಲ್ಲಿ ಬಂದು ಕುಳಿತನು. ಸಾರಥಿಯು ರಥವನ್ನು ನಡೆಸುತ್ತಿರಲು ಆ ನಿಶುಂಭನು ದೇವತಾಸ್ತ್ರೀಯರಿಗಿಂತಲೂ ಅತಿಶಯ ಸೌಂದರ್ಯವತಿಯಾದ ಆ ಪಾರ್ವತಿಯ ಸಮೀಪಕ್ಕೆ ಹೋಗಿ,

೩೦. ಆ ಪಾರ್ವತಿಯನ್ನು ಕುರಿತು, ಎಲೌ ಮಹೇಶಿಯೇ, ವೇತನ (ಸಂಬಳ) ವನ್ನು ತೆಗೆದುಕೊಂಡು ಅದರ ಆಶೆಗಾಗಿ ಯುದ್ಧಮಾಡುತ್ತಿರುವ ಈ ನಮ್ಮ ಸೈನಿಕರನ್ನು ಕೊಂದು ಪ್ರಯೋಜನವೇನು ? ಹಾಗೆ ನಿನಗೆ ಯುದ್ಧಮಾಡಬೇಕೆಂಬ ಇಚ್ಛೆಯಿದ್ದ ಪಕ್ಷಕ್ಕೆ ಯುದ್ಧಕವಚಗಳನ್ನು ಧರಿಸಿ ನಮ್ಮಿಬ್ಬರೊಡನೆ ಯುದ್ಧಮಾಡು ಎಂದನು.

೩೧. ಈ ಸಮಯದಲ್ಲಿ ದೇವಿಯೊಡನೆ ಇದ್ದ ಕೌಶಿಕೀದೇವಿಯು ಕಾಳಿಯನ್ನು ಕುರಿತು, ನೋಡಿಲ್ಲಿ, ಈ ದೈತ್ಯರ ದುರಹಂಕಾರವನ್ನು. ಜನರು ಸನ್ಮಾರ್ಗ ಮತ್ತು ಅಸನ್ಮಾರ್ಗದಲ್ಲಿ ಪ್ರವರ್ತಿಸಲು ಕಾಲವೇ ಕಾರಣ. ಇದೇ ಕಾಲವೇ ಮನುಷ್ಯನಿಗೆ ತೊಂದರೆಗಳು ಒದಗುವ ಸಮಯದಲ್ಲಿ ಅವನ ಬುದ್ಧಿಯನ್ನು ವ್ಯತ್ಯಾಸವನ್ನಾಗಿ ಮಾಡುವುದು. ತೊಂದರೆ ಬಂದಾಗ ಕಾಲಮಹಿಮೆಯಿಂದ ಅವನಿಗೆ ತೊಂದರೆಯುಂಟಾಯಿತೆಂಬ ಬುದ್ಧಿಯಿರುವುದಿಲ್ಲ ಎಂದು ಹೇಳಿದಳು.

ತತೋ ನಿಶುಂಭೋಽಭಿಜಘಾನ ಚಂಡಿಕಾಂ
ಶರೈಸ್ಸಹಸ್ರೈಶ್ಚ ತಥೈವ ಕಾಲಿಕಾಂ ।
ಬಿಭೇದ ಬಾಣಾನಸುರಪ್ರಚೋದಿತಾ-
ನ್ಸಹಸ್ರಖಂಡಂ ಸ್ವಶರೋತ್ಕರೈಃ ಶಿವಾ ॥ ೩೨ ॥

ತತಃ ಸಮುತ್ಥಾಯ ಕೃಪಾಣಮುಜ್ಜ್ವಲಂ
ಸ ಚರ್ಮ ಕಂಠೀರವಮೂರ್ಧ್ನ್ಯತಾಡಯತ್ ।
ಬಿಭೇದ ತಂ ಚಾಪಿ ಮಹಾಸಿನಾಂಬಿಕಾ
ಯಥಾ ಕುಠಾರೇಣ ತರುಂ ತರುಚ್ಛಿದಃ ॥ ೩೩ ॥

ಸ ಭಿನ್ನಖಡ್ಗೋ ನಿಚಖಾನ ಮಾರ್ಗಣಂ
ಪರಾಂಬಿಕಾವಕ್ಷಸಿ ಸೋಽಪಿ ಚಿಚ್ಛಿದೇ ।
ಪುನಸ್ತ್ರಿಶೂಲಂ ಹೃದಯೇಽಕ್ಷಿಪತ್ತದ-
ಪ್ಯಚೂರ್ಣಯನ್ ಮುಷ್ಟಿನಿಪಾತನೇನ ಸಾ ॥ ೩೪ ॥

ಗದಾಂ ಸಮಾದಾಯ ಪುನರ್ಮಹಾರಥೋಽ
ಪ್ಯಧಾವದಂಬಾಂ ಮರಣೋನ್ಮುಖೋಽಸುರಃ

೩೨. ಅನಂತರ ನಿಶುಂಭನು ಸಾವಿರಾರು ಬಾಣಗಳಿಂದ ಚಂಡಿಯನ್ನೂ, ಕಾಳಿಯನ್ನೂ ಹೊಡೆದನು. ಆ ರಾಕ್ಷಸನು ಬಿಟ್ಟ ಆ ಬಾಣಗಳೆಲ್ಲವನ್ನೂ ಪಾರ್ವತಿಯು ತನ್ನ ಬಾಣಗಳಿಂದ ಚೂರುಚೂರು ಮಾಡಿದಳು.

೩೩. ಅನಂತರ ನಿಶುಂಭನು ಕೋಪದಿಂದ ಉಜ್ವಲವಾದ ಕತ್ತಿಯನ್ನು ತೆಗೆದುಕೊಂಡು ದೇವಿಯ ವಾಹನವಾದ ಸಿಂಹದ ತಲೆಯ ಮೇಲೆ ಪ್ರಯೋಗಿಸಿದನು. ತಕ್ಷಣವೇ ಪಾರ್ವತಿಯು ಒಂದು ದೊಡ್ಡ ಕತ್ತಿಯಿಂದ ಕೊಡಲಿಯಿಂದ ಮರವನ್ನು ಕತ್ತರಿಸುವಂತೆ ಆ ನಿಶುಂಭನ ಕತ್ತಿಯನ್ನು ಕತ್ತರಿಸಿದಳು.

೩೪. ತನ್ನ ಕತ್ತಿಯು ಎರಡು ತುಂಡಾಗಲು ನಿಶುಂಭನು ಒಂದು ಬಾಣವನ್ನು ಅಂಬಿಕೆಯ ಎದೆಗೆ ಗುರಿಯಿಟ್ಟು ಹೊಡೆದನು. ಅಂಬಿಕೆಯು ಅದನ್ನು ತುಂಡು ಮಾಡಿದಳು. ಪುನಃ ತ್ರಿಶೂಲವನ್ನು ತೆಗೆದುಕೊಂಡು ಅಂಬಿಕೆಯ ಹೃದಯಕ್ಕೆ ಪ್ರಯೋಗಿಸಿದನು. ಅಂಬಿಕೆಯು ತನ್ನ ಮುಷ್ಟಿಯ ಏಟಿನಿಂದ ಅದನ್ನು ಪುಡಿಪುಡಿ ಮಾಡಿದಳು.

ಅಚೂರ್ಣಯತ್ತಾಮಪಿ ಶೂಲಧಾರಯಾ
ಪುನಸ್ತ್ರಿಶೂಲಂ ವಿದದಾರ ಸೋಽನ್ಯಥಾ ॥ ೩೫ ॥

ತತೋಂಬಿಕಾ ಭೀಮಭುಜಂಗಸೋಪಮೈಃ
ಸುರದ್ವಿಷಾಂ ಶೋಣಿತಚೂಷಣೋಚಿತೈಃ ।
ನಿಶುಂಭಮಾತ್ರೇಯಶಿಲೀಮುಖೈಃ ಶಿತೈ-
ರ್ನಿಹತ್ಯ ಭೂಮೌಮನಯದ್ವಿಷೋಕ್ಷಿತೈಃ ॥ ೩೬ ॥

ನಿಪಾತಿತೇಽಮಾನಬಲೇಽಸುರಪ್ರಭುಃ
ಕನೀಯಸಿ ಭ್ರಾತರಿ ರೋಷಪೂರಿತಃ ।
ರಥಸ್ಥಿತೋ ಬಾಹುಭಿರಷ್ಟಭಿರ್ವೃತೋ
ಜಗಾಮ ಯತ್ರ ಪ್ರಮದಾ ಮಹೇಶಿತುಃ ॥ ೩೭ ॥

ಅವಾದಯಚ್ಛಂಖಮರಿಂದಮಂ ತದಾ
ಧನುಸ್ಸ್ವನಂ ಚಾಪಿ ಚಕಾರ ದುಸ್ಸಹಂ ।

---

೩೫. ಪುನಃ ನಿಶುಂಭನು ಮರಣೋನ್ಮುಖನಾಗಿ ಗದೆಯನ್ನು ತೆಗೆದುಕೊಂಡು ಅಂಬಿಕೆಯ ಕಡೆಗೆ ಹೊಡೆಯಲು ಓಡಿದನು. ಆ ದೇವಿಯು ಶೂಲಾಯುಧದಿಂದ ಅವನ ಗದೆಯನ್ನು ಸೀಳಿಹಾಕಿದಳು. ಆ ನಿಶುಂಭನೂ ಪುನಃ ತ್ರಿಶೂಲವನ್ನು ಖಂಡಿಸಿದನು.

೩೬. ಅನಂತರ ಪಾರ್ವತಿಯು ರಾಕ್ಷಸರ ರಕ್ತವನ್ನು ಹೀರಲು ಘೋರವಾದ ಸರ್ಪಗಳಂತಿರುವ ಹರಿತವಾದ ಬಾಣಗಳನ್ನು ಆ ನಿಶುಂಭನ ಮೇಲೆ ಪ್ರಯೋಗಿಸಿದಳು. ಆ ವಿಷವಿದ್ಧವಾದ ಬಾಣಗಳ ಏಟನ್ನು ತಾಳಲಾರದೆ ನಿಶುಂಭನು ಭೂಮಿಯಲ್ಲಿ ಉರುಳಿದನು.

೩೭. ಪರಾಕ್ರಮಶಾಲಿಯಾದ ತನ್ನ ತಮ್ಮನು ಭೂಮಿಗೆ ಬಿದ್ದುದನ್ನು ನೋಡಿ ದೈತ್ಯರಾಜನಾದ ಶುಂಭನು ಕೋಪಾವಿಷ್ಟನಾಗಿ ತನ್ನ ಎಂಟು ಬಾಹುಗಳಲ್ಲಿಯೂ ಆಯುಧಗಳನ್ನು ಧರಿಸಿ ರಥದಲ್ಲಿ ಕುಳಿತು ಪಾರ್ವತಿಯು ಇದ್ದೆಡೆಗೆ ಬಂದನು.

೩೮. ಶತ್ರುಗಳು ಭಯಪಟ್ಟು ನಡುಗುವಂತೆ ಭಯಂಕರವಾದ ಶಂಖಧ್ವನಿಯನ್ನು ಮಾಡಿ ಧನುಷ್ಟಂಕಾರವನ್ನು ಮಾಡಿದನು. ಅದೇ ಸಮಯದಲ್ಲಿ ಸಿಂಹವೂ

ನನಾದ ಸಿಂಹೋಽಪಿ ಸಟಾಂ ವಿಧೂಯನ್
ಬಭೂವ ನಾದತ್ರಯನಾದಿತಂ ನಭಃ ॥ ೩೮ ॥

ತತೋಽಟ್ಟಹಾಸಂ ಜಗದಂಬಿಕಾಕರೋ-
ದ್ವಿತತ್ರಸುಸ್ತೇನ ಸುರಾರಯೋಽಖಿಲಾಃ ।
ಜಯೇತಿ ಶಬ್ದಂ ಜಗದುಸ್ತದಾ ಸುರಾ
ಯುದಾಂಬಿಕೋವಾಚ ರಣೇ ಸ್ಥಿರೋ ಭವ ॥ ೩೯ ॥

ಸ ದೈತ್ಯರಾಜೋ ಮಹತೀಂ ಜ್ವಲಚ್ಛಿಖಾಂ
ಮುಮೋಚ ಶಕ್ತಿಂ ನಿಹತಾ ಚ ಸೋಲ್ಕಯಾ ।
ಬಿಭೇದ ಶುಂಭಪ್ರಹಿತಾನ್ ಶರಾನ್ ಶಿವಾ
ಶಿವೇರಿತಾನ್ ಸೋಽಪಿ ಸಹಸ್ರಧಾ ಶರಾನ್ ॥ ೪೦ ॥

ತ್ರಿಶೂಲಮುತ್ಕ್ಷಿಪ್ಯ ಜಘಾನ ಚಂಡಿಕಾ
ಮಹಾಸುರಂ ತಂ ಸ ಪಪಾತ ಮೂರ್ಛಿತಃ ।

ತನ್ನ ಕೇಸರಗಳನ್ನು ಕೊಡವುತ್ತಾ ಘರ್ಜಿಸಿತು. ಈ ಮೂರು ಧ್ವನಿಗಳೂ ಸೇರಿ ಆಕಾಶದಲ್ಲೆಲ್ಲಾ ವ್ಯಾಪಿಸಿ ಪ್ರತಿಧ್ವನಿಯುಂಟಾಯಿತು.

೩೯. ಅನಂತರ ಜಗನ್ಮಾತೆಯಾದ ಪಾರ್ವತಿಯು ಅಟ್ಟಹಾಸವನ್ನು ಮಾಡಿದಳು. ಇದನ್ನು ಕಂಡು ರಾಕ್ಷಸರೆಲ್ಲಾ ನಡುಗಿದರು. ದೇವತೆಗಳೆಲ್ಲರೂ 'ಜಗದಂಬಿಕೆಗೆ ಜಯವಾಗಲಿ' ಎಂದು ಕೂಗಿದರು. ಆಗ ಅಂಬಿಕೆಯು ಶುಂಭನನ್ನು ಕುರಿತು ಯುದ್ಧಮಾಡು ನಿಲ್ಲುನಿಲ್ಲೆಂದು ಘರ್ಜಿಸಿದಳು.

೪೦. ಅನಂತರ ಶುಂಭನು ಕಿಡಿಗಳನ್ನುಗುಳುತ್ತಾ ಉಲ್ಕ (ಕೊಳ್ಳಿ) ದೊಡನಿರುವ ಒಂದು ಶಕ್ತಿಯನ್ನು ಪಾರ್ವತಿಯ ಮೇಲೆ ಪ್ರಯೋಗಿಸಿದನು. ಪಾರ್ವತಿಯು ಅದನ್ನೂ ನಾಶಮಾಡಿದಳು. ಮತ್ತು ಶುಂಭನ ಮೇಲೆ ಅನೇಕ ಬಾಣಗಳನ್ನು ಪ್ರಯೋಗಮಾಡಿದಳು. ಶುಂಭನು ಆ ಸಾವಿರಾರು ಬಾಣಗಳನ್ನೆಲ್ಲಾ ಕತ್ತರಿಸಿದನು.

೪೧. ಆಮೇಲೆ ಪಾರ್ವತಿಯು ತ್ರಿಶೂಲವನ್ನು ತೆಗೆದುಕೊಂಡು ಮಹಾಶೂರನಾದ ಶುಂಭನ ಮೇಲೆ ಪ್ರಯೋಗಿಸಿದಳು. ಇಂದ್ರನು ಪರ್ವತಗಳ ರೆಕ್ಕೆಗಳನ್ನು

ವಿಭಿನ್ನಪಕ್ಷೋ ಹರಿಣಾ ಯಥಾ ನಗಃ
ಪ್ರಕಂಪಯನ್ ದ್ಯಾಂ ವಸುಧಾಂ ಸವಾರಿಧಿಂ ॥ ೪೧ ॥

ತತೋ ಮೃಷಿತ್ವಾ ತ್ರಿಶಿಖೋದ್ಭವಾಂ ವ್ಯಥಾಂ
ವಿಧಾಯ ಬಾಹೂನಯುತಂ ಮಹಾಬಲಃ।
ಸ ಕಾಲಿಕಾಂ ಸಿಂಹಯುತಾಂ ಮಹೇಶ್ವರೀಂ
ಜಘಾನ ಚಕ್ರೈರಮರಕ್ಷಯಂಕರೈಃ ॥ ೪೨ ॥

ತದಸ್ತ್ರಚಕ್ರಾಣಿ ವಿಭಿದ್ಯ ಲೀಲಯಾ
ತ್ರಿಶೂಲಮುದ್ಗೂರ್ಯ ಜಘಾನ ಸಾಸುರಂ ।
ಶಿವಾಜಗತ್ಪಾವನಪಾಣಿಪಂಕಜಾ-
ದುಪಾತ್ಯ ಮೃತ್ಯೂಪರಮಂ ಪದಂ ಗತೌ ॥ ೪೩ ॥

**ಹತೇ ತಸ್ಮಿನ್ ಮಹಾವಿರ್ಯೇ ನಿಶುಂಭೇ ಭೀಮವಿಕ್ರಮೇ ।**
**ಶುಂಭೇ ಚ ಸಕಲಾ ದೈತ್ಯಾ ವಿವಿಶುರ್ಬಲಿಸದ್ಮನಿ ॥ ೪೪ ॥**

ಕತ್ತರಿಸಿದಾಗ ಅವು ಭೂಮಿಯ ಮೇಲೆ ಬಿದ್ದಂತೆ ಶುಂಭನು ತ್ರಿಶೂಲದಿಂದ ಹತನಾಗಿ ಭೂಮಿಯ ಮೇಲೆ ಬಿದ್ದು ಮೂರ್ಛೆಹೋದನು. ಇವನು ಬಿದ್ದ ರಭಸಕ್ಕೆ ಭೂಮ್ಯಾಕಾಶಗಳೂ ಸಮುದ್ರವೂ ಅಂತರಿಕ್ಷವೂ ನಡುಗಿ ಅಲ್ಲೋಲಕಲ್ಲೋಲವಾದವು.

೪೨. ಬಳಿಕ ಮಹಾಬಲಶಾಲಿಯಾದ ಶುಂಭನು ತ್ರಿಶೂಲದ ಏಟನ್ನು ಸಹಿಸಿ ಸ್ವಲ್ಪ ಚೇತರಿಸಿಕೊಂಡು ಹತ್ತುಸಾವಿರ ಬಾಹುಗಳನ್ನು ಧರಿಸಿಕೊಂಡು ದೇವತೆಗಳ ನಾಶವನ್ನುಂಟುಮಾಡುತ್ತಿರುವ ಚಕ್ರಾಯುಧಗಳಿಂದ ಪಾರ್ವತಿಯನ್ನೂ, ಸಿಂಹವನ್ನೂ ಹೊಡೆದನು.

೪೩. ಅವನು ಪ್ರಯೋಗಿಸಿದ ಚಕ್ರಗಳನ್ನು ಪಾರ್ವತಿಯು ಲೀಲೆಯಿಂದಲೇ ನಾಶಮಾಡಿ ತ್ರಿಶೂಲಾಯುಧದಿಂದ ಆ ಶುಂಭನನ್ನು ಇರಿದಳು. ಆ ಶುಂಭನು ಜಗತ್ಪಾವನಿಯಾದ ಪಾರ್ವತಿಯ ಕೈಯಿಂದ ಮೃತ್ಯುವನ್ನು ಹೊಂದಿ ಸದ್ಗತಿಯನ್ನು ಪಡೆದನು.

೪೪. ಮಹಾಪರಾಕ್ರಮಶಾಲಿಗಳಾದ ಶುಂಭನಿಶುಂಭಾಸುರರು ಮೃತರಾಗಲು ಉಳಿದ ದೈತ್ಯರೆಲ್ಲರೂ ಪಾತಾಳಕ್ಕೆ ಓಡಿಹೋದರು.

ಭಕ್ಷಿತಾ ಅಪರೇ ಕಾಲೀಸಿಂಹಾದ್ಯೈರಮುರದ್ವಿಷಃ ।
ಪಲಾಯಿತಾಸ್ತಥಾನ್ಯೇ ಚ ದಶದಿಕ್ಷು ಭಯಾಕುಲಾಃ ॥ ೪೫ ॥

ಬಭೂವುರ್ಮಾರ್ಗವಾಹಿನ್ಯಸ್ಸರಿತಃ ಸ್ವಚ್ಛಪಾಥಸಃ ।
ವವುರ್ವಾತಾಃ ಸುಖಸ್ಪರ್ಶಾ ನಿರ್ಮಲತ್ವಂ ಯಯೌ ನಭಃ ॥ ೪೬ ॥

ಪುನರ್ಯಾಗಃ ಸಮಾರೇಭೇ ದೇವೈರ್ಬ್ರಹ್ಮರ್ಷಿಭಿಸ್ತಥಾ ।
ಸುಖಿನಶ್ಚಾಭವನ್ ಸರ್ವೇ ಮಹೇಂದ್ರಾದ್ಯಾ ದಿವೌಕಸಃ ॥ ೪೭ ॥

ಪವಿತ್ರಂ ಪರಮಂ ಪುಣ್ಯಮುಮಾಯಾಶ್ಚರಿತಂ ಪ್ರಭೋ ।
ದೈತ್ಯರಾಜವಧೋಪೇತಂ ಶ್ರದ್ಧಯಾ ಯಃ ಸಮಭ್ಯಸೇತ್ ॥ ೪೮ ॥

ಸ ಭುಕ್ತ್ವೇಹಾಖಿಲಾನ್ ಭೋಗಾನ್ ತ್ರಿದಶೈರಪಿ ದುರ್ಲಭಾನ್ ।
ಪರತ್ರೋಮಾಲಯಂ ಗಚ್ಛನ್ಮಹಾಮಾಯಾಪ್ರಸಾದತಃ ॥ ೪೯ ॥

೪೫. ಇನ್ನೂ ಉಳಿದ ದೈತ್ಯರಲ್ಲಿ ಕಾಳಿಯು ಕೆಲವರನ್ನೂ ಸಿಂಹವು ಕೆಲವರನ್ನೂ ತಿಂದುಹಾಕಿದರು. ಮತ್ತೆ ಕೆಲವರು ಭಯಗೊಂಡು ದಿಕ್ಕುಗೆಟ್ಟು ಓಡಿಹೋದರು.

೪೬. ಆ ಸಮಯದಲ್ಲಿ ನದಿಗಳು ಸ್ವಚ್ಛವಾಗಿ ಹರಿದವು. ಮಂದಮಾರುತವು ಇಂಪಾಗಿ ಬೀಸಿತು. ಆಕಾಶವು ನಿರ್ಮಲವಾಯಿತು.

೪೭. ದೇವತೆಗಳೂ, ಬ್ರಹ್ಮಋಷಿಗಳೂ ಪುನಃ ಲೋಕಸುಖಕ್ಕೋಸ್ಕರವಾಗಿ ಯಾಗಮಾಡಿದರು. ಜನರೆಲ್ಲಾ ಸೌಖ್ಯವನ್ನು ಪಡೆದರು. ಇಂದ್ರಾದಿದೇವತೆಗಳೆಲ್ಲರೂ ಹರ್ಷವನ್ನು ತಾಳಿದರು.

೪೮-೪೯. ಅತಿ ಪವಿತ್ರವಾದ ಶುಂಭಾಸುರನ ವಧೆಯಿಂದ ಕೂಡಿರುವ ಈ ಉಮಾಚರಿತ್ರೆಯನ್ನು ಶ್ರದ್ಧೆಯಿಂದ ಓದುವವರು, ಈ ಲೋಕದಲ್ಲಿ ದೇವತೆಗಳಿಗೂ ದುರ್ಲಭವಾದ ಸುಖಗಳನ್ನನುಭವಿಸಿ ಅನಂತರ ಮಹಾಮಾಯೆಯಾದ ಪಾರ್ವತಿಯ ಅನುಗ್ರಹಕ್ಕೆ ಒಳಗಾಗಿ ಉಮಾಲಯವಾದ ಕೈಲಾಸವನ್ನು ಪಡೆಯುವರು.

॥ ಋಷಿರುವಾಚ ॥

ಏವಂ ದೇವೀ ಸಮುತ್ಪನ್ನಾ ಶುಂಭಾಸುರನಿಬರ್ಹಿಣೀ ।
ಪ್ರೋಕ್ತಾ ಸರಸ್ವತೀ ಸಾಕ್ಷಾದುಮಾಂಶಾವಿರ್ಭವಾ ನೃಪ ॥ ೫೦ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಸರಸ್ವತೀಪ್ರಾದುರ್ಭಾವವರ್ಣನಂ ನಾಮಾಷ್ಟಚತ್ವಾರಿಂಶೋಽಧ್ಯಾಯಃ



೫೦. ಮೇಧಋಷಿ ಇಂತೆಂದನು :—ಎಲೈ ರಾಜನೇ, ಈರೀತಿಯಾಗಿ ಶುಂಭ ನಿಶುಂಭರನ್ನು ಸಂಹಾರಮಾಡಿದ ಸಾಕ್ಷಾತ್ ಪಾರ್ವತಿಯ ಅಂಶಸಂಭೂತಳಾದ ಆ ದೇವಿಯೇ ಸರಸ್ವತಿಯು. ಇದು ಸರಸ್ವತಿಯ ಉತ್ಪತ್ತಿಕ್ರಮವು ಇದನ್ನು ನಿನಗೆ ಹೇಳಿರುವೆನು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಸರಸ್ವತಿಯ ಪ್ರಾದುರ್ಭಾವ ವರ್ಣನವೆಂಬ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

## ಏಕೋನಪಂಚಾಶತ್ತಮೋಽಧ್ಯಾಯಃ

॥ ಮುನಯ ಊಚುಃ ॥

ಉಮಾಯಾ ಭುವನೇಶಾನ್ಯಾಸ್ಸೂತ ತತ್ತ್ವಾರ್ಥವಿತ್ತಮ ।
ಅವತಾರಂ ಸಮಾಚಕ್ಷ್ವ ಯತೋ ಜಾತಾ ಸರಸ್ವತೀ ॥ ೧ ॥

ನಿರಾಕಾರಾಪಿ ಸಾಕಾರಾ ನಿತ್ಯಾನಂದಮಯೀ ಸತೀ ।
ಯಾ ಗೀಯತೇ ಪರಬ್ರಹ್ಮಮೂಲಪ್ರಕೃತಿರೀಶ್ವರೀ ॥ ೨ ॥

## ನಲವತ್ತೊಂಭತ್ತನೆಯ ಅಧ್ಯಾಯವು

೧. ಮುನಿಗಳು ಪ್ರಶ್ನೆಮಾಡುವರು :—ಎಲೈ ತತ್ತ್ವಾರ್ಥಜ್ಞಾನಿಯಾದ ಸೂತನೇ, ಯಾರ ಅಂಗದಿಂದ ಸರಸ್ವತಿಯು ಹುಟ್ಟಿದಳೋ ಅಂತಹ ಈಶ್ವರನ ಹೃದಯೇಶ್ವರಿಯಾದ ಉಮೆಯ ಅವತಾರವನ್ನು ನಮಗೆ ತಿಳಿಸು.

೨. ಆ ಉಮೆಯು ನಿರಾಕಾರಳಾದರೂ ಸಾಕಾರಳೆಂದೂ, ನಿತ್ಯಾನಂದಸ್ವರೂಪಳೆಂದೂ ಪ್ರಸಿದ್ಧಳಾಗಿರುವಳು. ಅವಳು ಪರಬ್ರಹ್ಮನ ಮೂಲಪ್ರಕೃತಿಯು. ಅಂತಹ ಆ ಪರಮೇಶ್ವರಿಯ ಅವತಾರವನ್ನು ದಯವಿಟ್ಟು ನಮಗೆ ತಿಳಿಸಬೇಕು ಎನ್ನಲು,

॥ ಸೂತ ಉವಾಚ ॥

ತಾಪಸಾಃ ಶೃಣುತ ಪ್ರೇಮ್ಣಾ ಚರಿತ್ರಂ ಪರಮಂ ಮಹತ್ ।
ಯಸ್ಯ ವಿಜ್ಞಾನಮಾತ್ರೇಣ ನರೋ ಯಾತಿ ಪರಾಂ ಗತಿಂ ॥ ೩ ॥

ದೇವದಾನವಯೋರ್ಯುದ್ಧಮೇಕದಾಸೀತ್ಪರಸ್ಪರಂ ।
ಮಹಾಮಾಯಾಪ್ರಭಾವೇಣಾಮರಣಾಂ ವಿಜಯೋಽಭವತ್ ॥ ೪ ॥

ತತೋಽವಲಿಪ್ತಾ ಅಮರಾಸ್ಸ್ವಪ್ರಶಂಸಾಂ ವಿತೇನಿರೇ ।
ವಯಂ ಧನ್ಯಾ ವಯಃ ಧನ್ಯಾ ಕಿಂ ಕರಿಷ್ಯಂತಿ ನೋಽಸುರಾಃ ॥ ೫ ॥

ಯೇ ಪ್ರಭಾವಂ ಸಮಾಲೋಕ್ಯಾಸ್ಮಾಕಂ ಪರಮದುಃಸಹಂ ।
ಭೀತಾ ನಾಗಾಲಯಂ ಯಾತಾ ಯಾತ ಯಾತೇತಿ ವಾದಿನಃ ॥ ೬ ॥

ಅಹೋ ಬಲಮಹೋ ತೇಜೋ ದೈತ್ಯವಂಶಕ್ಷಯಂಕರಂ ।
ಅಹೋ ಭಾಗ್ಯಂ ಸುಮನಸಾಮೇವಂ ಸರ್ವೇಽಭ್ಯವರ್ಣಯನ್ ॥ ೭ ॥

---

೩. ಸೂತಮುನಿಯು ಹೇಳುವನು :—ಎಲೈ ಮುನಿಗಳೇ, ಈ ಮಹತ್ತಾದ ಚರಿತ್ರೆಯನ್ನು ಹೇಳುವೆನು ಕೇಳಿರಿ. ಇದನ್ನು ಕೇಳುವುದರಿಂದ ಮನುಷ್ಯನು ಉತ್ಕೃಷ್ಟವಾದ ಗತಿಯನ್ನು ಪಡೆಯುವನು.

೪. ಒಂದಾನೊಂದು ಸಮಯದಲ್ಲಿ ದೇವಾಸುರರಿಗೆ ಯುದ್ಧವು ನಡೆಯಿತು. ಆಗ ಮಹಾಮಾಯೆಯ ಪ್ರಭಾವದಿಂದ ದೇವತೆಗಳಿಗೆ ವಿಜಯವು ದೊರೆಯಿತು.

೫. ಅದರಿಂದ ದೇವತೆಗಳು ಗರ್ವದಿಂದ, ನಾವೇ ಧನ್ಯರು. ರಾಕ್ಷಸರು ನಮ್ಮನ್ನೇನು ಮಾಡಬಲ್ಲರು ? ಎಂದು ತಮ್ಮತಮ್ಮನ್ನೇ ಹೊಗಳಿಕೊಂಡರು.

೬. ಆ ದೈತ್ಯರು ನಮ್ಮ ಅಸಾಧ್ಯವಾದ ಪ್ರರಾಕ್ರಮವನ್ನು ನೋಡಿ, ಇಲ್ಲಿ ನಮಗೆ ಉಳಿಗಾಲವಿಲ್ಲ. ಬೇಗನೆ ಓಡಿರಿ ಎಂದು ಹೇಳುತ್ತಾ ಪಾತಾಳಲೋಕಕ್ಕೆ ಓಡಿಹೋದರು.

೭. ರಾಕ್ಷಸರ ವಂಶವನ್ನು ನಾಶಮಾಡುವಂತಹ ನಮ್ಮ ಬಲವು ಅತ್ಯಾಶ್ಚರ್ಯಕರವಾದುದು. ದೇವತೆಗಳ ಭಾಗ್ಯವೇ ಭಾಗ್ಯವು ಎಂದು ತಮ್ಮ ಬಲವನ್ನು ತಾವೇ ಹೊಗಳಿಕೊಂಡರು.

ತತ ಆವಿರಭೂತ್ತೇಜಃ ಕೂಟರೂಪಂ ತದೈವ ಹಿ ।
ಅದೃಷ್ಟಪೂರ್ವಂ ತದ್ದೃಷ್ಟ್ವಾ ವಿಸ್ಮಿತಾ ಅಭವನ್ಸುರಾಃ ॥ ೮ ॥

ಕಿಮಿದಂ ಕಿಮಿದಂ ಚೇತಿ ರುದ್ಧಕಂಠಾಸ್ಸಮಬ್ರುವನ್ ।
ಅಜಾನಂತಃ ಪರಂ ಶ್ಯಾಮಾನುಭಾವಂ ಮಾನಭಂಜನಂ ॥ ೯ ॥

ತತ ಆಜ್ಞಾಪಯದ್ದೇವಾನ್ ದೇವಾನಾಮಧಿನಾಯಕಃ ।
ಯಾತ ಯೂಯಂ ಪರೀಕ್ಷಧ್ವಂ ಯಾಥಾತಥ್ಯೇನ ಕಿನ್ವಿತಿ ॥ ೧೦ ॥

ಸುರೇಂದ್ರಪ್ರೇರಿತೋ ವಾಯುರ್ಮಹಸಃ ಸನ್ನಿಧಿಂ ಗತಃ ।
ಕಸ್ತ್ವಂ ಭೋರಿತಿ ಸಂಬೋಧ್ಯಾವೋಚದೇನಂ ಚ ತನ್ಮಹಃ ॥ ೧೧ ॥

ಇತಿ ಪೃಷ್ಟಸ್ತದಾ ವಾಯುರ್ಮಹಸಾತಿಗರೀಯಸಾ ।
ವಾಯುರಸ್ಮಿ ಜಗತ್ಪ್ರಾಣಸ್ಸಾಭಿಮಾನೋಽಬ್ರವೀದಿದಂ ॥ ೧೨ ॥

೮. ಅನಂತರ ಅದೇ ಕ್ಷಣದಲ್ಲೇ ಹಿಂದೆಂದೂ ನೋಡದಿರುವ ಒಂದು ತೇಜಃ ಪುಂಜವು ಅಲ್ಲಿ ಉತ್ಪನ್ನವಾಯಿತು. ಅದನ್ನು ನೋಡಿ ದೇವತೆಗಳಿಗೆಲ್ಲಾ ಬಹು ಆಶ್ಚರ್ಯವಾಯಿತು.

೯. ಅಂಧಕಾರವನ್ನು ನಾಶಮಾಡುವಂತಹ ಆ ತೇಜಃಪುಂಜವನ್ನು ನೋಡಿ ಆ ದೇವತೆಗಳಿಗೆ ಏನೂ ತೋಚಲಿಲ್ಲ. ಗದ್ಗದ ಧ್ವನಿಯಿಂದ ಇದೇನು ? ಇದು ಹೇಗೆ ಉಂಟಾಯಿತು ? ಎಂಬುದಾಗಿ ಹೇಳುತ್ತಾ ಆಶ್ಚರ್ಯಗೊಂಡರು.

೧೦. ಅನಂತರ ದೇವೇಂದ್ರನು ದೇವತೆಗಳನ್ನು ಕುರಿತು, ಎಲೈ ದೇವತೆಗಳಿರಾ, ನೀವೆಲ್ಲರೂ ಹೋಗಿ ಅದೇನಿರಬಹುದೆಂದು ಪರೀಕ್ಷೆಮಾಡಿರಿ ಎಂದು ಹೇಳಿದನು.

೧೧. ಮೊದಲು ವಾಯುವು ಇಂದ್ರನ ಅಪ್ಪಣೆಯಿಂದ ಆ ತೇಜಃಪುಂಜದ ಹತ್ತಿರಕ್ಕೆ ಹೋದನು. ಆ ತೇಜಃಪುಂಜವು ಆ ವಾಯುವನ್ನು ಕುರಿತು—ಎಲೈ ನೀನು ಯಾರು ಎಂದು ಪ್ರಶ್ನೆ ಮಾಡಲು,

೧೨. ಆಗ ವಾಯುವು ನಾನು ಜಗತ್ತಿಗೆಲ್ಲಾ ಪ್ರಾಣಸ್ವರೂಪನು ಎಂದು ಗರ್ವದಿಂದ ನುಡಿದದ್ದಲ್ಲದೆ,

ಜಂಗಮಾಜಂಗಮಂ ಸರ್ವಮೋತಪ್ರೋತಮಿದಂ ಜಗತ್ ।
ಮಯ್ಯೇವ ನಿಖಿಲಾಧಾರೇ ಚಾಲಯಾಮ್ಯಖಿಲಂ ಜಗತ್ ॥ ೧೩ ॥

ತದೋವಾಚ ಮಹಾತೇಜಃ ಶಕ್ತೋಽಸಿ ಯದಿ ಚಾಲನೇ ।
ಧೃತಮೇತತ್ತೃಣಂ ವಾಯೋ ಚಾಲಯಸ್ವ ನಿಜೇಚ್ಛಯಾ ॥ ೧೪ ॥

ತತಃ ಸರ್ವಪ್ರಯತ್ನೇನಾಕರೋದ್ಯತ್ನಂ ಸದಾಗತಿಃ ।
ನ ಚಚಾಲ ಯದಾ ಸ್ಥಾನಾತ್ತದಾಸೌ ಲಜ್ಜಿತೋಽಭವತ್ ॥ ೧೫ ॥

ತೂಷ್ಣೀಂ ಭೂತ್ವಾ ತತೋ ವಾಯುರ್ಜಗಾಮೇಂದ್ರಸಭಾಂ ಪ್ರತಿ ।
ಕಥಯಾಮಾಸ ತದ್ವೃತ್ತಂ ಸ್ವಕೀಯಾಭಿಭವಾನ್ವಿತಂ ॥ ೧೬ ॥

ಸರ್ವೇಶತ್ವಂ ವಯಂ ಸರ್ವೇ ಮೃಷೈವಾತ್ಮನಿ ಮನ್ಮಹೇ ।
ನ ಪಾರಯಾಮಹೇ ಕಿಂಚಿದ್ವಿಧಾತುಂ ಕ್ಷುದ್ರವಸ್ತ್ವಪಿ ॥ ೧೭ ॥

೧೩. ಚರಾಚರಾತ್ಮಕವಾದ ಈ ಪ್ರಪಂಚವು ನನ್ನ ಆಧಾರದಿಂದಲೇ ಯಾವ ತಡೆ ಇಲ್ಲದೆ ಒಂದೇಸಮನಾಗಿ ನಡೆಯುತ್ತಿರುವುದು. ಎಲ್ಲದಕ್ಕೂ ನಾನೇ ಕಾರಣನು. ಪ್ರಪಂಚವನ್ನೆಲ್ಲಾ ನಾನೇ ನಡಿಸುತ್ತಿರುವೆನು ಎಂದು ಹೆಮ್ಮೆಯಿಂದ ಹೇಳಿದನು.

೧೪. ವಾಯುವು ನುಡಿದ ಗರ್ವಯುಕ್ತವಾದ ಮಾತನ್ನು ಕೇಳಿ, ಆ ತೇಜಃ ಪುಂಜವು ಎಲೈ ವಾಯುವೇ, ನಿನಗೆ ಅಷ್ಟು ಶಕ್ತಿ ಇದ್ದಲ್ಲಿ ಈ ಹುಲ್ಲನ್ನು ಅಲುಗಾಡಿಸು ಎಂದು ಹೇಳಿತು.

೧೫. ವಾಯುವು ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಎಷ್ಟೇ ಪ್ರಯತ್ನ ಪಟ್ಟರೂ ಆ ಹುಲ್ಲನ್ನು ಅಲುಗಾಡಿಸಲಾಗಲಿಲ್ಲ. ಆಗ ಅವನಿಗೆ ತುಂಬಾ ನಾಚಿಕೆ ಯಾಯಿತು.

೧೬. ಆ ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡು ಸುಮ್ಮನೆ ಇಂದ್ರನ ಹತ್ತಿರಕ್ಕೆ ಹೋಗಿ ಆ ತೇಜಃಪುಂಜದ ವಿಷಯವನ್ನೂ ಮತ್ತು ತನಗಾದ ಅವಮಾನ ವನ್ನೂ ಇಂದ್ರನ ಹತ್ತಿರ ಹೇಳಿಕೊಂಡನು.

೧೭. ನಾವು ಇದುವರೆವಿಗೂ ನಮ್ಮನ್ನು ಸರ್ವಜ್ಞರೆಂದು ತಿಳಿದುಕೊಂಡಿದ್ದೆವು. ಈಗ ಒಂದು ಸಣ್ಣ ಹುಲ್ಲಿನ ಮೇಲೆ ನಮ್ಮ ಶಕ್ತಿಯನ್ನು ತೋರಿಸಲಾಗಲಿಲ್ಲ ವಲ್ಲಾ ಎಂದು ಆಶ್ಚರ್ಯಪಟ್ಟು,

ತತಶ್ಚ ಪ್ರೇಷಯಾಮಾಸ ಮರುತ್ವಾನ್ಸಕಲಾನ್ಸುರಾನ್ ।
ನ ಶೇಕುಸ್ತೇ ಯದಾ ಜ್ಞಾತುಂ ತದೇಂದ್ರಃ ಸ್ವಯಮಭ್ಯಗಾತ್ ॥ ೧೮ ॥

ಮಘವಂತಮಥಾಯಾಂತಂ ದೃಷ್ಟ್ವಾ ತೇಜೋऽತಿದುಃಸಹಂ ।
ಬಭೂವಾಂತರ್ಹಿತಂ ಸದ್ಯೋ ವಿಸ್ಮಿತೋऽಭೂಚ್ಚ ವಾಸವಃ ॥ ೧೯ ॥

ಚರಿತ್ರಮೀದೃಶಂ ಯಸ್ಯ ತಮೇವ ಶರಣಂ ಶ್ರಯೇ ।
ಇತಿ ಸಂಚಿಂತಯಾಮಾಸ ಸಹಸ್ರಾಕ್ಷಃ ಪುನಃ ಪುನಃ ॥ ೨೦ ॥

ಏತಸ್ಮಿನ್ನಂತರೇ ತತ್ರ ನಿರ್ವ್ಯಾಜಕರುಣಾತನುಃ ।
ತೇಷಾಮನುಗ್ರಹಂ ಕರ್ತುಂ ಹರ್ತುಂ ಗರ್ವಂ ಶಿವಾಂಗನಾ ॥ ೨೧ ॥

ಚೈತ್ರಶುಕ್ಲನವಮ್ಯಾಂತು ಮಧ್ಯಾಹ್ನಸ್ಥೇ ದಿವಾಕರೇ ।
ಪ್ರಾದುರಾಸೀದುಮಾ ದೇವೀ ಸಚ್ಚಿದಾನಂದರೂಪಿಣೀ ॥ ೨೨ ॥

೧೮. ವಾಯುವು ದೇವತೆಗಳನ್ನೆಲ್ಲಾ ಆ ತೇಜಸ್ಸಿನ ಸಮೀಪಕ್ಕೆ ಕಳುಹಿಸಿದನು. ಅವರೆಲ್ಲರೂ ಹೋಗಿ ನೋಡಿ ಬಂದರು. ಆದರೂ ಅದರ ವಿಷಯವು ಯಾರಿಗೂ ಗೊತ್ತಾಗಲಿಲ್ಲ. ಆಗ ಇಂದ್ರನು ತಾನೇ ಅದರ ವಿಷಯವನ್ನು ತಿಳಿಯಲು ಹೊರಟನು.

೧೯. ಇಂದ್ರನು ಬರುತ್ತಿರುವುದನ್ನು ನೋಡಿ ಆ ತೇಜಸ್ಸು ಅಲ್ಲಿಯೇ ಮಾಯವಾಯಿತು. ಇದನ್ನು ನೋಡಿ ಇಂದ್ರನಿಗೆ ಬಲು ಆಶ್ಚರ್ಯವಾಯಿತು.

೨೦. ಯಾರ ಚರಿತ್ರೆಯು ಈರೀತಿ ಅದ್ಭುತವಾಗಿರುವುದೋ ಅಂತಹ ಪರಾತ್ಮವಸ್ತುವನ್ನೇ ಶರಣುಹೋಗುವೆನು ಎಂದು ಇಂದ್ರನು ಪುನಃಪುನಃ ಮನಸ್ಸಿನಲ್ಲಿ ಯೋಚಿಸಿದನು.

೨೧. ಅಷ್ಟರಲ್ಲೇ ದಯಾಮಯಿಯಾದ ಪಾರ್ವತಿಯು ಆ ದೇವತೆಗಳ ಗರ್ವವನ್ನಡಗಿಸಿ ಅವರಿಗೆ ಅನುಗ್ರಹವನ್ನು ಮಾಡಲು ಅಲ್ಲಿಗೆ ಬಂದಳು.

೨೨. ಚೈತ್ರ ಶುದ್ಧ ನವಮೀ ಮಧ್ಯಾಹ್ನದಲ್ಲಿ ಸಚ್ಚಿದಾನಂದಸ್ವರೂಪಿಣಿಯಾದ ಆ ಉಮೆಯು ಅಲ್ಲಿ ಆವಿರ್ಭವಿಸಿ ಪ್ರತ್ಯಕ್ಷಳಾದಳು.

ಮಹೋಮಧ್ಯೇ ವಿರಾಜಂತೀ ಭಾಸಯಂತೀ ದಿಶೋ ರುಚಾ ।
ಬೋಧಯಂತೀ ಸುರಾನ್ಸರ್ವಾನ್ಬ್ರಹ್ಮೈವಾಹಮಿತಿ ಸ್ಫುಟಂ　　॥ ೨೩ ॥

ಚತುರ್ಭಿರ್ದಧತೀ ಹಸ್ತೈರ್ವರಪಾಶಾಂಕುಶಾಭಯಾನ್ ।
ಶ್ರುತಿಭಿಸ್ಸೇವಿತಾ ರಮ್ಯಾ ನವಯೌವನಗರ್ವಿತಾ　　॥ ೨೪ ॥

ರಕ್ತಾಂಬರಪರೀಧಾನಾ ರಕ್ತಮಾಲ್ಯಾನುಲೇಪನಾ ।
ಕೋಟಿಕಂದರ್ಪಸಂಕಾಶಾ ಚಂದ್ರಕೋಟಿಸಮಪ್ರಭಾ　　॥ ೨೫ ॥

ವ್ಯಾಜಹಾರ ಮಹಾಮಾಯಾ ಸರ್ವಾಂತರ್ಯಾಮಿರೂಪಿಣೀ ।
ಸಾಕ್ಷಿಣೀ ಸರ್ವಭೂತಾನಾಂ ಪರಬ್ರಹ್ಮಸ್ವರೂಪಿಣೀ　　॥ ೨೬ ॥

॥ ಉಮೋವಾಚ ॥

ನ ಬ್ರಹ್ಮಾ ನ ಮುರಾರಾತಿರ್ನ ಪುರಾರಾತಿರೀಶ್ವರಃ ।
ಮದಗ್ರೇ ಗರ್ವಿತುಂ ಕಿಂಚಿತ್ಕಾ ಕಥಾನ್ಯಸುಪರ್ವಣಾಂ　　॥ ೨೭ ॥

೨೩. ತೇಜಸ್ಸಿನ ಮಧ್ಯದಲ್ಲಿ ಪ್ರಕಾಶಿಸುತ್ತಾ, ತನ್ನ ದೇಹಕಾಂತಿಯಿಂದ ದಿಕ್ಕುಗಳನ್ನೆಲ್ಲಾ ಬೆಳಗುತ್ತಾ ಇದ್ದಳು. ದೇವತೆಗಳನ್ನು ಕುರಿತು, ನಾನೇ ಬ್ರಹ್ಮವಸ್ತುವು ಎಂದು ಹೇಳುತ್ತಿದ್ದಳು.

೨೪. ಆ ದೇವಿಯು ತನ್ನ ನಾಲ್ಕು ಕೈಗಳಲ್ಲಿ ವರ, ಪಾಶ, ಅಂಕುಶ, ಅಭಯಗಳನ್ನು ಧರಿಸಿದ್ದಳು. ನಾಲ್ಕು ವೇದಗಳೂ ಅವಳನ್ನು ಸೇವಿಸುತ್ತಿದ್ದವು. ನವಯೌವನದಿಂದ ಬೆಳಗುತ್ತಿದ್ದಳು.

೨೫. ಕೆಂಪಾದ ವಸ್ತ್ರಗಳನ್ನೂ, ಕೆಂಪುಹೂವಿನ ಮಾಲೆಗಳನ್ನೂ ಧರಿಸಿ, ಕೋಟಿ ಮನ್ಮಥರಂತೆ ಪ್ರಕಾಶಿಸುತ್ತಾ ಕೋಟಿ ಚಂದ್ರಕಾಂತಿಗೆ ಸಮವಾದ ಕಾಂತಿಯಿಂದ ರಾರಾಜಿಸುತ್ತಿದ್ದಳು.

೨೬. ಸರ್ವಾಂತರ್ಯಾಮಿರೂಪಿಣಿಯಾದ ಮಹಾಮಾಯೆಯು ಸರ್ವ ಪ್ರಾಣಿಗಳಲ್ಲೂ ನೆಲಸಿರುವಳು. ಪರಬ್ರಹ್ಮಸ್ವರೂಪಿಣಿಯಾದ ಆ ಉಮೆಯು ದೇವತೆಗಳನ್ನು ಕುರಿತು ಇಂತೆಂದಳು.

೨೭. ನನ್ನೆದುರಿನಲ್ಲಿ ಬ್ರಹ್ಮನೂ, ವಿಷ್ಣುವೂ, ಮಹೇಶ್ವರನೂ ಗರ್ವಿತರಾಗಲಾರರು. ಹಾಗಿರುವಲ್ಲಿ ಇನ್ನುಳಿದ ದೇವತೆಗಳ ಪಾಡೇನು ?

ಪರಂ ಬ್ರಹ್ಮ ಪರಂ ಜ್ಯೋತಿಃ ಪ್ರಣವದ್ವಂದ್ವರೂಪಿಣೀ ।
ಅಹಮೇವಾಸ್ಮಿ ಸಕಲಂ ಮದನ್ಯೋ ನಾಸ್ತಿ ಕಶ್ಚನ ॥ ೨೮ ॥

ನಿರಾಕಾರಾಪಿ ಸಾಕಾರಾ ಸರ್ವತತ್ತ್ವಸ್ವರೂಪಿಣೀ ।
ಅಪ್ರತರ್ಕ್ಯಗುಣಾ ನಿತ್ಯಾ ಕಾರ್ಯಕಾರಣರೂಪಿಣೀ ॥ ೨೯ ॥

ಕದಾಚಿದ್ದಯಿತಾಕಾರಾ ಕದಾಚಿತ್ಪುರುಷಾಕೃತಿಃ ।
ಕದಾಚಿದುಭಯಾಕಾರಾ ಸರ್ವಾಕಾರಾಹಮೀಶ್ವರೀ ॥ ೩೦ ॥

ವಿರಂಚಿಃ ಸೃಷ್ಟಿಕರ್ತಾಹಂ ಜಗತ್ಪಾತಾಹಮಚ್ಯುತಃ ।
ರುದ್ರಃ ಸಂಹಾರಕರ್ತಾಹಂ ಸರ್ವವಿಶ್ವವಿಮೋಹಿನೀ ॥ ೩೧ ॥

ಕಾಲಿಕಾಕಮಲಾವಾಣೀಮುಖಾಃ ಸರ್ವಾ ಹಿ ಶಕ್ತಯಃ ।
ಮದಂಶಾದೇವ ಸಂಜಾತಾಸ್ತಥೇಮಾಸ್ಸಕಲಾಃ ಕಲಾಃ ॥ ೩೨ ॥

೨೮. ಪರಬ್ರಹ್ಮಸ್ವರೂಪಳೂ, ಪರಂಜ್ಯೋತಿಸ್ವರೂಪಳೂ ಸಹ ನಾನೇ. ಓಂಕಾರರೂಪಿಣಿಯೂ, ಶ್ರೀಕಾರರೂಪಿಣಿಯೂ ನಾನೇ. ಪ್ರಪಂಚದ ಸರ್ವವಿಷಯವೂ ನಾನೇ. ನನ್ನನ್ನು ಬಿಟ್ಟು ಬೇರೆ ವಸ್ತುವೇ ಇಲ್ಲ.

೨೯. ನಿರಾಕಾರಳೂ, ಸಮಯೋಚಿತವಾಗಿ ಆಕಾರವನ್ನು ಧರಿಸುವವಳೂ ನಾನೇ. ನಾನೇ ಸರ್ವಜ್ಞಾನಸ್ವರೂಪಿಣಿಯು. ಅಚಿಂತ್ಯಮಹಿಮಳು. ನಿತ್ಯಳು. ಕಾರ್ಯಕಾರಣರೂಪಿಣಿಯು. ಎಲ್ಲವೂ ನಾನೇ.

೩೦. ಕೆಲವು ಸಮಯ ಸ್ತ್ರೀರೂಪಳಾಗಿಯೂ, ಕೆಲಸಮಯ ಪುರುಷಾಕಾರಳಾಗಿಯೂ, ಕೆಲಸಮಯ ಸ್ತ್ರೀ ಮತ್ತು ಪುರುಷಾಕೃತಿಯುಳ್ಳವಳಾಗಿಯೂ, ಮತ್ತೊಮ್ಮೆ ಸರ್ವಾಕಾರಳಾಗಿಯೂ ಇರುವೆನು.

೩೧. ನಾನೇ ಜಗತ್ಸೃಷ್ಟಿಕರ್ತನಾದ ಬ್ರಹ್ಮಸ್ವರೂಪಳೂ, ಜಗತ್ಪಾಲಕನಾದ ವಿಷ್ಣುಸ್ವರೂಪಳೂ, ಜಗತ್ಸಂಹಾರಕನಾದ ರುದ್ರಸ್ವರೂಪಿಣಿಯೂ ಆಗಿರುವುದಲ್ಲದೆ ಸಮಸ್ತ ಜಗತ್ತನ್ನು ನನ್ನ ಮಾಯೆಯಿಂದ ಮೋಹಗೊಳಿಸುತ್ತಿರುವೆನು.

೩೨. ಕಾಳೀ, ಲಕ್ಷ್ಮೀ, ಸರಸ್ವತೀ ಮುಂತಾದ ಶಕ್ತಿಯರು ನನ್ನ ಅಂಶಸಂಭೂತರು ಮತ್ತು ಚತುಷ್ಷಷ್ಟಿಕಲೆಗಳೆಲ್ಲವೂ ನನ್ನ ಅಂಶಗಳೇ.

ಮತ್ಪ್ರಭಾವಾಜ್ಜಿತಾಸ್ಸರ್ವೇ ಯುಷ್ಮಾಭಿರ್ದಿತಿನಂದನಾಃ ।
ತಾಮವಿಜ್ಞಾಯ ಮಾಂ ಯೂಯಂ ವೃಥಾ ಸರ್ವೇಶಮಾನಿನಃ ॥ ೩೩ ॥

ಯಥಾ ದಾರುಮಯೀಂ ಯೋಷಾಂ ನರ್ತಯತ್ಯೈಂದ್ರಜಾಲಿಕಃ ।
ತಥೈವ ಸರ್ವಭೂತಾನಿ ನರ್ತಯಾಮ್ಯಹಮೀಶ್ವರೀ ॥ ೩೪ ॥

ಮದ್ಭಯಾದ್ವಾತಿ ಪವನಃ ಸರ್ವಂ ದಹತಿ ಹವ್ಯಭುಕ್ ।
ಲೋಕಪಾಲಾಃ ಪ್ರಕುರ್ವಂತಿ ಸ್ವಸ್ವಕರ್ಮಾಣ್ಯನಾರತಂ ॥ ೩೫ ॥

ಕದಾಚಿದ್ದೇವವರ್ಗಾಣಾಂ ಕದಾಚಿದ್ದಿತಿಜನ್ಮನಾಂ ।
ಕರೋಮಿ ವಿಜಯಂ ಸಮ್ಯಕ್ ಸ್ವತಂತ್ರಾ ನಿಜಲೀಲಯಾ ॥ ೩೬ ॥

ಅವಿನಾಶಿ ಪರಂ ಧಾಮ ಮಾಯಾತೀತಂ ಪರಾತ್ಪರಂ ।
ಶ್ರುತಯೋ ವರ್ಣಯಂತೇ ಯತ್ತದ್ರೂಪಂ ತು ಮಮೈವ ಹಿ ॥ ೩೭ ॥

೩೩. ಎಲೈ ದೇವತೆಗಳಿರಾ, ನನ್ನ ಪ್ರಭಾವದಿಂದಲೇ ಎಲ್ಲ ರಾಕ್ಷಸರೂ ಸೋತಿರುವುದು. ಅದನ್ನು ತಿಳಿಯದೆ, ನಾವೇ ಸರ್ವಸಮರ್ಥರೆಂದು ತಿಳಿದು ವ್ಯರ್ಥವಾಗಿ ಅಹಂಕಾರಪಡುತ್ತಿರುವಿರಿ.

೩೪. ಇಂದ್ರ ಜಾಲವಿದ್ಯೆಯನ್ನು ತಿಳಿದವನು ಹೇಗೆ ಮರದ ಬೊಂಬೆಯನ್ನು ಕುಣಿಸುವನೋ ಹಾಗೆ ಜಡವಾದ ಈ ಪ್ರಪಂಚದಲ್ಲಿರುವ ಪ್ರಾಣಿಗಳನ್ನೆಲ್ಲಾ ಚೈತನ್ಯರೂಪವಾದ ನನ್ನ ಶಕ್ತಿಯಿಂದ ನಾನೇ ಕುಣಿಸುತ್ತಿರುವೆನು.

೩೫. ನನ್ನ ಭಯದಿಂದಲೇ ವಾಯುವು ಚಲಿಸುವನು. ಅಗ್ನಿಯು ವಸ್ತುಗಳನ್ನೆಲ್ಲಾ ಸುಡುತ್ತಿರುವುದೂ ನನ್ನ ಭಯದಿಂದಲೇ. ಇಂದ್ರಾದಿ ಲೋಕಪಾಲಕರು ನನ್ನ ಆಜ್ಞೆಯಿಂದ ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾಗಿರುವರು.

೩೬. ಕೆಲವು ಸಮಯ ದೇವತೆಗಳಿಗೆ ವಿಜಯವನ್ನು ದೊರಕಿಸಿಕೊಡಲು ನಾನೇ ಕಾರಣಳು. ಕೆಲವು ಸಮಯ ದೈತ್ಯರಿಗೆ ವಿಜಯ ದೊರಕಬೇಕಾದರೂ ನನ್ನಿಂದಲೇ. ನಾನು ನನ್ನಿಷ್ಟಬಂದಂತೆ ಸ್ವತಂತ್ರಳಾಗಿರುವೆನು.

೩೭. ಯಾವ ರೂಪವು ನಾಶರಹಿತವಾದುದು, ತೇಜಸ್ವರೂಪವು ಎಂದು ಶ್ರುತಿಗಳು ವರ್ಣನೆಮಾಡುವವೋ ಅಂತಹ ರೂಪವುಳ್ಳವಳು ನಾನೇ.

ಸಗುಣಂ ನಿರ್ಗುಣಂ ಚೇತಿ ಮದ್ರೂಪಂ ದ್ವಿವಿಧಂ ಮತಂ ।
ಮಾಯಾಶಬಲಿತಂ ಚೈಕಂ ದ್ವಿತೀಯಂ ತದನಾಶ್ರಿತಂ ॥ ೩೮ ॥

ಏವಂ ವಿಜ್ಞಾಯ ಮಾಂ ದೇವಾಸ್ಸ್ವಂ ಸ್ವಂ ಗರ್ವಂ ವಿಹಾಯ ಚ ।
ಭಜತ ಪ್ರಣಯೋಪೇತಾಃ ಪ್ರಕೃತಿಂ ಮಾಂ ಸನಾತನೀಂ ॥ ೩೯ ॥

ಇತಿ ದೇವ್ಯಾ ವಚಃ ಶ್ರುತ್ವಾ ಕರುಣಾಗರ್ಭಿತಂ ಸುರಾಃ ।
ತುಷ್ಟುವುಃ ಪರಮೇಶಾನೀಂ ಭಕ್ತಿಸನ್ನತಕಂಧರಾಃ ॥ ೪೦ ॥

ಕ್ಷಮಸ್ವ ಜಗದೀಶಾನಿ ಪ್ರಸೀದ ಪರಮೇಶ್ವರಿ ।
ನೈವಂ ಭಯಾತ್ಕದಾಚಿನ್ನೋ ಗರ್ವೋ ಮಾತರ್ದಯಾಂ ಕುರು ॥ ೪೧ ॥

ತತಃ ಪ್ರಭೃತಿ ತೇ ದೇವಾ ಹಿತ್ವಾ ಗರ್ವಂ ಸಮಾಹಿತಾಃ ।
ಉಮಾಮಾರಾಧಯಾಮಾಸುರ್ಯಥಾಪೂರ್ವಂ ಯಥಾವಿಧಿ ॥ ೪೨ ॥

---

೩೮. ನನ್ನ ರೂಪವು ಸಗುಣವೆಂದೂ ನಿರ್ಗುಣವೆಂದೂ ಎರಡು ವಿಧವಾಗಿರುವುದು. ಸಗುಣರೂಪವು ಮಾಯೆಯಿಂದ ಕೂಡಿಯೂ ನಿರ್ಗುಣರೂಪವು ಮಾಯಾರಹಿತವಾಗಿಯೂ ಇರುವುದು.

೩೯. ಎಲೈ ದೇವತೆಗಳಿರಾ, ಈರೀತಿಯಾಗಿ ತಿಳಿದು ನಿಮ್ಮ ಗರ್ವಗಳನ್ನು ಬಿಟ್ಟು ಸನಾತನಳೂ, ನಾಶರಹಿತಳೂ, ಪ್ರಕೃತಿಸ್ವರೂಪಳೂ ಆದ ನನ್ನನ್ನು ಭಕ್ತಿಯಿಂದ ಸೇವಿಸಿರಿ ಎಂದಳು.

೪೦. ದಯಾಪೂರಿತವಾದ ದೇವಿಯ ಮಾತುಗಳನ್ನು ಕೇಳಿ ದೇವತೆಗಳು ಭಕ್ತಿಯಿಂದ ನಮಸ್ಕರಿಸಿ ಆ ಪರಮೇಶ್ವರಿಯನ್ನು ಸ್ತೋತ್ರಮಾಡಿದರು.

೪೧. ಜಗನ್ಮಾತೆಯಾದ ಓ ಪರಮೇಶ್ವರಿಯೇ ಪ್ರಸನ್ನಳಾಗು. ನಮ್ಮನ್ನು ಕ್ಷಮಿಸು. ಇನ್ನೆಂದಿಗೂ ಈರೀತಿಯಿಂದ ಗರ್ವವು ನಮಗುಂಟಾಗದಿರಲಿ. ಎಲೌ ಮಾತೆಯೇ, ನಮ್ಮ ಮೇಲೆ ದಯವನ್ನಿಡು ಎಂದು ವಿಧವಿಧವಾಗಿ ಸ್ತೋತ್ರಮಾಡಿದರು.

೪೨. ಅಂದಿನಿಂದ ಆ ದೇವತೆಗಳೆಲ್ಲರೂ ತಮ್ಮ ಗರ್ವಗಳನ್ನು ಬಿಟ್ಟು ವಿಧಿಗನುಸಾರವಾಗಿ ಹಿಂದಿನಂತೆಯೇ ಉಮೆಯನ್ನು ಪೂಜಿಸಿದರು.

**ಇತಿ ವಃ ಕಥಿತೋ ವಿಪ್ರಾ ಉಮಾಪ್ರಾದುರ್ಭವೋ ಮಯಾ ।**
**ಯಸ್ಯ ಶ್ರವಣಮಾತ್ರೇಣ ಪರಮಂ ಪದಮಶ್ನುತೇ　　॥ ೪೩**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಉಮಾಪ್ರಾದುರ್ಭಾವೋ ನಾಮೈಕೋನಪಂಚಾಶತ್ತಮೋಽಧ್ಯಾಯಃ**



೪೩. ಎಲೈ ಮುನಿಗಳಿರಾ, ಈರೀತಿಯಾಗಿ ಉಮೆಯ ಉತ್ಪತ್ತಿ ಪ್ರಕಾರವನ್ನು ನಾನು ನಿಮಗೆ ತಿಳಿಸಿರುವೆನು. ಇದನ್ನು ಕೇಳುವವರಿಗೆ ಉತ್ತಮಗತಿಯು ಪ್ರಾಪ್ತವಾಗುವುದು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಮಹಾಲಕ್ಷ್ಮಿಯ ಅವತಾರ ವರ್ಣನವೆಂಬ ನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

# ಪಂಚಾಶತ್ತಮೋಽಧ್ಯಾಯಃ

॥ ಮುನಯ ಊಚುಃ ॥

**ಶ್ರೋತುಕಾಮಾ ವಯಂ ಸರ್ವೇ ದುರ್ಗಾಚರಿತಮುತ್ತಮಂ ।**
**ಅಪರಂ ಚ ಮಹಾಪ್ರಾಜ್ಞ ತತ್ತ್ವಂ ವರ್ಣಯ ನೋಽದ್ಭುತಂ ॥ ೧ ॥**

**ಶೃಣ್ವತಾಂ ತ್ವನ್ಮುಖಾಂಭೋಜಾತ್ಕಥಾ ನಾನಾಸುಧೋಪಮಾಃ ।**
**ನ ತೃಪ್ಯತಿ ಮನೋಽಸ್ಮಾಕಂ ಸೂತ ಸರ್ವಾರ್ಥವಿತ್ತಮ ॥ ೨ ॥**

॥ ಸೂತ ಉವಾಚ ॥

**ದುರ್ಗಮಃ ಪ್ರಥಿತೋ ನಾಮ್ನಾ ರುರುಪುತ್ರೋ ಮಹಾಬಲಃ ।**
**ಬ್ರಹ್ಮಣೋ ವರದಾನೇನ ಚತಸ್ರೋಽಲಭತ ಶ್ರುತೀಃ ॥ ೩ ॥**

## ಐವತ್ತನೆಯ ಅಧ್ಯಾಯವು

೧-೨. ಋಷಿಗಳು ಸೂತಮುನಿಯನ್ನು ಕುರಿತು ಪ್ರಶ್ನೆಮಾಡುವರು :—ಎಲೈ ಸರ್ವಜ್ಞನಾದ ಮುನಿಯೇ, ನಾವು ಇದುವರೆಗೂ ಕ್ರಮವಾಗಿ ದುರ್ಗಾಚರಿತ್ರವನ್ನು ಕೇಳಿದೆವು. ನಿನ್ನ ಮುಖಕಮಲದಿಂದ ಹೊರಹೊರಡುವ ಕಥೆಗಳು ಅಮೃತಕ್ಕೆ ಸಮಾನವಾದುವುಗಳು. ಅವುಗಳನ್ನು ಎಷ್ಟು ಕೇಳಿದರೂ ನಮ್ಮ ಮನಸ್ಸಿಗೆ ತೃಪ್ತಿ ಆಗುವುದಿಲ್ಲ. ಆದುದರಿಂದ ದುರ್ಗಾವಿಷಯವಾದ ಮತ್ತೊಂದು ಚರಿತ್ರೆಯನ್ನು ಹೇಳಬೇಕು ಎಂದರು.

೩-೪. ಸೂತನಿಂತೆಂದನು :—ಪೂರ್ವದಲ್ಲಿ ರುರು ಎಂಬುವನ ಮಗನಾದ ದುರ್ಗಮನೆಂಬುವನು ಬಲಶಾಲಿಯಾಗಿ ಬ್ರಹ್ಮನ ವರದಿಂದ ನಾಲ್ಕು ವೇದಗಳಲ್ಲಿ

ದೇವಾಜೇಯಬಲಂ ಚಾಪಿ ಸಂಪ್ರಾಪ್ಯ ಜಗತೀತಲೇ ।
ಕರೋತಿ ಸ್ಮ ಬಹೂತ್ಪಾತಾನ್ ದಿವಿ ದೇವಾಶ್ಚಕಂಪಿರೇ ॥ ೪ ॥

ಸರ್ವಾ ನಷ್ಟೇಷು ವೇದೇಷು ಕ್ರಿಯಾ ನಷ್ಟಾ ಬಭೂವ ಹ ।
ಬ್ರಾಹ್ಮಣಾಶ್ಚ ದುರಾಚಾರಾ ಬಭೂವುಸ್ಸುರಾಸ್ತದಾ ॥ ೫ ॥

ನ ದಾನಂ ನ ತಪೋಽತ್ಯುಗ್ರಂ ನ ಯಾಗೋ ಹವನಂ ನ ಹಿ ।
ಅನಾವೃಷ್ಟಿಸ್ತತೋ ಜಾತಾ ಪೃಥಿವ್ಯಾಂ ಶತವಾರ್ಷಿಕೀ

ಹಾಹಾಕಾರೋ ಮಹಾನಾಸೀತ್ತ್ರಿಷು ಲೋಕೇಷು ದುಃಖಿತಾಃ ।
ಅಭವಂಶ್ಚ ಜನಾಸ್ಸರ್ವೇ ಕ್ಷುತ್ತೃಡ್ಭ್ಯಾಂ ಪೀಡಿತಾ ಭೃಶಂ ॥ ೭ ॥

ಸರಿತಸ್ಸಾಗರಾಶ್ಚೈವ ವಾಪೀಕೂಪಸರಾಂಸಿ ಚ ।
ನಿರ್ಜಲಾ ಅಭವನ್ ಸರ್ವೇ ಸಂಶುಷ್ಕಾ ವೃಕ್ಷವೀರುಧಃ ॥ ೮ ॥

---

ಪಾಂಡಿತ್ಯವನ್ನೂ ದೇವತೆಗಳೂ ತನ್ನನ್ನು ಜಯಿಸಲಾಗದಿರುವಂತಹ ಅಜೇಯತ್ವವೆಂಬ ವರವನ್ನೂ ಪಡೆದು ಜಗತ್ತಿಗೆ ತುಂಬಾ ತೊಂದರೆಯನ್ನುಂಟುಮಾಡುತ್ತಿದ್ದನು. ಇದರಿಂದ ದೇವತೆಗಳೆಲ್ಲರೂ ಹೆದರಿ ನಡುಗಿದರು.

೫. ವೇದಗಳೆಲ್ಲವು ಖಿಲವಾದವು. ಯಜ್ಞಯಾಗಾದಿ ಕರ್ಮಗಳೆಲ್ಲವೂ ನಾಶಹೊಂದಿದವು. ಬ್ರಾಹ್ಮಣರೆಲ್ಲರೂ ದುರಾಚಾರಿಗಳಾದರು. ದೇವತೆಗಳೆಲ್ಲರೂ ದುರ್ಮಾರ್ಗಿಗಳಾದರು.

೬. ಆ ಸಮಯದಲ್ಲಿ ದಾನಧರ್ಮಗಳು ನಡೆಯುತ್ತಿರಲಿಲ್ಲ. ಯಾರೂ ತಪಸ್ಸನ್ನಾಗಲೀ, ಯಜ್ಞವನ್ನಾಗಲಿ, ಹವನಗಳನ್ನಾಗಿ ಮಾಡುತ್ತಿರಲಿಲ್ಲ. ಪೃಥಿವಿಯಲ್ಲಿ ನೂರುವರ್ಷ ಪರ್ಯಂತರ ಘೋರವಾದ ಅನಾವೃಷ್ಟಿಯು ಪ್ರಾಪ್ತವಾಯಿತು.

೭. ಎಲ್ಲೆಲ್ಲೂ ಹಾಹಾಕಾರವುಂಟಾಯಿತು. ಮೂರುಲೋಕದ ಜನರೂ ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಬಹಳ ದುಃಖಪಡುತ್ತಿದ್ದರು.

೮. ನದಿ, ಸಾಗರ, ಭಾವಿ, ಹಳ್ಳ, ಸರೋವರ ಎಲ್ಲರದಲ್ಲಿಯೂ ನೀರು ಇಂಗಿ ಹೋಗಿತ್ತು. ಗಿಡ, ಮರ, ಬಳ್ಳಿಗಳೆಲ್ಲವೂ ಒಣಗಿ ನಿಂತಿದ್ದವು.

ತತೋ ದೃಷ್ಟ್ವಾ ಮಹಾದುಃಖಂ ಪ್ರಜಾನಾಂ ದೀನಚೇತಸಾಂ ।
ತ್ರಿದಶಾಶ್ಶರಣಂ ಯಾತಾ ಯೋಗಮಾಯಾಂ ಮಹೇಶ್ವರೀಂ ॥ ೯ ॥

॥ ದೇವಾ ಊಚುಃ ॥

ರಕ್ಷ ರಕ್ಷ ಮಹಾಮಾಯೇ ಸ್ವಕೀಯಾಸ್ಸಕಲಾಃ ಪ್ರಜಾಃ ।
ಕೋಪಂ ಸಂಹರ ನೂನಂ ತ್ವಂ ಲೋಕಾ ನಂಕ್ಷ್ಯಂತಿ ಚಾನ್ಯಥಾ ॥ ೧೦ ॥

ಯಥಾ ಶುಂಭೋ ಹತೋ ದೈತ್ಯೋ ನಿಶುಂಭಶ್ಚ ಮಹಾಬಲಃ ।
ಧೂಮ್ರಾಕ್ಷಶ್ಚಂಡಮುಂಡೌ ಚ ರಕ್ತಬೀಜೋ ಮಹಾಬಲಃ ॥ ೧೧ ॥

ಸಮಧುಃ ಕೈಟಭೋ ದೈತ್ಯೋ ಮಹಿಷಾಸುರ ಏವ ಚ ।
ತಥೈವಾಮುಂ ಕೃಪಾಸಿಂಧೋ ದೀನಬಂಧೋ ಜಹಿ ದ್ರುತಂ ॥ ೧೨ ॥

ಅಪರಾಧೋ ಭವತ್ಯೇವ ಬಾಲಕಾನಾಂ ಪದೇ ಪದೇ ।
ಸಹತೇ ಕೋ ಜನೋ ಲೋಕೇ ಕೇವಲಂ ಮಾತರಂ ವಿನಾ ॥ ೧೩ ॥

೯. ಇಂತಹ ದಾರುಣವಾದ ಪ್ರಜೆಗಳ ಗೋಳನ್ನು ನೋಡಿ ದೇವತೆಗಳೆಲ್ಲರೂ ಯೋಗಮಾಯೆಯಾದ ಮಹೇಶ್ವರಿಯನ್ನು ಮರೆಹೊಕ್ಕರು.

೧೦. ಎಲೌ ಮಹಾಮಾಯೆಯೇ, ನಿನ್ನ ಕೋಪವನ್ನು ಬಿಟ್ಟು ಪ್ರಜೆಗಳೆಲ್ಲರನ್ನೂ ಕಾಪಾಡು. ಇಲ್ಲದಿದ್ದರೆ ಪ್ರಜೆಗಳೆಲ್ಲರೂ ನಾಶವಾಗುವರು.

೧೧-೧೨. ಎಲೌ ಕೃಪಾನಿಧಿಯೇ, ಶುಂಭ, ನಿಶುಂಭ, ಮಹಾಬಲಶಾಲಿಗಳಾದ ಮಧುಕೈಟಭರು, ಮಹಿಷಾಸುರ ಈ ರಾಕ್ಷಸರನ್ನೂ ಧೂಮ್ರಾಕ್ಷ, ಚಂಡ, ಮುಂಡ, ರಕ್ತಬೀಜ ಇವರುಗಳನ್ನು ಹೇಗೆ ಕೊಂದೆಯೋ ಹಾಗೆಯೇ ದೀನಬಂಧುವಾದ ನೀನು ಈ ದುರ್ಗಮನನ್ನು ಜಾಗ್ರತೆಯಾಗಿ ಕೊಲ್ಲು.

೧೩. ಬಾಲಕರು ಪದೇ ಪದೇ ತಪ್ಪುಮಾಡುತ್ತಿರುವುದು ಸ್ವಭಾವವಷ್ಟೆ. ಅಂತಹ ತಪ್ಪುಗಳನ್ನು ಲೋಕದಲ್ಲಿ ತಾಯಿಯಲ್ಲದೆ ಮತ್ತಾರು ತಾನೇ ಮನ್ನಿಸುವರು?

ಯದಾ ಯದಾಭವದ್ದುಃಖಂ ದೇವಾನಾಂ ಬ್ರಹ್ಮಣಾಂ ತಥಾ ।
ತದಾ ತದಾವತೀರ್ಯಾಶು ಕುರುಷೇ ಸುಖಿನೋ ಜನಾನ್ ॥ ೧೪ ॥

ಇತಿ ವಿಕ್ಲವಿತಂ ತೇಷಾಂ ಸಮಾಕರ್ಣ್ಯ ಕೃಪಾಮಯೀ ।
ಅನಂತಾಕ್ಷಮಯಂ ರೂಪಂ ದರ್ಶಯಾಮಾಸ ಸಾಂಪ್ರತಂ ॥ ೧೫ ॥

ಧನುರ್ಬಾಣೌ ತಥಾ ಪದ್ಮಂ ನಾನಾಮೂಲಫಲಾನಿ ಚ ।
ಚತುರ್ಭಿರ್ದಧತೀ ಹಸ್ತೈಃ ಪ್ರಸನ್ನಮುಖಪಂಕಜಾ ॥ ೧೬ ॥

ತತೋ ದೃಷ್ಟ್ವಾ ಪ್ರಜಾಸ್ತ್ರಸ್ತಾಃ ಕರುಣಾಪೂರಿತೇಕ್ಷಣಾ ।
ರುರೋದ ನವ ಘಸ್ರಾಣಿ ನವ ರಾತ್ರೀಸ್ಸಮಾಕುಲಾ ೧೭

ಮೋಚಯಾಮಾಸ ದೃಷ್ಟಿಭ್ಯೋ ವಾರಿಧಾರಾಃ ಸಹಸ್ರಶಃ
ತಾಭಿಃ ಪ್ರತರ್ಪಿತಾ ಲೋಕಾ ಓಷಧ್ಯಃ ಸಕಲಾ ಅಪಿ ೧೮ ॥

೧೪. ದೇವಬ್ರಾಹ್ಮಣರಿಗೆ ಯಾವಾವ ಕಾಲದಲ್ಲಿ ದುಃಖವುಂಟಾಗುವುದೋ ಆಗಾಗ ನೀನು ಬೇಗನೆ ಅವತರಿಸಿ ಅವರುಗಳಿಗೆ ಸುಖವನ್ನುಂಟುಮಾಡುವೆ ಎಂದರು.

೧೫. ಈರೀತಿಯಾಗಿ ದುಃಖದಿಂದಾಡಿದ ಮಾತುಗಳನ್ನು ಕೇಳಿ ಕೃಪಾನಿಧಿಯಾದ ಪಾರ್ವತಿಯು ಅನೇಕ ಕಣ್ಣುಗಳುಳ್ಳ ರೂಪದಿಂದ ಪ್ರತ್ಯಕ್ಷಳಾದಳು.

೧೬. ಅವಳು ತನ್ನ ನಾಲ್ಕು ಕೈಗಳಲ್ಲಿ ಧನುರ್ಬಾಣಗಳನ್ನೂ, ಕಮಲವನ್ನೂ, ನಾನಾವಿಧವಾದ ಕಂದಮೂಲಫಲಗಳನ್ನೂ ಧರಿಸಿದ್ದಳು. ಅವಳ ಮುಖವು ಕಮಲದಂತೆ ಪ್ರಸನ್ನವಾಗಿದ್ದಿತು.

೧೭. ಆ ದೇವಿಯು ದುಃಖಿತರಾದ ಪ್ರಜೆಗಳನ್ನು ದಯಾಪೂರಿತದೃಷ್ಟಿಯಿಂದ ನೋಡಿ ಒಂಭತ್ತು ದಿನಗಳು ಮತ್ತು ಒಂಭತ್ತು ರಾತ್ರಿಗಳವರೆಗೂ ರೋದಿಸಿದಳು.

೧೮. ಆ ರೋದನದಿಂದ ಪಾರ್ವತಿಯು ಕಣ್ಣುಗಳ ಮೂಲಕ ಸಾವಿರಾರು ಕಣ್ಣೀರಿನ ಕೋಡಿಗಳು ಹರಿದವು. ಅದರಿಂದ ಜನಗಳು ತೃಪ್ತಿಹೊಂದಿದರು. ಆ ಕಣ್ಣೀರೆಲ್ಲವೂ ಓಷಧಿರೂಪಗಳಾದವು.

ಅಗಾಧತೋಯಾಸ್ಸರಿತೋ ಬಭೂವುಃ ಸಾಗರಾ ಅಪಿ ।
ರುರುಹುರ್ಧರಣೀಪೃಷ್ಠೇ ಶಾಕಮೂಲಫಲಾನಿ ಚ ॥ ೧೯ ॥

ವಿತತಾರ ಕರಸ್ಥಾನಿ ಸುಮನೇಭ್ಯಃ ಫಲಾನಿ ಚ ।
ಗೋಭ್ಯಸ್ತೃಣಾನಿ ರಮ್ಯಾಣಿ ತಥಾನ್ಯೇಭ್ಯೋ ಯಥಾರ್ಹತಃ ॥ ೨೦ ॥

ಸಂತುಷ್ಟಾ ಅಭವನ್ಸರ್ವೇ ಸದೇವದ್ವಿಜಮಾನುಷಾಃ ।
ತತೋ ಜಗಾದ ಸಾ ದೇವೀ ಕಿಮನ್ಯತ್ಕರವಾಣಿ ವಃ ॥ ೨೧ ॥

ಸಮೇತ್ಯೋಚುಸ್ತದಾ ದೇವಾ ಭವತ್ಯಾ ತೋಷಿತಾ ಜನಾಃ ।
ವೇದಾನ್ ದೇಹಿ ಕೃಪಾಂ ಕೃತ್ವಾ ದುರ್ಗಮೇಣ ಸಮಾಹೃತಾನ್ ॥ ೨೨ ॥

ತಥಾಸ್ತ್ವಿತಿ ಪ್ರಭಾಷ್ಯಾಹ ಯಾತ ಯಾತ ನಿಜಾಲಯಂ ।
ವಿತರಿಷ್ಯಾಮಿ ವೋ ವೇದಾನಚಿರೇಣೈವ ಕಾಲತಃ ॥ ೨೩ ॥

೧೯. ಆ ಕಣ್ಣೀರಿನಿಂದ ಸಮುದ್ರಗಳೂ, ಸಾಗರಗಳೂ ಉಂಟಾದವು. ಮತ್ತು ಭೂಮಿಯ ಮೇಲೆ ಮರಗಳೂ, ಗೆಡ್ಡೆಗಳೂ, ಫಲಗಳೂ ಹುಟ್ಟಿದವು.

೨೦. ತನ್ನ ಕೈಗಳಲ್ಲಿದ್ದ ಹಣ್ಣುಗಳನ್ನು ದೇವತೆಗಳಿಗೆಲ್ಲಾ ಹಂಚಿಕೊಟ್ಟಳು. ಹುಲ್ಲನ್ನು ಹಸುಗಳಿಗೂ, ಇನ್ನೂ ಕೆಲವು ಮನೋಹರವಾದ ವಸ್ತುಗಳನ್ನು ಮತ್ತೆ ಕೆಲವರಿಗೂ ಸರಿಯಾದ ರೀತಿಯಲ್ಲಿ ಹಂಚಿದಳು.

೨೧. ದೇವತೆಗಳೂ, ಬ್ರಾಹ್ಮಣರೂ, ಎಲ್ಲ ಜನಗಳೂ ಸಂತುಷ್ಟರಾದರು. ಅನಂತರ ಪಾರ್ವತಿಯು--ನಿಮಗೆ ನನ್ನಿಂದ ಮತ್ತೇನು ಆಗಬೇಕಾಗಿದೆ ಎಂದು ಕೇಳಿದಳು.

೨೨. ದೇವತೆಗಳೆಲ್ಲರೂ ಒಟ್ಟಾಗಿ ಸೇರಿ—ಜನರೆಲ್ಲರೂ ನಿನ್ನಿಂದ ತೃಪ್ತರಾಗಿರುವರು. ದಯವಿಟ್ಟು ದುರ್ಗಮನು ಅಪಹರಿಸಿರುವ ವೇದಗಳನ್ನು ಮತ್ತೆ ನಮಗೆ ಕೊಡು ಎಂದು ಹೇಳಿದರು.

೨೩. ಪಾರ್ವತಿಯು ದೇವತೆಗಳನ್ನು ಕುರಿತು ಹಾಗೆಯೇ ಆಗಲಿ. ನೀವೆಲ್ಲರೂ ನಿಮ್ಮ ನಿಮ್ಮ ಮನೆಗಳಿಗೆ ತೆರಳಿರಿ. ಜಾಗ್ರತೆಯಾಗಿ ವೇದಗಳನ್ನು ನಿಮಗೆ ಕೊಡಿಸುವೆನು ಎಂದು ಹೇಳಿದಳು.

ತತಃ ಪ್ರಮುದಿತಾ ದೇವಾಸ್ಸ್ವಂ ಸ್ವಂ ಧಾಮ ಸಮಾಯಯುಃ ।
ಸುಪ್ರಣಮ್ಯ ಜಗದ್ಯೋನಿಂ ಫುಲ್ಲೇಂದೀವರಲೋಚನಾಂ ॥ ೨೪ ॥

ತತಃ ಕೋಲಾಹಲೋ ಜಾತೋ ದಿವಿ ಭೂಮ್ಯಂತರಿಕ್ಷಕೇ ।
ತಚ್ಛ್ರುತ್ವಾ ರೌರವಃ ಸದ್ಯೋ ನ್ಯರುಣತ್ಸರ್ವತಃ ಪುರೀಂ ॥ ೨೫ ॥

ತತಸ್ತೇಜೋಮಯಂ ಚಕ್ರಂ ವಿಧಾಯ ಪರಿತಃ ಶಿವಾ ।
ರಕ್ಷಣಾರ್ಥಂ ದೇವತಾನಾಂ ಸ್ವಯಂ ತಸ್ಮಾದ್ಬಹಿರ್ಗತಾ ॥ ೨೬ ॥

ತತಸ್ಸಮಭವದ್ಯುದ್ಧಂ ದೇವ್ಯಾ ದೈತ್ಯಸ್ಯ ಚೋಭಯೋಃ ।
ವವೃಷುಃ ಸಮರೇ ಬಾಣಾನ್ನಿಶಿತಾನ್ ಕಂಕಟಚ್ಛಿದಃ ॥ ೨೭ ॥

ಏತಸ್ಮಿನ್ನಂತರೇ ತಸ್ಯಾಃ ಶರೀರಾದ್ರಮ್ಯಮೂರ್ತಯಃ ।
ಕಾಲೀ ತಾರಾ ಛಿನ್ನಮಸ್ತಾ ಶ್ರೀರ್ವಿದ್ಯಾ ಭುವನೇಶ್ವರೀ ॥ ೨೮ ॥

೨೪. ಇದನ್ನು ಕೇಳಿ ದೇವತೆಗಳು ಸಂತೋಷಗೊಂಡು ಜಗತ್ಕಾರಣಳೂ ಅರಳಿರುವ ಕನ್ನೈದಿಲೆಯಂತೆ ವಿಶಾಲವಾದ ಕಣ್ಣುಗಳುಳ್ಳವಳೂ ಆದ ಆ ಪಾರ್ವತಿಯನ್ನು ನಮಸ್ಕರಿಸುತ್ತಾ ತಂತಮ್ಮ ಮನೆಗಳಿಗೆ ತೆರಳಿದರು.

೨೫. ಆಗ ಭೂಮಿ, ಸ್ವರ್ಗ, ಆಕಾಶಗಳಲ್ಲೆಲ್ಲಾ ದೊಡ್ಡ ಕೋಲಾಹಲ ವುಂಟಾಯಿತು. ಇದನ್ನು ಕೇಳಿ ಆ ದೈತ್ಯನು ಅಮರಾವತಿಯನ್ನು ನಾಲ್ಕು ಕಡೆಗಳಿಂದಲೂ ಮುತ್ತಿದನು.

೨೬. ಅನಂತರ ಪಾರ್ವತಿಯು ದೇವತೆಗಳನ್ನು ರಕ್ಷಿಸಲು ತೇಜೋಮಯವಾದ ಚಕ್ರವನ್ನು ಹಿಡಿದುಕೊಂಡು ನಗರಿಯಿಂದ ಹೊರಹೊರಟಳು.

೨೭. ಬಳಿಕ ರಾಕ್ಷಸರಿಗೂ ದೇವಿಗೂ ಯುದ್ಧವಾಯಿತು. ಯುದ್ಧದಲ್ಲಿ ಚೂಪಾಗಿ ಶರೀರವನ್ನು ಭೇದಿಸುವಂತಹ ಬಾಣಗಳ ಮಳೆಯು ಸುರಿಯಿತು.

೨೮-೨೯. ಅಷ್ಟೇ ಸಮಯದಲ್ಲಿ ಪಾರ್ವತಿಯು ಶರೀರದಿಂದ ಮನೋಹರರಾದ ಕಾಲೀ, ತಾರಾ, ಛಿನ್ನಮಸ್ತಾ, ಶ್ರೀವಿದ್ಯಾ, ಭುವನೇಶ್ವರೀ, ಭೈರವೀ, ಬಗಲಾ,

ಭೈರವೀ ಬಗಲಾ ಧೂಮ್ರಾ ಶ್ರೀಮತ್ತ್ರಿಪುರಸುಂದರೀ ।
ಮಾತಂಗೀ ಚ ಮಹಾವಿದ್ಯಾ ನಿರ್ಗತಾ ದಶ ಸಾಯುಧಾಃ ॥ ೨೯ ॥

ಅಸಂಖ್ಯಾತಾಸ್ತತೋ ಜಾತಾ ಮಾತರೋ ದಿವ್ಯಮೂರ್ತಯಃ ।
ಚಂದ್ರಲೇಖಾಧರಾಸ್ಸರ್ವಾಸ್ಸರ್ವಾವಿದ್ಯುತ್ಸಮಪ್ರಭಾಃ ॥ ೩೦

ತತೋ ಮಾತೃಗಣೈರ್ಯುದ್ಧಂ ಪ್ರಾವರ್ತತ ಭಯಂಕರಂ ।
ರೌರವೀಯಂ ಹತಂ ತಾಭಿರ್ದಲಮಕ್ಷೌಹಿಣೀಶತಂ ॥ ೩೧ ॥

ಜಘಾನ ಸಾ ತದಾ ದೈತ್ಯಂ ದುರ್ಗಮಂ ಶೂಲಧಾರಯಾ ।
ಪಪಾತ ಧರಣೀಪೃಷ್ಠೇ ಖಾತಮೂಲದ್ರುಮೋ ಯಥಾ ॥ ೩೨ ॥

ಇತ್ಥಂ ಹತ್ವಾ ತದಾ ದೈತ್ಯಂ ದುರ್ಗಮಾಸುರನಾಮಕಂ ।
ಆದಾಯ ಚತುರೋ ವೇದಾನ್ ದದೌ ದೇವೇಭ್ಯ ಈಶ್ವರೀ ॥ ೩೩ ॥

ಧೂಮ್ರಾ, ಶ್ರೀಮತ್ತ್ರಿಪುರಸುಂದರೀ, ಮಾತಂಗೀ, ಮಹಾವಿದ್ಯಾ ಮುಂತಾದವರು ನಾನಾ ಆಯುಧಗಳನ್ನು ಹಿಡಿದು ಹೊರಹೊರಟರು.

೩೦. ಅನಂತರ ದಿವ್ಯವಾದ ಶರೀರವನ್ನು ಧರಿಸಿ ಅಸಂಖ್ಯಾತರಾದ ಮಾತೃಗಳು ಹುಟ್ಟಿದರು. ಅವರೆಲ್ಲರೂ ತಮ್ಮ ಶಿರಸ್ಸಿನಲ್ಲಿ ಚಂದ್ರನನ್ನು ಧರಿಸಿದ್ದರು. ಎಲ್ಲರೂ ಮಿಂಚಿನಂತೆ ಪ್ರಕಾಶಿಸುತ್ತಿದ್ದರು.

೩೧. ಆ ಮಾತೃಗಣಗಳೊಡನೆ ದೈತ್ಯರು ಯುದ್ಧಮಾಡಿದರು. ಆ ಅತಿ ಭಯಂಕರವಾದ ಯುದ್ಧದಲ್ಲಿ ದೈತ್ಯರ ನೂರು ಅಕ್ಷೌಹಿಣೀ ಸೈನ್ಯವು ಕೊಲ್ಲಲ್ಪಟ್ಟಿತು.

೩೨. ಆಗ ಪಾರ್ವತಿಯು ಆ ದೈತ್ಯನಾದ ದುರ್ಗಮನನ್ನು ತನ್ನ ಶೂಲಾಯುಧದಿಂದ ತಿವಿದಳು. ಆದರಿಂದ ಬುಡವನ್ನು ಕಡಿದ ಮರದಂತೆ ಅವನು ಭೂಮಿಯ ಮೇಲೆ ಉರುಳಿದನು.

೩೩. ಈರೀತಿಯಾಗಿ ಆ ದುರ್ಗಮನೆಂಬ ರಾಕ್ಷಸನನ್ನು ಕೊಂದು ಆ ಪಾರ್ವತಿಯು ನಾಲ್ಕು ವೇದಗಳನ್ನೂ ದೇವತೆಗಳಿಗೆ ಕೊಟ್ಟಳು.

॥ ದೇವಾ ಊಚುಃ ॥

ಅಸ್ಮದರ್ಥಂ ತ್ವಯಾ ರೂಪಮನಂತಾಕ್ಷಿಮಯಂ ಧೃತಂ ।
ಮುನಯಃ ಕೀರ್ತಯಿಷ್ಯಂತಿ ಶತಾಕ್ಷೀಂ ತ್ವಾಮತೋಽಂಬಿಕೇ ॥ ೩೪ ॥

ಆತ್ಮದೇಹಸಮುದ್ಭೂತೈಃ ಶಾಕೈರ್ಲೋಕಾಭೃತಾ ಯತಃ ।
ಶಾಕಂಭರೀತಿ ವಿಖ್ಯಾತಂ ತತ್ತೇ ನಾಮ ಭವಿಷ್ಯತಿ ॥ ೩೫ ॥

ದುರ್ಗಮಾಖ್ಯೋ ಮಹಾದೈತ್ಯೋ ಹತೋ ಯಸ್ಮಾತ್ತ್ವಯಾ ಶಿವೇ ।
ದುರ್ಗಾಂ ಭಗವತೀಂ ಭದ್ರಾಂ ವ್ಯಾಹರಿಷ್ಯಂತಿ ಮಾನವಾಃ ॥ ೩೬ ॥

ಯೋಗನಿದ್ರೇ ನಮಸ್ತುಭ್ಯಂ ನಮಸ್ತೇಽಸ್ತು ಮಹಾಬಲೇ ।
ನಮೋ ಜ್ಞಾನಪ್ರದೇ ತುಭ್ಯಂ ವಿಶ್ವಮಾತ್ರೇ ನಮೋ ನಮಃ ॥ ೩೭ ॥

ತತ್ತ್ವಮಸ್ಯಾದಿವಾಕ್ಯೈರ್ಯಾ ಬೋಧ್ಯತೇ ಪರಮೇಶ್ವರೀ ।
ಅನಂತಕೋಟಿಬ್ರಹ್ಮಾಂಡನಾಯಿಕಾಯೈ ನಮೋ ನಮಃ ॥ ೩೮ ॥

೩೪. ದೇವತೆಗಳಿಂತೆಂದರು :—ಎಲೌ ಅಂಬಿಕೆಯೇ, ನಮಗೋಸ್ಕರವಾಗಿ ನೀನು ಅನಂತಾಕ್ಷಿಮಯವಾದ ರೂಪವನ್ನು ಧರಿಸಿದೆ. ಆದುದರಿಂದ ಮುನಿಗಳು ನಿನ್ನನ್ನು 'ಶತಾಕ್ಷೀ' ಎಂದು ಹೊಗಳಲಿ.

೩೫. ನಿನ್ನ ದೇಹದಿಂದ ಹುಟ್ಟಿದ ಶಾಕಗಳಿಂದ ಎಂದರೆ ಕಂದಮೂಲಫಲಾದಿಗಳಿಂದ ಜನಗಳನ್ನು ರಕ್ಷಿಸಿದೆ. ಆದುದರಿಂದ ನಿನಗೆ ಶಾಕಂಭರೀ ಎಂಬ ಹೆಸರು ಬರುವುದು.

೩೬. ನೀನು ದುರ್ಗಮನೆಂಬ ಭಯಂಕರನಾದ ರಾಕ್ಷಸನನ್ನು ಕೊಂದೆ. ಆದುದರಿಂದ ನಿನ್ನನ್ನು ದುರ್ಗಾ ಎಂದು ಪೂಜ್ಯವೂ, ಮಂಗಳಕರವೂ ಆದ ಹೆಸರಿನಿಂದ ಮಾನವರು ವ್ಯವಹರಿಸುವರು.

೩೭. ಜಗನ್ಮಾತೆಯಾದ ಎಲೌ ಪಾರ್ವತಿ, ನೀನು ಎಲ್ಲರಿಗೂ ಜ್ಞಾನವನ್ನು ಕೊಡುವವಳು, ಯೋಗನಿದ್ರಾಸ್ವರೂಪಳು, ಮಹಾಬಲಶಾಲಿನಿಯು. ಇಂತಹ ನಿನಗೆ ನಮಸ್ಕಾರವು.

೩೮. ನೀನು ತತ್ತ್ವಮಸಿ ಮುಂತಾದ ವೇದಾಂತವಾಕ್ಯಗಳಿಂದ ತಿಳಿಯಲ್ಪಡುವವಳು. ಅನಂತಕೋಟಿಬ್ರಹ್ಮಾಂಡಕ್ಕೂ ಸ್ವಾಮಿಯು. ಇಂತಹ ನಿನಗೆ ನಮಸ್ಕಾರವು.

ವಾಙ್ಮನಃಕಾಯದುಷ್ಪ್ರಾಪಾಂ ಸೂರ್ಯಚಂದ್ರಾಗ್ನಿಲೋಚನಾಂ ।
ಸ್ತೋತುಂ ನ ಶಕ್ನುಮೋ ಮಾತಸ್ತ್ವತ್ಪ್ರಭಾವಾದ್ಬುಧಾ ವಯಂ ॥ ೩೯ ॥

ಮಾದೃಶಾನಸುರಾನ್ ದೃಷ್ಟ್ವಾ ಕಃ ಕುರ್ಯಾದೀದೃಶೀಂ ದಯಾಂ ।
ವರ್ಜಯಿತ್ವಾ ಸುರೇಶಾನೀಂ ಶತಾಕ್ಷೀಂ ಮಾತರಂ ವಿನಾ ॥ ೪೦ ॥

ತ್ರಿಲೋಕೀ ನಾಭಿಭೂಯೇತ ಬಾಧಾಭಿಶ್ಚ ನಿರಂತರಂ ।
ಏವಂ ಕಾರ್ಯಸ್ತ್ವಯಾ ಯತ್ನೋಽಸ್ಮಾಕಂ ವೈರಿವಿನಾಶನಂ ॥ ೪೧ ॥

॥ ದೇವ್ಯುವಾಚ ॥

ವತ್ಸಾನ್ ದೃಷ್ಟ್ವಾ ಯಥಾ ಗಾವೋ ವ್ಯಗ್ರಾ ಧಾವಂತಿ ಸತ್ವರಂ
ತಥೈವ ಭವತೋ ದೃಷ್ಟ್ವಾ ಧಾವಾಮಿ ವ್ಯಾಕುಲಾ ಸತೀ ॥ ೪೨ ॥

ಮನು ಯುಷ್ಮಾನಪಶ್ಯಂತ್ಯಾಃ ಪಶ್ಯಂತ್ಯಾ ಬಾಲಕಾನಿವ ।
ಅಪಿ ಪ್ರಾಣಾನ್ಪ್ರಿಯಚ್ಛಂತ್ಯಾಃ ಕ್ಷಣ ಏಕೋ ಯುಗಾಯತೇ ॥ ೪೩ ॥

---

೩೯. ಮಾತಿನಿಂದಲಾಗಲೀ, ಮನಸ್ಸಿನಿಂದಲಾಗಲೀ, ಶರೀರದಿಂದಲಾಗಲೀ ನಿನ್ನನ್ನು ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಸೂರ್ಯ, ಚಂದ್ರ, ಅಗ್ನಿ ಇವರೇ ನಿನ್ನ ಕಣ್ಣುಗಳು. ಇಂತಹ ನಿನ್ನನ್ನು ನಾವು ಸ್ತೋತ್ರಮಾಡಲು ಅಸಮರ್ಥರಾಗಿದ್ದೇವೆ. ಎಲೌ ತಾಯಿಯೇ, ನಿನ್ನನುಗ್ರಹದಿಂದಲೇ ನಾವು ದೇವತೆಗಳಾಗಿರುವೆವು.

೪೦. ಈ ದುಃಸ್ಥಿತಿಯಲ್ಲಿರುವ ನಮ್ಮನ್ನು ನೋಡಿ, ಮಾತೃಸ್ವರೂಪಳಾದ ನೀನು ನಮ್ಮನ್ನು ರಕ್ಷಿಸಿದೆ. ಇಂತಹ ಶತಾಕ್ಷಿದೇವಿಯಾದ ನಿನ್ನನ್ನು ಬಿಟ್ಟು ಯಾರು ತಾನೇ ನಮ್ಮ ಮೇಲೆ ದಯವನ್ನಿಡುವರು ?

೪೧. ಈಗ ನೀನು ಮೂರುಲೋಕಕ್ಕೂ ಯಾವಾಗಲೂ ತೊಂದರೆ ಬರದಂತೆ ನಮ್ಮ ವೈರಿಗಳನ್ನು ನಾಶಮಾಡಬೇಕು ಎಂದು ಪ್ರಾರ್ಥಿಸಿದರು.

೪೨. ದೇವಿಯಿಂತೆಂದಳು :—ಹಸುಗಳು ತಮ್ಮ ಕರುಗಳನ್ನು ನೋಡಿ ಹೇಗೆ ಆಸಕ್ತಿಯಿಂದ ಜಾಗ್ರತೆಯಾಗಿ ಓಡಿಬರುವವೋ ಹಾಗೆಯೇ ನಾನೂ ನಿಮ್ಮನ್ನು ನೋಡಿ ವ್ಯಾಕುಲಳಾಗಿ ಓಡಿಬಂದಿರುವೆನು.

೪೩. ನಿಮ್ಮನ್ನು ನಾನು ಬಾಲಕರಂತೆಯೂ, ನನ್ನ ಪ್ರಾಣಗಳಿಗಿಂತ ಅಧಿಕವಾದ ಪ್ರೀತಿಯಿಂದಲೂ ನೋಡುವೆನು. ನಿಮ್ಮನ್ನು ನೋಡದಿದ್ದ ಒಂದುಕ್ಷಣವೂ ಒಂದು ಯುಗದಂತೆ ಕಾಣಿಸುತ್ತದೆ.

ಕಾಪಿ ಚಿಂತಾ ನ ಕರ್ತವ್ಯಾ ಯುಷ್ಮಾಭಿರ್ಭಕ್ತಿಶಾಲಿಭಿಃ ।
ಭವತ್ಯಾಂ ಮಯಿ ತಿಷ್ಠಂತ್ಯಾಂ ಸಂಹರಂತ್ಯಾಂ ನಿಜಾಪದಃ ॥ ೪೪ ॥

ಯಥಾ ಪೂರ್ವಂ ಹತಾ ದೈತ್ಯಾ ಹನಿಷ್ಯಾಮಿ ತಥಾಸುರಾನ್ ।
ಸಂಶಯೋ ನಾತ್ರ ಕರ್ತವ್ಯಸ್ಸತ್ಯಂ ಸತ್ಯಂ ಬ್ರವೀಮ್ಯಹಂ ॥ ೪೫ ॥

ಯದಾ ಶುಂಭೋ ನಿಶುಂಭಶ್ಚಾಪರೌ ದೈತ್ಯೌ ಭವಿಷ್ಯತಃ ।
ತದಾಹಂ ನಂದಭಾರ್ಯಾಯಾಂ ಯಶೋದಾಯಾಂ ಯಶೋಮಯೀ ॥ ೪೬ ॥

ಯೋನಿಜಂ ರೂಪಮಾಸ್ಥಾಯ ಜನಿಷ್ಯೇಗೋಪಗೋಕುಲೇ ।
ಹನಿಷ್ಯಾಮ್ಯಸುರೌ ತನ್ಮಾಂ ವ್ಯಾಹರಿಷ್ಯಂತಿ ನಂದಜಾಂ ॥ ೪೭ ॥

ಭ್ರಾಮರಂ ರೂಪಮಾಸ್ಥಾಯ ವಧಿಷ್ಯಾಮ್ಯರುಣಂ ಯತಃ ।
ಭ್ರಾಮರೀತಿ ಚ ಮಾಂ ಲೋಕೇ ಕೀರ್ತಯಿಷ್ಯಂತಿ ಮಾನವಾಃ ॥ ೪೮ ॥

೪೪. ಭಕ್ತಶಾಲಿಗಳಾದ ನೀವು ಯಾವ ಯೋಚನೆಯನ್ನೂ ಮಾಡಬೇಡಿರಿ. ನಿಮ್ಮ ತೊಂದರೆಗಳನ್ನೆಲ್ಲಾ ನಾಶಮಾಡಲು ನಾನು ಇರುವಲ್ಲಿ ನಿಮಗೇತರ ಚಿಂತೆ?

೪೫. ಈಗ ನಾನು ದೈತ್ಯರನ್ನು ಹೇಗೆ ಕೊಂದಿರುವೆನೋ ಹಾಗೆಯೇ ಮುಂದೆಯೂ ದೈತ್ಯರನ್ನು ಕೊಲ್ಲುವೆನು. ಈ ವಿಷಯದಲ್ಲಿ ಸಂಶಯವನ್ನಿಡಬೇಡಿ. ಈ ಮಾತನ್ನು ಸತ್ಯವಾಗಿ ಹೇಳುತ್ತಿರುವೆನು.

೪೬. ಶುಂಭನಿಶುಂಭರು ಯಾವಾಗ ಪುನಃ ದೈತ್ಯರಾಗಿ ಹುಟ್ಟುವರೋ ಆವಾಗ ನಾನು ನಂದಪತ್ನಿಯಾದ ಯಶೋದೆಯಲ್ಲಿ ಅವತರಿಸಿ ಕೀರ್ತಿವಂತಳಾಗುವೆನು.

೪೭. ಗೋಕುಲದಲ್ಲಿ ಮನುಷ್ಯಸ್ತ್ರೀರೂಪದಿಂದ ಹುಟ್ಟಿ ಆ ಶುಂಭನಿಶುಂಭರನ್ನು ಕೊಲ್ಲುವೆನು. ಆಗ ನನ್ನನ್ನು ನಂದಜಾ ಎಂದು ಕರೆಯುವರು.

೪೮. ದುಂಬಿಯ ರೂಪವನ್ನು ಧರಿಸಿ ಅರುಣನೆಂಬುವನ್ನು ಕೊಲ್ಲುವೆನು. ಆಗ ನನ್ನನ್ನು 'ಭ್ರಾಮರೀ' ಎಂದು ಜನಗಳು ಕರೆಯುವರು.

ಕೃತ್ವಾ ಭೀಮಂ ಪುನಾ ರೂಪಂ ರಕ್ಷಾಂಸ್ಯತ್ಸ್ಯಾಮಹಂ ಯದಾ ।
ಭೀಮಾ ದೇವೀತಿ ವಿಖ್ಯಾತಂ ತನ್ಮೇ ನಾಮ ಭವಿಷ್ಯತಿ ॥ ೪೯ ॥

ಯದಾ ಯದಾಸುರೋತ್ಥ್ಯೈವಂ ಬಾಧಾ ಭುವಿ ಭವಿಷ್ಯತಿ ।
ತದಾ ತದಾವತೀರ್ಯಾಹಂ ಶಂ ಕರಿಷ್ಯಾಮ್ಯಸಂಶಯಂ ॥ ೫೦ ॥

ಯಾ ಶತಾಕ್ಷೀ ಸ್ಮೃತಾ ದೇವೀ ಸೈವ ಶಾಕಂಭರೀ ಮತಾ ।
ಸೈವ ಪ್ರಕೀರ್ತಿತಾ ದುರ್ಗಾ ವ್ಯಕ್ತಿರೇಕ್ಯೈವ ತ್ರಿಷ್ವಪಿ ॥ ೫೧

ನ ಶತಾಕ್ಷೀಸಮಾ ಕಾಚಿದ್ದಯಾಲುರ್ಭುವಿ ದೇವತಾ ।
ದೃಷ್ಟ್ವಾಽರುದತ್ಪ್ರಜಾಸ್ತಪ್ತಾ ಯಾ ನವಾಹಂ ಮಹೇಶ್ವರೀ ॥ ೫೨ ॥

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ**
**ಶತಾಕ್ಷ್ಯಾದ್ಯವತಾರವರ್ಣನಂ ನಾಮ ಪಂಚಾಶತ್ತಮೋಽಧ್ಯಾಯಃ**

---

೪೯. ಯಾವಾಗ ನಾನು ಭಯಂಕರವಾದ ರೂಪವನ್ನು ಧರಿಸಿ ರಾಕ್ಷಸರನ್ನು ಕೊಲ್ಲುವೆನೋ ಆಗ ನನಗೆ ಭೀಮಾದೇವೀ ಎಂದು ಪ್ರಸಿದ್ಧವಾದ ಹೆಸರಾಗುವುದು.

೫೦-೫೧. ಯಾವಯಾವಾಗ ಅಸುರರಿಂದ ತೊಂದರೆಯು ಉಂಟಾಗುವುದೋ ಆಗಾಗ ನಾನು ಅವತರಿಸಿ ಲೋಕಕ್ಕೆ ಮಂಗಳವನ್ನುಂಟುಮಾಡುವೆನು. ಶತಾಕ್ಷೀ ಎಂದು ಪ್ರಸಿದ್ಧಳಾದ ನಾನೇ ಶಾಕಂಭರೀ ಎಂದೂ ದುರ್ಗಾ ಎಂದೂ ಹೆಸರು ಪಡೆದರೂ ಆ ಮೂರು ರೂಪಗಳೂ ಒಂದೇ ವ್ಯಕ್ತಿಯೆಂದೂ ನನ್ನ ಸ್ವರೂಪವೆಂದೂ ತಿಳಿಯಬೇಕು.

೫೨. ದುಃಖಿತರಾದ ಪ್ರಜೆಗಳನ್ನು ನೋಡಿ ಅವರ ದುಃಖವನ್ನು ನಾಶ ಮಾಡಿದ ಮಹೇಶ್ವರಿಯೇ ನಾನು. ಇಂತಹ ಶತಾಕ್ಷೀದೇವಿಗೆ ಸಮಾನರಾದ ದೇವಿಯರು ಮತ್ತಾರೂ ಇಲ್ಲವು ಎಂದಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಉಮಾಸಂಹಿತೆಯಲ್ಲಿ ಶತಾಕ್ಷ್ಯಾದ್ಯವತಾರವರ್ಣನವೆಂಬ ಐವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಉಮಾಸಂಹಿತಾಯಾಂ

# ಏಕಪಂಚಾಶತ್ತಮೋಽಧ್ಯಾಯಃ

॥ ಮುನಯ ಊಚುಃ ॥

ವ್ಯಾಸಶಿಷ್ಯ ಮಹಾಭಾಗ ಸೂತ ಪೌರಾಣಿಕೋತ್ತಮ ।
ಅಪರಂ ಶ್ರೋತುಮಿಚ್ಛಾಮಃ ಕಿಮಪ್ಯಾಖ್ಯಾನಮೀಶತುಃ ॥ ೧ ॥

ಉಮಾಯಾ ಜಗದಂಬಾಯಾಃ ಕ್ರಿಯಾಯೋಗಮನುತ್ತಮಂ ।
ಪ್ರೋಕ್ತಂ ಸನತ್ಕುಮಾರೇಣ ವ್ಯಾಸಾಯ ಚ ಮಹಾತ್ಮನೇ ॥ ೨ ॥

## ಐವತ್ತೊಂದನೆಯ ಅಧ್ಯಾಯವು

೧. ಋಷಿಗಳು ಸೂತಮುನಿಯನ್ನು ಪ್ರಶ್ನೆಮಾಡಿದರು :—ಎಲೈ ವ್ಯಾಸ ಮುನಿಯ ಶಿಷ್ಯನಾದ ಸೂತಪುರಾಣೀಕನೇ, ಈಗ ನಾವು ಈಶ್ವರನ ಮತ್ತೊಂದು ಚರಿತ್ರೆಯನ್ನು ಕೇಳಬಯಸುತ್ತೇವೆ.

೨. ಸನತ್ಕುಮಾರನು ವ್ಯಾಸಮಹರ್ಷಿಗೆ ಹಿಂದೆ ಹೇಳಿದ ಜಗನ್ಮಾತೃವಾದ ಉಮೆಯ ಅತ್ಯುತ್ತಮವಾದ ಚರಿತ್ರೆಯನ್ನು ಕೇಳಬೇಕೆಂದಿರುವೆವು ಎಂದರು.

॥ ಸೂತ ಉವಾಚ ॥

ಧನ್ಯಾ ಯೂಯಂ ಮಹಾತ್ಮಾನೋ ದೇವೀಭಕ್ತಿದೃಢವ್ರತಾಃ ।
ಪರಾಶಕ್ತೇಃ ಪರಂ ಗುಪ್ತಂ ರಹಸ್ಯಂ ಶೃಣುತಾದರಾತ್ ॥ ೩ ॥

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ಬ್ರಹ್ಮಪುತ್ರ ಮಹಾಮತೇ ।
ಉಮಾಯಾಶ್ಚ್ಯಶ್ರೋತುಮಿಚ್ಛಾಮಿ ಕ್ರಿಯಾಯೋಗಂ ಮಹಾದ್ಭುತಂ ॥ ೪ ॥

ಕೀದೃಕ್ಷ ಲಕ್ಷಣಂ ತಸ್ಯ ಕಿಂ ಕೃತೇ ಚ ಫಲಂ ಭವೇತ್ ।
ಪ್ರಿಯಂ ಯಚ್ಚ ಪರಾಂಬಾಯಾಸ್ತದಶೇಷಂ ವದಸ್ವ ಮೇ ॥ ೫ ॥

॥ ಸನತ್ಕುಮಾರ ಉವಾಚ ॥

ದ್ವೈಪಾಯನ ಯದೇತತ್ತ್ವಂ ರಹಸ್ಯಂ ಪರಿಪೃಚ್ಛಸಿ ।
ತಚ್ಛೃಣುಷ್ವ ಮಹಾಬುದ್ಧೇ ಸರ್ವಂ ಮೇ ವರ್ಣಯಿಷ್ಯತಃ ॥ ೬ ॥

೩. ಸೂತಮುನಿ ಇಂತೆಂದನು :—ದೇವಿಯಲ್ಲಿ ಭಕ್ತಿಯುಳ್ಳ ನೀವೇ ಧನ್ಯರು. ನೀವೇ ಮಹಾತ್ಮರು. ಪರಾಶಕ್ತಿಸ್ವರೂಪಿಣಿಯಾದ ಆ ಉಮೆಯ ಅತಿರಹಸ್ಯವೂ ಪರಮಪವಿತ್ರವೂ ಆದ ಕಥೆಯನ್ನು ಹೇಳುವೆನು. ಈ ಕಥೆಯನ್ನು ಹೇಳಬೇಕೆಂದು ವ್ಯಾಸನು ಸನತ್ಕುಮಾರನನ್ನು ಕೇಳಲು ಸನತ್ಕುಮಾರನು ಹೇಳಿದುದನ್ನೇ ನಿಮಗೆ ಹೇಳುವೆನು. ಆದರದಿಂದ ಕೇಳಿರಿ.

೪. ವ್ಯಾಸನು ಸನತ್ಕುಮಾರಮುನಿಯನ್ನು ಪ್ರಶ್ನೆಮಾಡುವನು :—ಸರ್ವಜ್ಞನಾದ ಎಲೈ ಸನತ್ಕುಮಾರಮುನಿಯೇ, ನೀನು ಬ್ರಹ್ಮನ ಪುತ್ರನು. ಅತ್ಯಂತ ಮೇಧಾವಿಯು. ಆದುದರಿಂದ ಪಾರ್ವತಿಯ ಒಂದು ಅದ್ಭುತವಾದ ಕಾರ್ಯವನ್ನು ನನಗೆ ಹೇಳು.

೫. ಆ ಉಮೆಯ ಲಕ್ಷಣಗಳೇನು? ಯಾವರೀತಿ ಸೇವೆಮಾಡಿದರೆ ಆ ದೇವಿಯ ಅನುಗ್ರಹವುಂಟಾಗುವುದು? ಆ ಪರಾಂಬೆಗೆ ಇಷ್ಟವಾದುದೇನು? ಇವೆಲ್ಲವನ್ನೂ ನನಗೆ ತಿಳಿಸಬೇಕು ಎನ್ನಲು,

೬. ಸನತ್ಕುಮಾರಮುನಿಯು ಹೇಳುವನು :—ಎಲೈ ಮಹಾಮೇಧಾವಿಯಾದ ವ್ಯಾಸನೇ, ನೀನು ಉಮೆಯ ರಹಸ್ಯವಾದ ವಿಷಯವನ್ನು ಕೇಳಬಯಸುವೆ. ಆದುದರಿಂದ ನಾನದನ್ನು ವರ್ಣಿಸುವೆನು ಕೇಳು.

ಜ್ಞಾನಯೋಗಃ ಕ್ರಿಯಾಯೋಗೋ ಭಕ್ತಿಯೋಗಸ್ತಥೈವ ಚ ।
ತ್ರಯೋ ಮಾರ್ಗಾಸ್ಸಮಾಖ್ಯಾತಾಃ ಶ್ರೀಮಾತುರ್ಭಕ್ತಿಮುಕ್ತಿದಾಃ ॥ ೭ ॥

ಜ್ಞಾನಯೋಗಸ್ತು ಸಂಯೋಗಶ್ಚಿತ್ತಸ್ಯೈವಾತ್ಮನಾ ತು ಯಃ ।
ಯಸ್ತು ಬಾಹ್ಯಾರ್ಥಸಂಯೋಗಃ ಕ್ರಿಯಾಯೋಗಸ್ಸ ಉಚ್ಯತೇ ॥ ೮ ॥

ಭಕ್ತಿಯೋಗೋ ಮತೋ ದೇವ್ಯಾ ಆತ್ಮನಶ್ಚೈಕ್ಯಭಾವನಂ ।
ತ್ರಯಾಣಾಮಪಿ ಯೋಗಾನಾಂ ಕ್ರಿಯಾಯೋಗಸ್ಸ ಉಚ್ಯತೇ ॥ ೯ ॥

ಕರ್ಮಣಾ ಜಾಯತೇ ಭಕ್ತಿರ್ಭಕ್ತ್ಯಾ ಜ್ಞಾನಂ ಪ್ರಜಾಯತೇ ।
ಜ್ಞಾನಾತ್ಪ್ರಜಾಯತೇ ಮುಕ್ತಿರಿತಿ ಶಾಸ್ತ್ರೇಷು ನಿಶ್ಚಯಃ ॥ ೧೦ ॥

ಪ್ರಧಾನಂ ಕಾರಣಂ ಯೋಗೋ ವಿಮುಕ್ತೇರ್ಮುನಿಸತ್ತಮ ।
ಕ್ರಿಯಾಯೋಗಸ್ತು ಯೋಗಸ್ಯ ಪರಮಂ ಧ್ಯೇಯಸಾಧನಂ ॥ ೧೧ ॥

೭. ಜಗದಂಬಿಕೆಯ ಅನುಗ್ರಹಕ್ಕೆ ಪಾತ್ರವಾಗಲು ಜ್ಞಾನಯೋಗ, ಕ್ರಿಯಾಯೋಗ, ಭಕ್ತಿಯೋಗ ಎಂದು ಮೂರು ಮಾರ್ಗಗಳಿವೆ. ಅವು ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುತ್ತವೆ.

೮. ಆತ್ಮನಿಗೂ, ಮನಸ್ಸಿಗೂ ಸಂಯೋಗವಾಗಲು ಅದಕ್ಕೆ ಜ್ಞಾನಯೋಗವೆಂತಲೂ, ಶರೀರಕ್ಕೆ ಮತ್ತು ವಿಷಯಗಳಿಗೂ ಸಂಯೋಗವಾಗಲು ಅದಕ್ಕೆ ಕ್ರಿಯಾಯೋಗವೆಂತಲೂ ಹೆಸರು.

೯. ಆತ್ಮನಿಗೂ ಮತ್ತು ದೇವಿಗೂ ಸಂಬಂಧವಾಗಲು ಎಂದರೆ ಆತ್ಮಭಾವನೆಯಿಂದ ತನ್ನ ಚಿತ್ತವೃತ್ತಿಯಲ್ಲಿ ದೇವಿಯನ್ನೊಬ್ಬಳನ್ನೇ ಪ್ರತಿಬಿಂಬಿಸಿಕೊಂಡರೆ ಅದಕ್ಕೆ ಭಕ್ತಿಯೋಗವೆಂದು ಹೆಸರು. ಈ ಜ್ಞಾನಯೋಗ, ಕ್ರಿಯಾಯೋಗ, ಭಕ್ತಿಯೋಗಗಳೆಂಬ ಮೂರು ಯೋಗಗಳಿಗೂ ಕ್ರಿಯಾಯೋಗವೆಂತಲೇ ಸಾಮಾನ್ಯವಾದ ವ್ಯವಹಾರವಿರುವುದು.

೧೦. ಕರ್ಮದಿಂದ ಭಕ್ತಿಯೂ, ಭಕ್ತಿಯಿಂದ ಜ್ಞಾನವೂ, ಜ್ಞಾನದಿಂದ ಮುಕ್ತಿಯೂ ಲಭಿಸುವುದು ಎಂದು ಶಾಸ್ತ್ರಗಳೆಲ್ಲವೂ ಸಾರಿ ಹೇಳುವುವು.

೧೧. ಎಲೈ ಮುನಿಶ್ರೇಷ್ಠನೇ, ಮುಕ್ತಿಗೆ ಯೋಗವೇ ಮುಖ್ಯವಾದ ಕಾರಣವು ಮತ್ತು ಆ ಯೋಗಕ್ಕೆ ಕ್ರಿಯಾಯೋಗವೇ ಮುಖ್ಯವಾದ ಸಾಧನವಾಗಿರುವುದು.

ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಾವಿ ಬ್ರಹ್ಮಶಾಶ್ವತಂ ।
ಅಭಿನ್ನಂ ತದ್ವಪುರ್ಜ್ಞಾತ್ವಾ ಮುಚ್ಯತೇ ಭವಬಂಧನಾತ್ ॥ ೧೨ ॥

ಯಸ್ತು ದೇವ್ಯಾಲಯಂ ಕುರ್ಯಾತ್ಪಾಷಾಣಂ ದಾರವಂ ತಥಾ ।
ಮೃನ್ಮಯಂ ವಾಥ ಕಾಲೇಯ ತಸ್ಯ ಪುಣ್ಯಫಲಂ ಶೃಣು ॥ ೧೩ ॥

ಅಹನ್ಯಹನಿ ಯೋಗೇನ ಯಜತೋ ಯನ್ಮಹಾಫಲಂ ।
ಪ್ರಾಪ್ನೋತಿ ತತ್ಫಲಂ ದೇವ್ಯಾ ಯಃ ಕಾರಯತಿ ಮಂದಿರಂ ॥ ೧೪ ॥

ಸಹಸ್ರಕುಲಮಾಗಾಮಿ ವ್ಯತೀತಂ ಚ ಸಹಸ್ರಕಂ ।
ಸ ತಾರಯತಿ ಧರ್ಮಾತ್ಮಾ ಶ್ರೀಮಾತುರ್ಧಾಮ ಕಾರಯನ್ ॥ ೧೫ ॥

ಕೋಟಿಜನ್ಮಕೃತಂ ಪಾಪಂ ಸ್ವಲ್ಪಂ ವಾ ಯದಿ ವಾ ಬಹು ।
ಶ್ರೀಮಾತುರ್ಮಂದಿರಾರಂಭಕ್ಷಣಾದೇವ ಪ್ರಣಶ್ಯತಿ ॥ ೧೬ ॥

೧೨. ಪ್ರಕೃತಿಯೇ ಮಾಯೆಯೆಂದೂ, ನಾಶರಹಿತವಾದ ಪರಬ್ರಹ್ಮವೇ ಆ ಮಾಯೆಗೆ ಕಾರಣವೆಂದೂ ತಿಳಿಯಬೇಕು. ಅನಂತರ ಪ್ರಕೃತಿಯೂ ಬ್ರಹ್ಮನೂ ಒಂದೇ ಎಂಬ ಜ್ಞಾನವುಂಟಾಗಲು ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಮೋಕ್ಷವನ್ನು ಹೊಂದಬಹುದು.

೧೩. ಯಾರು ದೇವಿಯ ಮಂದಿರ (ದೇವಸ್ಥಾನ) ವನ್ನು ಕಲ್ಲಿನಿಂದಲಾಗಲೀ, ಮರದಿಂದಾಗಲೀ, ಮಣ್ಣಿನಿಂದಾಗಲೀ, ಲೋಹದಿಂದಲಾಗಲೀ ನಿರ್ಮಿಸುವರೋ ಅವರಿಗೆ ಬರುವ ಪುಣ್ಯಫಲವನ್ನು ಹೇಳುವೆನು ಕೇಳು.

೧೪. ದೇವಿಯ ದೇವಸ್ಥಾನವನ್ನು ಕಟ್ಟಿಸುವವನಿಗೆ ಪ್ರತಿದಿನವೂ ಯೋಗದಿಂದ ದೇವಿಯನ್ನು ಪೂಜಿಸಿದರೆ ಎಷ್ಟು ಫಲವು ಬರುವುದೋ ಅಷ್ಟು ಫಲವು ಬರುವುದು.

೧೫. ದೇವಿಯ ದೇವಸ್ಥಾನವನ್ನು ನಿರ್ಮಿಸಿದ ಮಹಾತ್ಮನು ತನ್ನ ಹಿಂದಿನ ಸಹಸ್ರಕುಲವನ್ನೂ ಮುಂದೆ ಸಹಸ್ರಕುಲವನ್ನೂ ಉದ್ಧಾರಮಾಡುವನು.

೧೬. ದೇವಸ್ಥಾನವನ್ನು ಕಟ್ಟಿಸಲು ಪ್ರಾರಂಭಮಾಡಿದ ಕೂಡಲೇ ಕೋಟಿ ಜನ್ಮಗಳಿಂದಾರ್ಜಿಸಿದ ಪಾಪಗಳು ಸ್ವಲ್ಪವೇ ಆಗಲಿ, ಹೆಚ್ಚಾಗಿರಲಿ ಎಲ್ಲವೂ ತಕ್ಷಣ ನಾಶವನ್ನೈದುವವು.

ನದೀಷು ಚ ಯಥಾ ಗಂಗಾ ಶೋಣಃ ಸರ್ವನದೇಷು ಚ ।
ಕ್ಷಮಾಯಾಂ ಚ ಯಥಾ ಪೃಥ್ವೀ ಗಾಂಭೀರ್ಯೇ ಚ ಯಥೋದಧಿಃ ॥ ೧೭ ॥

ಗ್ರಹಾಣಾಂ ಚ ಸಮಸ್ತಾನಾಂ ಯಥಾ ಸೂರ್ಯೋ ವಿಶಿಷ್ಯತೇ ।
ತಥಾ ಸರ್ವೇಷು ದೇವೇಷು ಶ್ರೀಪರಾಂಬಾ ವಿಶಿಷ್ಯತೇ ॥ ೧೮ ॥

ಸರ್ವದೇವೇಷು ಸಾ ಮುಖ್ಯಾ ಯಸ್ತಸ್ಯಾಃ ಕಾರಯೇದ್ಗೃಹಂ ।
ಪ್ರತಿಷ್ಠಾಂ ಸಮವಾಪ್ನೋತಿ ಸ ಚ ಜನ್ಮನಿ ಜನ್ಮನಿ ॥ ೧೯ ॥

ವಾರಾಣಾಸ್ಯಾಂ ಕುರುಕ್ಷೇತ್ರೇ ಪ್ರಯಾಗೇ ಪುಷ್ಕರೇ ತಥಾ ।
ಗಂಗಾಸಮುದ್ರತೀರೇ ಚ ನೈಮಿಷೇಽಮರಕಂಟಕೇ ॥ ೨೦ ॥

ಶ್ರೀಪರ್ವತೇ ಮಹಾಪುಣ್ಯೇ ಗೋಕರ್ಣೇ ಜ್ಞಾನಪರ್ವತೇ ।
ಮಥುರಾಯಾಮಯೋಧ್ಯಾಯಾಂ ದ್ವಾರಾವತ್ಯಾಂ ತಥೈವ ಚ ॥ ೨೧ ॥

ಇತ್ಯಾದಿಪುಣ್ಯದೇಶೇಷು ಯತ್ರ ಕುತ್ರ ಸ್ಥಲೇಽಪಿ ವಾ ।
ಕಾರಯನ್ಮಾತುರಾವಾಸಂ ಮುಕ್ತೋ ಭವತಿ ಬಂಧನಾತ್ ॥ ೨೨ ॥

೧೭-೧೮. ನದಿಗಳಲ್ಲೆಲ್ಲಾ ಗಂಗಾನದಿಯೂ, ನದಗಳಲ್ಲೆಲ್ಲಾ ಶೋಣಾನದವೂ, ಸಹನಶೀಲರಲ್ಲೆಲ್ಲಾ ಪೃಥಿವಿಯೂ, ಗಾಂಭೀರ್ಯದಲ್ಲೆಲ್ಲಾ ಸಮುದ್ರವೂ, ಗ್ರಹಗಳಲ್ಲೆಲ್ಲಾ ಸೂರ್ಯನೂ ಹೇಗೆ ಶ್ರೇಷ್ಠರೋ ಹಾಗೆ ದೇವತೆಗಳಲ್ಲೆಲ್ಲಾ ಪರಾಂಬಿಕೆಯಾದ ಪಾರ್ವತಿಯು ಶ್ರೇಷ್ಠಳು.

೧೯. ದೇವತೆಗಳಲ್ಲೆಲ್ಲಾ ಮುಖ್ಯಳಾದ ಉಮೆಯ ದೇವಾಲಯವನ್ನು ಕಟ್ಟಿಸುವವರು ಜನ್ಮಜನ್ಮಗಳಲ್ಲಿಯೂ ಗೌರವವನ್ನು ಪಡೆಯುವರು.

೨೦-೨೨. ಕಾಶಿ, ಕುರುಕ್ಷೇತ್ರ, ಪ್ರಯಾಗ, ಪುಷ್ಕರ, ಗಂಗಾತೀರ, ಸಮುದ್ರತೀರ, ನೈಮಿಷ, ಅಮರಕಂಟಕ, ಶ್ರೀಪರ್ವತ, ಗೋಕರ್ಣ, ಜ್ಞಾನಪರ್ವತ, ಮಥುರಾ, ಅಯೋಧ್ಯೆ, ದ್ವಾರಾವತೀ ಇವೇ ಮೊದಲಾದ ಪುಣ್ಯದೇಶಗಳಲ್ಲಿ ಎಲ್ಲಾದರೂ ಸರಿಯೇ ದೇವಿಗಾಗಿ ದೇವಾಲಯವನ್ನು ಕಟ್ಟಿಸಿದರೆ ಕಟ್ಟಿಸಿದವನು ಸಂಸಾರದಿಂದ ಬಿಡಲ್ಪಟ್ಟು ಮುಕ್ತಿಯನ್ನು ಹೊಂದುವನು.

ಇಷ್ಟಕಾನಾಂ ತು ವಿನ್ಯಾಸೋ ಯಾವದ್ವರ್ಷಾಣಿ ತಿಷ್ಠತಿ ।
ತಾವದ್ವರ್ಷಸಹಸ್ರಾಣಿ ಮಣಿದ್ವೀಪೇ ಮಹೀಯತೇ ॥ ೨೩ ॥

ಪ್ರತಿಮಾಃ ಕಾರಯೇದ್ಯಸ್ತು ಸರ್ವಲಕ್ಷಣಲಕ್ಷಿತಾಃ ।
ಸ ಉಮಾಯಾಃ ಪರಂ ಲೋಕಂ ನಿರ್ಭಯೋ ವ್ರಜತಿ ಧ್ರುವಂ ॥ ೨೪ ॥

ದೇವೀಮೂರ್ತಿಂ ಪ್ರತಿಷ್ಠಾಪ್ಯ ಶುಭರ್ತುಗ್ರಹತಾರಕೇ ।
ಕೃತಕೃತ್ಯೋ ಭವೇನ್ಮರ್ತ್ಯೋ ಯೋಗಮಾಯಾಪ್ರಸಾದತಃ ॥ ೨೫ ॥

ಯೇ ಭವಿಷ್ಯಂತಿ ಯೇಽತೀತಾ ಆಕಲ್ಪಾತ್ಪುರುಷಾಃ ಕುಲೇ ।
ತಾಂಸ್ತಾಂಸ್ತಾರಯತೇ ದೇವ್ಯಾ ಮೂರ್ತಿಂ ಸಂಸ್ಥಾಪ್ಯ ಶೋಭನಾಂ ॥ ೨೬ ॥

ತ್ರಿಲೋಕೀಸ್ಥಾಪನಾತ್ಪುಣ್ಯಂ ಯದ್ಭವೇನ್ಮುನಿಪುಂಗವ ।
ತತ್ಕೋಟಿಗುಣಿತಂ ಪುಣ್ಯಂ ಶ್ರೀದೇವೀಸ್ಥಾಪನಾದ್ಭವೇತ್ ॥ ೨೭ ॥

೨೩. ನಿರ್ಮಿಸಿದ ದೇವಾಲಯದ ಇಟ್ಟಿಗೆಗಳು ಎಷ್ಟು ವರ್ಷಗಳಿರುವುವೋ ಅಷ್ಟು ಸಹಸ್ರ ವರ್ಷಗಳವರೆಗೆ ನಿರ್ಮಿಸಿದವನು ಮಣಿದ್ವೀಪದಲ್ಲಿ ವಾಸಿಸುವನು.

೨೪. ಯಾರು ಉಮೆಯ ಪ್ರತಿಮೆಯನ್ನು ಸರ್ವಲಕ್ಷಣಸಂಪನ್ನವಾಗಿ ಮಾಡಿಸುವರೋ ಅವರು ನಿರ್ಭಯರಾಗಿ ಶಾಶ್ವತವಾದ ಕೈಲಾಸವನ್ನು ಹೊಂದುವರು.

೨೫. ಶುಭವಾದ ಋತು, ಗ್ರಹ, ನಕ್ಷತ್ರ ಇವುಗಳು ಕೂಡಿರುವಾಗ ದೇವಿಯ ಮೂರ್ತಿಯನ್ನು ಪ್ರತಿಷ್ಠೆಮಾಡುವ ಮನುಷ್ಯರು ದೇವಿಯ ಅನುಗ್ರಹವನ್ನು ಪಡೆದು ಕೃತಾರ್ಥರಾಗುವರು.

೨೬. ಮಂಗಳಕರವಾದ ದೇವಿಯ ಮೂರ್ತಿಯನ್ನು ಪ್ರತಿಷ್ಠೆಮಾಡುವವರು ಕಲ್ಪಾದಿಯಿಂದ ಹಿಡಿದು ತಮ್ಮ ಕುಲದಲ್ಲಿ ಹಿಂದೆ ಹುಟ್ಟಿದ್ದ, ಮುಂದೆ ಹುಟ್ಟುವ ಜನರನ್ನು ಉದ್ಧಾರಮಾಡುವರು.

೨೭. ಎಲೈ ಮುನಿಶ್ರೇಷ್ಠನೇ, ಮೂರು ಲೋಕವನ್ನೂ ನಿರ್ಮಿಸಿದರೆ ಎಷ್ಟು ಪುಣ್ಯ ಬರುವುದೋ ಅದರ ಕೋಟಿಯಷ್ಟು ಪುಣ್ಯವು ಈ ದೇವಿಯನ್ನು ಪ್ರತಿಷ್ಠಿಸುವುದರಿಂದ ಬರುವುದು.

**ಮಧ್ಯೇ ದೇವೀಂ ಸ್ಥಾಪಯಿತ್ವಾ ಪಂಚಾಯತನದೇವತಾಃ ।**
**ಚತುರ್ದಿಕ್ಷು ಸ್ಥಾಪಯೇದ್ಯಸ್ತಸ್ಯ ಪುಣ್ಯಂ ನ ಗಣ್ಯತೇ ॥ ೨೮ ॥**

**ವಿಷ್ಣೋರ್ನಾಮ್ನಾಂ ಕೋಟಿಜಪಾದ್ಗ್ರಹಣೇ ಚಂದ್ರಸೂರ್ಯಯೋಃ ।**
**ಯತ್ಫಲಂ ಲಭತೇ ತಸ್ಮಾಚ್ಛತಕೋಟಿಗುಣೋತ್ತರಂ ॥ ೨೯ ॥**

**ಶಿವನಾಮ್ನೋ ಜಪಾದೇವ ತಸ್ಮಾತ್ಕೋಟಿಗುಣೋತ್ತರಂ ।**
**ಶ್ರೀದೇವೀನಾಮಜಾಪಾತ್ತು ತತಃ ಕೋಟಿಗುಣೋತ್ತರಂ ॥ ೩೦**

**ದೇವ್ಯಾಃ ಪ್ರಾಸಾದಕರಣಾತ್ಪುಣ್ಯಂ ತು ಸಮವಾಪ್ಯತೇ ।**
**ಸ್ಥಾಪಿತಾ ಯೇನ ಸಾ ದೇವೀ ಜಗನ್ಮಾತಾ ತ್ರಯೀಮಯೀ ॥ ೩೧**

**ನ ತಸ್ಯ ದುರ್ಲಭಂ ಕಿಂಚಿಚ್ಛ್ರೀಮಾತುಃ ಕರುಣಾವಶಾತ್ ।**
**ವರ್ಧತೇ ಪುತ್ರಪೌತ್ರಾದ್ಯಾ ನಶ್ಯತ್ಯಖಿಲಕಲ್ಮಲಂ ॥ ೩೨ ॥**

೨೮. ಮಧ್ಯಭಾಗದಲ್ಲಿ ದೇವಿಯನ್ನು ಪ್ರತಿಷ್ಠೆಮಾಡಿ ಸುತ್ತಲೂ ನಾಲ್ಕು ದಿಕ್ಕಿನಲ್ಲಿ ಗೌರಿ, ಗಣೇಶ, ವಿಷ್ಣು, ಈಶ್ವರ ಎಂಬ ಈ ಪಂಚಾಯತನ ದೇವತೆಗಳನ್ನು ಯಾರು ಪ್ರತಿಷ್ಠೆಮಾಡುವರೋ ಅವರ ಪುಣ್ಯವು ಇಷ್ಟೆಂದು ಹೇಳಲಾಗುವುದಿಲ್ಲ.

೨೯. ಚಂದ್ರಗ್ರಹಣ ಮತ್ತು ಸೂರ್ಯಗ್ರಹಣಗಳಲ್ಲಿ ಒಂದುಕೋಟಿ ವಿಷ್ಣು ನಾಮ ಜಪವನ್ನು ಮಾಡಿದರೆ ಎಷ್ಟು ಪುಣ್ಯಬರುವುದೋ ಅದಕ್ಕಿಂತ ಹತ್ತುಕೋಟಿ ಯಷ್ಟು ಅಧಿಕವಾದ ಫಲವು ದೇವಿಯ ಸ್ತೋತ್ರದಿಂದ ಬರುವುದು.

೩೦. ಶಿವನಾಮಜಪವನ್ನು ಮಾಡಿದರೆ ಎಷ್ಟು ಪುಣ್ಯವುಂಟಾಗುವುದೋ ಅದರ ಕೋಟಿಯಷ್ಟು ಪುಣ್ಯವು ಶ್ರೀದೇವಿಯ ನಾಮಜಪದಿಂದ ಬರುವುದು. ಮತ್ತು ದೇವಿಗೆ ದೇವಾಲಯವನ್ನು ಕಟ್ಟಿಸಿದರೂ ಸಹ ಶಿವನಾಮಜಪದಿಂದ ಬಂದ ಪುಣ್ಯದ ಕೋಟಿ ಯಷ್ಟು ಉತ್ತಮವಾದ ಫಲವು ಬರುವುದು.

೩೧-೩೨. ವೇದಮಯಿಯೂ ಜಗನ್ಮಾತೆಯೂ ಆದ ಆ ದೇವಿಯನ್ನು ಯಾರು ದೇವಾಲಯದಲ್ಲಿ ಪ್ರತಿಷ್ಠೆಮಾಡುವರೋ ಅವರಿಗೆ ಆ ದೇವಿಯ ಅನುಗ್ರಹದಿಂದ ಯಾವುದರ ಕೊರತೆಯೂ ಇರುವುದಿಲ್ಲ. ಅವರಿಗೆ ಮಕ್ಕಳು, ಮೊಮ್ಮಕ್ಕಳು ಮುಂತಾದ ಸಂತಾನಗಳು ಹೆಚ್ಚುವವು. ಅವರ ಪಾಪವೆಲ್ಲವೂ ನಾಶವಾಗುವುದು.

ಮನಸಾ ಯೇ ಚಿಕೀರ್ಷಂತಿ ಮೂರ್ತಿಸ್ಥಾಪನಮುತ್ತಮಂ ।
ತೇಽಪ್ಯುಮಾಯಾಃ ಪರಂ ಲೋಕಂ ಪ್ರಯಾಂತಿ ಮುನಿದುರ್ಲಭಂ ॥೩೩॥

ಕ್ರಿಯಮಾಣಂ ತು ಯಃ ಪ್ರೇಕ್ಷ್ಯ ಚೇತಸಾ ಹ್ಯನುಚಿಂತಯೇತ್ ।
ಕಾರಯಿಷ್ಯಾಮ್ಯಹಂ ಯರ್ಹಿ ಸಂಪನ್ಮೇ ಸಂಭವಿಷ್ಯತಿ ॥ ೩೪ ॥

ಏವಂ ತಸ್ಯ ಕುಲಂ ಸದ್ಯೋ ಯಾತಿ ಸ್ವರ್ಗಂ ನ ಸಂಶಯಃ ।
ಮಹಾಮಾಯಾಪ್ರಭಾವೇಣ ದುರ್ಲಭಂ ಕಿಂ ಜಗತ್ತ್ರಯೇ ॥ ೩೫ ॥

ಶ್ರೀಪರಾಂಬಾಂ ಜಗದ್ಯೋನಿಂ ಕೇವಲಂ ಯೇ ಸಮಾಶ್ರಿತಾಃ ।
ತೇ ಮನುಷ್ಯಾ ನ ಮಂತವ್ಯಾಸ್ಸಾಕ್ಷಾದ್ದೇವೀಗಣಾಶ್ಚ ತೇ ॥ ೩೬ ॥

ಯೇ ವ್ರಜಂತಃ ಸ್ವಪಂತಶ್ಚ ತಿಷ್ಠಂತೋ ವಾಪ್ಯಹರ್ನಿಶಂ ।
ಉಮೇತಿ ದ್ವ್ಯಕ್ಷರಂ ನಾಮ ಬ್ರುವತೇ ತೇ ಶಿವಾಗಣಾಃ ॥ ೩೭ ॥

೩೩. ಯಾರು ದೇವಿಯ ಪ್ರತಿಮೆಯನ್ನು ಸ್ಥಾಪಿಸಲು ಮನಸ್ಸುಮಾಡುವರೋ ಅವರು ಉತ್ತಮವಾದ ಮುನಿಗಳಿಗೂ ದೊರಕದ ಉಮೆಯ ಲೋಕವನ್ನು ಪಡೆಯುವರು.

೩೪-೩೫. ಕಟ್ಟಿಸಿರುವ ದೇವಿಯ ದೇವಾಲಯವನ್ನು ನೋಡಿ ಯಾವ ಮನುಷ್ಯನು ಮನಸ್ಸಿನಲ್ಲಿ, ನನಗೂ ಸಂಪತ್ತು ಒದಗಿದಾಗ ಇಂತಹ ದೇವಾಲಯವನ್ನು ಕಟ್ಟಿಸುವೆನು ಎಂದು ಯೋಚಿಸುವನೋ ಅವನು ತನ್ನ ವಂಶದವರೊಡನೆ ಸ್ವರ್ಗವನ್ನು ಪಡೆಯುವನು. ಈ ವಿಷಯದಲ್ಲಿ ಸಂಶಯವಿಲ್ಲ. ಅವರಿಗೆ ಮಹಾಮಾಯೆಯ ಅನುಗ್ರಹದಿಂದ ದುರ್ಲಭವಾದುದು ಯಾವುದು ತಾನೇ ಇರುವುದು?

೩೬. ಜಗತ್ಕಾರಣಳಾದ ಶ್ರೀಪರಾಂಬೆಯನ್ನೇ ಯಾರು ಆಶ್ರಯಿಸುವರೋ ಅವರು ಮನುಷ್ಯರಾದರೂ ಅವರಿಗೆ ಮನುಷ್ಯರೆಂದು ಹೆಸರು ಹೋಗಿ ದೇವಿಯ ಗಣದವರೆಂದು ವ್ಯವಹಾರವುಂಟಾಗುವುದು.

೩೭. ಯಾರು ನಡೆಯುವಾಗಲೂ, ಕುಳಿತಿರುವಾಗಲೂ, ಮಲಗಿರುವ ಸಮಯದಲ್ಲಿಯೂ 'ಉಮೆ' ಎಂಬ ಎರಡಕ್ಷರವನ್ನು ಉಚ್ಚರಿಸುವರೋ ಅವರು ದೇವಿಯ ಗಣಗಳಲ್ಲಿ ಸೇರಿದವರಾಗುವರು.

ನಿತ್ಯೇ ನೈಮಿತ್ತಿಕೇ ದೇವೀಂ ಯೇ ಯಜಂತಿ ಪರಾಂ ಶಿವಾಂ ।
ಪುಷ್ಪಧೂಪೈಸ್ತಥಾ ದೀಪೈಸ್ತೇ ಪ್ರಯಾಸ್ಯಂತ್ಯುಮಾಲಯಂ ॥ ೩೮ ॥

ಯೇ ದೇವೀಮಂಡಪಂ ನಿತ್ಯಂ ಗೋಮಯೇನ ಮೃದಾಥವಾ ।
ಉಪಲಿಂಪಂತಿ ಮಾರ್ಜಂತಿ ತೇ ಪ್ರಯಾಸ್ಯಂತ್ಯುಮಾಲಯಂ ॥ ೩೯ ॥

ಯೈರ್ದೇವ್ಯಾ ಮಂದಿರಂ ರಮ್ಯಂ ನಿರ್ಮಾಪಿತಮನುತ್ತಮಂ ।
ತತ್ಕುಲೀನಾನ್ ಜನಾನ್ ಮಾತಾ ಹ್ಯಾಶಿಷಃ ಸಂಪ್ರಯಚ್ಛತಿ ॥ ೪೦ ॥

ಮದೀಯಾಃ ಶತವರ್ಷಾಣಿ ಜೀವಂತು ಪ್ರೇಮಭಾಗ್ಜನಾಃ ।
ನಾಪದಾಮಯನಾನೀತ್ಥಂ ಶ್ರೀಮಾತಾ ವಕ್ತ್ಯಹರ್ನಿಶಂ ॥ ೪೧ ॥

ಯೇನ ಮೂರ್ತಿರ್ಮಹಾದೇವ್ಯಾ ಉಮಾಯಾಃ ಕಾರಿತಾ ಶುಭಾ ।
ನರಾಯುತಂ ತತ್ಕುಲಜಂ ಮಣಿದ್ವೀಪೇ ಮಹೀಯತೇ ॥ ೪೨ ॥

೩೮. ಯಾರು ಉಮೆಯನ್ನು ನಿತ್ಯ ಪೂಜಾವಿಧಿಯಿಂದಲಾಗಲಿ, ನೈಮಿತ್ತಿಕ ವಿಧಾನದಿಂದಾಗಲಿ ಪುಷ್ಪ, ಧೂಪ, ದೀಪಗಳಿಂದ ಪೂಜಿಸುವರೋ ಅವರು ಉಮೆಯ ಲೋಕವನ್ನು ಪಡೆಯುವರು.

೩೯. ದೇವಿಯ ದೇವಾಲಯವನ್ನು ಸಗಣಿಯಿಂದಲಾಗಲೀ, ಮಣ್ಣಿನಿಂದ ಲಾಗಲೀ ಯಾರು ಸಾರಿಸುವರೋ ಅಥವಾ ತೊಳೆಯುವರೋ ಅವರು ದೇವಿಯ ಲೋಕವನ್ನು ಪಡೆಯುವರು.

೪೦-೪೧. ಯಾರು ದೇವಿಯ ದೇವಸ್ಥಾನವನ್ನು ರಮ್ಯವಾಗಿ ನಿರ್ಮಿಸುವರೋ ಅವರಿಗೂ ಜಗನ್ಮಾತೆಯಾದ ದೇವಿಯು—ನನ್ನ ಭಕ್ತರು ಯಾವ ಆಪತ್ತನ್ನೂ ಹೊಂದದೆ ನೂರು ವರ್ಷಗಳಕಾಲ ಸುಖವಾಗಿ ಬದುಕಲಿ ಎಂದು ಆಶೀರ್ವಾದ ಮಾಡುವಳು.

೪೨. ಮಹಾದೇವಿಯಾದ ಉಮೆಯ ಮಂಗಳಕರವಾದ ಮೂರ್ತಿಯನ್ನು ಮಾಡಿಸುವವನ ಕುಲದವರೂ ಸಹಸ್ರ ವರ್ಷಗಳಕಾಲ ಮಣಿದ್ವೀಪದಲ್ಲಿ ವಾಸ ಮಾಡುವರು.

ಸ್ಥಾಪಯಿತ್ವಾ ಮಹಾಮಾಯಾಮೂರ್ತಿಂ ಸಮ್ಯಕ್ಪ್ರಪೂಜ್ಯ ಚ ।
ಯಂ ಯಂ ಪ್ರಾರ್ಥಯತೇ ಕಾಮಂ ತಂ ತಂ ಪ್ರಾಪ್ನೋತಿ ಸಾಧಕಃ
॥ ೪೩ ॥

ಯಃ ಸ್ನಾಪಯತಿ ಶ್ರೀಮಾತುಃ ಸ್ಥಾಪಿತಾಂ ಮೂರ್ತಿಮುತ್ತಮಾಂ ।
ಘೃತೇನ ಮಧುನಾಕ್ತೇನ ತತ್ಫಲಂ ಗಣಯೇತ್ತು ಕಃ ॥ ೪೪ ॥

ಚಂದನಾಗರುಕರ್ಪೂರಮಾಂಸೀಮುಸ್ತಾದಿಯುಗ್ಜಲೈಃ ।
ಏಕವರ್ಣಗವಾಂ ಕ್ಷೀರೈಃ ಸ್ನಾಪಯೇತ್ಪರಮೇಶ್ವರೀಂ ॥ ೪೫ ॥

ಧೂಪೇನಾಷ್ಟಾದಶಾಂಗೇನ ದದ್ಯಾದಾಹುತಿಮುತ್ತಮಾಂ ।
ನೀರಾಜನಂ ಚರೇದ್ದೇವ್ಯಾಸ್ಸಾಜ್ಯಕರ್ಪೂರವರ್ತಿಭಿಃ ॥ ೪೬ ॥

೪೩. ಉಮೆಯ ಮೂರ್ತಿಯನ್ನು ಪ್ರತಿಷ್ಠೆಮಾಡಿ ಆ ಮೂರ್ತಿಯನ್ನು ಚೆನ್ನಾಗಿ ಪೂಜಿಸುವವರು ತಮ್ಮ ತಮ್ಮ ಇಷ್ಟಾರ್ಥಗಳನ್ನೆಲ್ಲಾ ಹೊಂದುವರು

೪೪. ಪ್ರತಿಷ್ಠಿಸಿದ ಉಮೆಯ ಮೂರ್ತಿಯನ್ನು ತುಪ್ಪ, ಮೊಸರು ಮುಂತಾದುವುಗಳಿಂದ ಸ್ನಾನಮಾಡಿಸುವವರಿಗೆ ಬರುವ ಫಲವು ಇಷ್ಟೆಂದು ಹೇಳುವುದಕ್ಕಾಗುವುದಿಲ್ಲ.

೪೫. ಯಾರು ಚಂದನ, ಅಗರು, ಕರ್ಪೂರ, ಮಾಂಸೀ, ಮುಸ್ತ, ಗರಿಕೆ ವಿಶೇಷ ಮುಂತಾದುವುಗಳಿಂದ ಕೂಡಿದ ನೀರಿನಿಂದಲೂ ಮತ್ತು ಒಂದೇಬಣ್ಣದ ಹಸುವಿನ ಹಾಲಿನಿಂದಲೂ ದೇವಿಯ ಮೂರ್ತಿಗೆ ಅಭಿಷೇಕಮಾಡುವರೋ ಅವರು ಉತ್ಕೃಷ್ಟವಾದ ದೇವಿಯ ಲೋಕವನ್ನು ಪಡೆಯುವರು.

೪೬. ಎಂಟು ವಿಧವಾದ ದಶಾಂಗಗಳಿಂದ ಅಥವಾ ಹದಿನೆಂಟು ವಿಧವಾದ ಸುವಾಸನೆಯ ದ್ರವ್ಯಗಳಿಂದ ಮಿಶ್ರಿತವಾದ ಧೂಪವನ್ನು ಹಾಕಿ, ಒಳ್ಳೆಯ ನೈವೇದ್ಯ ನಿವೇದಿಸಿ, ಕರ್ಪೂರ ಮತ್ತು ತುಪ್ಪದ ಬತ್ತಿಗಳಿಂದ ನೀರಾಜನವನ್ನು ಮಾಡಿದವನು ದೇವಿಯ ಲೋಕವನ್ನು ಪಡೆಯುವನು.

ಕೃಷ್ಣಾಷ್ಟಮ್ಯಾಂ ನವಮ್ಯಾಂ ವಾಮಾಯಾಂ ವಾ ಪಂಚದಿಕ್ತಿಥೌ ।
ಪೂಜಯೇಜ್ಜಗತಾಂ ಧಾತ್ರೀಂ ಗಂಧಪುಷ್ಪೈರ್ವಿಶೇಷತಃ ॥ ೪೭ ॥

ಸಂಪಠನ್ ಜನನೀಸೂಕ್ತಂ ಶ್ರೀಸೂಕ್ತಮಥವಾ ಪಠನ್ ।
ದೇವೀಸೂಕ್ತಮಥೋ ವಾಪಿ ಮೂಲಮಂತ್ರಮಥಾಪಿ ವಾ ॥ ೪೮ ॥

ವಿಷ್ಣುಕ್ರಾಂತಾಂ ಚ ತುಲಸೀಂ ವರ್ಜಯಿತ್ವಾಖಿಲಂ ಸುಮಂ ।
ದೇವೀಪ್ರೀತಿಕರಂ ಜ್ಞೇಯಂ ಕಮಲಂ ತು ವಿಶೇಷತಃ ॥ ೪೯ ॥

ಅರ್ಪಯೇತ್ಸ್ವರ್ಣಪುಷ್ಪಂ ಯೋ ದೇವ್ಯೈ ರಾಜತಮೇವ ವಾ ।
ಸ ಯಾತಿ ಪರಮಂ ಧಾಮ ಸಿದ್ಧಕೋಟಿಭಿರನ್ವಿತಂ ॥ ೫೦ ॥

ಪೂಜನಾಂತೇ ಸದಾ ಕಾರ್ಯಂ ದಾಸ್ಯೈರೇನಃ ಕ್ಷಮಾಪಣಂ ।
ಪ್ರಸೀದ ಪರಮೇಶಾನಿ ಜಗದಾನಂದದಾಯಿನೀ ॥ ೫೧ ॥

೪೭-೪೮. ಕೃಷ್ಣಾಷ್ಟಮಿ, ನವಮಿ, ಅಮಾವಾಸ್ಯೆ, ಪಂಚದಿಕ್‌ಲೋಕಪಾಲಕರ ತಿಥಿಗಳು ಇವುಗಳಲ್ಲಿ ಜಗದಂಬೆಯನ್ನು ಯಾರು ಗಂಧ, ಪುಷ್ಪಗಳಿಂದ ವಿಶೇಷವಾಗಿ ಪೂಜಿಸಿ ದೇವೀಸೂಕ್ತವನ್ನಾಗಲೀ, ಶ್ರೀಸೂಕ್ತವನ್ನಾಗಲೀ, ಜನನೀಸೂಕ್ತವನ್ನಾಗಲೀ, ದೇವೀಮೂಲಮಂತ್ರವನ್ನಾಗಲೀ ಪಾರಾಯಣಮಾಡುವರೋ ಅವರು ದೇವಿಯ ಲೋಕವನ್ನು ಪಡೆಯುವರು.

೪೯-೫೦. ವಿಷ್ಣುಕ್ರಾಂತಿಯನ್ನೂ, ತುಲಸಿಯನ್ನೂ ಬಿಟ್ಟು ಉಳಿದ ಹೂಗಳೆಲ್ಲವೂ ದೇವಿಗೆ ಪ್ರೀತಿಕರವಾದುವು. ಅದರಲ್ಲೂ ತಾವರೆಯ ಹೂವು ಅತ್ಯಂತ ಪ್ರೀತಿಕರವಾದುದು. ಯಾರು ಚಿನ್ನದಲ್ಲಾಗಲೀ, ಬೆಳ್ಳಿಯಿಂದಲಾಗಲೀ ಹೂವನ್ನು ಮಾಡಿಸಿ ದೇವಿಯನ್ನು ಪೂಜಿಸುವರೋ ಅವರು ಕೋಟ್ಯಾನುಕೋಟಿ ಸಿದ್ಧರಿಂದ ಕೂಡಿರುವ ಉತ್ಕೃಷ್ಟವಾದ ಪರಮಪದವನ್ನು ಪಡೆಯುವರು.

೫೧. ಪೂಜೆಯಾದನಂತರ ಭಕ್ತರು, ಸಮಸ್ತ ಜಗತ್ತನ್ನೂ ಸಂತೋಷಪಡಿಸುವ ಓ ದೇವಿಯೇ, ಪ್ರಸನ್ನಳಾಗು ಎಂದು ಹೇಳುತ್ತಾ ಕ್ಷಮಾಪಣೆಯನ್ನು ಕೇಳಿಕೊಳ್ಳಬೇಕು.

ಇತಿ ವಾಕ್ಯೈಃ ಸ್ತುವನ್ಮಂತ್ರೀ ದೇವೀಭಕ್ತಿಪರಾಯಣಃ ।
ಧ್ಯಾಯೇತ್ಕಂಠೀರವಾರೂಢಾಂ ವರದಾಭಯಪಾಣಿಕಾಂ ॥ ೫೨ ॥

ಇತ್ಥಂ ಧ್ಯಾತ್ವಾ ಮಹೇಶಾನೀಂ ಭಕ್ತಾಭೀಷ್ಟಫಲಪ್ರದಾಂ ।
ನಾನಾಫಲಾನಿ ಪಕ್ವಾನಿ ನೈವೇದ್ಯತ್ವೇ ಪ್ರಕಲ್ಪಯೇತ್ ॥ ೫೩ ॥

ನೈವೇದ್ಯಂ ಭಕ್ಷಯೇದ್ಯಸ್ತು ಶಂಭುಶಕ್ತೇಃ ಪರಾತ್ಮನಃ ।
ಸ ನಿರ್ಧೂಯಾಖಿಲಂ ಪಂಕಂ ನಿರ್ಮಲೋ ಮಾನವೋ ಭವೇತ್ ।
ಭವಬಂಧನನಿರ್ಮುಕ್ತಃ ಪ್ರಾಪ್ನುಯಾತ್ಪರಮಂ ಪದಂ ॥ ೫೪ ॥

ಚೈತ್ರಶುಕ್ಲತೃತೀಯಾಯಾಂ ಯೋ ಭವಾನೀವ್ರತಂ ಚರೇತ್ ।
ಅಸ್ಯಾಮೇವ ತೃತೀಯಾಯಂ ಕುರ್ಯಾದ್ದೋಲೋತ್ಸವಂ ಬುಧಃ ।
ಪೂಜಯೇಜ್ಜಗತಾಂ ಧಾತ್ರೀಮುಮಾಂ ಶಂಕರಸಂಯುತಾಂ ॥ ೫೫ ॥

ಕುಸುಮೈಃ ಕುಂಕುಮೈರ್ವಸ್ತ್ರೈಃ ಕರ್ಪೂರಾಗರುಚಂದನೈಃ ।
ಧೂಪೈರ್ದೀಪೈಸ್ಸನೈವೇದ್ಯೈಃ ಸ್ರಗ್ಗಂಧೈರಪರೈರಪಿ ॥ ೫೬ ॥

---

೫೨. ಈರೀತಿಯಾದ ವಾಕ್ಯಗಳಿಂದ ಸಾಧಕನು ದೇವಿಯಲ್ಲಿ ಭಕ್ತಿಯುಳ್ಳವನಾಗಿ ಸಿಂಹದ ಮೇಲೆ ಕುಳಿತು ವರದಮುದ್ರೆ, ಅಭಯಮುದ್ರೆಯನ್ನು ಕೈಗಳಲ್ಲಿ ಧರಿಸಿರುವ ದೇವಿಯನ್ನು ಧ್ಯಾನಿಸಬೇಕು.

೫೩. ಈರೀತಿಯಾಗಿ ಭಕ್ತರ ಇಷ್ಟಾರ್ಥವನ್ನು ನೆರವೇರಿಸುವ ದೇವಿಯನ್ನು ಧ್ಯಾನಮಾಡಿ ನಾನಾವಿಧವಾದ ಪಕ್ವಫಲಗಳನ್ನು ನೈವೇದ್ಯಮಾಡಬೇಕು.

೫೪. ಯಾರು ಈಶ್ವರನ ಶಕ್ತಿಯಾದ ಉಮೆಗೆ ನೈವೇದ್ಯಮಾಡಿದುದನ್ನು ಭಕ್ಷಿಸುವರೋ ಅವರು ತಮ್ಮ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಪವಿತ್ರರಾಗುವರು.

೫೫. ಚೈತ್ರ ಶುದ್ಧ ತದಿಗೆಯ ದಿನ ಶಂಕರನೊಡನಿರುವ ಜಗದಂಬಿಕೆಯ ವ್ರತವನ್ನು ಮಾಡಿ ಡೋಲೋತ್ಸವವನ್ನು ಎಂದರೆ ಉಯ್ಯಾಲೋತ್ಸವವನ್ನು ಮಾಡಿ ಪೂಜಿಸಬೇಕು.

೫೬-೫೭. ಮಹಾಮಾಯೆಯೂ, ಮಹೇಶ್ವರಿಯೂ ಆದ ಶ್ರೀಗೌರಿಯನ್ನು ಈಶ್ವರನೊಡನೆ ಹೂಗಳಿಂದಲೂ, ಕುಂಕುಮದಿಂದಲೂ, ವಸ್ತ್ರಗಳಿಂದಲೂ, ಕರ್ಪೂರ,

**ಆಂದೋಲಯೇತ್ತತೋ ದೇವೀಂ ಮಹಾಮಾಯಾಂ ಮಹೇಶ್ವರೀಂ।**
**ಶ್ರೀಗೌರೀಂ ಶಿವಸಂಯುಕ್ತಾಂ ಸರ್ವಕಲ್ಯಾಣಕಾರಿಣೀಂ ॥ ೫೭ ॥**

**ಪ್ರತ್ಯಬ್ದಂ ಕುರುತೇ ಯೋऽಸ್ಯಾಂ ವ್ರತಮಾಂದೋಲನಂ ತಥಾ ।**
**ನಿಯಮೇನ ಶಿವಾ ತಸ್ಮೈ ಸರ್ವಮಿಷ್ಟಂ ಪ್ರಯಚ್ಛತಿ ॥ ೫೮ ॥**

**ಮಾಧವಸ್ಯ ಸಿತೇ ಪಕ್ಷೇ ತೃತೀಯಾಯಾಕ್ಷಯಾಭಿಧಾ ।**
**ತಸ್ಯಾಂ ಯೋ ಜಗದಂಬಾಯಾ ವ್ರತಂ ಕುರ್ಯಾದತಂದ್ರಿತಃ ॥ ೫೯ ॥**

**ಮಲ್ಲಿಕಾಮಾಲತೀಚಂಪಾಜಪಾಬಂಧೂಕಪಂಕಜೈಃ ।**
**ಕುಸುಮೈಃ ಪೂಜಯೇದ್ಗೌರೀಂ ಶಂಕರೇಣಸಮನ್ವಿತಾ ॥ ೬೦ ॥**

**ಕೋಟಿಜನ್ಮಕೃತಂ ಪಾಪಂ ಮನೋವಾಕ್ಕಾಯಸಂಭವಂ ।**
**ನಿರ್ಧೂಯ ಚತುರೋ ವರ್ಗಾನಕ್ಷಯಾನಿಹ ಸೋऽಶ್ನುತೇ ॥ ೬೧ ॥**

ಅಗರು, ಚಂದನಗಳಿಂದಲೂ, ಧೂಪ, ದೀಪ, ನೈವೇದ್ಯಗಳಿಂದಲೂ ಪೂಜಿಸಿ ಹೂ ಮಾಲಿಕೆಯನ್ನು ಹಾಕಿ ಅಲಂಕರಿಸಿ ಉಯ್ಯಾಲೆಯಲ್ಲಿಟ್ಟು ತೂಗಬೇಕು. ಆ ದೇವಿಯು ಸರ್ವಜನಗಳಿಗೂ ಮಂಗಳವನ್ನುಂಟುಮಾಡುವಳು.

೫೮. ಪ್ರತಿವರ್ಷವೂ ದೇವಿಯ ಈ ವ್ರತವನ್ನೂ ಮತ್ತು ಆಂದೋಲನ ವ್ರತವನ್ನೂ ಯಾರು ಮಾಡುವರೋ ಅವರ ಇಷ್ಟಾರ್ಥಗಳನ್ನೆಲ್ಲಾ ಉಮೆಯು ನಿಯತವಾಗಿ ನಡಿಸಿಕೊಡುವಳು.

೫೯-೬೧. ವೈಶಾಖಮಾಸದ ಶುದ್ಧ ಅಕ್ಷತದಿಗೆಯ ದಿನ ಜಗದಂಬಿಕೆಯ ವ್ರತವನ್ನು ಮಾಡಬೇಕು. ಆಗ ಯಾರು ಆ ದೇವಿಯನ್ನು ಮಲ್ಲಿಗೆ, ಸಂಪಿಗೆ, ದಾಸವಾಳ, ಕಮಲ ಮುಂತಾದ ಹೂಗಳಿಂದ ಈಶ್ವರನೊಡನೆ ಪೂಜಿಸುವರೋ ಅವರು ತಮ್ಮ ಕೋಟಿಜನ್ಮದಿಂದ ಆರ್ಜಿಸಿದ ಪಾಪಗಳನ್ನು ಕಳೆದುಕೊಂಡು ಈ ಲೋಕದಲ್ಲಿ ಸಮಸ್ತ ಸುಖಗಳನ್ನೂ ಅನುಭವಿಸಿ ಧರ್ಮಾರ್ಥಕಾಮ ಮೋಕ್ಷಗಳೆಂಬ ಚತುರ್ವರ್ಗ ಫಲವನ್ನು ಅನುಭವಿಸುವರು.

ಜ್ಯೇಷ್ಠಶುಕ್ಲತೃತೀಯಾಯಾಂ ವ್ರತಂ ಕೃತ್ವಾ ಮಹೇಶ್ವರೀಂ ।
ಯೋಽರ್ಚಯೇತ್ಪರಮಪ್ರೀತ್ಯಾ ತಸ್ಯಾಸಾಧ್ಯಂ ನ ಕಿಂಚನ ॥ ೬೨ ॥

ಆಷಾಢಶುಕ್ಲಪಕ್ಷೀಯತೃತೀಯಾಯಾಂ ರಥೋತ್ಸವಂ ।
ದೇವ್ಯಾಃ ಪ್ರಿಯತಮಂ ಕುರ್ಯಾದ್ಯಥಾವಿತ್ತಾನುಸಾರತಃ ॥ ೬೩ ॥

ರಥಂ ಪೃಥ್ವೀಂ ವಿಜಾನೀಯಾದ್ರಥಾಂಗೇ ಚಂದ್ರಭಾಸ್ಕರೌ ।
ವೇದಾನಶ್ವಾನ್ವಿಜಾನೀಯಾತ್ಸಾರಥಿಂ ಪದ್ಮಸಂಭವಂ ॥ ೬೪ ॥

ನಾನಾಮಣಿಗಣಾಕೀರ್ಣಂ ಪುಷ್ಪಮಾಲಾವಿರಾಜಿತಂ ।
ಏವಂ ರಥಂ ಕಲ್ಪಯಿತ್ವಾ ತಸ್ಮಿನ್ ಸಂಸ್ಥಾಪಯೇಚ್ಛಿವಾಂ ॥ ೬೫ ॥

ಲೋಕಸಂರಕ್ಷಣಾರ್ಥಾಯ ಲೋಕಂ ದ್ರಷ್ಟುಂ ಪರಾಂಬಿಕಾ ।
ರಥಮಧ್ಯೇ ಸಂಸ್ಥಿತೇತಿ ಭಾವಯೇನ್ಮತಿಮಾನ್ನರಃ ॥ ೬೬ ॥

೬೨. ಯಾರು ಜ್ಯೈತ್ರ ಶುದ್ಧ ತದಿಗೆಯ ದಿನ ಮಹೇಶ್ವರಿಯ ವ್ರತವನ್ನು ಮಾಡಿ ಪ್ರೀತಿಯಿಂದ ಪೂಜಿಸುವರೋ ಅವರಿಗೆ ಸಾಧ್ಯವಾಗದಿರುವ ವಿಷಯಗಳಾವವೂ ಇರುವುದಿಲ್ಲ.

೬೩. ಆಷಾಢ ಶುದ್ಧ ತದಿಗೆಯ ದಿನ ದೇವಿಗೆ ಸಾಧ್ಯವಾದಷ್ಟು ಹಣವನ್ನು ಖರ್ಚುಮಾಡಿ ರಥೋತ್ಸವವನ್ನು ಮಾಡಬೇಕು. ಅದರಿಂದ ದೇವಿಗೆ ಸಂತೋಷವಾಗುವುದು.

೬೪. ಪೃಥ್ವಿಯನ್ನು ರಥವೆಂಬುದಾಗಿಯೂ, ಚಂದ್ರಸೂರ್ಯರನ್ನು ಅದರ ಎರಡು ಚಕ್ರಗಳೆಂದೂ, ವೇದಗಳನ್ನು ಕುದುರೆಗಳೆಂದೂ, ಬ್ರಹ್ಮನನ್ನು ಸಾರಥಿ ಎಂದೂ ತಿಳಿಯಬೇಕು.

೬೫. ಅನೇಕ ವಿಧವಾದ ಮಣಿಗಳಿಂದ ಅಲಂಕರಿಸಿ, ಹೂಮಾಲಿಕೆಗಳನ್ನು ಹಾಕಿ ರಥವನ್ನೆಲ್ಲಾ ಅಲಂಕರಿಸಿದ ಮೇಲೆ ದೇವಿಯನ್ನು ಆ ರಥದಲ್ಲಿ ಕೂರಿಸಬೇಕು.

೬೬. ಜ್ಞಾನಿಯಾದವನು—ದೇವಿಯು ಲೋಕಸಂರಕ್ಷಣಾರ್ಥವಾಗಿ ಜನಗಳನ್ನು ನೋಡಲು ರಥದ ಮಧ್ಯದಲ್ಲಿ ಕುಳಿತಿರುವಳು ಎಂದು ತಿಳಿಯಬೇಕು.

ರಥೇ ಪ್ರಚಲಿತೇ ಮಂದಂ ಜಯಶಬ್ದಮುದೀರಯೇತ್ ।
ಪಾಹಿ ದೇವಿ ಜನಾನಸ್ಮಾನ್ಪ್ರಪನ್ನಾನ್ ದೀನವತ್ಸಲೇ ॥ ೬೭ ॥

ಇತಿ ವಾಕ್ಯೈಸ್ತೋಷಯೇಚ್ಚ ನಾನಾವಾದಿತ್ರನಿಸ್ವನೈಃ ।
ಸೀಮಾಂತೇ ತು ರಥಂ ನೀತ್ವಾ ತತ್ರ ಸಂಪೂಜಯೇದ್ರಥೇ ॥ ೬೮ ॥

ನಾನಾಸ್ತೋತ್ರೈಸ್ತತಃ ಸ್ತುತ್ವಾಪ್ಯಾನಯೇತ್ತಾಂ ಸ್ವವೇಶ್ಮನಿ ।
ಪ್ರಣಿಪಾತಶತಂ ಕೃತ್ವಾ ಪ್ರಾರ್ಥಯೇಜ್ಜಗದಂಬಿಕಾಂ ॥ ೬೯ ॥

ಏವಂ ಯಃ ಕುರುತೇ ವಿದ್ವಾನ್ಪೂಜಾವ್ರತರಥೋತ್ಸವಂ ।
ಇಹ ಭುಕ್ತ್ವಾಖಿಲಾನ್ಭೋಗಾನ್ಸೋಂತೇ ದೇವೀಪದಂ ವ್ರಜೇತ್ ॥ ೭೦ ॥

ಶುಕ್ಲಾಯಾಂ ತು ತೃತೀಯಾಯಾಮೇವಂ ಶ್ರಾವಣಭಾದ್ರಯೋಃ ।
ಯೋ ವ್ರತಂ ಕುರುತೇಽಂಬಾಯಾಃ ಪೂಜನಂ ಚ ಯಥಾವಿಧಿ ॥ ೭೧ ॥

೬೭-೬೮. ರಥವು ನಿಧಾನವಾಗಿ ಸಾಗುತ್ತಿರಲು ಜಯಜಯ ಎಂದು ಘೋಷಿಸಬೇಕು. ಎಲೌ ದೀನವತ್ಸಲೆಯಾದ ದೇವಿಯೇ, ಶರಣಾಗತರಾದ ನಮ್ಮನ್ನು ಕಾಪಾಡು ಎಂಬುದಾಗಿ ಹೇಳುತ್ತಾ ಇರಬೇಕು. ನಾನಾವಿಧವಾದ ವಾದ್ಯಗಳು ಮೊಳಗುತ್ತಿರಲು ಆ ಊರಿನ ಎಲ್ಲೆಯವರೆಗೂ ರಥವನ್ನು ಎಳೆದುಕೊಂಡು ಹೋಗಿ ಅಲ್ಲಿ ನಿಲ್ಲಿಸಿ ಪೂಜಿಸಬೇಕು.

೬೯. ನಾನಾವಿಧವಾದ ಸ್ತೋತ್ರಗಳನ್ನು ಹೇಳುತ್ತಾ ಪುನಃ ದೇವಾಲಯಕ್ಕೆ ದೇವಿಯನ್ನು ಕರೆದುಕೊಂಡು ಬರಬೇಕು. ನೂರಾರು ನಮಸ್ಕಾರಗಳನ್ನು ಹಾಕಿ ಜಗನ್ಮಾತೆಯಾದ ಉಮೆಯನ್ನು ಪ್ರಾರ್ಥಿಸಿಕೊಳ್ಳಬೇಕು.

೭೦. ಈರೀತಿಯಾಗಿ ಯಾರು ಈ ದೇವಿಯ ವ್ರತವನ್ನು ಮಾಡಿ, ಪೂಜಿಸಿ, ರಥೋತ್ಸವವನ್ನು ಮಾಡುವರೋ ಅವರು ಈ ಲೋಕದಲ್ಲಿ ಸಕಲಸುಖಗಳನ್ನೂ ಅನುಭವಿಸಿ ಅನಂತರ ದೇವಿಯ ಲೋಕಕ್ಕೆ ಹೋಗುವರು.

೭೧-೭೨. ಶ್ರಾವಣ, ಭಾದ್ರಪದಮಾಸಗಳಲ್ಲಿ ಶುಕ್ಲಪಕ್ಷದ ತದಿಗೆಯ ದಿನ ಈ ವ್ರತವನ್ನು ಯಥಾವಿಧಿಯಾಗಿ ಮಾಡಿ ಉಮೆಯನ್ನು ಪೂಜಿಸುವವರು ಈ ಲೋಕ

ಮೋದತೇ ಪುತ್ರಪೌತ್ರಾದ್ಯೈರ್ಧನಾದ್ಯೈರಿಹ ಸಂತತಂ ।
ಸೋಽಂತೇ ಗಚ್ಛೇದುಮಾಲೋಕಂ ಸರ್ವಲೋಕೋಪರಿಸ್ಥಿತಂ ॥ ೭೨ ॥

ಆಶ್ವಿನೇ ಧವಲೇ ಪಕ್ಷೇ ನವರಾತ್ರವ್ರತಂ ಚರೇತ್ ।
ಯತ್ಕೃತೇ ಸಕಲಾಃ ಕಾಮಾಸ್ಸಿಧ್ಯಂತ್ಯೇವ ನ ಸಂಶಯಃ ॥ ೭೩ ॥

ನವರಾತ್ರವ್ರತಸ್ಯಾಸ್ಯ ಪ್ರಭಾವಂ ವಕ್ತುಮೀಶ್ವರಃ ।
ಚತುರಾಸ್ಯೋ ನ ಪಂಚಾಸ್ಯೋ ನ ಷಡಾಸ್ಯೋ ನ ಕೋಽಪರಃ ॥ ೭೪ ॥

ನವರಾತ್ರವ್ರತಂ ಕೃತ್ವಾ ಭೂಪಾಲೋ ವಿರಥಾತ್ಮಜಃ ।
ಹೃತಂ ರಾಜ್ಯಂ ನಿಜಂ ಲೇಭೇ ಸುರಥೋ ಮುನಿಸತ್ತಮಾಃ ॥ ೭೫ ॥

ಧ್ರುವಸಂಧಿಸುತೋ ಧೀಮಾನಯೋಧ್ಯಾಧಿಪತಿರ್ನೃಪಃ ।
ಸುದರ್ಶನೋ ಹೃತಂ ರಾಜ್ಯಂ ಪ್ರಾಪದಸ್ಯ ಪ್ರಭಾವತಃ ॥ ೭೬ ॥

ದಲ್ಲಿ ಮಕ್ಕಳು ಮೊಮ್ಮಕ್ಕಳೊಡನೆ ಆನಂದದಿಂದಿದ್ದು ಅನಂತರ ಎಲ್ಲ ಲೋಕಗಳಿಗಿಂತಲೂ ಮೇಲಿರುವ ಅತ್ಯುತ್ಕೃಷ್ಟವಾದ ಉಮಾಲೋಕವನ್ನು ಪಡೆಯುವರು.

೭೩. ಯಾರು ಆಶ್ವಯುಜ ಶುಕ್ಲಪಕ್ಷದಲ್ಲಿ ನವರಾತ್ರಿಯ ವ್ರತವನ್ನು ಆಚರಿಸುವರೋ ಅವರಿಗೆ ಸಕಲ ಇಷ್ಟಾರ್ಥಗಳೂ ನಿಸ್ಸಂಶಯವಾಗಿ ಸಿದ್ಧಿಸುವುವು.

೭೪. ನವರಾತ್ರಿಯ ಮಾಹಾತ್ಮ್ಯೆಯನ್ನು ವರ್ಣಿಸಲು ಚತುರ್ಮುಖನಾದ ಬ್ರಹ್ಮನೂ, ಪಂಚಮುಖನಾದ ಈಶ್ವರನೂ, ಷಣ್ಮುಖನೂ ಮತ್ತಾರೂ ಸಹ ಶಕ್ತರಲ್ಲವು.

೭೫. ಎಲೈ ಮುನಿಶ್ರೇಷ್ಠರೇ, ನವರಾತ್ರಿಯ ವ್ರತವನ್ನು ಮಾಡಿ ವಿರಥನ ಮಗನಾದ ಸುರಥನೆಂಬುವನು ಕಳೆದುಕೊಂಡಿದ್ದ ರಾಜ್ಯವನ್ನು ಪುನಃ ಹೊಂದಿದನು.

೭೬. ಈ ನವರಾತ್ರಿ ವ್ರತದ ಪ್ರಭಾವದಿಂದ ಧ್ರುವಸಂಧಿಯ ಮಗನೂ, ಅಯೋಧ್ಯಾಪತಿಯೂ ಆದ ಸುದರ್ಶನನೆಂಬ ರಾಜನೂ ತಾನು ಕಳೆದುಕೊಂಡಿದ್ದ ರಾಜ್ಯವನ್ನು ಪುನಃ ಪಡೆದನು.

ವ್ರತರಾಜಮಿಮಂ ಕೃತ್ವಾ ಸಮಾರಾಧ್ಯ ಮಹೇಶ್ವರೀಂ ।
ಸಂಸಾರಬಂಧನಾನ್ಮುಕ್ತಃ ಸಮಾಧಿರ್ಮುಕ್ತಿಭಾಗಭೂತ್ ॥ ೭೭ ॥

ತೃತೀಯಾಯಾಂ ಚ ಪಂಚಮ್ಯಾಂ ಸಪ್ತಮ್ಯಾಮಷ್ಟಮೀತಿಥೌ ।
ನವಮ್ಯಾಂ ವಾ ಚತುರ್ದಶ್ಯಾಂ ಯೋ ದೇವೀಂ ಪೂಜಯೇನ್ನರಃ ॥ ೭೮ ॥

ಆಶ್ವಿನಸ್ಯ ಸಿತೇ ಪಕ್ಷೇ ವ್ರತಂ ಕೃತ್ವಾ ವಿಧಾನತಃ ।
ತಸ್ಯ ಸರ್ವಂ ಮನೋಽಭೀಷ್ಟಂ ಪೂರಯತ್ಯನಿಶಂ ಶಿವಾ ॥ ೭೯ ॥

ಯಃ ಕಾರ್ತಿಕಸ್ಯ ಮಾರ್ಗಸ್ಯ ಪೌಷಸ್ಯ ತಪಸಸ್ತಥಾ ।
ತಪಸ್ಯಸ್ಯ ಸಿತೇ ಪಕ್ಷೇ ತೃತೀಯಾಯಾಂ ವ್ರತಂ ಚರೇತ್ ॥ ೮೦ ॥

ಲೋಹಿತೈಃ ಕರವೀರಾದ್ಯೈಃ ಪುಷ್ಪೈರ್ಧೂಪೈಸ್ಸುಗಂಧಿತೈಃ ।
ಪೂಜಯೇನ್ಮಂಗಲಾಂ ದೇವೀಂ ಸ ಸರ್ವಂ ಮಂಗಲಂ ಲಭೇತ್ ॥ ೮೧ ॥

ಸೌಭಾಗ್ಯಾಯ ಸದಾ ಸ್ತ್ರೀಭಿಃ ಕಾರ್ಯಮೇತನ್ಮಹಾವ್ರತಂ ।
ವಿದ್ಯಾಧನಸುತಾಪ್ತ್ಯರ್ಥಂ ವಿಧೇಯಂ ಪುರುಷೈರಪಿ ॥ ೮೨ ॥

---

೭೭. ಈ ಶ್ರೇಷ್ಠವಾದ ವ್ರತವನ್ನು ಆಚರಿಸಿ ಮಹೇಶ್ವರಿಯನ್ನು ಪೂಜಿಸಿ, ಸಮಾಧಿ ಎಂಬ ವೈಶ್ಯನು ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಮುಕ್ತಿಯನ್ನು ಪಡೆದನು.

೭೮-೭೯. ತದಿಗೆ, ಪಂಚಮಿ, ಸಪ್ತಮಿ, ಅಷ್ಟಮಿ, ನವಮಿ, ಚತುರ್ದಶೀ ಈ ತಿಥಿಗಳಲ್ಲಿಯೂ ಆಶ್ವಯುಜ ಶುದ್ಧದಲ್ಲಿಯೂ ಯಾರು ಈ ದೇವಿಯ ವ್ರತವನ್ನು ಮಾಡುವರೋ ಅವರ ಮನಸ್ಸಿನ ಇಷ್ಟಾರ್ಥಗಳನ್ನೆಲ್ಲಾ ಉಮೆಯು ನೆರವೇರಿಸುವಳು.

೮೦-೮೧. ಕಾರ್ತಿಕ, ಮಾರ್ಗಶಿರ, ಪುಷ್ಯ, ವೈಶಾಖ ಈ ಮಾಸಗಳ ಕೃಷ್ಣ ಪಕ್ಷ ತದಿಗೆಯ ದಿವಸಗಳಲ್ಲಿ ಈ ವ್ರತವನ್ನು ಮಾಡಿ ಕೆಂಪಾದ ಕಣಿಗಲೆಹೂಗಳಿಂದಲೂ, ಕರವೀರಪುಷ್ಪಗಳಿಂದಲೂ, ಪುಷ್ಪ, ಧೂಪ, ದೀಪಗಳಿಂದಲೂ ಮಂಗಳಕರಳಾದ ದೇವಿಯನ್ನು ಪೂಜಿಸುವವರು ಎಲ್ಲ ವಿಧವಾದ ಮಂಗಳವನ್ನೂ ಹೊಂದುವರು.

೮೨. ಸ್ತ್ರೀಯರು ತಮ್ಮ ಸೌಭಾಗ್ಯಕ್ಕೋಸ್ಕರವಾಗಿಯೂ, ಪುರುಷರು ವಿದ್ಯಾ, ಧನ, ಮಕ್ಕಳು ಇವುಗಳನ್ನು ಪಡೆಯುವುಕ್ಕಾಗಿಯೂ ಈ ವ್ರತವನ್ನು ಮಾಡಬೇಕು.

ಉಮಾಮಹೇಶ್ವರಾದೀನಿ ವ್ರತಾನ್ಯನ್ಯಾನಿ ಯಾನ್ಯಪಿ ।
ದೇವೀಪ್ರಿಯಾಣಿ ಕಾರ್ಯಾಣಿ ಸ್ವಭಕ್ತ್ಯೈವಂ ಮುಮುಕ್ಷುಭಿಃ ॥ ೮೩ ॥

ಸಂಹಿತೇಯಂ ಮಹಾಪುಣ್ಯಾ ಶಿವಭಕ್ತಿವಿವರ್ಧಿನೀ ।
ನಾನಾಖ್ಯಾನಸಮಾಯುಕ್ತಾ ಭುಕ್ತಿಮುಕ್ತಿಪ್ರದಾ ಶಿವಾ ॥ ೮೪ ॥

ಯ ಏನಾಂ ಶೃಣುಯಾದ್ಭಕ್ತ್ಯಾ ಶ್ರಾವಯೇದ್ವಾ ಸಮಾಹಿತಃ ।
ಪಠೇದ್ವಾ ಪಾಠಯೇದ್ವಾಪಿ ಸ ಯಾತಿ ಪರಮಾಂ ಗತಿಂ ॥ ೮೫ ॥

ಯಸ್ಯ ಗೇಹೇ ಸ್ಥಿತಾ ಚೇಯಂ ಲಿಖಿತಾ ಲಲಿತಾಕ್ಷರೈಃ ।
ಸಂಪೂಜಿತಾ ಚ ವಿಧಿವತ್ಸರ್ವಾನ್ಕಾಮಾನ್ಸ ಆಪ್ನುಯಾತ್ ॥ ೮೬ ॥

ಭೂತಪ್ರೇತಪಿಶಾಚಾದಿದುಷ್ಟೇಭ್ಯೋ ನ ಭಯಂ ಕ್ವಚಿತ್ ।
ಪುತ್ರಪೌತ್ರಾದಿಸಂಪತ್ತಿರ್ಲಭತ್ಯೇವ ನ ಸಂಶಯಃ ॥ ೮೭ ॥

೮೩. ಉಮಾಮಹೇಶ್ವರ ವ್ರತವನ್ನಾಗಲೀ, ಮತ್ತಾವ ವ್ರತವನ್ನಾಗಲೀ ದೇವಿಯ ಪ್ರೀತ್ಯರ್ಥವಾಗಿ ಭಕ್ತಿಯಿಂದ ಮಾಡಬೇಕು. ಅದರಿಂದ ಮೋಕ್ಷವುಂಟಾಗುವುದು.

೮೪-೮೫. ಈ ಉಮಾಸಂಹಿತೆಯು ಮಹಾ ಪುಣ್ಯಪ್ರದವಾದುದು. ಶಿವನಲ್ಲಿ ಭಕ್ತಿಯನ್ನು ಹೆಚ್ಚಿಸುವುದು. ನಾನಾವಿಧವಾದ ಚರಿತ್ರೆಗಳಿಂದ ಕೂಡಿ ಬಹು ರಮ್ಯವಾಗಿರುವುದು. ಈ ಸಂಹಿತೆಯನ್ನು ಯಾರು ಭಕ್ತಿಯಿಂದ ಕೇಳುವರೋ, ಹೇಳುವರೋ, ಪಾರಾಯಣಮಾಡುವರೋ ಅಥವಾ ಪಾರಾಯಣಮಾಡಿಸುವರೋ ಅವರು ಸಕಲಸಂಪತ್ತನ್ನು ಅನುಭವಿಸಿ ಕೊನೆಗೆ ಉತ್ತಮವಾದ ಗತಿಯನ್ನು ಹೊಂದುವರು.

೮೬-೮೭. ಯಾರ ಮನೆಯಲ್ಲಿ ಸರಳವಾದ ಅಕ್ಷರಗಳಿಂದ ಬರೆದ ಈ ಪುಸ್ತಕವು ಇರುವುದೋ ಮತ್ತು ವಿಧಿವತ್ತಾಗಿ ಅದನ್ನು ಯಾರು ಪೂಜಿಸುವರೋ ಅವರು ತಮ್ಮ ಇಷ್ಟಾರ್ಥಗಳನ್ನೆಲ್ಲಾ ಪಡೆಯುವರು. ಅವರಿಗೆ ಭೂತ, ಪ್ರೇತ, ಪಿಶಾಚಾದಿ ದುಷ್ಟ ಗ್ರಹಗಳಿಂದ ಯಾವಾಗಲೂ ಭಯವಿರುವುದಿಲ್ಲ. ಅವರ ಮನೆಯಲ್ಲಿ ಪುತ್ರಪೌತ್ರಾದಿ ಸಂಪತ್ತುಗಳು ಸಮೃದ್ಧಿಯಾಗುವುವು. ಈ ವಿಷಯದಲ್ಲಿ ಸಂಶಯವಿಲ್ಲ.

ತಸ್ಮಾದಿಯಂ ಮಹಾಪುಣ್ಯಾ ರಮ್ಯೋಮಾಸಂಹಿತಾ ಸದಾ ।
ಶ್ರೋತವ್ಯಾ ಪಠಿತವ್ಯಾ ಚ ಶಿವಭಕ್ತಿಮಭೀಪ್ಸುಭಿಃ ॥ ೭೭ ॥

ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಕ್ರಿಯಾಯೋಗನಿರೂಪವರ್ಣನಂ ನಾಮೈಕಪಂಚಾಶತ್ತಮೋಽಧ್ಯಾಯಃ

ಉಮಾಸಂಹಿತಾ ಸಮಾಪ್ತಾ



೭೭. ಆದುದರಿಂದ ಶಿವಭಕ್ತಿಯನ್ನಪೇಕ್ಷಿಸುವವರು ಈ ಮಹಾಪುಣ್ಯದಾಯಕವೂ, ರಮ್ಯವೂ, ಆದ ಉಮಾಸಂಹಿತೆಯನ್ನು ಯಾವಾಗಲೂ ಕೇಳುತ್ತಿರಬೇಕು ಮತ್ತು ಓದುತ್ತಿರಬೇಕು.

ಇಲ್ಲಿಗೆ ಶ್ರೀ ಶಿವಪುರಾಣದ ಉಮಾಸಂಹಿತೆಯಲ್ಲಿ ಕ್ರಿಯಾಯೋಗನಿರೂಪವರ್ಣನವೆಂಬ ಐವತ್ತೊಂದನೆಯ ಅಧ್ಯಾಯವು ಮುಗಿದುದು.

## ಉಮಾಸಂಹಿತೆಯು ಮುಗಿದುದು

॥ ಮಂಗಳಂ ॥



